ಓಂ

# ಶ್ರೀಮದ್ಭಗವದ್ಗೀತೆ

[ ಪುರುಷಾರ್ಥ-ಬೋಧಿನೀ ಟೀಕೆ ಸಹಿತ ]

ಟೀಕಾಚಾರ್ಯರು

**ಭಟ್ಟಾಚಾರ್ಯ ಶ್ರೀಪಾದ ದಾಮೋದರ ಸಾತವಳೇಕರ**

**ಅಧ್ಯಕ್ಷ: ಸ್ವಾಧ್ಯಾಯ-ಮಂಡಲ, ಔಂಧ (ಜಿ. ಸಾತಾರೆ)**

**ಮೊದಲ ಮುದ್ರಣ**

ಶಕೆ ೧೮೬೬; ಸನ್ ೧೯೪೪.

## ನಾನಾರು ?

'ಎಂಬುದನ್ನೇ ಎಲ್ಲ ವೇದಗಳೂ ಅರುಹುತ್ತಲಿವೆ.

ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹಮಾಶ್ರಿತಃ ।
ಪ್ರಾಣಾಪಾನಸಮಾಯುಕ್ತಃ ಪಚಾಮ್ಯನ್ನಂ ಚತುರ್ವಿಧಮ್ ॥

ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟೋ
ಮತ್ತಃ ಸ್ಮೃತಿರ್ಜ್ಞಾನಮಪೋಹನಂ ಚ ।
ವೇದೈಶ್ಚ ಸರ್ವೈರಹಮೇವ ವೇದ್ಯೋ
ವೇದಾಂತಕೃದ್ವೇದವಿದೇವ ಚಾಹಮ್ ॥ (ಭ. ಗೀತಾ ೧೫. ೧೪-೧೫)

"ನಾನು ವೈಶ್ವಾನರನಾಗಿ ಎಲ್ಲ ಪ್ರಾಣಿಗಳ ಒಡಲೊಳಗಿರುತ್ತೇನೆ. ನಾನೇ ಅಲ್ಲಿ ಪ್ರಾಣಾಪಾನಗಳೊಡನೆ ಕೂಡಿ ನಾಲ್ಕುಬಗೆಯ ಅನ್ನವನ್ನು ಅರಗಿಸುತ್ತೇನೆ."

"ಎಲ್ಲರ ಹೃದಯಗಳಲ್ಲಿ ಸೇರಿಕೊಂಡಿದ್ದೇನೆ ನನ್ನಿಂದಲೇ ನೆನಹು, ತಿಳಿವು, ಅಥವಾ ತರ್ಕ ಇಲ್ಲದೆ ಅವರ ಅಭಾವವು ಇವೆಲ್ಲವೂ ಉಂಟಾಗುವುವು. ಎಲ್ಲ ವೇದಗಳ ಸಹಾಯದಿಂದ ತಿಳಿಯತಕ್ಕ ವಸ್ತುವು 'ನಾನೇ.' ಎಲ್ಲ ವೇದಗಳನ್ನು ಬಲ್ಲವನು ನಾನೇ ಮತ್ತು ವೇದಗಳ ಕೊನೆಯ ತತ್ವಜ್ಞಾನವನ್ನು ಪ್ರಕಟಮಾಡುವವನೂ ನಾನೇ."

# ಶ್ರೀಮದ್ಭಗವದ್ಗೀತೆಯ ಪುರುಷಾರ್ಥಬೋಧಿನೀ ಟೀಕೆ

## (ಮುನ್ನುಡಿ)

ಶ್ರೀಮದ್ಭಗವದ್ಗೀತೆಯು ಕೇವಲ ಏಳುನೂರು ಶ್ಲೋಕಗಳ ಚಿಕ್ಕ ಹೊತ್ತಿಗೆಯಾದರೂ ಲೋಕದೊಳಗಿನ ಎಲ್ಲ ವಿಚಾರವಂತರಾದ ವಾಚಕರಿಗೆ ಅತ್ಯಂತ ಮಚ್ಚುಗೆಯ ಗ್ರಂಥವಾಗಿದೆ. ಈ ಗ್ರಂಥವು ಎಷ್ಟು ಚಿಕ್ಕದಾದರೂ ಇದರ ಅರ್ಥದ ಆಳವು ಅಗಾಧವಾಗಿದೆ. ಅನಾಸಕ್ತಿ ಯೋಗವೇ ಯಾರ ಜೀವನದ ನಿತ್ಯ ಸಾಧನವಾಗಿರುವುದೋ, ಯಾರು ಅಹಿಂಸಾ ಧರ್ಮದ ಮಹಾತಪಸ್ವಿಗಳೂ ಶ್ರೇಷ್ಠ ಕರ್ಮಯೋಗಿಗಳೂ ಎಂದು ಹೆಸರಾಗಿರುವರೊ ಆ ಮಹಾತ್ಮಾ ಗಾಂಧಿಜೀಯವರೇ ಈ ಗ್ರಂಥದ ಅರ್ಥವು 'ವರ್ಧಿಷ್ಣು' ಕಾಲಕಾಲಕ್ಕೂ ಹೊಚ್ಚ ಹೊಸತು— ಆಗಿದೆ ಎಂದು ಹೇಳಿದ್ದಾರೆ.

'ಗೀತೆಯು ಒಂದು ಧಾರ್ಮಿಕ ಮಹಾ ಕಾವ್ಯವಾಗಿದೆ. ಇದರ ಆಳದಲ್ಲಿ ಹೊಕ್ಕು ಹುಡುಕಿದಷ್ಟೂ ನವೋನವವಾದ ಕಲ್ಯಾಣಪ್ರದವಾದ ಅರ್ಥವು ದೊರೆಯುವುದು. ಗೀತೆಯು ಜನಸಾಮಾನ್ಯರಿಗೆ ಅತ್ಯಂತ ಉಪಯುಕ್ತವಾದ ಒಂದು ಮಹಾ ಗ್ರಂಥವಾಗಿರುತ್ತದೆ. ಆದುದರಿಂದಲೇ ಅದರಲ್ಲಿ ಒಂದು ಮಾತನ್ನೇ ಹಲವು ಜಗೆಯಿಂದ ಮತ್ತೆ ಮತ್ತೆ ತಿಳಿಸಿ ಹೇಳಿದ್ದಾಗಿದೆ. ಇದಕ್ಕಾಗಿ ಗೀತೆಯಲ್ಲಿ ಉಪಯೋಗಿಸಿದ ಮಹತ್ವದ ಶಬ್ದಗಳ ಅರ್ಥವು ಕಾಲಕಾಲಕ್ಕೂ ಬದಲಿಗ ಬಹುದು; ಮತ್ತು ಅವುಗಳೊಳಗಿನ ಅರ್ಥವು ದಿನ ದಿನಕ್ಕೂ ವಿಸ್ತಾರವಾಗುತ್ತ ಹೋಗಬಹುದು. ಆದರೆ **ಗೀತೆಯ ಮೂಲತತ್ವವು ಮಾತ್ರ ಎಂದೂ ಬದಲಾಗಲಿಕ್ಕಿಲ್ಲ.** ಆದುದರಿಂದ ಈ ಮೂಲತತ್ವವು ಸಿದ್ಧವಾಗುವ ರೀತಿಯಿಂದಲೇ ಗೀತೆಯ ಮಾತುಗಳಿಗೆ ಅರ್ಥವನ್ನು ಹಚ್ಚಬೇಕು'.

ಶ್ರೀ. ಮಹಾತ್ಮಾ ಗಾಂಧಿಯವರು ಅನುದಿನವೂ ನಲುವತ್ತು ವರ್ಷ ಗೀತೆಯ ಮನನ, ನಿದಿಧ್ಯಾಸ ಮಾಡಿದರು. ಅದರಲ್ಲಿಯ ಉಪದೇಶದಂತೆ ಆಚರಿಸಿದರು. ಬಳಿಕ, ಮೇಲೆ ಉಲ್ಲೇಖಿಸಿದ ಉದ್ಗಾರಗಳನ್ನು ತೆಗೆದರು.

ಧರ್ಮಮಾರ್ಗದಿಂದ ದೂರ ದೂರ ಹೋಗುತ್ತಾನೆ. ಆಗುಣರಿಂದ ಇಂತಹ ಜನಗಳನ್ನು ಎಚ್ಚರಿಸಿ ದಾರಿಗೆ ತರುವುದಕ್ಕಾಗಿ '**ಉತ್ತಮ ಪುರುಷರು**' ಮೇಲಿಂದ ಮೇಲೆ ಅವತರಿಸುತ್ತಾರ. ಅವರು ಅವತರಿಸಿ ಜನರನ್ನು ಜಾಗೃತಗೊಳಿಸುತ್ತಾರೆ. ಪರಂಪರಾಗತ ಜ್ಞಾನವನ್ನು ಪ್ರಬೋಧಿಸುತ್ತಾರೆ. ಭಗವಾನ್ ಶ್ರೀಕೃಷ್ಣನು ಈ ಬಗೆಯ '**ಉತ್ತಮ ಪುರುಷನು**' ಅಥವಾ '**ಪುರುಷೋತ್ತಮನು**' ಆಗಿದ್ದನು. ಈ ಭೂಮಿಕೆಯು ಮೇಲಿಂದಲೇ ಆತನು ಅರ್ಜುನನ ನೆಪದಿಂದ ಅಖಿಲ ಜಗತ್ತಿಗೆ ಗೀತಾಶಾಸ್ತ್ರವನ್ನು ಉಪದೇಶಿಸಿದನು. ಈ ಜ್ಞಾನವು ಅನಾದಿಕಾಲದ ಪರಂಪರೆಯಿಂದ ನಡೆದು ಬಂದಿದ್ದು, ಗೀತೆಗಿಂತ ಮೊದಲಿನ ಗ್ರಂಥಗಳಲ್ಲಿಯೂ ಆಗು ಅನೇಕವಾಗಿವೆ ಆದುದರಿಂದ ಗೀತೆಯಲ್ಲಿ ಹೇಳಿದ ತತ್ವಜ್ಞಾನವೇನೂ ತೀರ ಹೊಸತಲ್ಲ.

ವೇದ, ಉಪನಿಷತ್ತು ಮೊದಲಾದ ಪುರಾತನ ಗ್ರಂಥಗಳಲ್ಲಿ ಹೇಳಿದ ಸಿದ್ಧಾಂತಗಳನ್ನೇ ಗೀತೆಯಲ್ಲಿ ಹೊಸ ಬಗೆಯಿಂದ ಹೇಗೆ ಹೇಳಿದೆ ಎಂಬುದನ್ನು ಸಪ್ರಮಾಣವಾಗಿ ತೋರಿಸುವುದೇ ಈ '**ಪುರುಷಾರ್ಥ ಬೋಧಿನೀ**' **ಟೀಕೆಯ ಗುರಿಯಾಗಿದೆ.** ಗೀತೆಯಲ್ಲಿ ಹೇಳಿದ ತತ್ವಗಳೇ ಪುರಾತನ ಗ್ರಂಥಗಳಲ್ಲಿ ಯಾವ ರೂಪದಲ್ಲಿವೆ, ಎಂಬುದನ್ನು ಈ ವರೆಗೆ ಯಾವ ಟೀಕಾಕಾರರೂ ವಿಶದವಾಗಿ ವಿವರಿಸಿಲ್ಲ. ಪ್ರಾಚೀನ ಟೀಕಾಕಾರರು ಕೆಲರು, ಈ ಮಾತನ್ನು ಅಲ್ಲಲ್ಲಿ ಸ್ವಲ್ಪ ಸ್ವಲ್ಪ ಎತ್ತಿ ಹೇಳಿದ್ದುದು ನಿಜ. ಆದರೆ ಗೀತೆಯಲ್ಲಿ ಪುರಾತನ ಪರಂಪರಾಗತ ಜ್ಞಾನವೇ ತುಂಬಿ ತುಳುಕುತ್ತಿದೆ, ಎಂಬುದನ್ನೇ ಪ್ರತಿಪಾದಿಸಿದ ಟೀಕೆಗಳು ಒಂದೂ ಇಲ್ಲ! '**ಪುರುಷಾರ್ಥ ಬೋಧಿನೀ**' ಟೀಕೆಯ ಮುಖ್ಯೋದ್ದೇಶವು ಮಾತ್ರ ಇದುವೆ ಆಗಿದೆ. ಅಥವಾ ಈ ಟೀಕೆಯ ವೈಶಿಷ್ಟ್ಯವಾಗಿದೆ. ಗೀತೆಯ ಮೇಲೆ ಅನೇಕ ಟೀಕೆಗಳಿರುವಾಗ ಈ ಪುರುಷಾರ್ಥಬೋಧಿನಿಯನ್ನು ಹೊಸತಾಗಿ ಬರೆವ ಕಾರಣವು ಇದೇ ಆಗಿದೆ ನಾಲ್ವತ್ತು ವರ್ಷಗಳ ಮೊದಲು ಸಾರಾಂಶ ರೂಪದಿಂದ ಒಂದೊಂದು ಗೀತೆಯ ಭಾಷಾಂತರವನ್ನು ಪ್ರಕಟಿಸಿದ್ದೆನು. ಮತ್ತು ಗೀತೆಯಲ್ಲಿ ಬಂದ ಹಲವು ಶಬ್ದಗಳ ಅರ್ಥವನ್ನು ವೈದಿಕ ಪ್ರಮಾಣಗಳಿಂದಲೇ ಹೇಗೆ ನಿರ್ಧರಿಸಬೇಕೆಂಬುದನ್ನು ಕುರಿತು, ಕೆಲವು ಪತ್ರಿಕೆಗಳಲ್ಲಿ, ಆಗ ಹಲವು ಲೇಖನಗಳನ್ನೂ ಬರೆದಿದ್ದೆನು. ಆಗಿನಿಂದಲೇ '**ಪುರುಷಾರ್ಥ ಬೋಧಿನೀ**' ಟೀಕೆಯನ್ನು ಬರೆಯಬೇಕೆಂದು ಸಂಕಲ್ಪವಿದ್ದು, ಆ ಮೇರೆಗೆ ಗೀತೆಯ ವಚನಗಳನ್ನು ಕುರಿತು ವಿಚಾರವು ನಡೆದೇ ಇದೆ. ಮತ್ತು ಪುರಾತನರ ವಚನಗಳು ಗೀತೆಯಲ್ಲಿ ಯಾವ ತೆರನಾಗಿ ವ್ಯಕ್ತವಾಗಿವೆ, ಎಂಬುದನ್ನು ವಿಮರ್ಶಿಸುವ ಕಾರ್ಯವೂ ಅವ್ಯಾಹತವಾಗಿ ಸಾಗಿದೆ. ಇಷ್ಟು ವರುಷಗಳ ಗೀತೆಯ ವ್ಯಾಸಂಗದಿಂದ, ವೇದ ಹಾಗೂ ಉಪನಿಷತ್ತುಗಳ ಮಥಿತಾರ್ಥವೇ ಗೀತೆಯಲ್ಲಿ ಅಡಕವಾಗಿದೆ, ಎಂದು ನನ್ನ ಸಂಪೂರ್ಣ ಮನವರಿಕೆಯಾಗಿದೆ ವೇದ, ಉಪನಿಷತ್ತುಗಳಿಗೂ, ಗೀತೆಗೂ ಏನಾದರೂ ವಿರೋಧವೆನಿಸುತ್ತಿದ್ದಲ್ಲಿ ಅದು ಕೇವಲ ಮೇಲು ತೋರಿಕೆಯದು. ಬರಿ ಆಭಾಸ ಆದರೆ ಯಾವ ಬಣ, ಮತ ಅಥವಾ ಪಂಥಗಳ ಅಭಿಮಾನವನ್ನು ತಾಳದೆ ಪಕ್ಷಾಭಿಮಾನದ ದೃಷ್ಟಿದೋಷವನ್ನು ದೂರ ಸರಿಸಿಕೊಂಡು, ವಿಚಾರಿಸಿದರೆ ವೇದ, ಉಪನಿಷತ್ತು ಮತ್ತು ಗೀತೆ, ಈ ಮೂರರಲ್ಲೂ ಹೇಳಿದ ಮಾತಿನ ಸಾರವು ಒಂದೇ ಎಂಬುದರ ಮನವರಿಕೆಯಾಗದೆ ಇರದು.

ಗೀತಾಶಾಸ್ತ್ರವು ತಲೆದೋರಿದುದು ಏತಕ್ಕಾಗಿ? ಜನಗಳೊಳಗಿನ ಮತಮತಾಂತರಗಳನ್ನು- ಭಿನ್ನಾಭಿಪ್ರಾಯಗಳನ್ನು ಹೆಚ್ಚಿಸುವದಕ್ಕಾಗಿಯೋ? ಎಂದೂ ಅಲ್ಲ. ಭಿನ್ನಭಿನ್ನ ಮತಗಳ ಸಮನ್ವಯವು ಗೀತೆಯ ಗುರಿಯಾಗಿದೆ. ಬೇರೆ ಬೇರೆ ಮತಗಳಲ್ಲಿ ತೋರುತ್ತಿರುವ ಭಿನ್ನಾಭಿಪ್ರಾಯಗಳನ್ನು ಹೋಗಲಾಡಿಸಿ ಅವೆಲ್ಲವುಗಳ ಬುಡದಲ್ಲಿ ಹುಗಿದುಕೊಂಡಿರುವ ಐಕಮತ್ಯವನ್ನು ಲೋಕಕ್ಕೆ ಎತ್ತಿ ತೋರಿ ಅತ್ತಕಡೆಗೇ ಎಲ್ಲರ ಚಿತ್ತವನ್ನು ಸೆಳೆಯುವುದಕ್ಕೆ ಗೀತೆಯು ಅವತರಿಸಿದೆ. ಹೀಗಿದ್ದೂ ಐಕ್ಯ, ಮತ್ತು ಸಮತ್ವವನ್ನು ಬೋಧಿಸುವುದಕ್ಕೆ ಹೊರಟ ಇದೇ ಗೀತೆಯು ಪರಸ್ಪರ ಅಸಂಬದ್ಧ, ಅನೇಕ ಮತಗಳ ಆಗರವಾಗಿದೆ, ಎಂದು ಹೇಳುವದೇ ಅಸಂಬದ್ಧವಲ್ಲವೇ? ಸಮತೆಯನ್ನು ಬೋಧಿಸಲು ಹೊರಟ ಈ ಗೀತೆಯೇ ಲೋಕದಲ್ಲಿ ವಿಷಮತೆಗೆ ಕಾರಣವಾಗಬೇಕೆ! ಹೊರಗಣ್ಣಿನ ಒಂದಕ್ಕೊಂದು ವಿಪರೀತವೆನಿಸುವ ಭಿನ್ನ ಭಿನ್ನ ತತ್ವಗಳಲ್ಲಿ ವ್ಯಾಪ್ತವಾದ ಅಭಿನ್ನತ್ವವನ್ನು—ಅನೇಕತ್ವದಲ್ಲಿ ಏಕತ್ವವನ್ನು ತೋರಿಸುವುದೇ ಗೀತೆಯ ನಿಜವಾದ ಮೂಲೋದ್ದೇಶವಾಗಿದೆ.

ನಿವೇದಕ

ಔಂಧ
ಜಿ. ಸಾತಾರೆ } ಶ್ರೀಪಾದ ದಾಮೋದರ ಸಾತವಳೇಕರ



ಓಂ

# ಶ್ರೀಮದ್ಭಗವದ್ಗೀತೆ

[ ಪುರುಷಾರ್ಥ ಬೋಧಿನೀ ಟೀಕೆ ಸಹಿತ ]

## ಮೊದಲನೆಯ ಅಧ್ಯಾಯ

## ಅರ್ಜುನ ವಿಷಾದ ಯೋಗ

### (೧) ಧೃತರಾಷ್ಟ್ರನ ಚಿಂತೆ

**ಧೃತರಾಷ್ಟ್ರ ಉವಾಚ:— ಧರ್ಮಕ್ಷೇತ್ರೇ ಕುರುಕ್ಷೇತ್ರೇ ಸಮವೇತಾ ಯುಯುತ್ಸವಃ ।**
**ಮಾಮಕಾಃ ಪಾಂಡವಾಶ್ಚೈವ ಕಿಮಕುರ್ವತ ಸಂಜಯ ॥ ೧ ॥**

---

**ಅನ್ವಯ:—** ಹೇ ಸಂಜಯ! ಧರ್ಮಕ್ಷೇತ್ರೇ ಕುರುಕ್ಷೇತ್ರೇ ಯುಯುತ್ಸವಃ ಸಮವೇತಾಃ; ಮಾಮಕಾಃ ಪಾಂಡವಾಃ ಚ ಏವ ಕಿಂ ಅಕುರ್ವತ ॥ ೧ ॥

ಧೃತರಾಷ್ಟ್ರನು ನುಡಿದನು:— **ಎಲಾ ಸಂಜಯನೇ, ಧರ್ಮಕ್ಷೇತ್ರವೆನಿಸಿದ ಕುರುಕ್ಷೇತ್ರದಲ್ಲಿ, ಹೋರಾಡುವ ಹುಮ್ಮಸದಿಂದ ಒಂದುಗೂಡಿದ ನನ್ನವರು ಮತ್ತು ಪಾಂಡವರು ಅಲ್ಲಿ ಏನು ಮಾಡಿದರು?**

**ಭಾವಾರ್ಥ:—** ತಮ್ಮ ಜನರು ಕಾದುವ ಕಾವಿನಿಂದ ಒಬ್ಬರನ್ನೊಬ್ಬರು ಎದುರಿಸಿದಾಗ ಅಲ್ಲಿ ನಡೆದ ನಿಜವಾದ ವೃತ್ತಾಂತವನ್ನು ಸಂಪೂರ್ಣವಾಗಿ ಬೇಗನೇ ತಿಳಿದುಕೊಳ್ಳುವುದೂ ಮತ್ತು ಗೆಲುವಿಗಾಗಿ ಅವರನ್ನು ಹುರಿಗುಂಬಿಸಿ ತಕ್ಕದಾರಿ ತೋರುವುದೂ ಪ್ರತಿಯೊಬ್ಬ ಅಧಿಕಾರಿ ಮನುಷ್ಯನ ಮೊದಲ ಕೆಲಸವಾಗಿದೆ. ॥ ೧ ॥

---

### (೧) ಧೃತರಾಷ್ಟ್ರನ ಚಿಂತೆ.

"ಶ್ರೀಮದ್ಭಗವದ್ಗೀತೆ" ಎಂಬುದರ ನಿಜವಾದ ಅರ್ಥವು 'ಶ್ರೀ ಭಗವಂತನ ಮುಖದಿಂದ ಬಂದ ಹಾಡು ಅಥವಾ ಭಗವಂತನ ಹಾಡು' ಎಂದಿದೆ. ಭಗವಂತನ ಉಪದೇಶವು ಎರಡನೆಯ ಅಧ್ಯಾಯದ ಎರಡನೆಯ ಶ್ಲೋಕದಿಂದ ಆರಂಭವಾಗುತ್ತದೆ. ಇದಕ್ಕೂ ಮೊದಲಿನ ೧ನೆಯ ಅಧ್ಯಾಯವು ಮತ್ತು ಎರಡನೆಯ ಅಧ್ಯಾಯದ ಮೊದಲಿನ ಶ್ಲೋಕವು ವಿಷಯಾರಂಭದಲ್ಲಿ ಹಿಂದು ಮುಂದಿನ ಹೊಂದಿಕೆಯನ್ನು ಸೂಚಿಸುವ ಮುನ್ನುಡಿಯಂತೆ ಇವೆ. ಈ ಒಂದನೆಯ ಅಧ್ಯಾಯದಲ್ಲಿ ಅರ್ಜುನನ ಮನಸ್ಸಿನಲ್ಲಿ ವಿಷಾದವನ್ನುಂಟುಮಾಡಿದ ಪ್ರಸಂಗದ ವರ್ಣನೆಯಿದೆ. ಆದರೆ ಈ ೧ನೆಯ ಅಧ್ಯಾಯದ ೧ನೆಯ ಶ್ಲೋಕದಲ್ಲಿ ಅರ್ಜುನನ ವಿಷಾದದ ವಿಷಯವಿಲ್ಲ. ಈ ಶ್ಲೋಕದಲ್ಲಿ 'ಧೃತರಾಷ್ಟ್ರನ ಚಿಂತೆಯು' ವ್ಯಕ್ತವಾಗುತ್ತದೆ. ಆದುದರಿಂದ ಈ ಅನುಪಮೇಯ ಗ್ರಂಥದ ಆರಂಭವು ಧೃತರಾಷ್ಟ್ರನ ಚಿಂತೆಯಿಂದಲೆ ಆಗಿದೆಯೆಂದು ಹೇಳಬೇಕಾಗುತ್ತದೆ. ಅದಕಾರಣ ಧೃತರಾಷ್ಟ್ರನಿಗೆ ಒಂದು ವಿಶೇಷ ಮಹತ್ವವು ಇದ್ದಂತಾಯಿತು. ಹಾಗಾದರೆ ಈ ಧೃತರಾಷ್ಟ್ರನೆಂಬ ವ್ಯಕ್ತಿಯು ಶ್ರೇಷ್ಠವಾದರೂ ಏನು? ಆತನಿಗೆ ಅಂತಹ ಭಯಂಕರ ಚಿಂತೆ

ಯುಂಟಾಗಲು ಕಾರಣಗಳಾದರೂ ಅವುವು? ಎಂಬುದನ್ನು ನಾವು ಕಂಡುಕೊಳ್ಳುವ.

### ಧೃತರಾಷ್ಟ್ರನು ಯಾರು?

ಧೃತರಾಷ್ಟ್ರನು ಒರ್ವ ಭಾರತೀಯ ರಾಜನು, ಎಂದು ಎಲ್ಲರೂ ಬಲ್ಲರು ಆದರೆ ಇಲ್ಲಿ 'ಧೃತರಾಷ್ಟ್ರ' ಎಂಬುದು ಒಂದು ವಿಶೇಷ ವ್ಯಕ್ತಿಯಾಗಿದ್ದಾನೆ. ಈತನು ಇಲ್ಲಿ 'ಧೃತ ರಾಷ್ಟ್ರ'ನು ಆಗಿರುವನು. ಇವನು ರಾಷ್ಟ್ರವನ್ನು 'ಧೃತ' ಎಂದರೆ ಹಿಡಿದಿಟ್ಟಿರುವವನು, ಅಥವಾ ಬಿಗಿದಿಟ್ಟಿರುವವನು ಎಂಬ ಧ್ವನಿಯಿದೆ. ತನ್ನದು ಅಲ್ಲದೇ ಇರುವ, ಎಂದರೆ ಹೆರವರ ರಾಷ್ಟ್ರವನ್ನು ತನ್ನ ಪಾಶವೀಯ ಶಕ್ತಿಯ ಬಲದಿಂದ, ಒತ್ತಾಯದಿಂದ ಅಂಕೆಯಲ್ಲಿ ಇರಿಸಿಕೊಂಡ ವ್ಯಕ್ತಿಯೆ 'ಧೃತ-ರಾಷ್ಟ್ರನು'. ಯಾವುದು ತನ್ನದಲ್ಲವೋ, ಯಾವುದು ಪರರ ಸೊತ್ತೊ, ಅದನ್ನು ಅನ್ಯಾಯದಿಂದಲೂ ಪಾಶವೀಶಕ್ತಿಯ ಬೆಂಬಲದಿಂದಲೂ ತನ್ನ ವಜ್ರಮುಷ್ಟಿಯಲ್ಲಿ ಬಿಗಿದಿಡಬೇಕೆಂದು ಈ ಅರಸನು ಇಲ್ಲಿ ಹಂಬಲಿಸುತ್ತಿದ್ದಾನೆ. ಹೆರವರ ರಾಷ್ಟ್ರವನ್ನು ಮುಂಗೈ ಜೋರಿನಿಂದ ಸೆಳೆದುಕೊಳ್ಳುವುದು, ಅದು ಎಂದೆಂದೂ ತನ್ನ ಕೈಯಲ್ಲಿಯೇ ಉಳಿಯಬೇಕೆಂದು ಬಗೆಬಗೆಯಾಗಿ ಹವಣಿಸುವುದು, ಆ ನಾಡಿನ ನಿಜವಾದ ಹಕ್ಕುದಾರರು ಸ್ವ ರಾಜ್ಯವನ್ನು ಮರಳಿ **ಬೇಡಿದರೆ** ಅವರಿಗೆ ಅದನ್ನು ಕೊಡದೆ-ಇರಲು ಹಂಚಿಕೆ ಹಾಕುವುದು, ಮತ್ತು ಹಕ್ಕುದಾರರು 'ಅಯೋಗ್ಯ'ರೆಂದೂ ಸ್ವ-ರಾಜ್ಯವನ್ನು ಆಳಲು ಅನರ್ಹರಾಗಿರುವರೆಂದೂ ಸಿದ್ಧಪಡಿಸುವುದು, ಇಂತಿವೆಲ್ಲ ತಂತ್ರಗಳನ್ನು ಇಲ್ಲಿ 'ಧೃತ-ರಾಷ್ಟ್ರ'ನು ನಡಿಸಿದ್ದಾನೆ. ಆದುದರಿಂದಲೆ ನಿಜವಾದ ಹಕ್ಕುದಾರರು ತಮ್ಮ ನಾಡನ್ನು ಮರಳಿ ಪಡೆಯುವುದಕ್ಕಾಗಿ ನಡಿಸಿದ ಸ್ವಾತಂತ್ರ್ಯಯುದ್ಧದಿಂದ 'ಧೃತರಾಷ್ಟ್ರ'ನ ಚಿಂತೆಯು ಇಮ್ಮಡಿಸಿದೆ. ಇದಕ್ಕಾಗಿಯೇ ಆತನು 'ಎಲಾ ಸಂಜಯಾ! ಇಂದು ಇದೀಗ ಯುದ್ಧದ ಮೊದಲದಿನ. ಅಲ್ಲಿ ರಣಕ್ಷೇತ್ರದಲ್ಲಿ ಏನು ತಾನೇ ನಡೆದಿದ?'! ಎಂದು ಅತ್ಯಂತ ಆತುರನಾಗಿ ಕೇಳುತ್ತಿದ್ದಾನೆ.

### ಧೃತರಾಷ್ಟ್ರವು ಮತ್ತು ಹೃತರಾಷ್ಟ್ರವು.

ಭಾರತೀಯ ಯುದ್ಧವು ನಡೆದುದು '**ಧೃತರಾಷ್ಟ್ರ**' ಮತ್ತು '**ಹೃತರಾಷ್ಟ್ರ**'-ಗಳ ನಡುವೆ. ಯಾವಾಗಲೂ ಕಾಳಗಗಳು ನಡೆಯುವುದು ಇಂತಹ ಎರಡು ರಾಷ್ಟ್ರಗಳಲ್ಲಿಯೆ. ಕೌರವರು '**ಧೃತರಾಷ್ಟ್ರ**' ಪಕ್ಷದವರಾಗಿದ್ದರೆ, ಪಾಂಡವರು 'ಹೃತರಾಷ್ಟ್ರ'ರು. ತಮ್ಮ **ನಾಡಿನ ಒಡೆತನವನ್ನು ಕಳೆದುಕೊಂಡವರೂ**, ಮರಳಿ 'ಸ್ವ-ರಾಜ್ಯ'ವನ್ನು ಸಂಪಾದಿಸಲು ಹೆಣಗಾಡುತ್ತಿರುವವರೂ, 'ಹೃತರಾಷ್ಟ್ರ'ರು. ಇವರು ಬರಿಗೈಯವರಾಗಿರುವುದರಿಂದಲೂ, ಇವರ ರಾಜಕೀಯ ಅವನತಿಯು ಪರಮಾವಧಿಯಾಗಿರುವುದರಿಂದಲೂ, ಹೃತರಾಷ್ಟ್ರರಿಗೆ ತಮ್ಮ ಸ್ವಾತಂತ್ರ್ಯಸಂಪಾದನೆಯ ಪ್ರಯತ್ನಗಳಲ್ಲಿ ನಡುನಡುವೆ ಸೋಲುಗಳು ಒದಗಿದರೂ ಮತ್ತೆ ಯಾವುದೇ ಹೆಚ್ಚಿನ ಹಾನಿಯಾದೀತೆಂಬ ಹೆದರಿಕೆಯು ಇರುವುದಿಲ್ಲ. ಗೆದ್ದರೆ ಕಳೆದುಕೊಂಡ 'ಸ್ವ-ರಾಜ್ಯ'ವನ್ನು ಮರಳಿ ಪಡೆಯುವರು. ಸೋತರೆ? ಮೊದಲೇ ತೊಯ್ದವನಿಗೆ ಮಳೆಯ ಅಂಜಿಕೆಯೇನು? ಆದುದರಿಂದ ಇವರಿಗೆ ಅಪರಿಮೇಯವಾದ ಚಿಂತೆಯು ಎಂದೂ ಬಾಧಿಸುವುದಿಲ್ಲ. ಇಷ್ಟೇ ಅಲ್ಲ, ಇವರಲ್ಲಿ ಒಂದು ಬಗೆಯ ಅಪೂರ್ವ ಉತ್ಸಾಹವು ಕಂಡುಬರುತ್ತದೆ. ಏಕೆಂದರೆ ತಾವು ಸತ್ಯಕ್ಕಾಗಿ, ಸ್ವಾತಂತ್ರ್ಯಕ್ಕಾಗಿ, ಲೋಕಕಲ್ಯಾಣಕ್ಕಾಗಿ ಹೋರಾಡುತ್ತಿದ್ದೇವೆಂಬ ಆತ್ಮವಿಶ್ವಾಸದ ಮೂಲಕವಾಗಿಯೂ ರಾಜ್ಯಪ್ರಾಪ್ತಿಯು ಸಂಭಾವ್ಯ ಕೋಟಿಯಲ್ಲಿ ಕಣ್ಣಿಗೆ ಕಾಣುತ್ತಿರುವುದರಿಂದಲೂ ಇವರ ಹುಮ್ಮಸವು ಹೆಚ್ಚು ಹೆಚ್ಚಾಗುತ್ತಿರುತ್ತದೆ.

### ಧೃತರಾಷ್ಟ್ರದ ಹಾನಿ.

ಆದರೆ 'ಧೃತರಾಷ್ಟ್ರ' ಪಕ್ಷದ ಸ್ಥಿತಿಯು ಇದಕ್ಕೆ ವಿಪರೀತವಾಗಿರುತ್ತದೆ. ಗೆದ್ದರೆ, ಮೊದಲೇ ಹೊಟ್ಟೆತುಂಬಿ ಮಿತಿ-ಮೀರಿದ ಇವರಿಗೆ, ಇನ್ನು ಹೆಚ್ಚಿಗೆ ಪಡೆವಂತೆ ಇರುವುದಿಲ್ಲ. ಯುದ್ಧಾರಂಭಕ್ಕೆ ಇದ್ದ ಸ್ಥಿತಿಯನ್ನು ಉಳಿಸಿಕೊಂಡರೂ ಸಾಕಾಗಿರುತ್ತದೆ. ಸೋತರೆ ಆಗುವ ಹಾನಿಗೆ ಅಳತೆಯಿಲ್ಲ. ಹಲವು ಬಗೆಯ ಯುಕ್ತಿ ಕುಯುಕ್ತಿಗಳಿಂದ, ಅನ್ಯಾಯ ಅಪರಾಧಗಳಿಗೆ ಹೇಸದೆ ಒತ್ತಾಯದಿಂದ ಸೆಳೆದುಕೊಂಡ ಪರರಾಷ್ಟ್ರವು ಇವರ ಕೈಯಿಂದ ಕಳಚಿ ಹೋಗುತ್ತದೆ. ಒಟ್ಟಿನಲ್ಲಿ ವಿಚಾರಿಸಿದರೆ ಗೆಲ್ಲಲಿ ಅಥವಾ ಸೋಲಲಿ 'ಧೃತರಾಷ್ಟ್ರ' ಪಕ್ಷದವರಿಗೆ ಹಾನಿಯೆ ಉಂಟು. ಆದುದರಿಂದ ಈ 'ಧೃತರಾಷ್ಟ್ರ' ಪಕ್ಷದವರು ಹಗಲಿರುಳೂ ಚಿಂತಾಮಗ್ನರಾಗಿ ಒಳಗೊಳಗೇ ಉರಿಯುತ್ತಾರೆ. ವಿಜಯಶಾಲಿಗಳಾಗಲಿ, ಅಥವಾ ಪರಾಜಿತರಾಗಲಿ ಎರಡೂ ಸ್ಥಿತಿಯಲ್ಲಿಯೂ ಲೋಕನಿಂದೆ ಇವರ ಬೆನ್ನು ಬಿಟ್ಟದ್ದಲ್ಲ. ಈ ಲೋಕಾಪವಾದದ ಭಯದಿಂದ ವಿಹ್ವಲನಾಗಿ, ಚಿಂತಾಗ್ರಸ್ತನಾದ 'ಧೃತರಾಷ್ಟ್ರ'ನು "ನನ್ನವರು ಮತ್ತು ಪಾಂಡವರು ರಣರಂಗದಲ್ಲಿ ಒಬ್ಬರೊಬ್ಬರನ್ನು ಎದುರಿಸಿ ನಿಂತ ಬಳಿಕ ಅಲ್ಲಿ ನಡೆದ ಸಮಾಚಾರವಾದರೂ ಏನು?" ಎಂದು ಒಳಗಿನ ಕಳವಳದಿಂದ ಸಂಜಯನಿಗೆ

ಕೇಳಿದ್ದಾನೆ. ಈ ಸಮಯದಲ್ಲಿ ಧೃತರಾಷ್ಟ್ರನ ಎದೆ ದುಗುಡವು ಆತನಿಗೆ ಅಸಹ್ಯವಾಗಿದೆ. ಲೋಕದಲ್ಲಿ ಇದೇ ಬಗೆಯ ದುಗುಡವು 'ಧೃತರಾಷ್ಟ್ರ-ಸಾಮ್ರಾಟ'ರೆಲ್ಲರ ಎದೆಯಲ್ಲಿ ಹಗಲಿರುಳೂ ತಾಂಡವವಾಡುತ್ತಿರುತ್ತದೆ. ಹೊರನೋಟಕ್ಕೆ ಇವರ ಸಾಮ್ರಾಜ್ಯ ವೈಭವವು ಎಷ್ಟೇ ಲೋಕದ ಕಣ್ಣು ಕುಕ್ಕಿಸುವವಂತಹುದಾಗಿದ್ದರೂ ಮನಸಿನ ಅಂತರಾಳದಲ್ಲಿ ಅವರನ್ನು ಕೊರೆಯುತ್ತಿರುವ ಚಿಂತಾವ್ಯಾಧಿಯ ವ್ಯಥೆ ಅವರಿಗೇ ಗೊತ್ತು.

### ಧೃತರಾಷ್ಟ್ರನು ಕುರುಡ.

ಧೃತರಾಷ್ಟ್ರನು ಕುರುಡನಾಗಿದ್ದಾನೆ. ಇದು ಸ್ವಾಭಾವಿಕವೇ ಆಗಿದೆ. ಈ ಕುರುಡುತನಕ್ಕೆ ಕಾರಣವೇನು? ಈತನಲ್ಲಿರುವ ಪಾಶವೀಶಕ್ತಿ; ಆಸುರೀ ಸಂಪತ್ತು. ಪಶುಶಕ್ತಿಯು ಹುಚ್ಚಾದೊಡನೆ ನೆರೆಹೊರೆಯವರೊಡನೆ ಕಾದುವ, ಅವರನ್ನು ಸುಲಿಯುವ ಬುದ್ಧಿಯು ತಲೆದೋರುವುದು. ಪರರವರ ನಾಡನ್ನು ಆಕ್ರಮಿಸಿ ಉಪಭೋಗಿಸುವ ಚಪಲವುಂಟಾಗುವುದು. ಸದ್ಬುದ್ಧಿಯು ಮಾಸುವುದು. ಕಣ್ಣಿದ್ದೂ ಕುರುಡತನವೆಂಬುದು ಇದೇ. ಧನ, ಬಲಗಳು ಹೆಚ್ಚಿದ್ದ ಪ್ರಮಾಣದಲ್ಲಿ ಇವರ ಕುರುಡುತನದ ಆಳವು ಹೆಚ್ಚಾಗಿರುತ್ತದೆ. ಬಲ, ಸಂಪತ್ತು, ಅಧಿಕಾರ ಇವುಗಳ ಹಗ್ಗಳಿಕೆಯಿಂದ ಕೊಬ್ಬಿ-ಕೊನೆದಾಡುವವರಲ್ಲಿ ನ್ಯಾಯ-ಅನ್ಯಾಯ, ಧರ್ಮ-ಅಧರ್ಮ, ಕರ್ತವ್ಯ-ಅಕರ್ತವ್ಯ, ನೀತಿ-ಅನೀತಿ, ಯುಕ್ತ-ಅಯುಕ್ತ ಇವುಗಳ ವಿವೇಕವೇ ಇರುವುದಿಲ್ಲ. ಸರಿಯಾಗಿ ವಿಚಾರಿಸುವುದಕ್ಕೂ ಅವರು ಅಸಮರ್ಥರಾಗಿರುತ್ತಾರೆ. ಕಣ್ಣುಗಳು ಹಾಳಾಗಿ ಬಂದ ಕುರುಡತನಕ್ಕಿಂತ ವಿವೇಕ ಭ್ರಷ್ಟತೆಯಿಂದ ಪ್ರಾಪ್ತವಾದ ಕುರುಡತನವು ಬಹಳ ಭಯಂಕರವಾಗಿದೆ. ಈ ಬಗೆಯಾದ ಮಾನಸಿಕ ಮತ್ತು ಆತ್ಮಿಕ ಅಂಧರು ತಾವು ಚಿಂತಾರತರಾಗಿರುವರಷ್ಟೇ ಅಲ್ಲದೆ ತಮ್ಮ ಪಕ್ಷವನ್ನೂ ಚಿಂತಾಸಾಗರದಲ್ಲಿ ಕೆಡಹುತ್ತಾರೆ.

### ಕುರುಡನ ಕುರುಡ ಅನುಯಾಯಿಗಳು.

'ಧೃತ-ರಾಷ್ಟ್ರ'ನ ಹೆಂಡತಿಯು ಕಣ್ಣಿದ್ದೂ ಕುರುಡಿಯಾಗಿದ್ದಳು! ಯಾಕೆ ತಾನೆ ಆಗಿರಲಿಕ್ಕಿಲ್ಲ? ಕುರುಡ ಧೃತರಾಷ್ಟ್ರನ ಬೆನ್ನು ಹತ್ತಿದವರೆಲ್ಲ ಕಣ್ಣಿದ್ದೂ ಕುರುಡರೇ ಸರಿ. ಗಾಂಧಾರಿಯು ಪಾತಿವ್ರತ್ಯದ ಪರಿಪಾಲನ ಮಾಡಲು ತನ್ನ ಕಣ್ಣುಗಳನ್ನು ಕಟ್ಟಿಕೊಂಡಿದ್ದಳೆಂಬುದು ಸರಿ. ಗಂಡನಿಗೆ ಈ ಜಗತ್ತಿನಲ್ಲಿ ಸೌಂದರ್ಯವನ್ನು ಕಂಡು ಆನಂದವನ್ನು ಅನುಭವಿಸಲಿಕ್ಕೆ ಆಗುವುದಿಲ್ಲ, ಆದುದರಿಂದ ತಾನೂ ಆ— ಸೌಂದರ್ಯಾನುಭವ-ಸೌಖ್ಯವನ್ನು ಸೇವಿಸಲಿಕ್ಕಿಲ್ಲ ಎಂಬ ಕಟ್ಟು ಹಾಕಿಕೊಂಡು ಪಾತಿವ್ರತ್ಯದ ಮೇಲ್ಪಂಕ್ತಿಯನ್ನೇ ಹಾಕಿಕೊಟ್ಟಳು ನಿಜವಿರಬಹುದು. ಆದರೆ ಅದೇ ಗಾಂಧಾರಿಯು ತನ್ನ ಮನೆಯಲ್ಲಿ ತನ್ನ ಎದುರಿನಲ್ಲಿಯೇ, ತನ್ನ ಸೊಸೆಯ ಮೇಲೆ— ಪಟ್ಟಾಭಿಷಿಕ್ತರಾಜ್ಞಿಯ ಮೇಲೆ— ಕೈಮಾಡಿ ನಡಿಸಿದ ವಸ್ತ್ರಾಪಹರಣಾದಿ ಅತ್ಯಾಚಾರಗಳನ್ನು ಸಕಾಲದಲ್ಲಿಯೇ ನಿಷೇಧಿಸಿ ಅಂತಹ ಅಪಕೃತ್ಯಗಳನ್ನು ನಿಲ್ಲಿಸಿ ಬಿಡಲು ಅವಳು ಸಮರ್ಥಳಾಗಲಿಲ್ಲ. ಯೋಗ್ಯ ಪ್ರಸಂಗಗಳಲ್ಲಿ ಇವಳು ತನ್ನ ಮಕ್ಕಳಿಗೆ ಚನ್ನಾಗಿ ಅಲ್ಲ-ಗಳೆದು ಬುದ್ಧಿ ಕಲಿಸಲೂ ಇಲ್ಲ. ತೀರ ತಿರಸ್ಕರಣೀಯ ಅಕೃತ್ಯಗಳು ನಡೆದಾಗ ಇವಳು ತನ್ನ ಮಕ್ಕಳಿಗೆ ಕೆಲ-ವೊಂದು ಬೆಯ್ದು ಬುದ್ಧಿ ಹೇಳಿದ್ದು ನಿಜ. ಆದರೆ ಸಕಾಲದಲ್ಲಿಯೇ ಇವಳು, ಮಕ್ಕಳೊಳಗಿನ ಈ ದುರ್ಬುದ್ಧಿಯ ಅಂಕುರವನ್ನು ಕಿತ್ತು ಬಿಟ್ಟಿದ್ದರೆ ಮುಂದಿನ ಅತ್ಯಾಚಾರಗಳಾಗಲೀ, ಘೋರ ಪ್ರಸಂಗ-ಗಳಾಗಲಿ ಎಂದೂ ಒದಗುತ್ತಲೆ ಇದ್ದಿಲ್ಲ. ಅದಕಾರಣ ಇವಳಿಗೆ ತನ್ನ ಧೃತ-ರಾಷ್ಟ್ರ ಪತಿಯ ಮನಸಿನ ವಿರುದ್ಧ-ವಾಗಿ ವರ್ತಿಸುವ ಅಪೇಕ್ಷೆಯೇ ಇದ್ದಿಲ್ಲವೆಂದು ಸ್ಪಷ್ಟ-ವಾಗುತ್ತದೆ. ಇವಳು ತನ್ನ ನೈತಿಕ ಬಲವನ್ನೆಲ್ಲ ಉಪ-ಯೋಗಿಸಿ ದುಃಶಾಸನನನ್ನು ಆ ಅಪಕೃತ್ಯದಿಂದ ತಡೆದು ಹಿಡಿದಿದ್ದರೆ ಈ ಮನೆತನಕ್ಕೆ ಅಪದಶೆಯು ಪ್ರಾಪ್ತ-ವಾಗುವ ಸಂಭವವು ಇದ್ದಿಲ್ಲ. ಆದುದರಿಂದ ಇವಳು, ತಿಳಿದೂ ತಿಳಿದೂ ಇದೆಲ್ಲದರ ಕಡೆಗೂ ಕಣ್ಣು ಮುಚ್ಚಿ-ಕೊಂಡು ಕುಳಿತಳು. ಧೃತ-ರಾಷ್ಟ್ರನಂತೂ ಯಾವುದೇ ಬಗೆಯಿಂದ ಪಾಂಡವರೆಂಬ ಶಲ್ಯವು ನಷ್ಟವಾದರೆ ಸಾಕು, ಎಂದು ಹಾರೈಸುತ್ತಿದ್ದನು, ಪಾಂಡವರ ಸಂಪೂರ್ಣ ಸಾಮ್ರಾಜ್ಯವು ತನ್ನ ಮಕ್ಕಳ ಕೈಗೆ ಬಂದರೆ ಸರಿ; ಚನ್ನಾಗುವುದು, ಎಂದು ಬಗೆಸಿದ್ದನು. ಗಾಂಧಾರಿ ಮಹಾ ಪತಿವ್ರತೆ! ಗಂಡನ ಅಭಿಲಾಷೆಗಳೇ ಅವಳ ಅಭಿಲಾಷೆ-ಗಳು! ಅಷ್ಟೇ ಅಲ್ಲದೆ ಮಕ್ಕಳ ಮೇಲಿನ ಮೋಹ-ದಿಂದಲೂ, ಪತಿಯ ನೆಳಲಾಗಿ ನಡೆಯಬೇಕೆಂಬ ರೂಢಿ-ಯಿಂದಲೂ ಸ್ತ್ರೀಯರಲ್ಲಿ ಈ ಬಗೆಯಾದ ಮನೋ-ದೌರ್ಬಲ್ಯವು ಉಂಟಾಗುವುದು ಸ್ವಾಭಾವಿಕವಾಗಿದೆ. ಈ ಕಾರಣದಿಂದಲೇ ಹೆಣ್ಣುಮಕ್ಕಳು ಬಹುತರವಾಗಿ ತಮ್ಮ ಇಷ್ಟ-ಆಕಾಂಕ್ಷೆಗಳನ್ನು ಸ್ಪಷ್ಟವಾಗಿ ಬಾಯಿಬಿಟ್ಟು ಹೇಳುವುದಿಲ್ಲ. ಕಣ್ಣಿದ್ದೂ ಕುರುಡರಾಗಿ ಬಾಳುವ ಹೊತ್ತು ಅವರ ಪಾಲಿಗೆ ಬರುವುದು. ಗಾಂಧಾರಿಯ ಪಾಡೂ ಇದೇ ಬಗೆಯಾಗಿತ್ತು.

ಕುರುಡನ ಹಿಂಬಾಲಿಗಳಾಗಲು ಕುರುಡ ಧೃತ-ರಾಷ್ಟ್ರನ ಮಕ್ಕಳು ಒಬ್ಬರಿಗಿಂತ ಒಬ್ಬರು ಮುಂದಾಗಿದ್ದರು.

ದುರ್ಯೋಧನ, ದುಃಶಾಸನ, ದುಃಶಲ, ದುರ್ಧರ್ಷ, ದುಷ್ಪ್ರಧರ್ಷ, ದುರ್ಮರ್ಷಣ, ದುರ್ಮುಖ, ದುಷ್ಕರ್ಣ, ದುರ್ಮದ, ದುರ್ವಿಗಾಹ, ದುರ್ವಿಮೋಚನ, ದುಷ್ಪರಾಜಯ, ದುರಾಧರ ಮೊದಲಾದ ಮಕ್ಕಳು, ದುಃಶಲೆ ಎಂಬ ತಂಗಿ, ಇವರೆಲ್ಲರ ಹೆಸರಿನ ಆರಂಭವು 'ದುಃ' ಎಂದರೆ ದುಃಖ-ದುಷ್ಟ ಎಂಬರ್ಥದ ಶಬ್ದದಿಂದಲೆ! ದುರ್ಯೋಧನ 'ಇತ್ಯಾದಿ ಹೆಸರಿನಲ್ಲಿರುವ 'ದುಃ' ಎಂಬುದು ಶೂರತನದ ದೃಷ್ಟಿಯಿಂದ ಅಷ್ಟು ಅಪಾರ್ಥದಾಯಕವಲ್ಲದಿದ್ದರೂ, ಇವರೆಲ್ಲರ ಶೌರ್ಯವು ದುರುದ್ದೇಶವನ್ನು ಈಡೇರಿಸುವುದಕ್ಕಾಗಿಯೆ ವೆಚ್ಚವಾದುದರಿಂದ, ಆ ಶಕ್ತಿ, ಆ ಪರಾಕ್ರಮಗಳೆಲ್ಲವೂ ದುಷ್ಟವಾದುವು ಎಂಬುದರಲ್ಲಿ ಎಳ್ಳಷ್ಟೂ ಸಂದೇಹವಿಲ್ಲ. ಲೋಕಕಲ್ಯಾಣಕ್ಕಾಗಿ ದೈವೀಕಾರ್ಯಕ್ಕಾಗಿ ವೆಚ್ಚವಾಗುವ ಶಕ್ತಿಯೇ ಉತ್ತಮವಾದುದು; ಆದರಣೀಯವಾದುದು. ಆದರೆ ಆಸುರೀ ಕೆಲಸಗಳ ಸಲುವಾಗಿ ಉಪಯೋಗವಾಗುವ ಶಕ್ತಿಯು ಜಗತ್ತಿನಲ್ಲಿ ಅಶಾಂತಿಯನ್ನು ಹೆಚ್ಚಿಸುತ್ತದೆ. ಆ ಶಕ್ತಿಯು ಎಷ್ಟೇ ಅದ್ವಿತೀಯವಾಗಿರಲಿ, ಅದು ಲೋಕದ ದುಃಖಕ್ಕೇ ಕಾರಣವಾಗುವುದೆಂಬಲ್ಲಿ ಸಂದೇಹವಿಲ್ಲ. ಧೃತರಾಷ್ಟ್ರನ ಮಕ್ಕಳ ಹೆಸರಿನ ಮೊದಲಲ್ಲಿ ಇರುವ 'ದುಃ' ಎಂಬ ಪದವೂ ಇದೇ ಮಾತನ್ನು ಚೆನ್ನಾಗಿ ವ್ಯಕ್ತಪಡಿಸುತ್ತಿದೆ. 'ಧೃತರಾಷ್ಟ್ರನು' ಎಂದರೆ ಯಾವನು ಹೆರವರ ರಾಷ್ಟ್ರವನ್ನು ನುಂಗಿ ನಿಂತಿರುವನೋ, ಆತನ ಬಳಗದವರು ಮತ್ತು ಆತನ ಹಿಂಬಾಲಿಗರು ಅವನಿಗೆ ಸಂಪೂರ್ಣವಾಗಿ ನೆರವಾಗುವವರೇ ಆಗಿರುವುದರಿಂದ, ಆತನಿಗೆ ವಿರೋಧಿಸಿ ತಿಳಿಹೇಳುವವರಲ್ಲವಾದುದರಿಂದ, ಈ ಪರಿವಾರದವರು ಎಲ್ಲರೂ ಆ ಹೀನ ಪಾಪದಲ್ಲಿ ಪಾಲುಗಾರರಾಗಿರುತ್ತಾರೆ. ಈ ದೋಷದಿಂದ ಪಾರಾಗುವುದು ಅವರಿಗೆ ಶಕ್ಯವಾಗುವುದಿಲ್ಲ. ದುರ್ಯೋಧನನು ನಿಜವಾಗಿಯೂ ಸುಯೋಧನನು ಎಂದರೆ, ಚೆನ್ನಾಗಿ ಕಾದಬಲ್ಲವನು— ಕಾದುವುದರಲ್ಲಿ ಬಲ್ಲಿದನು— ಎಂಬರ್ಥ. ಆದರೆ ಈತನ ಯುದ್ಧಕೌಶಲ್ಯವು ದುಷ್ಟಹೇತುವನ್ನು ಸಾಧಿಸುವುದಕ್ಕಾಗಿಯೇ ವೆಚ್ಚವಾದುದರಿಂದ, ಆತನು 'ಸು-ಯೋಧನ' ನಾದರೂ 'ದುರ್ಯೋಧನ'ನೆಂದು ಹೆಸರಾದನು.

### ಸಾಮುದಾಯಿಕ ಪಾಪ.

ಈ ಕಾರಣದಿಂದಲೆ, ಪಿತಾಮಹ ಭೀಷ್ಮ, ದ್ರೋಣಾಚಾರ್ಯ, ಕೃಪಾಚಾರ್ಯರ ಹೆಸರಿಗೂ ಕುಂದು ತಗಲದೆ ಇರಲಿಲ್ಲ. ಇವರು ಜ್ಞಾನಿಗಳು, ಶೂರರು, ಪೌರುಷವುಳ್ಳವರು, ತೇಜಸ್ವಿಗಳು ಮತ್ತು ಧರ್ಮಪರಾಯಣರು ಆಗಿದ್ದರು. ಆದುದರಿಂದ ಇವರು ಲೋಕಪೂಜ್ಯರಾದ ಅಸಾಮಾನ್ಯ ಮಹಾಪುರುಷರಾಗಿದ್ದುದನ್ನು ಎಲ್ಲರೂ ಒಪ್ಪಲೆಬೇಕು. ಆದರೆ ಇವರ ಪರಾಕ್ರಮವೆಲ್ಲವೂ, ಧೃತರಾಷ್ಟ್ರಪುತ್ರರ ದುಷ್ಟ ಆಕಾಂಕ್ಷೆಗಳನ್ನು ಕೈಗೂಡಿಸಿ ಕೊಡುವುದಕ್ಕಾಗಿ ವೆಚ್ಚವಾಯಿತು! ಆದುದರಿಂದ ಲೋಕೋತ್ತರ ಮಹಾಪುರುಷರೆನಿಸಿದರೂ ಅನೀತಿಯ ಅಸತ್ಪಕ್ಷವನ್ನು ಕೂಡಿಕೊಂಡುದರಿಂದ ಇವರು ವಧ್ಯರೆನಿಸಿದರು. **ಸಾಂಘಿಕ ಅಥವಾ ಸಾಮುದಾಯಿಕ ಪಾಪದ ಪರಿಣಾಮವು ಹೀಗೆ ಭೀಕರವಾಗಿದೆ.** ಒಣದರೊಡನೆ ಹಸಿಯದೂ ಸುಡುವುದು. ಇಂತಹ ಯುದ್ಧಗಳಲ್ಲಿ ಕೆಟ್ಟದರೊಡನೆ ಕೂಡಿದ ಒಳಿತಾದುದೂ ಹಾಳಾಗುವುದು. ಇಂತಹ ಪರಿಸ್ಥಿತಿಯಲ್ಲಿ ಒಳ್ಳೊಳ್ಳೆ ಜನಗಳು ಮಡಿದು ಹೋಗುವರು ಅವರನ್ನು ಉಳಿಸಲು ಯಾರಿಗೂ ಸಾಧ್ಯವಾಗುವುದಿಲ್ಲ. ಆದುದರಿಂದಲೆ ಈ ಯುದ್ಧದಲ್ಲಿ ಭಗವಾನ್ ಶ್ರೀಕೃಷ್ಣನು, ಭೀಷ್ಮ-ದ್ರೋಣಾದಿಗಳ ಮಹಾಯೋಗ್ಯತೆಯನ್ನು ಚನ್ನಾಗಿ ಅರಿತವನಾಗಿದ್ದರೂ ಅವರನ್ನು ಜೀವಂತವಾಗಿ ಉಳಿಸಿಕೊಳ್ಳಲು ಸಮರ್ಥನಾಗಲಿಲ್ಲ. ಪಿತಾಮಹ ಭೀಷ್ಮನಿಗೂ, ಆಚಾರ್ಯ ದ್ರೋಣನಿಗೂ ಪಾಂಡವರು ಸತ್ಯವಂತರೆಂದೂ, ಕೌರವರು ದುಷ್ಟರೆಂದೂ ಸಂಪೂರ್ಣವಾಗಿ ಗೊತ್ತು. ಪಾಂಡವರ ಸ್ವರಾಜ್ಯವನ್ನು ಶಕ್ಯವಿದ್ದಷ್ಟು ಬೇಗನೆ ಮರಳಿ ಕೊಟ್ಟುಬಿಡಬೇಕೆಂದೂ ಅವರ ಸ್ಪಷ್ಟವಾದ ಅಭಿಪ್ರಾಯವಿತ್ತು. ಧೃತರಾಷ್ಟ್ರ ಮತ್ತು ದುರ್ಯೋಧನಾದಿ ದುಷ್ಟ-ಚತುಷ್ಟಯರು, ಪಾಂಡವರ ಸ್ವರಾಜ್ಯ ಸಂಪಾದನೆಯ ದಾರಿಯಲ್ಲಿ ಒಗೆಒಗೆಯಾಗಿ ತೊಡಕು ತೊಂದರೆಗಳನ್ನು ಒಡ್ಡುತ್ತಿದ್ದರೆಂಬುದೂ ಇವರಿಗೆ ತಿಳಿದಿತ್ತು. ಇದು ಮಹಾ ಅನ್ಯಾಯ. ಇದು ತೀರ ಅಧರ್ಮವೆಂದು ಈ ಹಿರಿಯರು ಆಗಾಗ ಧೃತರಾಷ್ಟ್ರಾದಿಗಳಿಗೆ ಎಚ್ಚರವನ್ನೂ ಕೊಡುತ್ತಿದ್ದರು. ಆದರೆ ಧೃತರಾಷ್ಟ್ರನ ಸಾಮ್ರಾಜ್ಯವಾದಿ ಪಕ್ಷದ ಮದಾಂಧರಾದ ಜನರು ಈ ಉಪದೇಶಕ್ಕೆ ಕಿವಿಗೊಡುವುದಕ್ಕೇ ಸಿದ್ಧರಿದ್ದಿಲ್ಲ. ದುರ್ಯೋಧನನಂತೂ ಇವರ ಅಭಿಪ್ರಾಯಗಳಿಗೆ ಸ್ವಲ್ಪವೂ ಬೆಲೆ ಕೊಡುತ್ತಿದ್ದಿಲ್ಲ. ಮುದುಕರ ವಡವಡಿಕೆಯನ್ನು-ಬಡಬಡಿಕೆಯನ್ನು ಕೇಳುವವರಾರು? ಅಧಿಕಾರಮದದಿಂದ ಕೊಬ್ಬಿ ಕುಣಿಯುತ್ತಿರುವ ಅರಸುಮಕ್ಕಳು, ಸಂಸ್ಥಾನಾಧಿಪರು, ಸರದಾರರು ಸದುಪದೇಶವನ್ನು—ಧರ್ಮೋಪದೇಶವನ್ನು—ಕೇಳಿಕೊಳ್ಳುವುದಕ್ಕೆ ಎಂದೂ ಸಿದ್ಧರಿರುವುದಿಲ್ಲ. ಇವರು ಹಿಂದೆ ಎಂದೂ ಕೇಳಿಲ್ಲ. ಮುಂದೆ ಎಂದೂ ಕೇಳುವುದಿಲ್ಲ. ಸೋತು ಕಂಗೆಟ್ಟು ಹಣ್ಣಾಗಲೆ ಧರ್ಮದ ಮಾತುಗಳನ್ನು ಆಲಿಸುವ

ಒಲವು ತೋರುವುದು! ಆದರೆ ಆಗ ಆ ಉಪದೇಶವು ಏನು ತಾನೆ ಫಲಕಾರಿಯಾದೀತು?

**ಪಾಪಕ್ಕೆ ಮರಣವೇ ಫಲ.**

ದುರ್ಯೋಧನನಿಗೊಂದು ಹೆಮ್ಮೆ; ತನ್ನಲ್ಲಿ 'ನುರಿತ ವೀರರ ಹನ್ನೊಂದು ಅಕ್ಷೌಹಿಣಿ ಸೈನ್ಯವು ಸಜ್ಜಾಗಿದೆ; ಭೀಷ್ಮ, ದ್ರೋಣ, ಕರ್ಣಾದಿ ಅತಿರಥ ಮಹಾರಥರು ಸೇನಾನಾಯಕರಾಗಿದ್ದಾರೆ; ಎಲ್ಲ ಬಗೆಯ ಶಸ್ತ್ರಾಸ್ತ್ರಗಳೂ ಹಗೆಗಳ ನೆತ್ತರವನ್ನೂ ಹೀರಲು ನೀರಡಿಸಿ ನಿಂತಿವೆ; ಅಪಾರವಾದ ಸಂಪತ್ತು, ಭಾಂಡಾರದಲ್ಲಿದೆ. ಇಷ್ಟೆಲ್ಲ ಸಿದ್ಧತೆಯಿರುವಾಗ, ಪಾಂಡವರ ಸ್ವ-ರಾಜ್ಯದ ಕಿರುಕುಳ ಚಳವಳಿಕ್ಕೆ ಬೆದರಿ ನಾವು ನಮ್ಮ ಕೈಯೊಳಗಿನ ಸಾಮ್ರಾಜ್ಯವನ್ನು ಬಿಟ್ಟುಕೊಡಬೇಕೆ? ಪಾಂಡವರ ಸೈನ್ಯ ಸ್ವಲ್ಪ; ಅವರ ಸೈನಿಕರಿಗೆ ಯುದ್ಧದ ಅನುಭವವೂ ಸಾಕಷ್ಟಿಲ್ಲ. ಅವರಿಗೆ ನಮ್ಮಷ್ಟು ಧನಬಲವೂ ಇಲ್ಲ. ಇಂತು ಯಾವ ದೃಷ್ಟಿಯಿಂದ ವಿಚಾರಿಸಿದರೂ ಪಾಂಡವರು ನಮಗಿಂತಲೂ ದುರ್ಬಲರು. ಹೀಗಿದ್ದರೂ ನಾವೇ ಹೆದರಿ ಪಾಂಡವರಿಗೆ ಸ್ವರಾಜ್ಯವನ್ನು ದಾನಮಾಡಬೇಕೆ?' ಎಂಬ ಆತನ ಮಾತು ತೋರಿಕೆಯ ಲೆಕ್ಕದಲ್ಲಿ ಎಲ್ಲವೂ ಸರಿ. ಆದರೆ ಈ ವರೆಗೆ ತಾನು ಮಾಡಿದ ಅನೇಕಾನೇಕ ಅನ್ಯಾಯ ಅಪರಾಧಗಳಿಂದಲೂ, ಬಾಧೆ ಬಲತ್ಕಾರಗಳಿಂದಲೂ ತನ್ನ ಎಲ್ಲ ವೀರರೂ ಜೀವನ್ಮೃತರಾಗಿರುವರು. (ನಿಹತಾಃ ಪೂರ್ವಮೇವ ಭ ಗಿ ೧೧. ೩೩ ) ಎಂಬುದನ್ನು ಆತನು ಅರಿತಿದ್ದಿಲ್ಲ. ಹೆಮ್ಮೆಯಿಂದ ಬುದ್ಧಿ ಕುರುಡಾಗಿದ್ದ ದುರ್ಯೋಧನನಿಗೆ ಇದು ಕಾಣುವುದು ಶಕ್ಯವಿದ್ದಿಲ್ಲ. ತನ್ನ ಅಪಕೃತ್ಯಗಳಿಂದ ಎಲ್ಲ ಪ್ರಜೆಗಳ ಹಾಗೂ ಬಹುತರ ಎಲ್ಲ ಸೇನಾನಾಯಕರ ಮತ್ತು ಸೈನಿಕರ ಒಲವು ಪಾಂಡವರ ಕಡೆಗೆ ಇದ್ದಿತು, ಎಂಬುದನ್ನು ದುರ್ಯೋಧನನು ಅರಿಯನು. ಯಾರು ಗೆಲ್ಲಬೇಕೆಂದು ಲೋಕವೆಲ್ಲವು ಅಂತಃಕರಣಪೂರ್ವಕವಾಗಿ ಹಂಬಲಿಸುವುದೊ ಅವರಿಗೇ ನಿಜವಾದ ಗೆಲುವು. ಅಲ್ಲಿಯೆ ನಿಜವಾದ '**ವಿಜಯ**,' ಜನತಾ '**ಜನಾರ್ದನನ**' ಹರಿಸುವುದು '**ಧರ್ಮ**' ಪಕ್ಷಕ್ಕೆ ಯಾವಾಗಲೂ. ತಮ್ಮ ಸ್ವ[illegible]ನ್ನು ಮರಳಿ ಪಡೆಯಬೇಕೆಂದು ಸತ್ಯ, ಧರ್ಮದ ದಾರಿಯಿಂದ ಪಾಂಡವರು ನಡಸಿದ ಪ್ರಯತ್ನಗಳ ನೈತಿಕ ಶಕ್ತಿಯ ಅಮೋಘ ಸಾಮರ್ಥ್ಯವನ್ನು ದುರ್ಯೋಧನನು ಕಡೆಗಣಿಸಿದ್ದನು. ಆತನು ಕೇವಲ ತನ್ನ ಪಾಶವೀಯ ಶಕ್ತಿಯನ್ನಷ್ಟೇ ಲೆಕ್ಕಿಸಿದ್ದನು. ಮತ್ತು ತನ್ನ ಮಿತಿಮೀರಿದ ಪಾಶವಿ ಶಕ್ತಿಯ ಹೆಮ್ಮೆಯಿಂದ ಆತನು ತೀರ ಉನ್ಮತ್ತನಾಗಿದ್ದನು. ಆದರೆ ಕುರುಡ ಧೃತರಾಷ್ಟ್ರನ ಅಂತರಾಳದಲ್ಲಿ ಇವೆಲ್ಲ ಸಂಗತಿಗಳ ತಾಕಲಾಟವು ನಡೆದಿತ್ತು. ಆತನು ಕುರುಡನಾಗಿದ್ದರೂ ಇವೆಲ್ಲ ಸಂಗತಿಗಳ ಅರಿವು ಉಳಿದೆಲ್ಲರಿಗಿಂತ ಹೆಚ್ಚಾಗಿದ್ದಿತು. ಆದುದರಿಂದಲೆ ಈತನು ಯುದ್ಧ ಕಾಲವು ಸಮೀಪಿಸುತ್ತಲೆ ಉಳಿದೆಲ್ಲರಿಗಿಂತ ಹೆಚ್ಚು ಅಂಜಿದನು; ಅಳುಕಿದನು. ಈ ಅಳುಕಿನಿಂದಲೇ ಆತನು "ಎಲಾ! ಸಂಜಯಾ! ಕಾದುವ ಹುಮ್ಮಸದಿಂದ ನನ್ನ ಮಕ್ಕಳೂ ಪಾಂಡುಪುತ್ರರೂ ಕುರುಕ್ಷೇತ್ರದಂತಹ ಧರ್ಮಕ್ಷೇತ್ರದಲ್ಲಿ ಸನ್ನದ್ಧರಾಗಿ ಎದುರಿಸಿ ನಿಂತುದನ್ನು ನೀನು ನನಗೆ ನಿವೇದಿಸಿದೆ. ಆಬಳಿಕ ಅಲ್ಲಿ ನಡೆದುದನ್ನೆಲ್ಲ ವಿವರಿಸು" ಎಂದು ಕಾತರದಿಂದ ಕೇಳಿದನು. ಧರ್ಮಕ್ಷೇತ್ರದಲ್ಲಿ ನಿಂತುದರಿಂದ ಪಾಂಡವರಿಗೆ ಯುದ್ಧ-ಪ್ರವೃತ್ತಿಯು ಆಗಲಿಕ್ಕಿಲ್ಲ, ಎಂದು ಧೃತರಾಷ್ಟ್ರನು ಎಣಿಸಿದ್ದನು. ಆದುದರಿಂದ ಯುದ್ಧವು ಬೇಡವೆನಿಸಿ, ಪಾಂಡವರು ನಿವೃತ್ತರಾದರೆ ಲೇಸು; ಆದುದರಿಂದ ಧರ್ಮಕ್ಷೇತ್ರವೆನಿಸಿದ ಕುರುಕ್ಷೇತ್ರದಲ್ಲಿ ನಿಂತ ಬಳಿಕ ಪಾಂಡವರ ನಿಷ್ಪಾಪ ಮನಸಿನ ಮೇಲೆ ಯಾವ ಪರಿಣಾಮವಾಯಿತೆಂಬುದನ್ನು ಧೃತರಾಷ್ಟ್ರನು ನಿರೀಕ್ಷಿಸುತ್ತಲಿದ್ದಾನೆ. ಇಷ್ಟು ಪಾತಕಗಳನ್ನು ಮಾಡಿದ ಮೇಲೂ ಧರ್ಮಕ್ಷೇತ್ರದ ಪರಿಣಾಮವು ತನಗೆ ಅನುಕೂಲವಾಗಿಯೆ ಆಗುವುದೆಂದು ಎಣಿಕೆ! ಆಶಾಪಾಶಗಳಿಂದ ಒಡ್ಡವಾದ ಮನಸು ತಿಳಿಗೇಡಿಯಾಗಿರುತ್ತದೆ; ಕುರುಡಾಗಿರುತ್ತದೆ, ಎಂಬುದು ಸುಳ್ಳಲ್ಲ!

**ತನ್ನ ಪಾತಕಗಳ ಭೀತಿ**

ಈ ಪ್ರಶ್ನೆಯನ್ನು ಸಂಜಯನಿಗೆ ಕೇಳುವಾಗ ಆತನಿಗೆ ತನ್ನ ಎಲ್ಲ ಪಾಪಗಳ ನೆನಪಾಗಿರಲು ಸಾಕು. ಆತನ ಮನಸಿನಲ್ಲಿ ಹೀಗೆ ಅಳುಕುತ್ತಿರಬಹುದು: "ನಾವು ಭೀಮನಿಗೆ ವಿಷವನ್ನು ಕುಡಿಸಿದೆವು; ನೀರಿನಲ್ಲಿ ಮುಳುಗಿಸಿದೆವು; ಅರಗಿನ ಮನೆಯಲ್ಲಿ ಆತನನ್ನು ಎಲ್ಲ ಅಣ್ಣ ತಮ್ಮಂದಿರೊಡನೆ ಸುಡುವ ಹೂಂಚು ಹಾಕಿದೆವು; ಪಾಂಡವರ ಧರ್ಮಪತ್ನಿ, ಪತಿವ್ರತೆ ದ್ರೌಪದಿಯನ್ನು ಬಗೆಬಗೆಯಾಗಿ ಗೋಳಾಡಿಸಿದೆವು. ಜೂಜಿನಲ್ಲಿ ಮೋಸದಿಂದ ಪಾಂಡವರನ್ನು ಸೋಲಿಸಿ ಅವರ ರಾಜ್ಯವನ್ನು ಅಪಹರಿಸಿದೆವು. ಹನ್ನೆರಡು ವರ್ಷ ವನವಾಸ ಮತ್ತು ಒಂದು ವರ್ಷ ಅಜ್ಞಾತವಾಸದ ಸಂಕಟಗಳಲ್ಲಿ ಅವರನ್ನು ನೂಕಿದೆವು. ಇಷ್ಟಾದರೂ ಅವರು ಧರ್ಮದಿಂದಲೇ ನಡೆದುಕೊಂಡು ಕಷ್ಟಗಳನ್ನು ಸಹಿಸಿದರು. ಬಲಿಷ್ಠರಾಗಿದ್ದರೂ ಅತ್ಯಾಚಾರಿಗಳಾಗಿ ನಡೆದುಕೊಳ್ಳಲಿಲ್ಲ. ಅನತ್ಯಾಚಾರಿಗಳಾಗಿಯೆ ವರ್ತಿಸಿದರು. ಎಲ್ಲ ಪ್ರತಿಜ್ಞೆ-

ಗಳನ್ನು ಪಾಲಿಸಿ ಅವರು ಇಂದು ತಮ್ಮ ಸ್ವರಾಜ್ಯವನ್ನು ಮರಳಿ ಬೇಡುತ್ತಲಿದ್ದಾರೆ. ನಾವು ಮಾತ್ರ ಆ ಶರತ್ತುಗಳನ್ನು ಮುಂದೊಡ್ಡಿ ಅದನ್ನು ಅವರಿಗೆ ಕೊಡುತ್ತಿಲ್ಲ. ಅವರ ಸ್ವರಾಜ್ಯವನ್ನು ಅವರಿಗೆ ಮರಳಿ ಕೊಡುವುದಾಗಿ ನಾವು ಹಲವು ಬಾರಿ ಘೋಷಣೆ ಮಾಡಿದ್ದುಂಟು. ಆದರೆ ಆ ಘೋಷಣೆಗಳೆಲ್ಲ ಸ್ವರಾಜ್ಯವನ್ನು ಕೊಡುವುದಕ್ಕಾಗಿ ಅಲ್ಲ. ಕೇವಲ ಕಾಲಹರಣಕ್ಕಾಗಿ! ಇಷ್ಟು ಅತ್ಯಾಚಾರ ಅನ್ಯಾಯಗಳನ್ನು ನುಂಗಿಕೊಂಡು, ಅವರು ಮತ್ತೆ ಬರಿ ಐದು ಊರುಗಳನ್ನು ಕೊಟ್ಟರೂ ಸಾಕು, ಎಂದು ತಮ್ಮ ಕನಿಷ್ಠ ಬೇಡಿಕೆಯನ್ನು ತಿಳಿಸಿದರು. ಆದರೆ ನಾವು ಅಷ್ಟನ್ನೂ ಕೊಡಲು ಒಪ್ಪಲಿಲ್ಲ. ಅಲ್ಲದೆ ಅವರಿಗೆ ನಾವು ಹೇಳಿಕಳುಹಿದ್ದೇನು? 'ಯುದ್ಧದಿಂದಲ್ಲದೆ ಬೇರಾವ ತೆರನಾಗಿಯೂ ನಿಮಗೆ ಒಂದಂಗುಲದಷ್ಟು ಸಹ ನೆಲವು ಸಿಕ್ಕಲಾರದು' ಎಂದು. ಹೀಗೆಲ್ಲ ಪಾಂಡವರನ್ನು ಬಳಲಿಸಿದವು. ಇಷ್ಟು ಪಾಪಗಳನ್ನು ಮಾಡಿದವು ನಮ್ಮ ಈ ಪಾತಕಗಳ ಪರಿಣಾಮದಿಂದ ಲೋಕದ ಮನಸ್ಸು ಪಾಂಡವರಿಗೆ ಅನುಕೂಲ, ನಮಗೆ ಪ್ರತಿಕೂಲವಾಗಿದೆ. ಆದುದರಿಂದ ನಮ್ಮ ಪಕ್ಷವು ಪಾಶವೀಶಕ್ತಿಯಲ್ಲಿ ಮಿಗಿಲಾಗಿ ತೋರಿದರೂ ಆತ್ಮಿಕಸಾಮರ್ಥ್ಯದ ದೃಷ್ಟಿಯಿಂದ ಅದು ಕೀಳಾಗಿದೆ. ಪಾಂಡವರ ಪಕ್ಷಕ್ಕೆ 'ಧರ್ಮ' ಸಹಾಯವು ಇರುವುದರಿಂದ ಆತ್ಮಿಕಬಲದಲ್ಲಿ ಅದು ನಮಗಿಂತ ಎಷ್ಟೋ ಪಟ್ಟು ಮಿಗಿಲಾಗಿದೆ ಇಂತಿದು ಧೃತರಾಷ್ಟ್ರನ ಚಿಂತೆ. ಈ ಚಿಂತೆಯಿಂದ ಆತನಿಗೆ ಹಗಲಿರುಳೂ ಎದೆದುಗುಡು, ಕಳವಳ. ಈ ಬಗೆಯ ವಿಹ್ವಲತೆಯಿಂದಲೇ ಆತನು 'ಕಾಳಗದ ಕಣದಲ್ಲಿ ಮುಂದೇನು ನಡೆಯಿತು?' ಎಂದು ಯುದ್ಧಾರಂಭವಾಗುತ್ತಲೇ ಕೇಳುತ್ತಾನೆ.

### ಧರ್ಮವಚನಗಳ ದುರುಪಯೋಗ.

ಅನ್ಯಾಯದಿಂದ ಪರರ ರಾಜ್ಯವನ್ನು ಅಪಹರಿಸಿದವರೂ ಮೋಸದಿಂದ ಇನ್ನೊಬ್ಬರ ನಾಡಿನಲ್ಲಿ ಒಡೆತನ ನಡೆಸಿ, ಆ ನಾಡು ಕಡೆತನಕ ತಮ್ಮ ಅಂಕೆಯಲ್ಲಿಯೆ ಉಳಿಯಬೇಕೆಂದು ಹಂಬಲಿಸುವವರೂ, ಧರ್ಮದ ಬೆಂಬಲವು ತಮಗೆ ಉಂಟೆಂದು ತೋರಿಸಲು ಯಾವಾಗೂ ಹವಣಿಸುತ್ತಿರುತ್ತಾರೆ. ಧರ್ಮವಚನಗಳನ್ನು ಎತ್ತಿ-ಎತ್ತಿ ಹೇಳುತ್ತಿರುತ್ತಾರೆ. ಸೋತು ಆಳಾಗಿರುವ ದೇಸಿಗರ ತಲೆಯಲ್ಲಿ, ಅಖಿಲ ಮಾನವಜನಾಂಗದ ಹಿತವೆಂಬ ವಿಶಾಲತತ್ತ್ವದ ಭ್ರಾಂತಿಯನ್ನು ತುಂಬುತ್ತಾರೆ ಯುದ್ಧವೆಂಬುದು ಘೋರಕೃತ್ಯವೆಂದು ನಂಬಿಸಿ, ದೊರೆತುದರಲ್ಲಿ ಸಂತುಷ್ಟರಾಗಿರಬೇಕೆಂಬ ಅಲ್ಪತೃಪ್ತಿಯ ತತ್ತ್ವಜ್ಞಾನವನ್ನು ಅವರ ಲೋಮ ರೋಮಗಳಲ್ಲಿ ಸೇರುವಂತೆ ಮಾಡುತ್ತಾರೆ ಸಂಸಾರವು ನಶ್ವರ; ನಶ್ವರಭೋಗಕ್ಕಾಗಿ ಹಿಂಸೆಯೇಕೆ? ಯುದ್ಧವೇಕೆ? ಎಂಬ ವಿಚಾರಗಳನ್ನು ಹರಡುತ್ತಾರೆ. 'ಧೃತ-ರಾಷ್ಟ್ರ' ಪಕ್ಷದ ಕೌರವರು 'ಹೃತ-ರಾಷ್ಟ್ರ' ಪಕ್ಷದ ಪಾಂಡವರ ಮೇಲೆ ಈ ಬಗೆಯ ವಿಚಾರಭ್ರಾಂತಿಯ ಜಾಲವನ್ನು ಬೀಸಿದ್ದರು! ತನ್ನ ಮಾಟ-ಮೋಸದ ನಡೆ-ನುಡಿಗಳು ಸರಿಯೆಂದು ಸ್ಥಾಪಿಸಲು ವೇತಾಳನು ವೇದವಚನಗಳ ಆಧಾರ ಹೇಳುವನು, ಎಂದು ಒಂದು ಲೋಕೋಕ್ತಿಯಿದೆ! ಇದರಂತೆಯೆ ಪಾಶವೀಶಕ್ತಿಯಿಂದ ಉನ್ಮತ್ತರಾದ ಗೆದ್ದಪಕ್ಷದವರು, ತಮ್ಮ ಅಪಕೃತ್ಯಗಳನ್ನು ಮುಚ್ಚಿಕೊಳ್ಳಲು ಧರ್ಮವಚನಗಳ ನೆರವನ್ನೂ ಕೋರುತ್ತಾರೆ. ಈ ಧರ್ಮವಚನಗಳಿಗೆ ಮರುಳಾಗಿ, ಸೋತ, ನಾಡಿನ ದೇಸಿಗರು, ತಾವು ಯಾವಾಗಲೂ ಅಲ್ಪಸಂತುಷ್ಟರಾಗಿ, ಆಳಾಗಿ ಬಾಳುವುದರಲ್ಲಿಯೆ ಸಂತೋಷಗೊಂಡಿರುವಂತೆ ಈ ಹಂಚಿಕೆಯಿರುತ್ತದೆ. ಸೋತವರಿಗೆ ಎಂದೆಂದೂ ತಮ್ಮ ಕಳೆದುಕೊಂಡ ಸ್ವರಾಜ್ಯಸಂಪಾದನೆಯ ಅಪೇಕ್ಷೆಯೂ ಉಂಟಾಗಬಾರದೆಂಬ ದೂರದೃಷ್ಟಿಯ ಧೂರ್ತಧೋರಣವು ಈ ಧರ್ಮವಚನಗಳ ಹಿಂಬದಿಯಲ್ಲಿರುತ್ತದೆ. ಕೌರವರು ಕೂಡ ಪಾಂಡವರ ಮೇಲೆ ಈ ಬಗೆಯ ಕೈವಾಡಮಾಡದೆ ಬಿಡಲಿಲ್ಲ. ಗೀತೆಯ ಮೊದಲನೆಯ ಅಧ್ಯಾಯದಲ್ಲಿ ಈ ಬಗೆಯ ಮೋಸದ ತತ್ತ್ವಜ್ಞಾನದ ಧರ್ಮವಚನಗಳ ಸಂಬಂಧವು ಅಲ್ಲಲ್ಲಿ ಕಂಡುಬರುತ್ತದೆ. ಆದಕಾರಣ ಈ ಪ್ರಸಂಗದ ವರ್ಣನೆಯನ್ನು ಸ್ವಲ್ಪ ಇಲ್ಲಿ ಮಾಡಲಾಗಿದೆ:

'ಉದ್ಯೋಗ ಪರ್ವ'ದಲ್ಲಿ (ಅಧ್ಯಾಯ ೨೦-೩೨ವರೆಗೆ) 'ಸಂಜಯ ಯಾನ' ಹೆಸರಿನ ಒಂದು ಪರ್ವವುಂಟು. ಮೂಲ ಭಾರತದೊಳಗಿನ ಈ ಪರ್ವವನ್ನು ಓದುಗರು ಒಮ್ಮೆ ಸಂಪೂರ್ಣವಾಗಿ ಮನನ ಮಾಡಬೇಕು. ಇದನ್ನು ಓದಿದ ಬಳಿಕ ಗೀತೆಯ ಮೊದಲನೆಯ ಅಧ್ಯಾಯವು ಚೆನ್ನಾಗಿ ತಿಳಿಯಬಲ್ಲದು. ಅರ್ಜುನನಂತಹ ಲೋಕೈಕ ವೀರನಿಗೆ ಭಾರತೀಯ ಯುದ್ಧದ ಆರಂಭದಲ್ಲಿ ಈ ಬಗೆಯಾದ ವಿಷಾದವು ಆವರಿಸುವುದಕ್ಕೆ ಕಾರಣವೇನೆಂಬುವುದು ಗೊತ್ತಾಗುವುದು. ಹಗೆಗಳೊಡನೆ ಹೋರಾಡುವುದರಲ್ಲಿಯೆ ಹಿಗ್ಗುಗೊಳ್ಳುವ ವೀರ ಅರ್ಜುನನು, ಈ ಯುದ್ಧದ ಮೊದಲಲ್ಲಿಯೆ ಇಂತು ವಿರಕ್ತಿಯನ್ನು ತಳೆದು, ಯುದ್ಧಪರಾಙ್ಮುಖನಾಗಿ, ಅಡವಿಗೆ ಸೇರಬೇಕೆಂಬ ಬುದ್ಧಿಯವನು ಆದಕಾರಣವೇನೆಂಬುದು ಚೆನ್ನಾಗಿ ತಿಳಿಯ-

ಬೇಕಾದರೆ ಆ 'ಸಂಜಯ ಯಾನ' ಪರ್ವದ ವಾಚನವು ಅವಶ್ಯವಾಗಿದೆ. **ಧೃತರಾಷ್ಟ್ರ ಪಕ್ಷದವರು, ಧರ್ಮ-ವಚನಗಳ ದುರುಪಯೋಗ ಮಾಡಿ ಪಾಂಡವರನ್ನು ಯುದ್ಧದಿಂದ ಪರಾವೃತ್ತರನ್ನಾಗಿ ಮಾಡಬೇಕೆಂದು ಹೂಡಿದ ಕೊನೆಯ ಒಳಸಂಚಿನ ಈ ಕುಟಿಲ ನೀತಿಯು, ಸಾಮ್ರಾಜ್ಯವಾದಿಗಳ ಮಾಯಾಜಾಲದ ಕೈವಾಡಕ್ಕೆ ಒಳ್ಳೆಯ ನಿದರ್ಶನವಾಗಿದೆ.** ಪಾಂಡವರು ಸುಶೀಲರೂ, ಧರ್ಮ ಪ್ರವೃತ್ತಿಯುಳ್ಳವರೂ ಆಗಿರುವರೆಂದು ಧೃತರಾಷ್ಟ್ರನು ಅರಿತಿದ್ದನು. ಆದುದರಿಂದ ಪಾಂಡವರು ಧರ್ಮವಚನಗಳಿಗೆ ನಿಶ್ಚಯವಾಗಿ ಮನಸೋಲುವರೆಂದೂ ಆತನ ಮನವರಿಕೆಯಾಗಿತ್ತು. ಈ ಕಾರಣದಿಂದಲೆ ಅವನು ಸಂಜಯನನ್ನು ಪಾಂಡವರ ಬಿಡಾರಕ್ಕೆ ಅಟ್ಟಿದ್ದನು. ಸಂಜಯನು ಆಗ ಮಾಡಿದ ಧರ್ಮೋಪದೇಶವನ್ನು ಐವರೂ ಕೇಳಿಕೊಂಡಿದ್ದು ನಿಜ. ಆದರೆ ಅರ್ಜುನನ ಮನಸಿನ ಮೇಲೆ ಅದು ಹೆಚ್ಚು ಪರಿಣಾಮವನ್ನು ಮಾಡಿದ್ದಿತು. ಅದರಿಂದ ಯುದ್ಧಾರಂಭದಲ್ಲಿ ಮುಂದಿನ ಆ ಹತ್ಯಾಕಾಂಡದ ಭೀಕರ ಚಿತ್ರವು ಕಣ್ಣೆದುರು ನಿಂತು ಅಂದು ಸಂಜಯನು ಮಾಡಿದ ಕೈವಾಡವು ಇದೀಗ ಇಲ್ಲಿ ಸಫಲತೆಯನ್ನು ಹೊಂದಿತು. ಸಂಜಯನ ಆ ವಿಚಾರಗಳು ಇದೀಗ ಇಲ್ಲಿ ತಲೆಯೆತ್ತಿ ಅರ್ಜುನನನ್ನು ಯುದ್ಧದಿಂದ ಹಿಂದಕ್ಕೆ ಸೆಳೆಯಲಾರಂಭಿಸಿದುವು. ಹೀಗಾಗುವುದು ನಿಶ್ಚಯವೆಂದು ಧೃತರಾಷ್ಟ್ರನೂ ಊಹಿಸಿದ್ದನು. ಆದುದರಿಂದಲೆ ಆತನು, ತನ್ನ ಮಂತ್ರವು ನಾಟಿತೆ, ಇಲ್ಲವೆ, ಎಂಬುದನ್ನು ಅರಿತುಕೊಳ್ಳಬೇಕೆಂದೇ ಸಂಜಯನಿಗೆ, 'ಎರಡೂ ದಂಡುಗಳು ಒಂದನ್ನೊಂದು ಎದುರಿಸಿ ನಿಂತಬಳಿಕ ಅಲ್ಲಿ ಒದಗಿದುದು ಏನು?' ಎಂದು ಪ್ರಶ್ನಿಸಿದ್ದಾನೆ. **ತಾನು ಒಡ್ಡಿದ ಧರ್ಮವಚನಗಳ ಜಾಲದಲ್ಲಿ ಅರ್ಜುನನು ಸಿಲುಕಿಕೊಂಡನೋ ಇಲ್ಲವೋ** ಎಂಬುದನ್ನೂ ತಿಳಿದುಕೊಳ್ಳಬೇಕೆಂಬ ಕುತೂಹಲವೆ ಧೃತರಾಷ್ಟ್ರನ ಈ ಪ್ರಶ್ನೆಯಲ್ಲಿ ಹುದುಗಿಕೊಂಡಿದೆ.

ಶ್ರೀ ಭಗವದ್ಗೀತೆಯ ೧ನೆಯ ಅಧ್ಯಾಯವನ್ನು ಸಂಜಯಯಾನ ಪರ್ವದ ಬೆಳಕಿನಲ್ಲಿ ಓದಿದರೆ ಮಾತ್ರ ಇದರೊಳಗಿನ ಮಾತಿನ ಮರ್ಮವು ತಿಳಿಯುವುದು. ಆದುದರಿಂದ ನಮ್ಮ ವಾಚಕರಿಗೆ ಉದ್ಯೋಗಪರ್ವದ ಮೊದಲಿನ (೨೦–೩೨) ಹದಿಮೂರು ಅಧ್ಯಾಯಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಲು ಇನ್ನೂ ಒಮ್ಮೆ ಬಿನ್ನವಿಸಿಕೊಳ್ಳುತ್ತೇವೆ. ಓದುಗರಿಗೆ ಅನುಕೂಲವಾಗಲೆಂದು ಆ ಭಾಗದ ಸಾರಾಂಶವನ್ನು ಇಲ್ಲಿ ಸ್ವಲ್ಪದರಲ್ಲೇ ಕೊಡಲಾಗಿದೆ.

(ಉದ್ಯೋ. ಅ. ೨೨) ಧೃತರಾಷ್ಟ್ರನು ಸಂಜಯನಿಗೆ ಹೇಳಿದ್ದೇನೆಂದರೆ, 'ಎಲೈ ಸಂಜಯನೆ, ನೀನು ಪಾಂಡವರ ಪಾಳಯಕ್ಕೆ ಹೋಗಿ ಅವರಿಗೆ ತಿಳಿಸು: **ನಿಮ್ಮ ಕಲ್ಯಾಣವಾಗಬೇಕೆಂದು ಧೃತರಾಷ್ಟ್ರನು ಅಪೇಕ್ಷಿಸುತ್ತಾನೆ.** ಆತನು ನಿಮ್ಮ ಗುಣಗಳಿಗೆ ಸೋತಿದ್ದಾನೆ. ಮತ್ತು ನೀವು ಮರಳಿ ಒಂದುದಕ್ಕೆ ಆತನಿಗೆ ಬಹಳ ಸಂತೋಷವಾಗಿರುತ್ತದೆ. ನಿಮ್ಮೊಡನೆ ಕಾದಬೇಕೆಂದು ಆತನ ಮನೀಷೆಯಿಲ್ಲ. ಒಪ್ಪಂದವೇ ಆತನ ಅಂತರಾಳದ ಆಕಾಂಕ್ಷೆ. ಆದುದರಿಂದ ನೀವು ಕೂಡ ಒಪ್ಪಂದಕ್ಕೆ ಸಿದ್ಧರಾಗಿರಿ; ಸಂಜಯನೆ, ಇಂತೀಬಗೆಯಾಗಿ ಸಂಧಿ-ಸಂಧಾನದ ಮಾತುಗಳನ್ನು ನುಡಿದು, ಕಾದಬೇಕೆಂಬ ಅವರ ಹುಮ್ಮಸವು ಕಡಿಮೆಯಾಗುವಂತೆ ಮಾಡು.'

ಧೃತರಾಷ್ಟ್ರನ ಈ ಒಣಗು ನುಡಿಗಳಿಂದ, ಆತನಿಗೆ ಸಮಾನಧಾನದಿಂದ ಪ್ರಾಪ್ತವಾಗತಕ್ಕ ಶಾಂತಿಯ **ಅಪೇಕ್ಷೆಯು ಇದ್ದಿಲ್ಲ.** ಎಂದು ಸ್ಪಷ್ಟವಾಗುತ್ತದೆ. ಕಳೆದು **ಕೊಂಡ ತಮ್ಮ ಸ್ವರಾಜ್ಯವನ್ನು ಮರಳಿ ಪಡೆಯುವುದಕ್ಕಾಗಿ ಪಾಂಡವರು ಕೈಕೊಂಡಿರುವ ಧರ್ಮಯುದ್ಧದೊಳಗಿನ ಅವರ ಉತ್ಸಾಹವು ಕಡಿಮೆಯಾಗಬೇಕೆಂದು ಮಾತ್ರ ಆತನ ಅಪೇಕ್ಷೆಯಾಗಿತ್ತು.** ಸಾಮ್ರಾಜ್ಯವಾದಿಗಳು ಆಡುವ ಉದಾತ್ತ ತತ್ತ್ವಗಳ ಮಾತುಗಳು ಕೇವಲ ತೋರಿಕೆಯವು; ಸ್ವಾತಂತ್ರ್ಯದ ಗದ್ದು-ನಾಟಿನವರನ್ನು ಮರುಳುಗೊಳಿಸಲು ಬಳಸುವ ಬಲ್ಲೆಯಂತಹ ನುಡಿಗಳು; ಶುದ್ಧ ಮಾಯಾಜಾಲ, ಎಂಬುದನ್ನು ಇಲ್ಲಿ ಕಂಡುಕೊಳ್ಳಬಹುದು.

ಮುಂದ ಪಾಂಡವರಲ್ಲಿಗೆ ಬಂದು, ಸಂಜಯನು ಉಪದೇಶ ನುಡಿದಿದ್ದಾನೆ. (೨೫ನೆ ಅಧ್ಯಾಯ) 'ಎಲೈ ಧರ್ಮರಾಯನೆ, ನೀವು-ಪಾಂಡವರು-ಬಹಳ ಒಳ್ಳೆಯವರು. ನೀವು ಕಷ್ಟಕ್ಕೀಡಾದರೂ ಅಧರ್ಮದಿಂದ ನಡೆಯತಕ್ಕವರಲ್ಲ. ನೀವೇ ಧನ್ಯರು. ನೀವು ಈವರೆಗೆ ಕೌರವರ ಅನಂತ ಅಪರಾಧಗಳನ್ನು ಹೊಟ್ಟೆಯಲ್ಲಿ ಹಾಕಿಕೊಂಡಿರುವಿರಿ. ಇಂತು ಧರ್ಮವಂತರಾದ ನೀವು, ಈವರೆಗೆ ಧರ್ಮದಿಂದಲೆ ನಡೆದು, ಈಗ, ಕೇವಲ ರಾಜ್ಯಲೋಭದಿಂದ ಹಿಂಸೆಗೆ ಸಿದ್ಧರಾಗಿರುವಿರೆಂದು ನಾನೆಂದೂ ನಂಬಲಾರೆನು. ನೀವು ದುರ್ಯೋಧನಾದಿಗಳನ್ನು ಕೊಂದು, ಕುಲಕ್ಷಯಕ್ಕೆ ಎಂದೂ ಕಾರಣರಾಗಲಿಕ್ಕಿಲ್ಲವೆಂದು ನನ್ನ ಮನಸು ನನಗೆ ಹೇಳುತ್ತಲಿದೆ. ಧರ್ಮರಾಯನೆ, ಕ್ಷತ್ರಿಯರ ಧರ್ಮವೆ ಬಹಳ ಕಠೋರವಾದದ್ದು. ಅದು ಭಯಂಕರ ಕ್ರೂರವೂ, ಹಿಂಸಾತ್ಮಕವೂ ಆದುದು. ಅಹಹಾ! ಇಂತಹ ಕಠೋರವಾದ ನಿಮ್ಮ ... ಧರ್ಮ

ವಂತರಿಗೆ ಎಂದೂ ಒಪ್ಪುವುದಿಲ್ಲ! ಯುದ್ಧದಂತಹ ಕ್ರೂರವೂ ಹಿಂಸಾಯುಕ್ತವೂ ಆದ ಹೀನಕರ್ಮಕ್ಕೆ ನಿಮ್ಮ ಮನಸು ಎಂದೂ ಎಳಸದು, ಎಂದು ನನ್ನ ನಂಬುಗೆಯಿದೆ. ವೃದ್ಧನಾದ ಧೃತರಾಷ್ಟ್ರನ ಪ್ರೀತಿಯು ನಿಮ್ಮ ಮೇಲೆ ಎನಿತೊಂದು ಅಪಾರವಾಗಿದೆ! ಆದರೆ ಆ ಮುದುಕನು ಒಬ್ಬನು; ಏನು ಮಾಡಿಯಾನು? ಆತನು ನಿಮ್ಮ ಕಲ್ಯಾಣಕ್ಕಾಗಿ ಹಗಲಿರುಳೂ ಚಿಂತಿಸುತ್ತಲಿದ್ದಾನೆ. ಆದರೆ ಸಾಮ್ರಾಜ್ಯ ಮದದಿಂದ ತಲೆತಿರುಗಿದ ದುರ್ಯೋಧನನು ಆತನ ಮಾತಿಗೆ ಕಿವಿಗೊಡುವುದೇ ಇಲ್ಲ. ಇಂತಹ ಪರಿಸ್ಥಿಯಲ್ಲಿ ನೀವು ಆತನ ಮಕ್ಕಳನ್ನೆಲ್ಲ ಸಂಹರಿಸಿ ಧೃತರಾಷ್ಟ್ರನನ್ನು ಮುಪ್ಪಿನಲ್ಲಿ ಪುತ್ರ-ಶೋಕಕ್ಕೆ ಈಡು ಮಾಡುವಿರಾ? ನಿಮ್ಮ ಈ ವರೆಗಿನ ಶೀಲಕ್ಕೆ, ಸಚ್ಚಾರಿತ್ರ್ಯಕ್ಕೆ ಇದು ಒಪ್ಪುವುದೆ? ಅಜಾತ ಶತ್ರುವೆನಿಸಿದ ಎಲೈ ಧರ್ಮರಾಜನೆ, ನಿನ್ನ ಹೃದಯದಲ್ಲಂತೂ ಹಗೆತನದ ಲವಲೇಶವೂ ಇಲ್ಲ. ನೀನೆ ಧನ್ಯನು. ನಿಜವಾದ ಧರ್ಮವಂತನು. ಅಪಾರ ಕಷ್ಟಗಳನ್ನು ಸಹಿಸಿಯೂ ನೀನು ಧರ್ಮವನ್ನು ಕಾಯ್ದುಕೊಂಡಿರುವೆ. ಆದುದರಿಂದ ನೀನು ಈ ಕುತ್ತಿನಲ್ಲಿಯೂ ಕೌರವರೊಡನೆ ಶಾಂತಿಯಿಂದ ನಡೆದುಕೊಳ್ಳಲಾರೆಯಾ? ಎಲೈ ಧರ್ಮರಾಯನೆ, ನಿನ್ನ ಉಳಿದ ತಮ್ಮಂದಿರೂ ಧರ್ಮವಂತರೆ ಆಗಿದ್ದಾರೆ. ಈಗ ಕುಲಕ್ಷಯವಾಗುವ ಹೊತ್ತು ಬಂದಿದೆ. ಈ ಸಂಕಟದೊಳಗಿಂದ ಎಲ್ಲರನ್ನೂ ಪಾರುಮಾಡುವ ಸಾಮರ್ಥ್ಯವು ನಿಮ್ಮ ಕೈಯಲ್ಲಿಯೆ ಇದೆ. ಧರ್ಮಾತ್ಮನೆ, ಎಲ್ಲರೂ ಸುಖಶಾಂತಿಯಲ್ಲಿರಬೇಕೆಂದು ನಿನ್ನ ಇಚ್ಛೆ ಇದ್ದರೆ, ನೀನು ಈ ಸಮಯದಲ್ಲಿ ಕೌರವರೊಡನೆ ಸಂಧಿಯನ್ನು ಮಾಡಿಕೊಂಡು, ಎರಡೂ ಕುಲಗಳ ಸಂರಕ್ಷಣೆ ಮಾಡಿದ ಶ್ರೇಯಸ್ಸನ್ನು ಪಡೆ. (ಅಧ್ಯಾಯ ೨೫.) ಎಲೈ ಪಾಂಡವರೆ, ಧೃತರಾಷ್ಟ್ರನು ಒಪ್ಪಂದಕ್ಕೆ ಅತ್ಯಂತ ಉತ್ಸುಕನಾಗಿದ್ದಾನೆ. ನೀವು ಐವರೂ ದಯಾಳುಗಳೂ, ಧರ್ಮಶೀಲರೂ, ಉದಾರಹೃದಯರೂ ಆಗಿರುವಿರಿ. ನಿಮ್ಮಂತಹ ಸಜ್ಜನರು ಯುದ್ಧದಂತಹ ಕ್ರೂರ ಕೃತ್ಯಕ್ಕೆ ಎಸಗುವುದು ಎಂದೂ ಸರಿಯಲ್ಲ. ಶ್ರೇಷ್ಠರಿಂದ ಸ್ವಲ್ಪ ಅಕೃತ್ಯವಾದರೂ ಅದು ಅವರಿಗೆ ತೀರ ಕಲಂಕವನ್ನುಂಟುತ್ತದೆ. ಕೌರವರು ಮೊದಲಿನಿಂದಲೂ ದುಷ್ಟರು; ಹೀನ ಕರ್ಮಿಗಳು. ನೀವು ಮಾತ್ರ ಈ ವರೆಗೆ ಎಂದೂ ಅಧರ್ಮವನ್ನು ಆಚರಿಸಿಲ್ಲ. ಆದುದರಿಂದ ನಿಮ್ಮಂತಹರಿಗೆ ಯುದ್ಧದಂತಹ ಕ್ರೂರ ಕರ್ಮವು ಸೊಗಸದು. ಯುದ್ಧದಲ್ಲಿ ಗೆದ್ದರೂ ಅದು ನಿಜವಾಗಿಯೂ ಸೋಲಿನಷ್ಟೇ ಭೀಕರವಾಗಿದೆ. ಏಕೆಂದರೆ ಯುದ್ಧದ ಪರಿಣಾಮವು ಏನೇ ಆಗಲಿ, ಕುಲಕ್ಷಯವು ಮಾತ್ರ ತಪ್ಪಿದ್ದಲ್ಲ. ಆದುದರಿಂದಲೆ, ಸದ್ವೃತ್ತಿಯುವರಾದ ನಿಮಗೆ ಯುದ್ಧದ ಘೋರಕರ್ಮವು ಒಪ್ಪದು. ಅಲ್ಲದೇ ಗೆಲುವು ನಿಮಗೇ ಸಿಕ್ಕುವುದೆಂಬ ಭರವಸೆಯಾದರೂ ಎಲ್ಲಿದೆ? ಆದಕಾರಣ ಇಂತಹ ಯುದ್ಧದಿಂದ ಫಲವೇನು? ಯಾರಿಗೇ ಗೆಲುವು ಆಗಲಿ, ಕುಲಕ್ಷಯವು ನಿಶ್ಚಿತ. ಇಂತು ಕುಲಕ್ಷಯಕಾರಕ ಈ ಕರ್ಮವು ನಿಮ್ಮಂತಹ ಧರ್ಮಶೀಲರಿಗೆ ಭೂಷಣವೇ?

'ಅಕಟಕಟಾ! ಧರ್ಮರಾಯ, ನೀನು ಈ ವರೆಗೆ ಧರ್ಮದ ಮೇರೆಯನ್ನು ಮೀರಿದವನಲ್ಲ. ಇದೀಗ ಈ ಕೀಳುಗೆಲಸಕ್ಕೆ ಕೈಯಿಕ್ಕಬೇಕೆ? ಯುದ್ಧವು ಹೀನಕಾರ್ಯ. ನಿನಗೆ, ಧರ್ಮಾತ್ಮನಿಗೆ ಇದು ಸಲ್ಲದು. ಮೇಲಾಗಿ ಕೌರವರೂ ನಿನ್ನ ಬಾಂಧವರೇ. ಬಂಧುಬಾಂಧವರ ಹಿತವೇ ನಿನ್ನ ಗುರಿ. ಮತ್ತು ನೀವು ಮೊದಲಿನಿಂದಲೂ ಆ ತೆರನಾಗಿ ನಡಸಿಕೊಂಡು ಬಂದಿರುವಿರಿ. ಗಂಧರ್ವರು ಕೌರವರನ್ನು ಬಿಗಿದು ಬಂಧಿಸಿದಾಗ, ಅವರನ್ನು ಬಿಡಿಸಿ ಮಾನ ಕಾಯ್ದವರು ನೀವಲ್ಲವೆ? ಅಂದು ಕಾಯ್ದವರು ಇಂದು ಕೊಲ್ಲಲು ಅಣಿಯಾಗಬೇಕೆ? ಛೀ, ಛೀ! ಇದು ಕ್ರೂರ ಕಟುಕರ ಹೇಸಿ ಕೆಲಸ. ಪಾಂಡವರಿಗೆ ಒಪ್ಪದು. ಆದುದರಿಂದ ನೀವು ಕಾಳೆಗದ ಮಾತು ಬಿಟ್ಟು ಶಾಂತಿಯನ್ನು ಕೈಕೊಳ್ಳಿರಿ.' (ಅ. ೨೭.) 'ಧರ್ಮರಾಯನೆ, ನೀನು ಸಾಕ್ಷಾತ್ ಧರ್ಮಪುರುಷನು. ನೀರ ಮೇಲಣ ಗುಳ್ಳೆಯಂತೆ ಅರಗಳಿಗೆಯ ಬಾಳು ಇದು, ಎಂಬುದನ್ನು ನೀನು ಚೆನ್ನಾಗಿ ಬಲ್ಲೆ. ನಶ್ವರವಾದ ಈ ಜಗತ್ತಿನಲ್ಲಿ ಶಾಶ್ವತರು ಯಾರು? ಕೌರವರನ್ನು ಕೊಂದು ಪಾಂಡವರೂ ಚಿರಂಜೀವಿಗಳಾಗಿ ಬಾಳಲಿರುವರೆ? ಎಂದೆಂದಿಗೂ ಅಸಾಧ್ಯ. ನಿಮ್ಮ ಸ್ವ-ರಾಜ್ಯಪದ್ದಿತೆಂಬುದು ನಿಜ; ಕೌರವರು ಅದನ್ನು ನಿಮ್ಮಿಂದ ಸೆಳೆದುಕೊಂಡುದೂ ನಿಜ. ಆದರೆ ಅವರೂ ನಿಮ್ಮ ಬಂಧುಗಳೆ ಅಲ್ಲವೆ? ರಾಜ್ಯಾದಿ ನಶ್ವರ ಭೋಗ, ಭಾಗ್ಯಗಳಿಂದ ಆಗಬೇಕಾದುದೇನು? ಅದನ್ನು, ನೀವು ಉಪಭೋಗಿಸಿದರೇನು? ನಿಮ್ಮ ಬಂಧುಗಳು ಉಪಭೋಗಿಸಿದರೇನು? ಎಲ್ಲವೂ ಅಷ್ಟೇ. ಕೌರವರು ನಿಮ್ಮ ಸ್ವರಾಜ್ಯವನ್ನು ಮರಳಿ ಕೊಡದಿದ್ದರೂ, ನೀವು ತಿರಿದುಂಡೂ ಧರ್ಮವನ್ನು ಚೆನ್ನಾಗಿ ಪರಿಪಾಲಿಸಬಲ್ಲಿರಿ. ಆದರೆ ಇದನ್ನು ಗಮನಿಸದೆ, ನೀವು ಯುದ್ಧಕ್ಕೆ ಸನ್ನದ್ಧರಾಗಿ ತಮ್ಮ ಕುಲವನ್ನೇ ಸಂಹರಿಸಿದರೆ ಅದು ತೀರ ಅಧರ್ಮವಾಗದೆ ಇರದು.

'ಮಾನವನ ಜೀವನವು ಕ್ಷಣಿಕ. ಆದುದರಿಂದ ತಮ್ಮವರನ್ನು ಸಂಹರಿಸಿ ಗಳಿಸಿದ ರಾಜ್ಯವನ್ನಾಗರೂ ಆತನು ಏಸುದಿನ ಉಪಭೋಗಿಸಬಲ್ಲನು? ನಿಮ್ಮಂತಹ ಧರ್ಮ

ವಂತರಿಗೆ, ಈ ಘೋರಯುದ್ಧವನ್ನು ಹೂಡಿ, ವಂಶವನ್ನು ನಿರ್ಮೂಲ ಮಾಡಿ, ರಾಜ್ಯವನ್ನು ಸಂಪಾದಿಸುವುದು ಯಾವ ಬಗೆಯಿಂದಲೂ ಕೀರ್ತಿದಾಯಕವಾಗಲಾರದು. ವಿಷಯವಾಸನೆಯೆ, ಇವೆಲ್ಲ ಕ್ರೂರ ಕೃತ್ಯಗಳ ತಾಯಿ. ಆದುದರಿಂದ ಆ ದುಷ್ಟ ವಾಸನೆಯನ್ನೆ ನಿರ್ಮೂಲ ಮಾಡು. ನೀನು ಜ್ಞಾನಿ ನಿನಗೆ ಲೋಭವೂ ಶೋಭಿಸದು! ಪೃಥ್ವಿಯ ಅರಸುತನವು ದೊರೆತರೂ ಮಾನವನು ಸುಖಿಯಾಗುವನೆಂದು ಹೇಳಲಿಕ್ಕಾಗದು. ಸುಖವು ಧರ್ಮಾಚರಣೆಯಲ್ಲಿದೆ. ಸದ್ವೃತ್ತಿಯಲ್ಲಿದೆ. ಧರ್ಮರಾಯನೇ ನೀನು ತಿಳಿದವನು. ನಿನ್ನ ಹೃದಯಲ್ಲಿ ಯಾವ ಬಗೆಯವೈಷಯಿಕ ಕಶ್ಮಲಕ್ಕೂ ಇಂಬು ಇರಕೂಡದು. ಜ್ಞಾನಿಯಾದ ನೀನು ಕ್ಷಣಿಕವಾದ ಈ ಐಹಿಕ ಸುಖೋಪಭೋಗಗಳನ್ನು ಗಳಿಸುವುದಕ್ಕೆ ಹೀಗೆ ಹಂಬಲಿಸುವುದು ಉಚಿತವಲ್ಲ. ನಿತ್ಯ-ಪಾರಲೌಕಿಕ ಸುಖವನ್ನು ಪಡೆಯುವುದೆ ನಿನ್ನ ಗುರಿಯಾಗಿರಬೇಕು ಐಹಿಕ ವಿಷಯ ಲಾಲಸೆಯನ್ನು ಬಿಡದ್ದ ಪಾರಲೌಕಿಕ ಸುಖವು ಸಿಕ್ಕದು. ನೀನು ಬೇಕಾದರೆ ಯೋಗಸಾಧನೆಯನ್ನು ಕೈಕೊಳ್ಳು. ಧ್ಯಾನ ಧಾರಣಾದಿಗಳಲ್ಲಿ ಆಸಕ್ತನಾಗು. ಶಾಶ್ವತವಾದ ಪರಮಾರ್ಥ ಸಾಧನೆಗೆ ಇದೇ ನಿಜವಾದ ದಾರಿ. ಘೋರನರಕಕ್ಕೆ ಒಯ್ಯುವ ,ಈ ಯುದ್ಧದಿಂದ ನಿನಗೆ ಆಗಬೇಕಾದುದೇನು? ಈ ಯುದ್ಧದಿಂದ ನೀವು ಸ್ವರಾಜ್ಯವನ್ನು ಸಂಪಾದಿಸಿದರೂ ಅದು ಏಸು ದಿನದ್ದು? ಆದಕಾರಣ ಧರ್ಮವನ್ನು ಗಳಿಸುವುದೇ ಹಿರಿದಾದದ್ದು. ಎಲೈ ಪಾಂಡವರೆ, ಸ್ವಾರ್ಥದಿಂದ ಪ್ರೇರಿತರಾಗಿ, ನೀವು ಸ್ವಕುಲ ಸಂಹಾರಕರಾದರೆ ನಿಮ್ಮೆಲ್ಲರಿಗೂ ಚಿರ ನರಕ ವಾಸವು ತಪ್ಪದು. ಧರ್ಮರಾಜನೆ, ಈ ವರೆಗೆ ನಿಟ್ಟೆಂಬುದನ್ನು ನೀನರಿಯೆ. ಆದರೆ ಈಸುದಿನಗಳ ನಂತರ ನೀನು ಇಳಿತು ಸ್ವಾರ್ಥದ ಕೈಯಲ್ಲಿ ಸಿಕ್ಕುಬೀಳಬೇಕೆ? ನಿನ್ನ ಕೋಮಲ ಹೃದಯವು, ಹಿಂಸಾಮಯವಾದ ಯುದ್ಧದ ಕ್ರೂರ ಕರ್ಮಕ್ಕೆ ಹೇಗೆ ಒಪ್ಪಿಕೊಂಡಿತೊ! ಯುದ್ಧಕ್ಕೆ ಸಜ್ಜಾಗಿ ಪರಮಪೂಜ್ಯರಾದ ಭೀಷ್ಮ ಪಿತಾಮಹರು, ಗುರುವರ್ಯರಾದ ದ್ರೋಣಾಚಾರ್ಯರು, ಇವರನ್ನು ನೀವು ಸಂಹರಿಸತಕ್ಕವರೆ? ನಿಮ್ಮ ಈ ಎಲ್ಲ ಬಂಧು ಬಳಗದವರನ್ನು ಕೊಂದು ಆ ನೆತ್ತರದಿಂದ ಕಲಂಕಿತವಾದ ರಾಜ್ಯಭೋಗದಲ್ಲಿ ನಿಮಗೆ ದೊರೆವ ಸುಖವಾದರೂ ತಾನೆ ಏನು? ಆದಕಾರಣ ಧರ್ಮಜ್ಞನಾದ ಯುಧಿಷ್ಠಿರನೆ! ನೀನು ಈ ಕ್ರೂರ ಕರ್ಮದಿಂದ ದೂರವಿರು. ಶಾಂತಿಯನ್ನು ತಾಳು. ಕೌರವರೊಡನೆ ಕಾದುವ ಹುಮ್ಮಸವನ್ನು ಬಿಟ್ಟುಬಿಡು.'

## ಎಚ್ಚರದ ಪೂರ್ವ ಸೂಚನೆ.

ಸಂಜಯನು ಇಂತು ಕಾಳಗದ ಮೊದಲೆ ಪಾಂಡವರನ್ನು ಕಂಡು ಅವರಿಗೆ ಧರ್ಮೋಪದೇಶವನ್ನು ಮಾಡಿದ್ದನು. ಸಂನ್ಯಾಸದ ದಾರಿಯನ್ನು ಸೂಚಿಸಿದ್ದನು. ಇದೆಲ್ಲವೂ ಧೃತರಾಷ್ಟ್ರನ ಪ್ರೇರಣೆಯಿಂದಲೆ ನಡೆದ ಕೈವಾಡವು. ಅರ್ಜುನನಿಗೆ ಉಂಟಾದ ವಿಷಾದದ ಉಗಮವನ್ನು ಸಂಜಯನ ಈ ವಿಚಾರಗಳಲ್ಲಿ ಕಾಣಬಹುದು. ಸಂಜಯನ ವಿಚಾರಗಳ ಪರಿಣಾಮವು ಅರ್ಜುನನ ಮೇಲೆ ವಿಶೇಷವಾಗಿ ಆಯ್ತು. ಸ್ವರಾಜ್ಯ ಸಂಪಾದನೆಗಾಗಿ ಮಾಡುವ ಯುದ್ಧವು ಧರ್ಮಯುದ್ಧ. ಅದು ಕೂಡ ಅನ್ಯಾಯದ್ದೆಂದು ಅರ್ಜುನನ ಭಾವನೆಯಾಯ್ತು! ಸ್ವಾತಂತ್ರ್ಯಯುದ್ಧವೂ ಪಾತಕ; ಇದಕ್ಕಿಂತಲೂ ಬಿಕ್ಕೆಬೇಡಿ ಬದುಕುವುದೂ ಒಳಿತು; ಪುಣ್ಯಕರ. ಎಂದು ಆತನ ಗ್ರಹಿಕೆಯಾಯ್ತು! ಅರ್ಜುನನ್ನು ಈ ಭಾವನೆಯು ಬೇರೂರಿ ನೆಲೆಗೊಳ್ಳಲೆಂದೆ ಧೃತರಾಷ್ಟ್ರನು ಈ ತಂತ್ರವನ್ನು ಹೂಡಿದನು. ಅರ್ಜುನನಲ್ಲಿ ಈ ವಿಚಾರಗಳು ಸಂಪೂರ್ಣ ನೆಲೆಗೊಂಡಿದ್ದರೆ ಕೌರವರ ಸಾಮ್ರಾಜ್ಯವು ಸ್ಥಿರವಾಗಿ ಉಳಿಯುತ್ತಿತ್ತು. ಪಾಂಡವರು ಸಾಮ್ರಾಜ್ಯಕ್ಕೆ ಎರವಾಗಿ ಆಳಾಗಿ ಬಾಳಬೇಕಾಗುತ್ತಿತ್ತು. ಇಂತು ಸಾಮ್ರಾಜ್ಯವಾದೀ ಪಕ್ಷದವರು, ಗೆದ್ದ ನಾಡಿನವರ ಮನಸಿನಲ್ಲಿ ತಮ್ಮ ಸ್ವರಾಜ್ಯವನ್ನು ಸಂಪಾದಿಸಲು ಯುದ್ಧಮಾಡಬೇಕೆಂಬ ವಿಚಾರದ ಅಂಕುರವೂ ತಲೆದೋರದಂತೆ ಹೇಗೆ ಕುತಂತ್ರಗಳನ್ನು ನಡೆಯಿಸುವರೆಂಬುದನ್ನು ಇಲ್ಲಿ ಕಾಣಬಹುದು. ಗೆದ್ದು ಉನ್ಮತ್ತರಾದ ಸಾಮ್ರಾಜ್ಯವಾದಿಗಳು-ಸ್ವತಃ ಅನ್ಯಾಯದ ಸೈತಾನವಾಗಿದ್ದೂ - ಸೋತವರಿಗೆ ಧರ್ಮೋಪದೇಶಮಾಡುವ ಸೋಗಿನಿಂದ ಮತ್ತೆ ಮತ್ತೆ ತಮಗೆ ಅನುಕೂಲವಾದ ಕೆಲವು ಉಚ್ಚ ತತ್ವಗಳನ್ನು ಉಚ್ಚರಿಸುವರು; ಮತ್ತು ಸೋತವರ ಮನಸು ಆ ತತ್ವಭ್ರಾಂತಿಯಲ್ಲಿ ಸಿಲುಕಿ ಸ್ವರಾಜ್ಯದ ಸಂಪಾದನೆಯ ಪ್ರಯತ್ನಗಳೇ, ಅವರಿಂದ ಒಮ್ಮನಸಿನಿಂದ ನಡೆಯದಂತೆ ಹೇಗೆ ಮಾಟಗಾರಿಕೆಯನ್ನು ನಡಿಸುವರು ನೋಡಿ! ಸ್ವರಾಜ್ಯವನ್ನು ಬಯಸುವ ಜನಗಳು ಭಾರತದ ಈ ಪ್ರಸಂಗದಿಂದ ಬುದ್ಧಿಗಲಿಯಬೇಡವೆ? ಆದುದರಿಂದ ಗೆದ್ದನಾಡಿನ ಧೀಮಂತರು ಸೋತನಾಡಿನ ಜನಗಳಿಗೆ ಮಾಡುವ ಗಂಭೀರವಾದ ಮಹಾ ತತ್ವೋಪದೇಶಕ್ಕೆ ಕಿವಿಗೊಡುವಾಗ-ಮನಸೋಲುವ ಮೊದಲು ಮೈತುಂಬ ಎಚ್ಚರಾಗಿರುವುದು ಕರ್ತವ್ಯವಾಗಿದೆ. ಇಲ್ಲದಿದ್ದರೆ ಸ್ವರಾಜ್ಯಪ್ರಾಪ್ತಿಯ ಕೆಲಸವು ಹದಕ್ಕೆ ಬಂದಾಗ ಅರ್ಜುನನಂತಹ ವಿಷಾದ

ಯೋಗವು ತಲೆದೋರಿ ಕಾರ್ಯಘಾತವಾದೀತು! ಮೇಲಣ ಉಪದೇಶವನ್ನು ಸಂಜಯನು ಧೃತರಾಷ್ಟ್ರನ ಪ್ರೇರಣೆಯಿಂದಲೇ ಮಾಡಿದ್ದು! ಅದೂ ಮತ್ತೆ, ಧರ್ಮ-ಪಕ್ಷದವರಿಗೇ ಧರ್ಮವಂತರಾಗಿರಿ; ಶಾಂತಿಯಿಂದ ಇರಿ ಎಂದು! ಇದರ ಅರ್ಥವೇನು? ಪಾಂಡವರೇ ಅಶಾಂತಿಗೆ ಕಾರಣರು ಎಂದೇ ಅಲ್ಲವೆ? ಮೊದಲಿನಿಂದಲೂ ಧೃತರಾಷ್ಟ್ರನ ಪಕ್ಷದವರೇ ಅನ್ಯಾಯ ನಡಿಸಿದ್ದಾರೆ; ಕಾಲುಕೆದರಿ ಜಗಳ-ಹೂಡಿದ್ದಾರೆ. ಅವರೇ ಈಗ ಕಾಳಗದ ಹೊತ್ತು ಬರುತ್ತಲೆ ಪಾಂಡವರಿಗೆ ಶಾಂತಿ ಪಾಠವನ್ನು ಕಲಿಸಹೊರಟಿದ್ದಾರೆ! 'ಕಾಳಗವು ಕ್ರೂರತೆಯ ಆಗರ; ಹಿಂಸೆಯ ತವರು' ಎಂದು ಹೇಳುತ್ತಿದ್ದಾರೆ! 'ವೈರಾಗ್ಯವು ಶ್ರೇಷ್ಠವಾದುದು; ಹಿಂಸೆಯಿಂದ ರಾಜ್ಯ ಸಂಪಾದಿಸುವುದಕ್ಕಿಂತ, ಬಿಕ್ಕೆಬೇಡಿ ಶಾಂತಿಯಿಂದಿರುವುದು ಮೇಲು; ಭೋಗದ ಅಭಿಲಾಷೆಯು ಎಲ್ಲ ಕೇಡಿಗೂ ಮೂಲ. ಅದನ್ನು ತ್ಯಜಿಸಬೇಕು!' ಎಂದು ಬೋಧಿಸುತ್ತಿದ್ದಾರೆ. ಗೆದ್ದವರು ಹೇಗೆ ನಿರ್ಲಜ್ಜರಾಗುವರು! ನಿರ್ಲಜ್ಜರಾಗಿ ತಮ್ಮ ಸಾಮ್ರಾಜ್ಯವನ್ನು ಉಳಿಸಿಕೊಳ್ಳಲು ಧರ್ಮವಚನಗಳಿಂದ ತುಂಬಿದ ಬಣ್ಣದ ಮಾತುಗಳನ್ನು ಸುರಿಸಿ, ಕಪಟನಾಟಕವನ್ನು ಹೇಗೆ ಆಡುವರು! ಧೃತರಾಷ್ಟ್ರನು ಪಾಂಡವರೊಡನೆ ಈ ಆಟ, ಮಾಟ ನಡಿಸಿದ್ದಾನೆ. ಪಾಂಡವರು ಇದಕ್ಕೆ ಮರುಳಾಗಿ ಮನಸೋಲುವರೆಂದೂ ಆತನ ಎಣಿಕೆಯಿತ್ತು. ಏಕೆಂದರೆ, ಅವರು ಮೂಲತಃ ಧರ್ಮಶೀಲರೆಂದು ಆತನಿಗೆ ಗೊತ್ತು. ಈ ಉಪದೇಶದ ಪರಿಣಾಮವು ಅರ್ಜುನನ ಮೇಲೆ ಸ್ವಲ್ಪಾಂಶದಿಂದಾದರೂ ಆದುದರಿಂದಲೆ ಆತನಿಗೆ, ಭಾರತೀಯ ಯುದ್ಧಾರಂಭದಲ್ಲಿ ಹೀಗೆ ವಿಷಾದವು ಉಂಟಾಯಿತು.

### ಪುಣ್ಯಭೂಮಿಯ ಪ್ರಭಾವ.

ಎರಡೂ ತಂಡದವರ ದಂಡುಗಳು ಕಾಳಗಕ್ಕೆ ಅಣಿಯಾಗಿ ನಿಂತುದು ಎಲ್ಲಿ? 'ಧರ್ಮಕ್ಷೇತ್ರ'ವೆಂದು ವಿಖ್ಯಾತವಾದ ಕುರುಕ್ಷೇತ್ರದಲ್ಲಿ. ಒಂದು ತೀರ್ಥ-ಕ್ಷೇತ್ರಕ್ಕೆ ಹೋದ ಒಬ್ಬ ಸಾಮಾನ್ಯ ಕಳ್ಳ-ಕುಡುಕನಲ್ಲಿಯೂ ಕೆಲವೊಂದು ಧಾರ್ಮಿಕ ಭಾವನೆಗಳು ಜಾಗೃತವಾಗುತ್ತವೆ. ಆದುದರಿಂದಲೆ ಧೃತರಾಷ್ಟ್ರನಿಗೆ ಒಂದು ಆಸೆ—ಅಲ್ಲ, ವಿಶ್ವಾಸ; ಸಂಜಯನು ಮಾಡಿದ ಧರ್ಮೋಪದೇಶವು ಧರ್ಮಕ್ಷೇತ್ರವಾದ ಕುರುಕ್ಷೇತ್ರದಲ್ಲಿ ಬಂದ ಒಳಿಕ ಪಾಂಡವರಲ್ಲಿ ತನ್ನ ಪರಿಣಾಮವನ್ನು ತೋರದೆ ಎಂದೂ ಇರದು; ಮತ್ತು ಪಾಂಡವರನ್ನು ಕುಲಕ್ಷಯಕಾರಕ ಯುದ್ಧದಿಂದ ದೂರವಿರಿಸುವುದು.

ಈ ಆಸೆ ವಿಶ್ವಾಸಗಳಿಂದಲೆ ಧೃತರಾಷ್ಟ್ರನು ಸಂಜಯನಿಗೆ ಎಂದುದು: 'ಎಲೈ, ಸಂಜಯನೆ ಧರ್ಮಕ್ಷೇತ್ರದಲ್ಲಿ ಯುದ್ಧೋತ್ಸಾಹದಿಂದ ಎದುರಾಳಿಗಳಾಗಿ ನಿಂತ ನನ್ನವರು ಮತ್ತು ಪಾಂಡುಪುತ್ರರು, ಏನು ಮಾಡಿದರು?' ಹೀಗೆ ಕೇಳುವುದರಲ್ಲಿ 'ಎಲಾ ಸಂಜಯನೆ ನಿನ್ನ ಉಪದೇಶವು ಫಲಿಸಿ ಪಾಂಡವರು ರಣರಂಗದಿಂದ ಮರಳಿ ಹೋಗಲಿಲ್ಲವೆ?' ಎಂಬ ಧ್ವನಿಯು ಇದೆ. ಸಂಜಯಯಾನ ಪರ್ವದ ಈ ಸಂದರ್ಭವನ್ನು ನೆನೆದುಕೊಂಡರೆ ಮಾತ್ರ ಓದುಗರಿಗೆ ಗೀತೆಯ ಮೊದಲನೆಯ ಶ್ಲೋಕದ ಅರ್ಥವು ಚೆನ್ನಾಗಿ ತಿಳಿಯಬಹುದು. ಮತ್ತು ಧೃತರಾಷ್ಟ್ರನ ಚಿಂತಾಮಯ ಮನಸ್ಥಿತಿಯು ಕಲ್ಪನೆಯೂ ಒದಗಬಹುದು.

### ಸೋಲಿನ ಸಂದೇಹ.

ಧೃತರಾಷ್ಟ್ರನಿಗೆ ಇನ್ನೂ ಒಂದು ಚಿಂತೆ; ತನ್ನ ಪಂಗಡದೊಳಗಿನ ಸೇನಾಪತಿಗಳಲ್ಲಿ ದುರ್ಯೋಧನ ಕರ್ಣಾದಿಗಳನ್ನುಳಿದು, ಭೀಷ್ಮ ದ್ರೋಣ ಮೊದಲಾದ ಮಹಾರಥಿಗಳು ಅಷ್ಟು ಹರ್ಷ ಉತ್ಸಾಹಗಳಿಂದ ಕಾದಲಾರರೆಂದು ಧೃತರಾಷ್ಟ್ರನು ಮುಂಗಂಡಿದ್ದನು. ಕೇವಲ ಸಂಬಳಕ್ಕಾಗಿ ದುಡಿಯುವ ದಂಡಾಳುಗಳೇ ಕೌರವರ ಸೈನ್ಯದಲ್ಲಿ ಹೆಚ್ಚಾಗಿದ್ದರು. ಇಂತಹ ಪಕ್ಷವು ಧರ್ಮಯುದ್ಧದಲ್ಲಿ ಎಂದೂ ಗೆಲ್ಲಲಾರದು.

### ಧರ್ಮಯುದ್ಧ.

ಕಾಳಗಗಳು ಯಾವಾಗಲೂ 'ಧೃತರಾಷ್ಟ್ರ' ಮತ್ತು 'ಹೃತರಾಷ್ಟ್ರ'ಗಳ ನಡುವೆ, ಸಂಭವಿಸುತ್ತಿರುತ್ತವೆ. ಧೃತರಾಷ್ಟ್ರರು ಹೆರವರ ನಾಡುಗಳನ್ನು ಸೆಳೆದುಕೊಂಡು, ತಮ್ಮ ಅಧೀನದಲ್ಲಿರಿಸಿಕೊಳ್ಳಲು ಯುದ್ಧಕ್ಕೆ ಸಿದ್ಧರಾಗಿರುತ್ತಾರೆ. ಆದುದರಿಂದ ಇವರದು ಅಧರ್ಮಯುದ್ಧವು. ತಮ್ಮ ನಾಡಿಗೆ ಎರವಾದ ಹೃತರಾಷ್ಟ್ರಪಕ್ಷದವರು ಧರ್ಮದ ಬೆಂಬಲವನ್ನು ಪಡೆದು, ಕಳೆದುಕೊಂಡ ಸ್ವರಾಜ್ಯವನ್ನು ಮರಳಿ ಸಂಪಾದಿಸಲು ಹಣಗುತ್ತಾರೆ. ಇವರದು ನ್ಯಾಯವಾದ ಬೇಡಿಕೆಯಿರುವುದರಿಂದ, ಈ ಹೋರಾಟಕ್ಕೆ ಧರ್ಮಯುದ್ಧವೆಂದು ಹೇಳಬೇಕು. ಒಂದೇ ಯುದ್ಧವು, ಒಂದೇ ಕಾಲಕ್ಕೆ ಒಂದೇ ಎಡೆಯಲ್ಲಿ ನಡೆದುದು; ಆದರೂ ಅದರಲ್ಲಿ ಒಂದು ಪಕ್ಷವು ಧರ್ಮಯುದ್ಧವನ್ನು ಮಾಡುವುದು; ಇನ್ನೊಂದು ಅಧರ್ಮಯುದ್ಧವನ್ನು ನಡಸುವುದು.

### ಧರ್ಮದ ಬೆಂಬಲ.

ಪಾಂಡವರದು 'ಧರ್ಮ' ಪಕ್ಷ. ಈ ಪಕ್ಷದ ನೇತಾರನು 'ಧರ್ಮ'ನೆಂಬ ರಾಜನಿದ್ದುದು ಗೌಣವಾಗಿದೆ.

ಧರ್ಮ–ಪಕ್ಷದ ಈ ಜನರು ಧರ್ಮಕ್ಕನುಸರಿಸಿ ಮತ್ತು ಧರ್ಮಕ್ಕಾಗಿ ಹೋರಾಡುವವರಾಗಿದ್ದರು. ಧರ್ಮರಾಜನು ಧರ್ಮದ ಪ್ರತಿನಿಧಿಯಾಗಿ, ಧರ್ಮದ ಅವತಾರವೇ ಎನಿಸಿ, ಧಾರ್ಮಿಕ ಭೂಮಿಕೆಯ ಮೇಲೆಯೆ ತನ್ನ ಎಲ್ಲ ವ್ಯವಹಾರಗಳನ್ನು ನಡಿಸಿದ್ದನು. ಧರ್ಮನು 'ಯುಧಿ–ಸ್ಥಿರನು'––ಯುಧಿಷ್ಠಿರನು. ಸತ್ಯಕ್ಕಾಗಿ ನ್ಯಾಯ ನೀತಿಗಾಗಿ ಒಮ್ಮೆ ಆರಂಭಿಸಿದ ಕಾಳಗದಲ್ಲಿ ಮುಂದೆ ಎಂತಹ ಪರಿಸ್ಥಿತಿಯು ಒದಗಲೂ ಹಿಂಜರಿಯತಕ್ಕವನಲ್ಲ; ಯುದ್ಧದಲ್ಲಿ ಸ್ಥಿರವಾಗಿ ನಿಂತು—ಗುರಿಯ ಕಡೆಗೆ ಮುಂದುವರಿಯುತ್ತ ಹೋರಾಡುವುದೇ ಸತ್ಯವೀರನ ಶೀಲವಾಗಿದೆ, ಎಂದು ಧರ್ಮರಾಯನ 'ಯುಧಿಷ್ಠಿರ'ವೆಂಬ ಹೆಸರು ಲೋಕಕ್ಕೆಲ್ಲ ಬೋಧಿಸುತ್ತಲಿದೆ. ಧರ್ಮ ಯುದ್ಧದಲ್ಲಿ ಭಾಗವಹಿಸುವ ಜನಗಳೆಲ್ಲ ಆ ಕಾಳಗದಲ್ಲಿ ಕೊನೆಯವರೆಗೂ ಸ್ಥಿರವಾಗಿ ನಿಂತು ಹಗೆಗಳೊಡನೆ ಹೋರಾಡಿದರೆ ಅವರಿಗೆ ಗೆಲುವು ನಿಶ್ಚಿತ. 'ವಿಜಯ'ವು ದೊರೆಯಲು ಧರ್ಮಾನುಸಾರಿಗಳಾಗಿ—ಯುಧಿ–ಸ್ಥಿರರಾಗಿ ತಮ್ಮ ಭೂಮಿಕೆಯಿಂದ ಹಿಂಜರಿಯದೆ ಕೊನೆಯವರೆಗೂ ಕಾದುವುದು ಅತ್ಯಂತ ಅವಶ್ಯಕವಾಗಿದೆ.

### ಹಗೆತನವಿಲ್ಲದ ಹೃದಯ.

ಧರ್ಮರಾಜನು 'ಅಜಾತ–ಶತ್ರು'ವೂ ಆಗಿದ್ದಾನೆ. ಅವನಿಗೆ ಯಾರೂ ಹಗೆಗಳಿಲ್ಲ. ಆತನಂತೂ ಯಾರ ಕೇಡನ್ನೂ ಬಗೆಯುವುದಿಲ್ಲ. ಯಾರ ಹಿಂಸೆ, ಅಥವಾ ನಾಶವು ಆತನಿಗೆ ಬೇಕಿಲ್ಲ. ಹಗೆಗಳ ಅಹಿತವನ್ನೂ ಆತನು ಬಯಸನು. ಹಗೆಗಳ ನಿಜವಾದ ಹಿತವನ್ನು—ಆಧ್ಯಾತ್ಮಿಕ ಉನ್ನತಿಯನ್ನೇ ಆತನು ಕೋರುತ್ತಾನೆ. ಎದುರಾಳಿಗಳಲ್ಲಿರುವ ಗುಣಗಳನ್ನೂ ಕಡೆಗಣಿಸುವುದಿಲ್ಲ. ಇಂತಹ ಈ ಧರ್ಮಾತ್ಮನು—ಅಜಾತಶತ್ರುವು ಪಾಂಡವರ ಮುಂದಾಳಾಗಿದ್ದನು. ಉಳಿದ ಪಾಂಡವರೆಲ್ಲ ಆತನ ಆಜ್ಞೆಯನ್ನು ತಲೆಯಲ್ಲಾಂತು ಅದರಂತೆ ನಡೆದುಕೊಳ್ಳಲು ಯಾವಾಗಲೂ ಸಿದ್ಧರಾಗಿದ್ದರು. ಧರ್ಮರಾಜನ ತಮ್ಮಂದಿರಿಗೆ ಸ್ವತಂತ್ರ ವ್ಯಕ್ತಿತ್ವವಿದ್ದಿಲ್ಲವೆಂದು ಹೇಳಲು ಯಾರ ನಾಲಗೆಯೂ ಏಳಲಾರದು. ಅರ್ಜುನನು ಸವ್ಯಸಾಚಿ, ಲೋಕೈಕವೀರ; ಭೀಮನು ಜಗಜಟ್ಟಿ. ಮಹಾಬಲವಂತ ನಕುಲ–ಸಹದೇವರು ತಮ್ಮ ವಿದ್ಯೆಯಲ್ಲಿ ಅಸದೃಶರು. ಇವರೆಲ್ಲ ತಮ್ಮ ವೈಯಕ್ತಿಕ ವಿಚಾರಗಳನ್ನು ಬದಿಗಿಡಬೇಕಾದ ಪ್ರಸಂಗ ಬಂದಾಗಲೂ, ಇಲ್ಲದ ಆತ್ಮ ಪ್ರತಿಷ್ಠೆಗೆ ಬಲಿಬೀಳದೆ, ಅಸತ್ಯಾಚಾರಿಯೂ ಶಾಂತಿವಾದಿಯೂ ಅಜಾತ ಶತ್ರುವೂ ಆದ ಧರ್ಮರಾಯನ ಅಪ್ಪಣೆಯೇ ತಮಗೆ ವೇದವಾಕ್ಯವೆಂದು ನಂಬಿ ಅದರಂತೆ ನಡೆದುಕೊಳ್ಳುತ್ತಿದ್ದರು. ಪಾಂಡವರ ಯಶಸ್ಸಿನ ಗುಟ್ಟು ಇದರಲ್ಲಿಯೆ ಇದೆ. ಪಾಂಡವರಲ್ಲಿ ಧರ್ಮನೊಬ್ಬನೆ ಅಸತ್ಯಾಚಾರಿ, ಸಮತಾವಾದಿ, ಅಜಾತಶತ್ರುವಾಗಿದ್ದನು. ಭೀಮನು ರುದ್ರರೂಪ. ಆತನು ಹೊತ್ತು ಬಂದಾಗಲೆಲ್ಲ ಧರ್ಮನ ಮೇಲೂ ಸಿಟ್ಟಾಗುತ್ತಿದ್ದನು. ಧರ್ಮನ ಕೈಗಳನ್ನು ಸುಡುವುದಕ್ಕೂ ಒಮ್ಮೆ ಈತನು ಹವಣಿಸಿದ್ದುಂಟು! ಅರ್ಜುನನು-ಭೀಮನಷ್ಟು ಶೀಘ್ರಕೋಪಿಯಾಗಿದ್ದಿಲ್ಲವಾದರೂ ಧರ್ಮನಂತೆ ಶಾಂತಪ್ರಕೃತಿಯವನೂ ಅಲ್ಲ. ನಕುಲ-ಸಹದೇವರು ಅರ್ಜುನನನ್ನು ನೆರಳಿನಂತೆ ಹಿಂಬಾಲಿಸುವವರಾಗಿದ್ದರು. ಪಾಂಡವರ ಧರ್ಮಪತ್ನಿಯಾದ ದ್ರೌಪದಿಗೆ ಭೀಮನ ಸ್ವಭಾವವೇ ಮೆಚ್ಚಿಕೆಯಾಗಿತ್ತು. ಧರ್ಮನಂತಹ ಶಾಂತವೀರನು ಧರ್ಮನು ಒಬ್ಬನೇ. ಧರ್ಮರಾಯನ ಅಸತ್ಯಾಚಾರಿ, ಅಹಿಂಸಕ ವೃತ್ತಿಯ ನಡೆವಳಿಯಿಂದ ಉಳಿದ ಪಾಂಡವರಿಗೆ ಸಾಕುಬೇಕಾಗಿತ್ತು. ಎಷ್ಟೋ ಪ್ರಸಂಗಗಳಲ್ಲಿ ಉಳಿದ ಪಾಂಡವರು, ಧರ್ಮನ ಅಸತ್ಯಾಚಾರಿ, ಅಹಿಂಸಕ ವೃತ್ತಿಯ ಕೃತಿಯನ್ನು ನಿಷೇಧಿಸಿ ನುಡಿದದೂ ಉಂಟು. ಇಷ್ಟೆಲ್ಲ ಆದರೂ ಅವರು ಧರ್ಮನ ವಿಚಾರವೇ ಕೊನೆಯ ಆಜ್ಞೆಯೆಂದು, ಅದನ್ನು ಶಿರಸಾವಹಿಸಿ ವರ್ತಿಸುತ್ತಿದ್ದರು. ಕೊನೆಯವರೆಗೆ ಅವರಲ್ಲಿ ಯಾರೂ ಧರ್ಮನ ಮಾತನ್ನು ಮೀರಿ ನಡೆಯಲಿಲ್ಲ. ಅಸತ್ಯಾಚಾರಿ ಅಹಿಂಸಕ ವೃತ್ತಿಯು ಧರ್ಮರಾಯನ ದೃಷ್ಟಿಯಾಗಿದ್ದಿತೆಂದೂ ಮತ್ತು ಅದು ಈ ಪ್ರಸಂಗಗಳಲ್ಲಿ ಅನಿವಾರ್ಯವಾದ ಏಕಮೇವ ಮಾರ್ಗವೆಂದು ಉಳಿದವರು ಅನುಸರಿಸಿದ ಧೋರಣವಾಗಿದ್ದಿತೆಂದೂ ಬಗೆಯಬಹುದಾಗಿದೆ. ಕಳೆದುಕೊಂಡ ಸ್ವರಾಜ್ಯವನ್ನು ಸಂಪಾದಿಸಲು ನಡೆಸಿದ ಚಳವಳಿಯ ಮುಂದಾಳು ಅಸತ್ಯಾಚಾರೀ ವೃತ್ತಿಯ ಧರ್ಮರಾಯನು. ಆತನನ್ನು ಹಿಂಬಾಲಿಸುವ ಅನುಯಾಯಿಗಳು ತತ್ವತಃ ಅಸತ್ಯಾಚಾರಿಗಳಲ್ಲವಾದರೂ ಧೋರಣವೆಂದು ಅಸತ್ಯಾಚಾರಿ ವೃತ್ತಿಯನ್ನು ಸ್ವೀಕರಿಸಿದವರು. ಅರ್ಜುನ, ಭೀಮ, ನಕುಲ ಮತ್ತು ಸಹದೇವ ಇವರು ಪರಿಪರಿಯಿಂದ ಬಲಾಢ್ಯರು, ಒಲ್ಲಿಗರು, ಬಲ್ಲಿದ ಮತ್ತು ತಿಳಿದವರಾಗಿದ್ದರು. ಇವರಲ್ಲಿ ಲೋಕಮೋಹಿನಿ ಒಂದೊಂದು ವರ್ಗದ (ಬಗೆ) ಪ್ರತಿನಿಧಿಗಳೆಂದು ಭಾವಿಸಿದರೆ ವೀರಪತ್ನಿ ದ್ರೌಪದಿಯೂ ಸ್ತ್ರೀಸಂಘದ ಅಗ್ರಣಿಯೆನಿಸುವಳು. ಇವರೆಲ್ಲ ಒಂದೊಂದು ಪಂಗಡದ ವಿಚಾರ ಪದ್ಧತಿಯ ಪ್ರತಿನಿಧಿಗಳೆಂದು ಬಗೆದರೆ, ಈ ತೆರನಾಗಿ ಭಿನ್ನ ಭಿನ್ನ ವಿಚಾರಗಳುಳ್ಳ ಭಿನ್ನ ಭಿನ್ನ ಪಂಗಡಗಳಾಗಿದ್ದರೂ ಧರ್ಮರಾಜನಂತಹ ಅಹಿಂಸೆಯಲ್ಲಿ

ಸಂಪೂರ್ಣ ಶ್ರದ್ಧೆಯುಳ್ಳ ಒಬ್ಬ ಅನತ್ಯಾಚಾರಿ ಮುಖಂಡನ ಅಪ್ಪಣೆಯಂತೆ ಆವೆಲ್ಲ ಪಕ್ಷ-ಪಂಗಡಗಳೂ ಕಾರ್ಯಕ್ರಮಗಳನ್ನು ನೆರವೇರಿಸುತ್ತಿದ್ದರು. ಭಿನ್ನ ಭಿನ್ನ ಮಾತುಗಳುಳ್ಳ ಈ ವೀರಾಗ್ರೇಸರರು ಮೊದಲಿನಿಂದಲೆ ಧರ್ಮನ ಆಜ್ಞೆಯಂತೆ ಅನತ್ಯಾಚಾರಿಗಳಾಗಿ ವರ್ತಿಸಲು ಒಪ್ಪದೆ ತಮ್ಮ ವ್ಯಕ್ತಿಸ್ವಾತಂತ್ರ್ಯದ ಹೆಮ್ಮೆಯಿಂದ ಮನಬಂದಂತೆ ಅತ್ಯಾಚಾರಗಳನ್ನು ಮಾಡಲಾರಂಭಿಸಿದ್ದರೆ ಭಿನ್ನಾಭಿಪ್ರಾಯಗಳ ಮೂಲಕ ಜಗಳಾಡಿ, ಪರಸ್ಪರರಲ್ಲಿ ಸಹಕಾರವಿಲ್ಲದ, ಸಂಘಟನೆ ಇಲ್ಲದ ಪಾಂಡವರನ್ನು ಐವರನ್ನೂ ಕೌರವರು ಎಂದೆಂದೂ ತಲೆಯೆತ್ತದಂತೆ ಎಂದೋ ನುಗ್ಗಿ ನುಸಿಮಾಡಿಬಿಡುತ್ತಿದ್ದರು.' ಆದರೆ ಅಜಾತಶತ್ರುವಾದ ಧರ್ಮರಾಯನ ಅಹಿಂಸಾಮಯ ಸಾಧುವರ್ತನವೆ ಪಾಂಡವರನ್ನು ಅಡಿಗಡಿಗೂ ಕಾಪಾಡಿತು. ಧೃತರಾಷ್ಟ್ರಪಕ್ಷದವರ ಅನೇಕ ಅನ್ಯಾಯಗಳನ್ನೂ, ಕ್ರೂರಕರ್ಮಗಳನ್ನೂ ಶಾಂತರೀತಿಯಿಂದ ಸಹಿಸಿದ್ದರಿಂದ ಪಾಂಡವರು ಲೋಕದ ಕರುಣೆಗೆ ಪಾತ್ರರಾದರು ಲೋಕದ ಜನರ ಸಹಾನುಭೂತಿಯಷ್ಟೇ ಅಲ್ಲದೆ, ಕೌರವಪಕ್ಷದೊಳಗಿನ ಹಲವು ವೀರರೂ ಪಾಂಡವರ ವಿಷಯದಲ್ಲಿ ಅನುಕೂಲ ಅಭಿಪ್ರಾಯವುಳ್ಳವರಾದರು. ಇದು ಸ್ವರಾಜ್ಯಸಂಪಾದನೆಯ ಕೊನೆಯ ಕಾಳಗದಲ್ಲಿ ಪಾಂಡವರಿಗೆ ತುಂಬ ಲಾಭದಾಯಕವಾಯ್ತು; ಗೆಲುವಿಗೆ ಕಾರಣವಾಯ್ತು. ಆದಕಾರಣ ಆತ್ಮೋದ್ಧಾರಕ್ಕಾಗಿ ಪ್ರಯತ್ನಿಸುತ್ತಿರುವಾಗ ಅನತ್ಯಾಚಾರಿಯಾಗಿದ್ದು, ಒಂದ ಸಂಕಟಗಳನ್ನು ಶಾಂತ ರೀತಿಯಿಂದ ಸಹಿಸುವುದರಿಂದ ಜನತಾಜನಾರ್ದನನ ಒಲವಿನ ಬೆಂಬಲವು ಸಂಪೂರ್ಣವಾಗಿ ಸಿಕ್ಕುವುದು. ಇದುವೆ ಅಮೋಘವಾದ ಬಲ; ದೈವೀಶಕ್ತಿ. ಈ ದೈವೀಶಕ್ತಿಯ ಸಹಾಯವು ಮೊದಲಿನಿಂದಲೆ ಅತ್ಯಾಚಾರಿಯಾಗಿ ಹಿಂಸಾಮಯಮಾರ್ಗದಿಂದ ಹೋಗುವವರಿಗೆ ಎಂದೂ ದೊರೆಯಲಾರದೆಂಬಲ್ಲಿ ಸಂದೇಹವೇ ಇಲ್ಲ.

### ಈಶ ಕೃಪೆ.

ಇಲ್ಲಿ ಇನ್ನೂ ಒಂದು ಸೋಜಿಗದ ಸಂಗತಿಯಿದೆ: ಗುರ್ಜರಭೂಮಿಯಲ್ಲಿರುವ ದ್ವಾರಕಾನಿವಾಸಿ ಭಗವಾನ್ ಮನಮೋಹನ ಶ್ರೀಕೃಷ್ಣನು ಎಲ್ಲ ಬಗೆಯಿಂದಲೂ ಪಾಂಡವರ ಯೋಗಕ್ಷೇಮದ ಭಾರವನ್ನು ಹೊತ್ತುಕೊಂಡಿದ್ದನು; ಈತನು ಜ್ಞಾನನಿಧಿ, ಶೂರನು, ವೀರನು, ಯುದ್ಧವಿದ್ಯಾಕುಶಲನು ಆಗಿದ್ದರೂ 'ತಾನು ಕೈಯಲ್ಲಿ ಶಸ್ತ್ರವನ್ನು ಹಿಡಿದು ಕಾದಲಿಕ್ಕಿಲ್ಲ' ಎಂದು ಅನತ್ಯಾಚಾರದ ಪಣ ತೊಟ್ಟು ಪಾಂಡವರ ನೆರವಿಗೆ ಬಂದಿದ್ದನು. ಧರ್ಮರಾಯನು ಸ್ವಭಾವತಃ ಶಾಂತಿಪ್ರಿಯನೂ ಅಜಾತಶತ್ರುವೂ ಆಗಿದ್ದನು. ಭಗವಾನ್ ಮನಮೋಹನ' ಶ್ರೀಕೃಷ್ಣನೂ ತಾನು ಕಾದಲಿಕ್ಕಿಲ್ಲವೆಂದು ಪ್ರತಿಜ್ಞೆ ಮಾಡಿದ್ದನು. ಇಂತು ಪಾಂಡವರ ಇಬ್ಬರು ಮುಂದಾಳುಗಳೂ ಶಾಂತತಾವಾದಿಗಳಾಗಿದ್ದರು.

### ಧರ್ಮಕ್ಕೆ ಗೆಲುವು.

ಶಾಂತಿವಾದಿಯಾಗಿದ್ದರೂ ಪಾಂಡವರಿಗೆ ಕಾಳಗವು ಕೊನೆಗೆ ತಪ್ಪಲಿಲ್ಲ. ಕಾಳಗವೇ ಗುರಿಯಾಗಿ ಇರದೆ ಶಾಂತಿಮಾರ್ಗದಿಂದ ಸಾಗಿದ್ದರಿಂದಲೆ ಇವರಿಗೆ ಗೆಲುವು ದೊರೆಯಿತು ಸತ್ಯಕ್ಕೆ ಸಾವಿಲ್ಲ. ಸುಳ್ಳಿಗೆ ಸುಖವಿಲ್ಲ. 'ಧರ್ಮ'ಪಕ್ಷಕ್ಕೇ ಗೆಲುವು ಎಲ್ಲಿ 'ನರನು' ನಾರಾಯಣನ ಬೆಂಬಲದಿಂದ ಕಾರ್ಯಗಳನ್ನು ನಡಸಿರುವನೊ ಅಲ್ಲಿಯೆ ಸಿರಿ, ಸಂಪತ್ತು; ಎಲ್ಲೆಗೆ ಗೆಲವು.

### ಸನಾತನ ಉಪದೇಶ.

ಭಾರತದಲ್ಲಿ ಬಂದಿರುವ ಹೆಸರುಗಳು ಎಷ್ಟು ಅರ್ಥಪೂರ್ಣವಾಗಿವೆ, ಎಂಬುದು ಈ ವರೆಗಿನ ವಿವೇಚನೆಯಿಂದ ಸ್ವಲ್ಪ ಹೊಳೆದಿರಬಹುದು. 'ಧರ್ಮ, ಅಜಾತಶತ್ರು, ಅರ್ಜುನ, ವಿಜಯ, ಮೊದಲಾದುವು ಕೆಲವೊಂದು ವ್ಯಕ್ತಿಗಳ ಹೆಸರುಗಳಾಗಿರಲೂಬಹುದು; ಆದರೆ ಇಲ್ಲಿ ಈ ಹೆಸರುಗಳು, ಒಂದು ಸನಾತನ ನಿತ್ಯತತ್ತ್ವವನ್ನು ಲೋಕದ ಮನಸಿನ ಮೇಲೆ ಬಿಂಬಿಸುವದಕ್ಕಾಗಿ ಉದ್ದೇಶಪೂರ್ವಕವಾಗಿ ಬಳಸಿದ ವಿಶೇಷ ಶಬ್ದಗಳಾಗಿವೆಯೆಂದು ಹೇಳಬೇಕಾಗುತ್ತದೆ. 'ಧರ್ಮಾನುಜ ವಿಜಯ.' ಧರ್ಮಪಕ್ಷದಲ್ಲಿ ಬಲವಂತ ಭೀಮ. ಏಕೆಂದರೆ ಸತ್ಯದ-ಧರ್ಮದ ಬೆಂಬಲವಿಲ್ಲದಲ್ಲಿ ಬಲವು ನಿರ್ಬಲವಾಗುತ್ತದೆ. 'ಧರ್ಮ'ಪಕ್ಷಕ್ಕೆ ಪರಮೇಶ್ವರನು ಒಲಿಯುವುದು; ನೆರವಾಗುವುದು. ಧರ್ಮಪಕ್ಷವು ಪಾಶವೀಶಕ್ತಿಯಲ್ಲಿ ದುರ್ಬಲವಾಗಿದ್ದರೂ ಪರಮೇಶ್ವರನ ಸಹಾಯವಿರುವುದರಿಂದ ಕೊನೆಗೆ ಅದಕ್ಕೇ ಗೆಲವು.

'ಧರ್ಮ'ಪಕ್ಷದಲ್ಲಿ ನ-ಕುಲ (ಪಾಣಿನೀ ಅಷ್ಟಾ. ೬-೩-೭೫) ಎಂದರೆ— ಕುಲ, ಕುಲವೆಂಬ ಹಮ್ಮೆಯ ಅಬ್ಬರದ ಮಾತಿನವರಲ್ಲವಾದರೂ— ನಿಜವಾದ ಹಿರಿಮೆಯುಳ್ಳವರು ಇರುತ್ತಾರೆ. ಮತ್ತು 'ಸಹ-ದೇವರ' ಪಕ್ಷವೇ 'ಧರ್ಮ'ಪಕ್ಷ; ದೇವಶಕ್ತಿಯ ಬೆಂಬಲವುಳ್ಳದು. ಇದುವೆ ಧರ್ಮಪಕ್ಷದ ವೈಶಿಷ್ಟ್ಯ; ಧರ್ಮಪಕ್ಷದ ಹಿರಿಮೆ.

ಈ ಹೆಸರುಗಳು ಒಂದು ಕುಟುಂಬದೊಳಗಿನ ವ್ಯಕ್ತಿಗಳ ಇಟ್ಟ ಹೆಸರು (ಅಂಕಿತ ನಾಮ) ಗಳಾಗಿರಲೊಲ್ಲವೇಕೆ; ಆದರೂ ಇಲ್ಲಿ ಅವು ವಿಶೇಷ ಉದ್ದೇಶಪೂರ್ವಕ

ವಾಗಿ ಉಪಯೋಗಿಸಿದ ಅನ್ವರ್ಥಕ ನಾಮಗಳು (ಬಂದ ಹೆಸರುಗಳು.) ಆಗಿವೆ. ಈ ಹೆಸರುಗಳನ್ನು ಶ್ರೀಮತ್ ವೇದವ್ಯಾಸರು ಒಂದು ತ್ರಿಕಾಲಾಬಾಧಿತ ತತ್ವಸೂಚನೆಗಾಗಿಯೇ ಹೇತುಪುರಸ್ಸರರಾಗಿ ಬಳಸಿರಲಿಕ್ಕೆ ಬೇಕು. ಧರ್ಮನ ಪಕ್ಷದ ಹೆಸರಿನೊಡನೆ ಧೃತರಾಷ್ಟ್ರನ ಪಕ್ಷದವರ ಹೆಸರುಗಳನ್ನು ಹೋಲಿಸಿ ನೋಡಬಹುದು; ಈ ಹೆಸರುಗಳಿಂದ ಕಂಡುಬರುವುದೇನು? ಧರ್ಮದಿಂದ ನಡೆವ ಅಧ್ಯಾತ್ಮಿಕ ಬಲದಲ್ಲಿಯೆ ಹೆಚ್ಚಿನ ನಂಬುಗೆಯನ್ನಿಟ್ಟು ಸಾಗುವ ಸ್ವರಾಜ್ಯವಾದಿಗಳ ಪಕ್ಷವೊಂದು; ಪಾಶವೀ ಸಾಮರ್ಥ್ಯದ ಹೆಗ್ಗಳಿಕೆಯ ಸಾಮ್ರಾಜ್ಯವಾದಿ ಪಕ್ಷವಿನ್ನೊಂದು. ಭಾರತೀಯ ಯುದ್ಧವು ನಡೆದುದು ಇವೆರಡು ಪಕ್ಷಗಳಲ್ಲಿ. ಜಗತ್ತಿನಲ್ಲಿ ಎಲ್ಲೆಡೆಗಳಲ್ಲಿ ಆದ ಮತ್ತು ಆಗುವ ಕಾಳಗಗಳೆಲ್ಲವೂ ಇವೆರಡು ಪಂಗಡಗಳಲ್ಲಿಯೇ. ಸಾಮ್ರಾಜ್ಯವಾದಿಗಳು ಮೋಸಗಾರಿಕೆಯಿಂದ ಮೊದಲು ವ್ಯವಹಾರ ನಡೆಸುವರು ಈ ನಡೆವಳಿಯ ಫಲವಾಗಿ ಅವರು ಮುಂದೆ ಚಿಂತೆಯಲ್ಲಿ ಬೀಳುತ್ತಾರೆ ಕೊನೆಗೆ ಸರ್ವನಾಶವು ಅವರ ಪಾಲಿಗೆ ಕಟ್ಟಿಟ್ಟದ್ದೆ ಆಗಿದೆ. ಸ್ವರಾಜ್ಯವಾದಿಗಳ ಧರ್ಮಪಕ್ಷವು ಸತ್ಯ, ಧರ್ಮ, ಅಹಿಂಸೆ, ಬ್ರಹ್ಮಚರ್ಯ, ನಮ್ರತೆ, ಪಾವಿತ್ರ್ಯ, ಭಕ್ತಿ, ತ್ಯಾಗ ಮೊದಲಾದ ಸದ್ಗುಣಗಳ ಭದ್ರವಾದ ಭೂಮಿಕೆಯ ಮೇಲೆ ನಿಂತಿರುತ್ತದೆ. ಆರಂಭದಲ್ಲಿ ಇವರಿಗೆ ಕೆಲದಿನ ಕಷ್ಟ-ನಷ್ಟಗಳನ್ನು ಸಹಿಸಬೇಕಾದರೂ ಕೊನೆಗೆ ಜಯಶ್ರೀಯು ಇವರನ್ನೆ ವರಿಸುವಳು ಲೋಕದಲ್ಲೆಲ್ಲ ಇವರ ಸತ್ಕೀರ್ತಿಯು ಹಬ್ಬುವುದು. ಮುಂದಿನ ಪೀಳಿಗೆಗಳಿಗೆ ಇದು ಯಾವಾಗಲೂ ಮಾರ್ಗದರ್ಶಕವಾಗುವುದು.

ತನ್ನ ಸಾಮ್ರಾಜ್ಯವಾದಿ ಪಕ್ಷದವರು ಬಗೆಬಗೆಯಾಗಿ ಮೋಸಗೊಳಿಸಿದರೂ, ಸ್ವರಾಜ್ಯಸಂಪಾದನೆಗಾಗಿ ಹೆಣಗುತ್ತಿದ್ದ ಪಾಂಡವರ ಕೂದಲವೂ ಕೊಂಕದೆ ಸುರಕ್ಷಿತರಾಗಿರುತ್ತಾರೆ; ಅವರ ಶಕ್ತಿ, ಸಂಘಟನೆಯು ವರುವರುಷಕ್ಕೂ ಹೆಚ್ಚಾಗುತ್ತಲಿದೆ, ಎಂಬುದನ್ನು ಧೃತರಾಷ್ಟ್ರನು ಚೆನ್ನಾಗಿ ಮನಗಂಡಿದ್ದನು ಆದುದರಿಂದಲೆ ಆತನು ಮೊದಲು ಸಂಜಯನಿಗೆ 'ಯುದ್ಧದ ವಾರ್ತೆಯೇನು?" ಎಂದು ಕಾತರದಿಂದ ಕೇಳಿದ್ದಾನೆ. ಭಗವದ್ಗೀತೆಯ ಕೊನೆಗೆ ಸಂಜಯನು ಕೊಟ್ಟ ಉತ್ತರವುಂಟು; ಎಲ್ಲಿ ಧರ್ಮ-ಪಕ್ಷಪಾತಿ ವೀರನಾದ ಅರ್ಜುನನು ಇರುವನೊ, ಎಲ್ಲಿ ಅವನಿಗೆ ಸಹಾಯಕನಾಗಿ ಭಗವಂತನಾದ ಶ್ರೀಕೃಷ್ಣನು ಕೆಲಸ ಮಾಡುತ್ತಿದ್ದಾನೊ, ಅವರಿಗೆ ವಿಜಯಶ್ರೀಯು ಒಲಿಯುವಳು. (ಭ. ಗೀ. ೧೮. ೭೮.) ಇದು ಕೊನೆಯ ಉತ್ತರವೆ ಆಗಿದೆ. ಆದರೆ ಈ ಉತ್ತರವನ್ನು ಕೇಳುವ ಮೊದಲು ಸಂಪೂರ್ಣ ಭಗವದ್ಗೀತೆಯ ಅಧ್ಯಯನವು ಅವಶ್ಯವಾಗಿದೆ. ಆದುದರಿಂದ ಧೃತರಾಷ್ಟ್ರನ ಪ್ರಶ್ನೆಯನ್ನು ಕೇಳಿದೊಡನೆ ಸಂಜಯನು ಹೇಳಿದ ವೃತ್ತಾಂತವನ್ನೆ ಇಲ್ಲಿ ಈಗ ವಿಚಾರಿಸುವ.

## ಆಧ್ಯಾತ್ಮಿಕ ಅರ್ಥ.

ಈ ವರೆಗಿನ ವಿವರಣೆಯಿಂದ ಧೃತರಾಷ್ಟ್ರ, ಧರ್ಮ, ಅರ್ಜುನಾದಿಗಳು ಐತಿಹಾಸಿಕ ವ್ಯಕ್ತಿಗಳಾದರೂ ಅವರ ವಿಶಿಷ್ಟ ಹೆಸರುಗಳನ್ನು ಒಂದು ಉದಾತ್ತವಾದ ಅಧ್ಯಾತ್ಮಿಕ ತತ್ವವನ್ನು ಹೊರಪಡಿಸುವುದಕ್ಕೆ ಉಪಯೋಗಿಸಿದಂತೆ ಕಂಡುಬಾರದೆ ಇರದು ಇಲ್ಲಿಯ ವ್ಯಕ್ತಿಗಳ ಹೆಸರಿನಲ್ಲಿ ಅಡಕವಾಗಿರುವ ಗುಹ್ಯಾರ್ಥವು ಬಹಳ ಮಹತ್ವದ್ದಾಗಿದೆ. ಕುಟಿಲರು ಮತ್ತು ಧರ್ಮನಿಷ್ಠರಲ್ಲಿ ಆದ ಕಾಳಗದಲ್ಲಿ ಧರ್ಮಪಕ್ಷದವರಿಗೇ ಗೆಲವು, ಎಂದು ಒಂದು ದೃಷ್ಟಿಯಿಂದ ವಿವರಿಸಿದಂತಾಯಿತು. ಇನ್ನು ಅಧ್ಯಾತ್ಮಿಕ ದೃಷ್ಟಿಯಿಂದ ಇದನ್ನು ವಿಚಾರಿಸುವ. ಜೀವನ ಆಶ್ರಯದಿಂದ ಇರುವ ವಸ್ತುಗಳ ವಿಚಾರವೇ ಅಧ್ಯಾತ್ಮಿಕ (ಅಧಿ ಆತ್ಮಿಕ) **ಜೀವನ ಆಶ್ರಯದಿಂದ ಇರತಕ್ಕ ವಸ್ತುಗಳು ಇವು ಇಷ್ಟು; ಬುದ್ಧಿ, ಮನಸ್ಸು; ಚಿತ್ತ, ಅಹಂಕಾರ, ಪ್ರಾಣ, ಪಂಚಜ್ಞಾನೇಂದ್ರಿಯ, ಪಂಚಕರ್ಮೇಂದ್ರಿಯ ಮತ್ತು ಶರೀರ** ಇವೆಲ್ಲವುಗಳಲ್ಲಿ ಸತ್ ಮತ್ತು ಅಸತ್ ಪ್ರವೃತ್ತಿಯು ವಾಸ ಮಾಡಿಕೊಂಡಿವೆ. ಈ ಒಳಿತು ಮತ್ತು ಕೆಡುಕಿನ ನಡುವೆ ಎಡೆಬಿಡದ ಕಾದಾಟವು ನಡೆದಿರುತ್ತದೆ. 'ಮಾನವನ ಅಂತರಂಗದಲ್ಲಿ ಈ ಕಾದಾಟವು ಸಾಗದಿರುವ ವ್ಯಕ್ತಿಯು ಇಲ್ಲ ಪ್ರತಿಯೊಬ್ಬರಿಗೂ ಇದರ ಅನುಭವವು ಇಲ್ಲದೆ ಇಲ್ಲ. ಮಾನವನಲ್ಲಿ ಒಮ್ಮೆ ತ್ಯಾಗ ಪ್ರವೃತ್ತಿಯು ಇದ್ದರೆ ಇನ್ನೊಮ್ಮೆ ಭೋಗೇಚ್ಛೆಯು ಪ್ರಬಲವಾಗುತ್ತದೆ. ಇವೆರಡೂ ಪ್ರವೃತ್ತಿಗಳಲ್ಲಿ ಹೋರಾಟವು ನಡೆಯುತ್ತದೆ. ಈ ಪ್ರವೃತ್ತಿಗಳು ಶರೀರವೆಂಬ ಈ ಕ್ಷೇತ್ರದ ಮೇಲೆ ತಮ್ಮ ಅಧಿಕಾರವನ್ನು ನಡೆಯಿಸಬೇಕೆಂದು ಹೆಣಗಾಡುತ್ತಿರುತ್ತವೆ ಇವುಗಳಲ್ಲಿ ಒಂದು ಹಿಮ್ಮೆಟ್ಟಿದ್ದಾಗ ಮತ್ತೊಂದರ ಅಧಿಕಾರವು ಆ ಕ್ಷೇತ್ರದ ಮೇಲೆ ನಡೆಯುವುದು -

ಇದಂ ಶರೀರಂ ಕೌಂತೇಯ ಕ್ಷೇತ್ರಮಿತ್ಯಭಿಧೀಯತೇ |
(ಭ. ಗೀ. ೧೩.೧.).

'ಈ ಶರೀರಕ್ಕೆ ಕ್ಷೇತ್ರವೆನ್ನುತ್ತಾರೆ.' ಇದು ಕರ್ಮಭೂಮಿ. ಆದುದರಿಂದ ಇದಕ್ಕೆ 'ಕರ್ಮಕ್ಷೇತ್ರ'

ಅಥವಾ 'ಕುರುಕ್ಷೇತ್ರ' ಎಂಬ ಹೆಸರು. ಈ 'ಕುರು' ಕ್ಷೇತ್ರವು ಪ್ರತಿಯೊಬ್ಬನ ಅಂತರಂಗದಲ್ಲಿ ಇದೆ. ಮತ್ತು ಈ ಕುರುಕ್ಷೇತ್ರದಲ್ಲಿ ಸತ್ ಮತ್ತು ಅಸತ್ ಪ್ರವೃತ್ತಿಗಳ ನಡುವೆ ಸಂಗ್ರಾಮವು ನಡೆದಿರುತ್ತದೆ. ಈ ಸಂಗ್ರಾಮವೆಂದರೇ ಭಾರತೀಯ ಯುದ್ಧವೆಂದು ಆಧ್ಯಾತ್ಮಿಕ ದೃಷ್ಟಿಯ ಬಲ್ಲಿದರ ಮತವಿದೆ.

### ಹದಿನೆಂಟರ ಔಚಿತ್ಯ.

ಮಹಾಭಾರತದಲ್ಲಿ ಐತಿಹಾಸಿಕ ಬಾಹ್ಯ ಅರ್ಥವು ಏನೇ ಇರಲಿ, ಅದರಲ್ಲಿ ಆಂತರಿಕ ಗುಹ್ಯಾರ್ಥವೊಂದಿರಬೇಕೆಂದು ಅದನ್ನು ಮೇಲೆ ಮೇಲೆ ಕೇವಲ ಸ್ಥೂಲವಾಗಿ ಓದಿದವರಿಗೂ ಸಂದೇಹವುಂಟಾಗುವಂತಿದೆ.

೧. ಮಹಾಭಾರತದಲ್ಲಿ ಪರ್ವಗಳು ಹದಿನೆಂಟು.
೨. ಭಗವದ್ಗೀತೆಯ ಅಧ್ಯಯಗಳು ಹದಿನೆಂಟು.
೩. ಭಾರತೀಯ ಯುದ್ಧವು ನಡೆದ ದಿನಗಳು ಹದಿನೆಂಟು.
೪. ಆ ಯುದ್ಧದಲ್ಲಿ ತೊಡಗಿದ ಅಕ್ಷೌಹಿಣಿ ಸೈನ್ಯದ ಸಂಖ್ಯೆ ಹದಿನೆಂಟು.

ಹದಿನೆಂಟು ಈ ಸಂಖ್ಯೆಯಲ್ಲಿ ಏನಾದರೊಂದು ವಿಶೇಷವಾದ ಅರ್ಥವಿರಬೇಕೆಂದು ತೋರುತ್ತದೆ. ಯಜ್ಞದಲ್ಲೂ ಋತ್ವಿಜ್ವರ ಸಂಖ್ಯೆ ಹದಿನೆಂಟು. ಭಾರತೀಯ ಯುದ್ಧಕ್ಕೂ ಯಜ್ಞಕ್ಕೂ ಏನಾದರೊಂದು ನಿಕಟ ಸಂಬಂಧವಿದ್ದಂತೆ ಕಾಣುತ್ತದೆ.

### 'ಪುರುಷೋ ವಾವ ಯಜ್ಞಃ'

'ಪುರುಷ ಎಂದರೆ ಮಾನವನು ಒಂದು ವಿಶೇಷವಾದ ಯಜ್ಞವೆ ಆಗಿದ್ದಾನೆ.' ಮಾನವನು ಯಜ್ಞವೆಂದಬಳಿಕ ಆತನಲ್ಲಿ ಹದಿನೆಂಟು ಋತ್ವಿಜರು ಇರಬೇಕಷ್ಟೆ. ಎರಡು ಕಣ್ಣು, ಎರಡು ಕಿವಿ, ಎರಡು ಹೊರಳೆ (ಮೂಗಿನವು), ಒಂದು ತ್ವಗಿಂದ್ರಿಯ, ಎರಡು ಕೈ, ಎರಡು ಕಾಲು, ಒಂದು ಮೂತ್ರೇಂದ್ರಿಯ, ಒಂದು ಗುದ, ಒಂದು ಬಾಯಿ, ಒಂದು ನಾಲಗೆ, ಮನಸು, ಚಿತ್ತ, ಅಹಂಕಾರ ಈ ಹದಿನೆಂಟು ಮಾನವ ಶರೀರದೊಳಗಿನ ಋತಿಜ್ವರು. ಆತನು ಯಜಮಾನ, ಬುದ್ಧಿಯು ಯಜಮಾನಿ; ದೇಹವೇ ಯಜ್ಞಶಾಲೆ. ಈ ಯಜ್ಞವು ಒಂದುನೂರಾಎಂಟು ವರ್ಷ ನಡೆಯಬೇಕು. ಮೊದಲ ಇಪ್ಪತ್ತುನಾಲ್ಕು ವರುಷಗಳು ಪ್ರಾತಃಕಾಲ; ಮುಂದಿನ ಮೂವತ್ತಾರು ವರುಷಗಳು ಮಧ್ಯಾಹ್ನ ಕಾಲ; ಕೊನೆಯ ನಾಲ್ವತ್ತೆಂಟು ವರ್ಷಗಳು ಸಾಯಂಕಾಲ. ಮಾನವ ಜೀವನವೇ ಒಂದು ಮಹಾಯಜ್ಞ. ಈ ಯಜ್ಞದಲ್ಲಿ ಹದಿನೆಂಟು ಋತಿಜ್ವರು ಕೆಲಸ ಮಾಡುತ್ತಿದ್ದಾರೆ. ಈ ಯಜ್ಞದ ನಾಶಕ್ಕಾಗಿ ಹೊಂಚು ಹಾಕಿಕೊಂಡು ಕುಳಿತಿರುವ ರಕ್ಕಸರು ಜ್ವರಾದಿ ಬೇನೆ-ಬೇಸರಿಕೆಗಳು ಹಮ್ಮು, ಬಿಮ್ಮು ಮುಂತಾದ ದುರ್ಭಾವಗಳು. ಭಗವದ್ಗೀತೆಯಲ್ಲಿ ಪಾಂಡವ ಪಕ್ಷದ ಮಹಾವೀರರನ್ನು ಎಣಿಸುವಾಗ ಹೇಳಿದ್ದು ಹದಿನೆಂಟು ಮಹಾರಥಿಗಳನ್ನೆ: (೧) ಭೀಮ, ೨. ಅರ್ಜುನ, ೩. ಯುಯುಧಾನ (ಸಾತ್ಯಕಿ), ೪. ವಿರಾಟ, ೫. ದ್ರುಪದ, ೬. ಧೃಷ್ಟಕೇತು, ೭. ಚೇಕಿತಾನ, ೮. ಕಾಶೀರಾಜ, ೯. ಪುರುಜಿತ್ ಕುಂತಿಭೋಜ, ೧೦. ಶೈಬ್ಯ, ೧೧. ಯುಧಾಮನ್ಯು, ೧೨. ಉತ್ತಮೌಜಾ, ೧೩. ಸೌಭದ್ರ ಅಭಿಮನ್ಯು, ೧೪-೧೮ ದ್ರೌಪದಿಯ ಐವರು ಮಕ್ಕಳು. ಇಂತಿವರು ಹದಿನೆಂಟು ಜನ. ಈ ಯಜ್ಞದ ಯಜಮಾನನು ಧರ್ಮರಾಜನು. ಯಜಮಾನಿ ದ್ರೌಪದಿ. ಯಜ್ಞ ವಿರೋಧಿಗಳು ದುರ್ಯೋಧನಾದಿ ಕೌರವರು. ಇದೆಲ್ಲ ಸಾಮ್ಯವನ್ನು ನಿರೀಕ್ಷಿಸಿದರೆ ಮಹಾಭಾರತದ ಈ ಹೊಂದಿಕೆಯಲ್ಲಿ ಏನಾದರೊಂದು ಒಳಗುಟ್ಟು ಇರಬೇಕೆಂದು ಸ್ಪಷ್ಟವಾಗುತ್ತದೆ.

### ವಂಶೋತ್ಪತ್ತಿ.

ಕೌರವ ಪಾಂಡವರ ವಂಶೋತ್ಪತ್ತಿಯ ವರ್ಣನೆಯನ್ನು ಓದುವಾಗಲೂ ಅದು ಒಂದು ವಿಶೇಷ ಹೇತುವನ್ನಿಟ್ಟುಕೊಂಡು ಬರೆಯಲ್ಪಟ್ಟಿರಬೇಕೆಂದು ಒಡೆದು ಕಾಣುತ್ತದೆ. ವ್ಯಾಸದೇವರು (ಬ್ರಹ್ಮನ್) ತ್ರಿವಿಧ ಕ್ಷೇತ್ರದಲ್ಲಿ (ಸತ್ವ, ರಜ, ತಮಾತ್ಮಕ ಪ್ರಕೃತಿಯಲ್ಲಿ) ತಮ್ಮ ಬೀಜದಿಂದ ತ್ರಿವಿಧ ಸಂತತಿಯನ್ನು ನಿರ್ಮಾಣ ಮಾಡುತ್ತಾರೆ. ತಮೋಗುಣದ ಧೃತರಾಷ್ಟ್ರನು; ರಜೋಗುಣದ ಪಾಂಡುರಾಜನು; ಸತ್ವಗುಣಯುತನಾದ ವಿದುರನು. ತಮ ಎಂದರೆ ಕಗ್ಗತ್ತಲೆ; ಏನೂ ಕಾಣದು. ತಮೋಗುಣದ ಧೃತರಾಷ್ಟ್ರನು ಕುರುಡನು; ತುಂಬ ಕೋಣನಂಥ ಶಕ್ತಿಯುಳ್ಳವನು. ರಜೋಗುಣವು ಭೋಗ ಪ್ರವೃತ್ತಿಯುಳ್ಳದು. ಭೋಗ ವಿಲಾಸಿಗಳು ರೋಗಗಳ ಆಗರ. ಪಂಡುರಾಜನು ಪಾಂಡುರೋಗಿ. ಶೃಂಗಾರ ಲೀಲೆಯಲ್ಲಿಯೆ ಆತನ ಕೊನೆಯಾಯ್ತು! ಸತ್ವಗುಣಿಯು ಜ್ಞಾನಿ. ವಿದುರನು ತಿಳಿದವನು. ತಿಳಿಯಾದವನು. ಒಂದೇ ಆತ್ಮಶಕ್ತಿಯು ತ್ರಿವಿಧ ಪ್ರಕೃತಿಯಲ್ಲಿ ಸೇರಿಕೊಂಡು ಸೃಷ್ಟಿಯು ನಿರ್ಮಿತವಾಗುತ್ತದೆ.

ಶ್ರೀಮದ್ಭಗವದ್ಗೀತೆಯಲ್ಲಿ (೧೪. ೩-೧೮.) ಈ ವಿವರಣೆಯು ಬಂದಿದೆ. ಅದರ ಸಾರಾಂಶವು ಹೀಗಿದೆ: 'ಮಹಾ ಪ್ರಕೃತಿಯಲ್ಲಿ ನಾನು ಗರ್ಭವನ್ನು ಇಡುವೆನು. ಅದರಿಂದ ಎಲ್ಲ ಭೂತ ಮಾತ್ರಗಳು ಹುಟ್ಟುವುವು. ಎಲ್ಲ

ಭೂತಗಳನ್ನೂ ರೂಪಿಸಿದ ತಂದೆ ನಾನು (ಆತ್ಮನು). ಇವುಗಳಿಗೆ ಸುಖವನ್ನೀವುದು ಸತ್ವಗುಣ. ಆಸೆ ಆಕಾಂಕ್ಷೆಗಳನ್ನು ಹೆಚ್ಚಿಸುವುದು ರಜೋಗುಣ. ಮೋಹ ಮೂಢತೆಯನ್ನುಂಟುಮಾಡುವುದು ತಮೋಗುಣ. ಸತ್ವಗುಣದಿಂದ ಜ್ಞಾನವುಂಟಾಗುವುದು. ರಜೋಗುಣದಿಂದ ಭೋಗಲಾಲಸೆ ಹುಟ್ಟುವುದು. ತಮೋಗುಣದಿಂದ ತಪ್ಪು-ತಡೆ, ತಿಳಿಗೇಡಿತನ (ಕತ್ತಲೆ) ತಲೆದೋರುವುದು.' ಗೀತೆಯ ಈ ವಚನಕ್ಕೆ ಮಹಾಭಾರತದ ಈ ವಂಶವೃತ್ತವೆ ದೃಷ್ಟಾಂತವಾಗಿದೆ. ಸತ್ವಗುಣವುಳ್ಳ ವಿದುರನು ಜ್ಞಾನಿ; ಪವಿತ್ರನು; ಪರಿಶುದ್ಧನು. ರಜೋಗುಣವುಳ್ಳ ಪಾಂಡುವು ರಾಜನಾಗಿದ್ದಾನೆ; ಭೋಗಿಯಾಗಿದ್ದಾನೆ. 'ಭೋಗೇ ರೋಗಭಯಂ' ಎಂಬಂತೆ ಕೊನೆಗೆ ರೋಗಪೀಡಿತನಾಗಿ ಅಕಾಲ ಮರಣವನ್ನು ಹೊಂದುತ್ತಾನೆ. ತಮೋಗುಣವುಳ್ಳ ಧೃತರಾಷ್ಟ್ರನು ಕುರುಡ! ಅಡಿಗಡಿಗೆ ತಪ್ಪು-ತಡೆಗಳನ್ನು ಮಾಡುವವನು.

ಬೀಜವು ಒಂದೇ. ಆದರೂ ಭಿನ್ನ ಪ್ರಕೃತಿಯಲ್ಲಿ ಅದು ಭಿನ್ನ ರೂಪಗಳನ್ನು ತಾಳಿತು. ಸತ್ವಶಾಲಿಯಾದ ವಿದುರನು ತ್ಯಾಗಿಯು, ವಿರಾಗಿಯು. ಯಾರೊಡನೆಯೂ ಈತನಿಗೆ ಹಗೆಯಿಲ್ಲ. ಕಾಳಗವು ರಜ ಮತ್ತು ತಮಗಳಲ್ಲಿಯೇ ಯಾವಾಗಲೂ ನಡೆಯತಕ್ಕದು. ಧೃತರಾಷ್ಟ್ರನು ಹಿರಿಯನಾದರೂ ಕುರುಡನು. ಆದುದರಿಂದ ಅರಸುತನಕ್ಕೆ ಈತನು ಅಧಿಕಾರಿಯಾದನು. ಪಾಂಡುವು ಕಿರಿಯನಾದರೂ ಪಟ್ಟಾಧಿಕಾರಿಯಾದನು. ಅಧಿಕಾರ, ಸಂಪತ್ತುಗಳನ್ನು ಪಡೆಯುವುದು ರಜೋಗುಣದ ಸ್ವಭಾವವೇ ಆಗಿದೆ. ಆದರೆ ಭೋಗಕ್ಕೆ ರೋಗವು ನೆಳಲಿನಂತೆ ಹಿಂಬಾಲಿಸಿದೆ. ಭೋಗಿಯ ಕೊನೆ ರೋಗದಲ್ಲಿಯೇ. ಆದರೆ ಧರ್ಮ ಮರ್ಯಾದೆಯನ್ನು ಮೀರದೆ ಅನ್ಯಬೀಜದಿಂದ ಐವರು ಮಕ್ಕಳು ಆಗುವರು. ಧರ್ಮನಿಷ್ಠ ಬೀಜದಿಂದ ಧರ್ಮನೂ, ಬಲಿಷ್ಠ ಬೀಜದಿಂದ ಭೀಮನೂ, ವೀರಬೀಜದಿಂದ ಅರ್ಜುನನೂ, ಇಂತು ಮೂವರು ಮಕ್ಕಳು ಒಂದು ತಾಯಿಯ ಹೊಟ್ಟೆಯಿಂದ, ಹುಟ್ಟುತ್ತಾರೆ. ಇನ್ನೊಬ್ಬಳಿಂದ ಚಿಕಿತ್ಸಾವೃತ್ತಿಯ (ಜ್ಞಾನ) ಬೀಜದಿಂದ ನಕುಲನೂ ದೇವವೃತ್ತಿಯ ಬೀಜದಿಂದ ಸಹದೇವನೂ ಹುಟ್ಟುವರು. ಈ ಬಗೆಯಾಗಿ ರಜೋಗುಣದಿಂದ ಧರ್ಮ, ಬಲ, ವೀರ್ಯ, ಚಿಕಿತ್ಸೆ (ಜ್ಞಾನ), ದೇವತ್ವ ಎಂಬೀ ಐದು ಸತ್ ಪ್ರವೃತ್ತಿಗಳು ಹೊರಹೊಮ್ಮಿದುವು. ಆದುದರಿಂದಲೆ ಪರಮಾತ್ಮನು ಅವರಿಗೆ ಸಹಾಯಕನಾದನು. ರಜೋಗುಣದ ಬಲವು ಸತ್ವದ ಕಡೆಗೆ ಇದ್ದರೆ ಅದು ಕಲ್ಯಾಣಕಾರಿಯಾಗಲೇಬೇಕು. ವಿದುರನಂತಹ ಕೇವಲ ಸಾತ್ವಿಕನು ತನ್ನಲ್ಲಿಯೆ ತಾನು ಹಿಗ್ಗುಗೊಳ್ಳುವವನು. (ಆತ್ಮನ್ಯೇವಾತ್ಮನಾ ತುಷ್ಟಃ ಗೀ. ೨-೫೫) ಆದುದರಿಂದ ಅಂತಹನಿಂದ ಈ ಪ್ರಪಂಚದಲ್ಲಿ ಏನೂ ಹೆಚ್ಚಿನ ಕೆಲಸವು ಆಗದು. ಧರ್ಮ-ಕರ್ಮದ ಬೆಳವಣಿಗೆಯಾಗದು. ಈ ಬೆಳವಣಿಗೆಯಾಗಬೇಕಾದರೆ ಸತ್ವದಕಡೆಗೆ ಒಲವಿರುವ ರಜೋಗುಣದ ಅವಶ್ಯಕತೆಯಿದೆ. ಆದುದರಿಂದಲೆ ಕಲಂಕರಹಿತ ರಜೋಗುಣದ ಪ್ರತೀಕವೆಂದೇ 'ಪಾಂಡು' (ಶುಭ್ರ) ರಾಜನನ್ನು ತೋರಿಸಿದ್ದಾಗಿದೆ. ಇವನಿಂದ ಧರ್ಮ, ಬಲ, ವೀರ, ಜ್ಞಾನ ಮತ್ತು ಭಕ್ತಿಯೆಂಬ ಶ್ರೇಷ್ಠವಾದ ಐದು ವೃತ್ತಿಗಳು ಉಗಮವಾಗುತ್ತವೆ. ಮಾನವನ ಜೀವನವು ನಿಜವಾಗಿ ಈ ಐದು ಪ್ರವೃತ್ತಿಗಳಲ್ಲಿಯೆ ಬದ್ಧವಾಗಿರಬೇಕು. ಅಥವಾ ಈ ಐದು ಪ್ರವೃತ್ತಿಗಳೇ ಲೋಕವನ್ನು ಆಳಬೇಕು. ವೀರ ಮತ್ತು ಬಲಗಳು ಧರ್ಮಕ್ಕೆ ಅಧೀನವಾಗಿದ್ದರೆ ಮಾತ್ರ ಇದು ಸಾಧ್ಯ. ಅಲ್ಲದೆ ಜ್ಞಾನ ಮತ್ತು ಭಕ್ತಿಯೂ ಧರ್ಮಕ್ಕೆ ಪೋಷಕವಾಗಿರಬೇಕು. ಇದಕ್ಕೆ ವಿಪರೀತವಾಗಿ ಬಲವು (ಭೀಮನು) ಧರ್ಮವನ್ನು ಮೀರಿ ಹೊರಟರೆ, ಅಥವಾ ವೀರವು (ಅರ್ಜುನನು) ಮನಬಂದಂತೆ ಮೆರೆದರೆ, ಇಲ್ಲವೆ, ಜ್ಞಾನವು (ನ-ಕುಲನು) ಧರ್ಮಕ್ಕೆ ವಿರೋಧಿಯಾದರೆ, ಭಕ್ತಿಯು (ಸಹ-ದೇವನು) ಧರ್ಮವನ್ನು ಬಿಟ್ಟು ಭೂತ, ಪ್ರೇತ, ರಾಕ್ಷಸಾದಿಗಳ ವಶೀಕರಣಕ್ಕಾಗಿ ಹಾತೊರೆದರೆ, ಬಲ, ವೀರ, ಜ್ಞಾನ ಮತ್ತು ಭಕ್ತಿ ಈ ನಾಲ್ಕು ವೃತ್ತಿಗಳೂ ಮಾನವನನ್ನು ಅಧೋಗತಿಗೆ ಒಯ್ಯದೆ ಬಿಡವು. ಆದುದರಿಂದಲೆ ಇವನ್ನು ಇಲ್ಲಿ ಧರ್ಮವೃತ್ತಿಯ ಅಂಕೆಯಲ್ಲಿರಿಸಿದ್ದಾರೆ. ಇವು ಧರ್ಮವೃತ್ತಿಗೆ ಅನುಕೂಲವಾಗಿರುವಾಗಲೇ ಪರಮಾತ್ಮನ ನೆರವು ದೊರೆಯುತ್ತದೆ. ಇಲ್ಲವಾದರೆ ಇಲ್ಲ.

ದಂಭ, ದರ್ಪ, ಅಭಿಮಾನ, ಕ್ರೋಧ, ನಿಷ್ಠುರತೆ, ಲೋಭ ಮೊದಲಾದ ಘೋರ ರಾಕ್ಷಸೀವೃತ್ತಿಗಳು, ಮೇಲಿನ ಐದೂ ಶಕ್ತಿಗಳಿಗೆ ಮೊದಲಿನಿಂದಲೂ ವಿರೋಧಿಸುತ್ತವೆ. ಈ ರಾಕ್ಷಸೀವೃತ್ತಿಗಳು ಸದ್ವೃತ್ತಿಗಳನ್ನು ನಾಶಮಾಡಲು ಹವಣಿಸುತ್ತಿರುತ್ತವೆ. ತಮೋಗುಣಿಯಾದ ಧೃತರಾಷ್ಟ್ರನ ಸಂತತಿಯಲ್ಲಿ ಈ ರಾಕ್ಷಸೀವೃತ್ತಿಗಳ ಹೆಚ್ಚಳವಿದ್ದುದನ್ನು ತೋರಿಸಲಾಗಿದೆ. ಧರ್ಮಪ್ರವೃತ್ತಿಗಳನ್ನು ತೀರ ಮೊದಲಿನಿಂದಲೂ ಇವು ವಿರೋಧಿಸುವುವು, ಎಂಬುದನ್ನು ಸೂಚಿಸುವುದಕ್ಕಾಗಿ ಪಾಂಡವರಿಗೆ ತೀರ ಚಿಕ್ಕಂದಿನಿಂದಲೆ ಕೌರವರು ವಿರೋಧಿಸುತ್ತಿದ್ದರೆಂದು ವರ್ಣಿಸಲಾಗಿದೆ. ಆಸುರೀವೃತ್ತಿಗಳು

ಮೋಸದಿಂದ ಗೊತ್ತಾಗದಂತೆ ಧರ್ಮವೃತ್ತಿಯ ನಾಡಿನಲ್ಲಿ ಹೊಗುವುವು. ಹೃದಯದ ಅಧಿರಾಜ್ಯವನ್ನು ತಮ್ಮ ಕೈಯಲ್ಲಿ ಸೆಳೆದುಕೊಂಡು ಅಲ್ಲಿಂದ ಧರ್ಮವೃತ್ತಿಗಳನ್ನು ಹೊರದೂಡಿ ಅಜ್ಞಾತವಾಸಕ್ಕೆ ಕಳಿಸುವುವು. ಧರ್ಮಪ್ರವೃತ್ತಿಗಳು ಮತ್ತು ಅದರ ಅನುಷಂಗಿಕ—ಸದ್ಭಾವಗಳೂ ಪರಮಾತ್ಮನ ಸಹಾಯವನ್ನು ಕೋರಿ, ಆತನ ಬೆಂಬಲದಿಂದ ಕೊನೆಗೆ ಆ ದುರ್ಭಾವನೆಗಳೊಡನೆ ಹೋರಾಡಿ ತಮ್ಮ ಅಧಿರಾಜ್ಯವನ್ನು ಮರಳಿ ಸಂಪಾದಿಸಬೇಕಾಗುವುದು. ಯಾರು ತಮ್ಮನ್ನು ಮೊದಲು ಸಾರೆ ಸಲುಹಿದರೊ ಅವರನ್ನೆ ಸಂಹರಿಸಬೇಕಾಗುವುದು—ಎಂದರೆ ಜ್ಞಾನೇಂದ್ರಿಯಗಳನ್ನು, ಮನಸು, ಬುದ್ಧಿ, ಅಹಂಕಾರ ಇತ್ಯಾದಿಗಳನ್ನು ಅಲ್ಲಗಳೆಯಬೇಕಾಗುವುದು. ಈ ಇಂದ್ರಿಯಗಳ ಸಹಾಯದಿಂದಲೆ ಮಾನವನಿಗೆ ಜ್ಞಾನವಾಗುವುದು ನಿಜ. ಆದರೆ ಇವು ಅಸದ್ವೃತ್ತಿಗಳಿಗೆ ಸಹಾಯಕವಾಗಲಾರಂಭಿಸುತ್ತಲೆ ಇವುಗಳ ದಮನಮಾಡಬೇಕಾಗುವುದು; ಸಂಯಮನಮಾಡಬೇಕಾಗುವುದು. ಇಲ್ಲಿ ಭೀಷ್ಮಪಿತಾಮಹನು ಅಹಂಕಾರದ ಪ್ರತಿನಿಧಿಯು. ಅಹಂಕಾರನಾಶವು ಉಳಿದವುಗಳಂತೆ ಬೇಗನೆ ಒಂದೆರಡು ದಿನದಲ್ಲಿ ಆಗತಕ್ಕದಲ್ಲ. ಹದಿನೆಂಟು ದಿನದ ಕಾಳಗದಲ್ಲಿ ಹತ್ತು ದಿನಗಳು ಒಬ್ಬ ಭೀಷ್ಮನಿಗೆ ಮೀಸಲಾಗಿವೆ. ಆದರೂ ಕೊನೆಗೆ ಸಂಪೂರ್ಣ ನಾಶವು ಆಗಲೆ ಇಲ್ಲ. ಪರರಿಂದ ಸಾವುಹೊಂದದೆ ತನ್ನ ತಾನೆ ಕೊನೆಯಾಯಿತು. ಉತ್ತರಾಯಣ (ಕೊನೆ) ವರೆಗೂ ಇದ್ದು ಸಮಾಧಿ ಸಿದ್ಧವಾದ ಮೇಲೆಯೆ ಕೊನೆ. ದ್ರೋಣಾಚಾರ್ಯರು ಮನಸು. ಎಲ್ಲರಿಗೆ ಶಿಕ್ಷಣಕೊಡುವ ಕೆಲಸವು ಮನಸಿನದು. ಇದೂ ದುಷ್ಪ್ರವೃತ್ತಿಗಳ ಪಕ್ಷವಹಿಸುತ್ತಲೆ ಇದನ್ನೂ ನಿಗ್ರಹಿಸಬೇಕಾಗುವುದು. ಇದರಂತೆಯೆ ಉಳಿದ ಕೌರವ ವೀರರ ಕಥೆಯಾಗಿದೆ. ಕೌರವರು ನೂರಾರು ಜನ. (ಆಶಾಪಾಶ ಶತೈಃ ಬದ್ಧಾಃ | ಗೀತಾ. ೧೬-೧೨) ಹೃದಯವನ್ನು ಆಕ್ರಮಿಸಿ ಆಳಲು ಹವಣಿಸುವ ಕಾಮಕ್ರೋಧ ಮೊದಲಾದ ನೂರಾರು ಆಶೆ ಆಕಾಂಕ್ಷೆಗಳನ್ನು ಅಂಕೆಯಲ್ಲಿ ತರಬೇಕಾದರೆ ಘೋರವಾದ ಕಾಳಗವನ್ನೇ ಮಾಡಬೇಕಾಗುತ್ತದೆ.

ಆಧ್ಯಾತ್ಮಿಕ ದೃಷ್ಟಿಯಿಂದ ಈ ಭಾರತೀಯ ಯುದ್ಧವು ಮಾನವ ಕರ್ಮಕ್ಷೇತ್ರದಲ್ಲಿ (ಕುರು ಭೂಮಿಯಲ್ಲಿ) ಅವ್ಯಾಹತವಾಗಿ ನಡೆದಿದೆ. ಈ ಹೋರಾಟದಲ್ಲಿ ದಂಭ, ದರ್ಪ, ಅಭಿಮಾನ, ಕ್ರೋಧ ಮೊದಲಾದವುಗಳನ್ನು ತುಂಬ ಪರಿಶ್ರಮ ಪಟ್ಟು ಗೆಲ್ಲಲಾಗುತ್ತದೆ. ಮತ್ತು ಪರಮಾತ್ಮನ ಕೃಪೆಯಿಂದ ಧರ್ಮಪ್ರವೃತ್ತಿಗೆ ಪಟ್ಟವು ದೊರೆಯುತ್ತದೆ. ಇವರಿಗೆ ಇಹ-ಪರದ ರಾಜ್ಯವು ಸಿಕ್ಕುತ್ತದೆ. ಪ್ರತಿಯೊಂದು ವ್ಯಕ್ತಿಯ ಅಂತಂಗದಲ್ಲಿ ಸತ್ ಮತ್ತು ಅಸತ್ ಪ್ರವೃತ್ತಿಯ ನಡುವೆ ಹೋರಾಟವು ನಡೆದೆ ಇರುತ್ತದೆ. ಈ ಹೋರಾಟವನ್ನೇ ರೂಪಕಾಲಂಕಾರದಿಂದ ಮಹಾಭಾರತದಲ್ಲಿ ನಾವು ಕಾಣಬಹುದು. ಇದುವೆ ಮಹಾಭಾರತದ ರಹಸ್ಯವೆಂದು ಆಧ್ಯಾತ್ಮ ದೃಷ್ಟಿಯು ಬಲ್ಲಿದರು ಹೇಳುವುದುಂಟು.

ಆಧ್ಯಾತ್ಮಿಕ ದೃಷ್ಟಿಯಿಂದಾಗಲಿ, ಬೇರಾವ ದೃಷ್ಟಿಯಿಂದಾಗಲಿ, ಹೇಗೆ ವಿಚಾರಿಸಿದರೂ ಧರ್ಮ ದುರ್ಯೋಧನಾದಿಗಳು ಇರಲೆ ಇಲ್ಲವೆಂದು ಹೇಳಿದಂತಾಗುವುದಿಲ್ಲ. ಈ ಹೆಸರಿನವರಾಗಲಿ, ಬೇರಾವ ಹೆಸರಿನವರಾಗಲಿ ಆಗಿ ಹೋಗಿರಬಹುದು. ಅವರಲ್ಲಿ ಕಾಳಗವೂ ನಡೆದಿರಲಿಕ್ಕೆ ಸಾಕು. ಆದರೆ ಶ್ರೀವೇದವ್ಯಾಸರು ಅವರಿಗೆ ಧರ್ಮ, ದುರ್ಯೋಧನಾದಿಗಳೆಂದು ಕೊಟ್ಟ ಹೆಸರುಗಳು ಮಾತ್ರ ವಿಶೇಷವಾದ ಅರ್ಥವುಳ್ಳವುಗಳಾಗಿವೆ. ಅವುಗಳಲ್ಲಿ ಗೂಢಾರ್ಥವುಂಟೆಂಬುದು ಮಾತ್ರ ನಿಶ್ಚಿತ. ಈ ಗೂಢಾರ್ಥವನ್ನು ಸೂಚಿಸುವುದಕ್ಕಾಗಿಯೆ ಕೌರವಾದಿಗಳ ಜನ್ಮವೃತ್ತಾಂತವನ್ನು ಅಸ್ವಾಭಾವಿಕವೆನಿಸುವಂತೆ ಬರೆದುದಾಗಿದೆ.

ಈ ಭಾರತೀಯ ಯುದ್ಧವು ಮಾನವನ ಅಂತರಂಗದಲ್ಲಿ ನಡೆದುದಾಗಲಿ ಅಥವಾ ಕುರುಕ್ಷೇತ್ರದಲ್ಲಿಯೆ ಒದಗಿರಲಿ, ಮಾನವ ಜೀವನದ ಉನ್ನತಿಯ ದೃಷ್ಟಿಯಿಂದ ಎರಡೂ ಅಷ್ಟೆ ಮಹತ್ವದುವುಗಳಾಗಿವೆ. ಇಂತಹ ಕಾಳಗದಲ್ಲಿ '**ಧರ್ಮ**' ಪಕ್ಷಕ್ಕೇ '**ವಿಜಯ**' ದೊರೆಯುವುದೂ, ಮತ್ತು ಸ್ವಾರ್ಥದಿಂದ '**ಕುರುಡು**' ಆದ ಅಸತ್ಪಕ್ಷದ '**ನಾಶ**'ವಾಗುವುದೂ ನಿಶ್ಚಿತ ಸಿದ್ಧಾಂತವು. ಇದುವೆ ಈ ಕಥೆಯ ಸಾರಾಂಶವಾಗಿದೆ.

ಆಶಾಪಾಶಗಳಿಂದ ಬದ್ಧನಾದ ಮನುಷ್ಯನು ತನ್ನ ಅಳಿಗಾಲವನ್ನು ಕಣ್ಣಾರೆ ಕಾಣುತ್ತಲಿದ್ದರೂ ಆತನಿಗೆ ಗೆಲುವಿನ ಆಶೆ ತಪ್ಪಿರುವುದಿಲ್ಲ. 'ಈ ಕಾಳಗವಂತೂ ಆರಂಭವಾಯ್ತು; ಮುಂದೇನು?' ಎಂಬ ಪ್ರಶ್ನೆಯು ಆತನನ್ನು ಬಾಧಿಸುತ್ತದೆ. ಈ ಪ್ರಶ್ನೆಗೆ ಸಂಜಯನ ಉತ್ತರವೇನೆಂಬುದನ್ನು ನೋಡಿ:

ಬ್ರಹ್ಮ + ಮಹದ್ಯೋನಿ ತ್ರಿಗುಣಾತ್ಮಕ ಪ್ರಕೃತಿ.

[ ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್ ಗರ್ಭಂ ದಧಾಮ್ಯಹಂ।
ಸಂಭವಃ ಸರ್ವಭೂತಾನಾಂ ತತೋ ಭವತಿ ಭಾರತ॥ ]

ಗಿ. ೧೪-೩

( ಬ್ರಾಹ್ಮಣ ವ್ಯಾಸ + ಅಂಬಿಕೆ, ಅಂಬಾಲಿಕೆ, --- ದಾಸಿ )

[ ಆಸುರ ಸರ್ಗ । ತಮ + ರಜ = ಅಂಧ ]
ಧೃತರಾಷ್ಟ್ರ + ಗಾಂಧಾರಿ.

ವಿದುರ
[ ಧರ್ಮಾವತಾರ, ಸತ್ವಗುಣ, ಜ್ಞಾನಿ ]

[ ದೈವಸರ್ಗ । ಸತ್ವ + ರಜ ]
ಕುಂತಿ + ಪಾಂಡು + ಮಾದ್ರಿ

ಧರ್ಮ — ಧರ್ಮಪ್ರವೃತ್ತಿ
ಭೀಮ — ಬಲ ನಿರ್ಭಯವೃತ್ತಿ
ಅರ್ಜುನ — ವೀರವೃತ್ತಿ
ನಕುಲ — ಜ್ಞಾನವೃತ್ತಿ
ಸಹದೇವ — ದೇವಭಕ್ತಿ

( ದೈವೀ ಸಂಪತ್ತು ) ಗೀ. ೧೬-೧-೩

ದುರ್ಯೋಧನ, ದುಃಶಾಸನ ಮೊದಲಾದ ನೂರಾರು ಅಧರ್ಮವೃತ್ತಿಗಳ ಹುಟ್ಟು ದಂಭ, ದರ್ಪ, ಅಭಿಮಾನ, ಕ್ರೋಧ, ಪಾರುಷ್ಯ ಇತ್ಯಾದಿ ಆಸುರೀ ಸಂಪತ್ತು.

ಗೀ. ೧೬-೪ — ೨೦.

**ಸಂಜಯ ಉವಾಚ :— ದೃಷ್ಟ್ವಾತು ಪಾಂಡವಾನೀಕಂ ವ್ಯೂಢಂ ದುರ್ಯೋಧನಸ್ತದಾ |**
**ಆಚಾರ್ಯಮುಪಸಂಗಮ್ಯ ರಾಜಾ ವಚನಮಬ್ರವೀತ್ || ೨ ||**

---

**ಅನ್ವಯ :—** ಸಂಜಯಃ ಉವಾಚ— ತದಾ ತು ಪಾಂಡವ .. ಅನೀಕಂ ವ್ಯೂಢಂ ದೃಷ್ಟ್ವಾ, ರಾಜಾ ದುರ್ಯೋಧನಃ ಆಚಾರ್ಯಂ ಉಪಸಂಗಮ್ಯ, ( ಇದಂ ) ವಚನಂ ಅಬ್ರವೀತ್ || ೨ ||

**ಸಂಜಯನು ನುಡಿದನು :—** ಆ ಕಾಲಕ್ಕೆ ಪಾಂಡವರ ದಂಡು ಒಡ್ಡುಗಟ್ಟಿಕೊಂಡು ಅಣಿಯಾದದ್ದನ್ನು ಕಂಡು ಅರಸನಾದ ದುರ್ಯೋಧನನು ಆಚಾರ್ಯರ ಹತ್ತಿರಕ್ಕೆ ಬಂದು ಒರೆದನು || ೨ ||

**ಭಾವಾರ್ಥ :—** ಹಗೆಗಳ ದಂಡು ನಮ್ಮ ದಂಡಿನ ಮೇಲೆ ದಾಳಿಮಾಡುವ ಮೊದಲೆ ನಮ್ಮ ಮತ್ತು ಎದುರಾಳಿಗಳ ಬಲಾಬಲಗಳನ್ನು ಅರಿತುಕೊಳ್ಳುವುದು ಲೇಸು.

---

### ವ್ಯೂಹ ರಚನೆ.

( ೨ ) ಮೊದಲನೆಯ ದಿನದ ಕಾಳಗದಲ್ಲಿ ಭೀಷ್ಮರು ಕೌರವರ ಪ್ರಚಂಡ ಸೈನ್ಯದಿಂದ 'ಪತತ್ರಿ' ಎಂಬ ವ್ಯೂಹವನ್ನು ರಚಿಸಿದ್ದರು. ಮತ್ತು ತಮ್ಮ ದಂಡಿನವರನ್ನು ಹುರಿದುಂಬಿಸುವುದಕ್ಕಾಗಿ ಅವರು ಒಂದು ಭಾಷಣವನ್ನು ಮಾಡಿದರು: 'ಎಲೈ ಕ್ಷತ್ರಿಯರೆ, ಈ ಕಾಳಗದ ನೆವದಿಂದ ನಿಮಗೆ ಸ್ವರ್ಗದ ಕದವು ತೆರೆದುದಾಗಿದೆ. ಈ ಬಾಗಿಲಿನಿಂದ ನೀವು ಬೇಕಾದರೆ, ಇಂದ್ರಲೋಕಕ್ಕೆ ಹೋಗಬಹುದು. ಬೇಕಾದರೆ ಬ್ರಹ್ಮಲೋಕವನ್ನು ಸೇರಬಹುದು. ನಿಮ್ಮ ಪೂರ್ವಜರು ಇದೆ ದಾರಿಯಿಂದಲೆ ಶ್ರೇಷ್ಠ ಪದವಿಯನ್ನು ಹೊಂದಿದರು. ಮನೆಯಲ್ಲಿ ಹಾಸಿಗೆಯಲ್ಲಿ ಬಿದ್ದು ಸಾಯುವುದು ಕ್ಷತ್ರಿಯರಿಗೆ ಭೂಷಣವಲ್ಲ. ರಣರಂಗದಲ್ಲಿ ಬರುವ ಸಾವೇ ಕ್ಷತ್ರಿಯರಿಗೆ ಸದ್ಗತಿದಾಯಕವಾಗಿದೆ. ( ಮ. ಭಾ. ಭೀಷ್ಮ. ಪಂ. ಅಧ್ಯಾ. ೧೭ ). ಈ 'ಪತತ್ರಿ' ಎಂಬ ಒಡ್ಡು ಹಕ್ಕಿಯ ಆಕಾರದ್ದಾಗಿದೆ. ಮತ್ತು ಬೇಕಾದ ಕಡೆಗೆ ಅದಕ್ಕೆ ಮುಖವು ಇರಬಲ್ಲುದು. ಅದರಿಂದ ಹಗೆಗಳಿಗೆ ಈ ಒಡ್ಡನ್ನು ಒಡೆಯಲು ಏರಿಬರುವುದಕ್ಕೆ ದುಸ್ತರವಾಗುತ್ತದೆ.

ಕೌರವರ ಈ 'ಹಂಚಿಕೆಗೆ' ಪ್ರತಿಯಾಗಿ ಧರ್ಮರಾಯನು, 'ಸೂಚೀ ಮುಖಾಕಾರ' ವ್ಯೂಹವನ್ನು ರಚಿಸಿದನು. ಇದರ ಉದ್ದೇಶವನ್ನು ತಿಳಿಸುವುದಕ್ಕಾಗಿ ಆತನು ಅರ್ಜುನನಿಗೆ ಹೇಳಿದುದೇನಂದರೆ: 'ಅರ್ಜುನನೇ, ಬೃಹಸ್ಪತಿ ಮಹರ್ಷಿಯು ಸೈನ್ಯರಚನೆಯ ಗುಟ್ಟನ್ನು ಹೀಗೆ ಹೇಳಿದ್ದಾನೆ: ದಂಡು ಸ್ವಲ್ಪವಿದ್ದರೆ ಎಲ್ಲರೂ ಕೂಡಿ ಸಂಘಶಃ ದಾಳಿಮಾಡಬೇಕು. ದಂಡು ಬೇಕಾದಷ್ಟಿದ್ದರೆ, ಅದರಲ್ಲಿ ಹಲವು ತಂಡಗಳನ್ನು ಮಾಡಿ ದಿಕ್ಕು—ದಿಕ್ಕಿನಿಂದ ದಾಳಿಯಿಡಬೇಕು. ಎದುರಾಳಿಗಳಿಗಿಂತ ನಮ್ಮ ಪಡೆಯು ಚಿಕ್ಕದಾಗಿದೆ. ಆದುದರಿಂದ, 'ಸೂಚೀ ಮುಖಾಕಾರ' ವ್ಯೂಹವನ್ನು ರಚಿಸಿ ನಾವು ಕಾಳಗಕ್ಕೆ ಅಣಿಯಾಗಬೇಕು.

ಅಣ್ಣದೇವನ ಈ ಅಪ್ಪಣೆಯಂತೆ ಅರ್ಜುನನು ದ್ರುಪದನ ಮಗನಿಂದ ತಮ್ಮ ದಂಡಿನ 'ವಜ್ರ'ವೆಂಬ ಹೆಸರಿನ ವ್ಯೂಹವನ್ನು ರಚಿಸಿದನು. ( ಮ. ಭಾ. ಭೀಷ್ಮ. ಪಂ. ಅ. ೧೯ ). ಇದು ಸೂಚಿಯಂತೆ ಮೊನೆಯುಳ್ಳುದು ಆಗಿರುವುದರಿಂದ ಹಗೆಗಳ ಮೇಲೆ ಏರಿ ಹೋಗುವುದಕ್ಕೆ ಬಹಳ ಅನುಕೂಲವಾದುದಾಗಿದೆ. ಇದರಿಂದ ಪಾಂಡವರ ಚಿಕ್ಕಪಡೆಯೂ ಕೌರವರ ಪ್ರಚಂಡ ಸೈನ್ಯಕ್ಕೆ ಮಿಗಿಲೆನಿಸುವಂತಾಯಿತು. ಆಗ ದುರ್ಯೋಧನನು ಸ್ವಲ್ಪ ಚಿಂತಾಗ್ರಸ್ತನಾಗಿ ದ್ರೋಣಾಚಾರ್ಯರಿಗೆ ನುಡಿದುದೇನಂದರೆ :

### ಹದಿನೆಂಟು ಮಹಾರಥರು.

( ೩-೬ ) ಈ ಶ್ಲೋಕಗಳಲ್ಲಿ ಭೀಮ, ಅರ್ಜುನ, ಸತ್ಯಕಿ. ವಿರಾಟ, ದ್ರುಪದ, ಧೃಷ್ಟಕೇತು, ಚೇಕಿತಾನ, ಕಾಶೀರಾಜ, ಕುಂತಿಭೋಜ, ಶೈಬ್ಯ, ಯುಧಾಮನ್ಯು, ಉತ್ತಮೌಜ ಅಭಿಮನ್ಯು ಮತ್ತು ದ್ರೌಪದಿಯ ಮಕ್ಕಳು ಐವರು ( ಧರ್ಮರಾಜನಿಂದ ಪ್ರತಿವಿಂಧ್ಯ, ಭೀಮನಿಂದ ಶ್ರುತಸೋಮ, ಅರ್ಜುನನಿಂದ ಶ್ರುತಕೀರ್ತಿ, ನಕುಲನಿಂದ ಶತಾನಿಕ ಮತ್ತು ಸಹದೇವನಿಂದ ಶ್ರುತಕರ್ಮ. ) ಇಂತು ಹದಿನೆಂಟು ಮಹಾರಥರನ್ನು ಇಲ್ಲಿ ಉಲ್ಲೇಖಿಸಿದ್ದಾಗಿದೆ. ಹತ್ತುಸಾವಿರ ಬಿಲ್ಲಾಳುಗಳೊಡನೆ ಕಾದುವ ಏಕೈಕ ವೀರನಿಗೆ ಮಹಾರಥನೆಂದು ಹೇಳುವುದುಂಟು.

**ಏಕೋ ದಶಸಹಸ್ರಾಣಿ ಯೋಧಯೇದ್ಯಸ್ತು ಧನ್ವಿನಾಮ್ |**
**ಶಸ್ತ್ರ ಶಾಸ್ತ್ರ ಪ್ರವೀಣಶ್ಚ ವಿಜ್ಞೇಯಶ್ಚ ಮಹಾರಥಃ ||**

ಇಂತಹ ಅಸಾಮಾನ್ಯ ಮಹಾವೀರನೆ ಮಹಾರಥನು: ಆತನು ಶಸ್ತ್ರ ಶಾಸ್ತ್ರ ಪಾರಂಗತನಾಗಿರಬೇಕು; ಯುದ್ಧ

## (೨) ಪಾಂಡವ ಸೈನ್ಯ ವರ್ಣನೆ

ಪಶ್ಯೈತಾಂ ಪಾಂಡುಪುತ್ರಾಣಾಮಾಚಾರ್ಯ ಮಹತೀಂ ಚಮೂಮ್ ।
ವ್ಯೂಢಾಂ ದ್ರುಪದ ಪುತ್ರೇಣ ತವ ಶಿಷ್ಯೇಣ ಧೀಮತಾ ॥ ೩ ॥
ಅತ್ರಶೂರಾ ಮಹೇಷ್ವಾಸಾ ಭೀಮಾರ್ಜುನ ಸಮಾಯುಧಿ ।
ಯುಯುಧಾನೋ ವಿರಾಟಶ್ಚ ದ್ರುಪದಶ್ಚ ಮಹಾರಥಃ ॥ ೪ ॥
ಧೃಷ್ಟಕೇತು ಶ್ಚೇಕಿತಾನಃ ಕಾಶೀರಾಜಶ್ಚ ವೀರ್ಯವಾನ್ ।
ಪುರಜಿತ್ ಕುಂತಿಭೋಜಶ್ಚ ಶೈಬ್ಯಶ್ಚ ನರಪುಂಗವಃ ॥ ೫ ॥
ಯುಧಾಮನ್ಯುಶ್ಚ ವಿಕ್ರಾಂತ ಉತ್ತಮೌಜಾಶ್ಚ ವೀರ್ಯವಾನ್ ।
ಸೌಭದ್ರೋ ದ್ರೌಪದೇಯಾಶ್ಚ ಸರ್ವ ಏವ ಮಹಾರಥಾಃ ॥ ೬ ॥

---

**ಅನ್ವಯ:**— ಹೇ, ಆಚಾರ್ಯ! ತವ ಧೀಮತಾಶಿಷ್ಯೇಣ, ದ್ರುಪದ ಪುತ್ರೇಣ ವ್ಯೂಢಾಂ ಪಾಂಡುಪುತ್ರಾಣಾಂ ಏತಾಂ ಮಹತೀಂ ಚಮೂಂ ಪಶ್ಯ ॥ ೩ ॥ ಅತ್ರ ಭೀಮಾರ್ಜುನಸಮಾಃ ಯುಧಿ ಶೂರಾಃ ಮಹೇಷ್ವಾಸಃ, ಯುಯುಧಾನಃ, ವಿರಾಟಃ ಚ ಮಹಾರಥಃ ದ್ರುಪದಃ ಚ ॥ ೪ ॥ ಧೃಷ್ಟಕೇತುಃ, ಚೇಕಿತಾನಃ, ವೀರ್ಯವಾನ್ ಕಾಶೀರಾಜಃ ಚ ಪುರುಜಿತ್ ಕುಂತಿಭೋಜಃ, ನರಪುಂಗವಃ ಶೈಬ್ಯಃ ಚ ॥ ೫ ॥ ವಿಕ್ರಾಂತಃ ಯುಧಾಮನ್ಯುಃ ಚ, ವೀರ್ಯವಾನ್ ಉತ್ತಮೌಜಾಃ ಚ, ಸೌಭದ್ರಃ, ದ್ರೌಪದೇಯಾಃ ಚ, ಸರ್ವೇ ಮಹಾರಥಾಃ ಏವ ॥ ೬ ॥

ಎಲೈ ಆಚಾರ್ಯರೆ, ಬುದ್ಧಿವಂತನಾದ ತಮ್ಮ ಶಿಷ್ಯನು- ದ್ರುಪದಪುತ್ರ ಧೃಷ್ಟದ್ಯುಮ್ನನು ಒಡ್ಡಿನಿಂತ ಪಾಂಡವರ ಈ ವಿಶಾಲವಾದ ಸೇನೆಯನ್ನು ನೋಡಿರಿ ॥ ೩ ॥ ಈ ಸೈನ್ಯದಲ್ಲಿ ಭೀಮಾರ್ಜುನರಂತಹ ಶೂರರೂ ಧನುರ್ಧರರೂ ಆದ ಯೋಧರು, ಯುಯುಧಾನ, (ಸಾತ್ಯಕಿ), ವಿರಾಟ, ಮಹಾರಥ ದ್ರುಪದನು ॥೪॥ ಧೃಷ್ಟಕೇತುವು, ಚೇಕಿತಾನ, ಪರಾಕ್ರಮಶಾಲಿಯಾದ ಕಾಶಿರಾಜನು, ಪುರಜಿತ್ ಕುಂತಿಭೋಜನು, ನರಶ್ರೇಷ್ಠ ಶೈಬ್ಯನು, ॥ ೫ ॥ ಶೂರನಾದ ಯುಧಾಮನ್ಯುವು, ವೀರಶಾಲಿ ಉತ್ತಮೌಜನು, ಸುಭದ್ರೆಯ ಮಗನಾದ ಅಭಿಮನ್ಯುವು, ಮತ್ತು ದ್ರೌಪದಿಯ (ಐವರು) ಮಕ್ಕಳು ಇರುವರು. ಹಾಗೂ ಇವರೆಲ್ಲರೂ ಮಹಾರಥಿಗಳಾಗಿದ್ದಾರೆ. ॥ ೬ ॥

**ಭಾವಾರ್ಥ :**— ಹಗೆಗಳ ದಂಡಿನ ವೀರರಾರೆಂಬುದನ್ನು ಮೊದಲೆ ಅರಿತುಕೊಂಡು ಅವರ ಗುಣದೋಷಗಳನ್ನು ವಿಮರ್ಶಿಸಬೇಕು; ಅವರ ಯುದ್ಧಕೌಶಲ್ಯವೆಷ್ಟಿದೆಯೆಂಬುದನ್ನು ತಿಳಿದಿರಬೇಕು. ಮತ್ತು ಅವರನ್ನೂ ತಮ್ಮ ಕಡೆಯ ವೀರರೊಂದಿಗೆ ತೂಗಿ—ಸರಿಹೋಲಿಸಿ ನೋಡಿಕೊಳ್ಳಬೇಕು. ಇದುವೆ ಜಾಣನಾದ ನೇತಾರನ ಲೇಸಾದ ರೀತಿ ॥ ೩-೬ ॥

---

ವಿದ್ಯೆಯನ್ನು ಬಲ್ಲವನಾಗಿರಬೇಕು; ಮತ್ತು ಹತ್ತು-ಸಾಸಿರ ವೀರರೊಡನೆ ಕಾದುವ ಸಾಸಿಗನಾಗಿರಬೇಕು. 'ಮಹಾರಥ'ನೆಂಬ ಬಿರುದು ಇಂತಹನಿಗೆ ಸಾರ್ಥಕವು. ಈ ಬಗೆಯ ಬಿಲ್ಲ ಬಲ್ಮೆಯನ್ನೂ ತೋರಿದವರಿಗೇ ಅರಸರು ಈ ಬಿರುದನ್ನಿತ್ತು ಮನ್ನಿಸುತ್ತಿದ್ದರು. ಅಭಿಮನ್ಯು ಮತ್ತು ಐವರು ಉಪಪಾಂಡವರು (ದ್ರೌಪದಿ ಪುತ್ರರು) ವಯಸ್ಸಿನಿಂದ ಚಿಕ್ಕವರು; ಇಪ್ಪತ್ತೈದು ವರ್ಷಕ್ಕಿಂತ ಸಣ್ಣವರು. ಆದರೂ ಅವರನ್ನು ಮಹಾರಥರಲ್ಲಿ ಎಣಿಸಿದ್ದಾಗಿದೆ. ಪಾಂಡವರ ಕಾಲಕ್ಕೆ ಮಕ್ಕಳ ಶಿಕ್ಷಣಕ್ಕೆ ಎಷ್ಟೊಂದು ಗಮನಕೊಡುತ್ತಿದ್ದರೆಂಬುದನ್ನು ಈ ಒಂದು ಉದಾಹರಣದಿಂದಲೆ ಚೆನ್ನಾಗಿ ಊಹಿಸಬಹುದಾಗಿದೆ.

ಇಷ್ಟೊಂದು ಧೀಮಂತರೂ, ಶಕ್ತಿವಂತರೂ ಆಗಿದ್ದುದರಿಂದಲೆ ಅಂದಿನ ಭಾರತೀಯ ತರುಣರು ಲೋಕವಿಖ್ಯಾತರಾದರು. ಭಾರತವು ಸುಖ ಹಾಗೂ ಸಂಪತ್ತಿನ ತವರ್ಮನೆಯಾಗಿದ್ದಿತು.

ಅಂದಿನ ತರುಣರಿಗೆ ಹಿರಿಯರೂ ಮೇಲ್ಪಂಕ್ತಿಯಾಗಿದ್ದರು ಭೀಮ, ಅರ್ಜುನರ ವಯಸ್ಸು ಭಾರತೀಯ ಯುದ್ಧದ ಕಾಲಕ್ಕೆ ಎಪ್ಪತ್ತಕ್ಕೆ ಸಮೀಪಿಸಿತ್ತು. ವಿರಾಟ ಮತ್ತು ದ್ರುಪದರು ಇವರಿಗಿಂತಲೂ ಹಿರಿಯರಾಗಿದ್ದರು! ಇಂತಹ ಇಳಿ ವಯಸ್ಸಿನಲ್ಲಿಯೂ ಈ ಬಂಟರು ತರುಣರಂತೆ ಹುಮ್ಮಸದಿಂದ ಕಾದಲನುವಾಗಿದ್ದರು ಎಪ್ಪತ್ತು ಎಂಬತ್ತು ವರ್ಷದ ವೀರರು ರಣರಂಗದಲ್ಲಿ ಕತ್ತಿ, ಗದೆ,

(೩) ಅಸ್ಮಾಕಂ ತು ವಿಶಿಷ್ಟಾ ಯೇ ತಾನ್ನಿಬೋಧ ದ್ವಿಜೋತ್ತಮ |
ನಾಯಕಾ ಮಮ ಸೈನ್ಯಸ್ಯ ಸಂಜ್ಞಾರ್ಥಂ ತಾನ್ಬ್ರವೀಮಿ ತೇ ||೭||
ಭವಾನ್ ಭೀಷ್ಮಶ್ಚ ಕರ್ಣಶ್ಚ ಕೃಪಶ್ಚ ಸಮಿತಿಂಜಯಃ |
ಅಶ್ವತ್ಥಾಮಾ ವಿಕರ್ಣಶ್ಚ ಸೌಮದತ್ತಿಸ್ತಥೈವ ಚ ||೮||
ಅನ್ಯೇ ಚ ಬಹವಃ ಶೂರಾಃ ಮದರ್ಥೇ ತ್ಯಕ್ತಜೀವಿತಾಃ |
ನಾನಾಶಸ್ತ್ರಪ್ರಹರಣಾಃ ಸರ್ವೇ ಯುದ್ಧವಿಶಾರದಾಃ ||೯||

---

**ಅನ್ವಯ:—** ಹೇ ದ್ವಿಜೋತ್ತಮ ಅಸ್ಮಾಕಂ ತು ಯೇ ವಿಶಿಷ್ಟಾಃ, ಮಮ ಸೈನ್ಯಸ್ಯ ನಾಯಕಾಃ, ತತ್ ನಿಬೋಧ| ತೇ ಸಂಜ್ಞಾರ್ಥಂ ತಾನ್ ಬ್ರವೀಮಿ ||೭|| ಭವಾನ್, ಭೀಷ್ಮಃ ಚ, ಕರ್ಣಃ ಚ, ಸಮಿತಿಂಜಯಃ ಕೃಪಃ ಚ, ಅಶ್ವತ್ಥಾಮಾ, ವಿಕರ್ಣಃ ಚ, ತಥಾಏವ ಚ ಸೌಮದತ್ತಿಃ ||೮|| ಅನ್ಯೇಃ ಚ, ಬಹವಃ ಶೂರಾಃ ಸರ್ವೇ ಮದರ್ಥೇ ತ್ಯಕ್ತ ಜೀವಿತಾಃ, ನಾನಾ ಶಸ್ತ್ರ ಪ್ರಹರಣಾಃ, ಯುದ್ಧ ವಿಶಾರದಾಃ (ಸಂತಿ) ||೯||.

ಎಲೈ ದ್ವಿಜಶ್ರೇಷ್ಠರೆ (ದ್ರೋಣಾಚಾರ್ಯರೆ), ಇನ್ನು ನಮ್ಮ ಕಡೆಯ ಪ್ರಮುಖರೂ ಸೇನಾನಾಯಕರೂ ಆಗಿರುವವರ ಹೆಸರುಗಳನ್ನು ಕೇಳಿರಿ. ತಮಗೆ ಕೇವಲ ಸೂಚಿಸುವುದಕ್ಕೆಂದು ನಾನು ಈ ಹೆಸರುಗಳನ್ನು ಹೇಳು-ತ್ತೇನೆ. ||೭|| ತಾವು, ಭೀಷ್ಮರು, ಕರ್ಣನು, ರಣಧುರಂಧರ ಕೃಪಾಚಾರ್ಯರು, ಅಶ್ವತ್ಥಾಮ ಮತ್ತು ಸೋಮದತ್ತನ ಮಗನು (ಭೂರಿಶ್ರವನು) ||೮|| ಇನ್ನೂ ಹಲವರುಂಟು. ಅವರೆಲ್ಲ ನನಗಾಗಿ ತಮ್ಮ ಜೀವನವನ್ನೇ ಮುಡುಪಾಗಿರಿ-ಸಿದ್ದಾರೆ; ಅವರು ಬಗೆಬಗೆಯ ಶಸ್ತ್ರಗಳನ್ನು ಎಸೆಯುವುದರಲ್ಲಿ ನುರಿತವರೂ, ಯುದ್ಧ ವಿಶಾರದರೂ ಆಗಿದ್ದಾರೆ. ||೯||

**ಭಾವಾರ್ಥ:—** ತಮ್ಮ ಕಡೆಯ ಪಡೆವಳರೂ ದಳವಾಯಿಗಳೂ ಯಾರು? ಅವರ ಯೋಗ್ಯತೆಯೇನು? ಅವರು ಅರಿತು ನುರಿತ ವಿಷಯಗಳಾವುವು? ಅವರಲ್ಲಿ ಮನಸಾರೆ ಕಾದುವವರೆಷ್ಟು? ಎಂಬವೆ ಮೊದಲಾದ ಸಂಗತಿಗಳನ್ನು ಅರಸನು ಚನ್ನಾಗಿ ಅರಿತಿರಬೇಕಾಗುತ್ತದೆ.

---

ಅಥವಾ ಬಿಲ್ಗೊಂಡು ನಿಂತು, ಸ್ವರಾಜ್ಯಸಂಪಾದನೆಗಾಗಿ ಆತ್ಮಾಹುತಿಯನ್ನು ನೀಡಲು ಸಿದ್ಧರಾದ ಭೃತ್ಯವು ಜೀವಂತ ರಾಷ್ಟ್ರದಲ್ಲಿಯೇ ಕಾಣಲು ದೊರೆಯುವುದು. ಪರಕೀಯರ ಆಡಳಿತದಲ್ಲಿರುವ ನಾಡಿನ ಜನಗಳು ನಿರುತ್ಸಾಹಿಗಳೂ, ದುರ್ಬಲರೂ, ಅಲ್ಪಾಯುಷಿಗಳೂ, ಆಗುತ್ತಾರೆ. ಸ್ವರಾಜ್ಯವಿದ್ದ ನಾಡಿನ ತರುಣರಷ್ಟೇ ಅಲ್ಲದೆ ವೃದ್ಧರೂ ಕೂಡ ಲೋಕವನ್ನು ಬೆರಗುಗೊಳಿಸುವ ಶಕ್ತಿ ಪರಾಕ್ರಮಗಳನ್ನು ತೋರಿಸಲು ಸಮರ್ಥರಾಗುತ್ತಾರೆ.

ಮಹಾಭಾರತದ ಉದ್ಯೋಗಪರ್ವ (ಅಧ್ಯಾಯ ೧೬೪-೧೭೧) ದಲ್ಲಿ ಎರಡೂ ಪಂಗಡದ ರಥಿಕ, ಮಹಾ. ರಥಿಕ, ಅತಿರಥಿಕರ್ಕಳ ವರ್ಣನೆಯಿದೆ. ೧೬೯ನೆಯ ಅಧ್ಯಾಯದಲ್ಲಿ ಭೀಮ ಮತ್ತು ಅರ್ಜುನರ ವರ್ಣನೆಯುಂಟು. ೧೭೦ನೆಯ ಅಧ್ಯಾಯದಲ್ಲಿ ಅಭಿಮನ್ಯು ಮತ್ತು ಐವರು ಉಪಪಾಂಡವರ ವರ್ಣನೆಯಿದೆ. ಇದೇ ಅಧ್ಯಾಯದಲ್ಲಿ ಉತ್ತಮೌಜ, ಸಾತ್ಯಕಿ, ಮತ್ತು ಯುಧಾ. ಮನ್ಯು ಇವರ ವರ್ಣನೆಯಿದೆ. ೧೭೧ನೆಯ ಅಧ್ಯಾಯದಲ್ಲಿ ಶಿಶುಪಾಲನ ಮಗ, ಚೇದಿರಾಜ, ಧೃಷ್ಟಕೇತುಗಳ ವರ್ಣನೆಯುಂಟು. ೧೬೯ ರಿಂದ ೧೭೧ರ ವರೆಗಿನ ಅಧ್ಯಾಯಗಳಲ್ಲಿರುವ ಪಾಂಡವರ ಕಡೆಯ ವೀರರ ವರ್ಣನೆಯು ಓದುವಂತಹದಾಗಿದೆ. 'ಪುರಜಿತ್ ಕುಂತಿಭೋಜ' ಎಂಬುದು ಒಬ್ಬ ವೀರನದೆ ಹೆಸರು. ಯುಧಾಮನ್ಯು ಮತ್ತು ಉತ್ತಮೌಜರು ಪಾಂಚಾಲ ದೇಶದ ವೀರರು. ಚೇಕಿತಾನನು ಯಾದವ ವಂಶಜನು. ಶೈಬ್ಯನು ಶಿಬಿ ದೇಶದ ಅರಸು, ಎಂದು ಮುಂತಾಗಿ ಪಾಂಡವ ವೀರ-ರನ್ನೆಲ್ಲ ಎಣಿಸಿ ಹೇಳಿದ ಬಳಿಕ ದುರ್ಯೋಧನನು ತನ್ನ ಪಕ್ಷದ ವೀರರನ್ನು ಕುರಿತು ಏನು ಹೇಳುವನೆಂಬುದನ್ನು ಇಲ್ಲಿ ನೋಡಿ:

### ಸೈನ್ಯದ ಯೋಗ್ಯಾಯೋಗ್ಯತೆ.

(೭-೯) ಈ ಶ್ಲೋಕಗಳಲ್ಲಿ ದುರ್ಯೋಧನನು ತನ್ನ ಪಡೆಯ ಪ್ರಮುಖ ನಾಯಕರ ವರ್ಣನೆಯನ್ನು ಮಾಡಿ-ದ್ದಾನೆ. ಎಲ್ಲರಲ್ಲಿ ಶ್ರೇಷ್ಠರಾದ ದ್ರೋಣಾಚಾರ್ಯರು ಮತ್ತು ಹಿರಿಯರಾದ ಭೀಷ್ಮಪಿತಾಮಹರು ಯುದ್ಧ ವಿಶಾರದಲ್ಲಿ ಅಗ್ರಣಿಗಳಾಗಿದ್ದರು. ಭೀಷ್ಮರಿಗೆ ಆಗ ೧೭೦ ವಯಸ್ಸು. ಆದರೂ ಹದಿನೆಂಟು ದಿನಗಳ ಕಾಳಗದಲ್ಲಿ ಹತ್ತುದಿನ ಈ ಭೀಷ್ಮರೇ ಕಾದಿದ್ದಾರೆ. ದ್ರೋಣಾಚಾರ್ಯರು ೯೦ ವಯಸ್ಸಿನವರಾದರೂ ಐದು ದಿನಗಳವರೆಗೆ ಘೋರ

ಸಂಗ್ರಾಮವನ್ನು ಎಸಗಿದರು. ಇವರ ತರುವಾಯ ಕರ್ಣ, ಕೃಪ, ಭೂರಿಶ್ರವ (ಸೋಮದತ್ತಿ), ಅಶ್ವತ್ಥಾಮ, ವಿಕರ್ಣಾದಿಗಳು ಒಬ್ಬರೊಬ್ಬರನ್ನು ಸರಿಗಟ್ಟುವ ವೀರರು. ಆದರೆ ಇವರೆಲ್ಲರಲ್ಲಿ ಕರ್ಣನಲ್ಲಿಯೇ ದುರ್ಯೋಧನನ ಸಂಪೂರ್ಣ ನಂಬುಗೆ. 'ಕಾಳಗವನ್ನು ಗೆಲ್ಲಬಲ್ಲವ'-ನೆಂದು ಕರ್ಣನನ್ನು ಬಣ್ಣಿಸಿ ಹೇಳಿದ್ದಾನೆ. ಕೃಪಾಚಾರ್ಯನಿಗೂ 'ಸಮಿತಿಂಜಯ'ನೆಂದು ವಿಶೇಷಿಸಿದ್ದಾನೆ. ಮತ್ತು 'ಬೇರೆ ಹಲವರು ನನ್ನ ಸಲುವಾಗಿ ಜೀವವನ್ನು ಮೀಸಲಾಗಿರಿಸಿದ್ದಾರೆ.' (ಮದರ್ಥೇ ತ್ಯಕ್ತ ಜೀವಿತಾಃ) ಎಂದಿರುವನು. ದುರ್ಯೋಧನನು ಭೀಷ್ಮ ಮತ್ತು ದ್ರೋಣರಿಗೆ ಯುದ್ಧಾರಂಭದಲ್ಲಿ ಏನೊಂದು ಆರಿಕೆಯನ್ನು ಮಾಡಿಕೊಳ್ಳುತ್ತಿದ್ದಾನೆ. 'ಬೇರೆ ಹಲವರು ನನಗಾಗಿ ತಮ್ಮ ಜೀವವನ್ನೇ ಮೀಸಲಾಗಿರಿಸಿದ್ದಾರೆ,' ಎಂದು ಈ ಹಿರಿಯರ ಮುಂದೆ ಸ್ವಲ್ಪ ಚುಚ್ಚುಮಾತಿನ ಹದರುನುಡಿಯನ್ನಾಡಿದುದರ ಕಾರಣವೇನು? 'ತಾವು ಭೀಷ್ಮ-ದ್ರೋಣರು ಶ್ರೇಷ್ಠ ಯೋಗ್ಯತೆಯ ವೀರರಾಗಿರುವಿರೆಂಬುದು ನಿಜ. ಆದರೆ ತಮ್ಮ ಒಲವು ಪಾಂಡವರ ಕಡೆಗೆ ಇರುವುದರಿಂದ ತಾವು ಅಷ್ಟು ಮನಸಾರೆ ಕಾದಲಾರಿರಿ,' ಎಂದು ಸೂಚಿಸುವುದೇ ಈ ಮಾತಿನ ಉದ್ದೇಶವಿರಬೇಕು. ದುರ್ಯೋಧನನು ಸಂಪೂರ್ಣ ನಂಬಿ ನಚ್ಚಿಕೊಂಡಿದ್ದುದು ಕರ್ಣನನ್ನು. ಆದರೆ ಭೀಷ್ಮ-ದ್ರೋಣರಂತಹ ಹಿರಿಯರಾದ ಯುದ್ಧವಿಶಾರದರಿರುವಾಗ, ಕರ್ಣನಿಗೆ ಮೊದಲು ವೀರಪಟ್ಟವನ್ನು ಕಟ್ಟುವುದು ಹೇಗೆ? ಭೀಷ್ಮ-ದ್ರೋಣರಿಗೆ 'ನೀವು ಕಾಳಗದಿಂದ ಹಿಂದೆಗೆಯಿರಿ; ಕರ್ಣನಿಗೆ ವೀರಪಟ್ಟ ಕಟ್ಟುವೆನು' ಎಂದು ಹೇಳಲು ದುರ್ಯೋಧನನಿಗೆ ಸಾಧ್ಯವಿದ್ದಿಲ್ಲ. ಈ ಧರ್ಮಸಂಕಟದಿಂದ ಪಾರಾಗುವುದಕ್ಕಾಗಿಯೇ ಆತನು ಮೊದಲದಿನದ ಯುದ್ಧದ ಹೊಣೆಯನ್ನು ವೃದ್ಧ ಭೀಷ್ಮರಮೇಲೆ ಹೊರಿಸಿದನು. 'ಅರ್ಜುನನೊಡನೆ ಕಾದುವಾಗ ವೃದ್ಧ ಪಿತಾಮಹನು ಗೆದ್ದರಂತೂ ಸರಿಯೆ; ತನ್ನ ಕೆಲಸವೇ ಕೈಗೂಡಿತು. ಇಲ್ಲವಾದರೆ, ತರುಣ ಅರ್ಜುನನಿಂದ ಮುದುಕನ ಕೊನೆಯಾದರೂ ಸರಿಯೆ. ಇದರಂತೆಯೆ ದ್ರೋಣರ ಬಾಳೆಯನ್ನೂ ಮುಗಿಸಿ ತನ್ನ ನಚ್ಚಿಕೆಯ ಕರ್ಣನಿಗೆ ವೀರಪಟ್ಟವನ್ನು ಕಟ್ಟಿದರಾಯ್ತು' ಎಂದು ದುರ್ಯೋಧನನ ಎಣಿಕೆಯಿರಬೇಕು. ಭೀಷ್ಮ ದ್ರೋಣರ ವಿಷಯಕ್ಕೆ ಆತನಿಗೆ ಏನೂ ಸಂದೇಹವೇ ಇದ್ದಿಲ್ಲವಾದರೆ, 'ಮತ್ತೆ ಬೇರೆ ಹಲವು ವೀರರು ನನಗಾಗಿ ತಮ್ಮ ಜೀವವನ್ನು ಮೀಸಲಾಗಿರಿಸಿದ್ದಾರೆ,' ಎಂಬ ಕೊಂಕುಮಾತಿನ ಅವಶ್ಯಕತೆಯೇ ಇದ್ದಿಲ್ಲ; ಹೆರವರನ್ನು ಹೊಗಳಿ, 'ನೀವು ಹಾಗೆ ಇಲ್ಲ' ಎಂದು ಸೂಚಿಸುವ ಕಾರಣವಿದ್ದಿಲ್ಲ. ಈಗ ಕಾಳಗವು ಆರಂಭವಾಗಿದೆ. ಇಂತಹ ಹೊತ್ತಿನಲ್ಲಿ ಭೀಷ್ಮ ಪಿತಾಮಹರಿಗೆ ಚುಚ್ಚುಮಾತಿನಿಂದ 'ನೀವು ಇಬ್ಬರೂ ಉಳಿದವರಂತೆ ನನ್ನ ಸಲುವಾಗಿ ಸಂಪೂರ್ಣ ಮನಸ್ಸಿನಿಂದ ಕಾದಲು ಸಿದ್ಧರಾಗಿಲ್ಲ; ಪಾಂಡವರ ಕಡೆಗೇ ನಿಮ್ಮ ಒಲವಿದೆ; ನೀವು ನನಗಿಂತ ಅವರ ಹಿತವನ್ನೇ ಹೆಚ್ಚಾಗಿ ಬಯಸುವವರು' ಎಂದು ಬಿರುನುಡಿಗಳನ್ನು ಆಡುವ ಸ್ಥಿತಿಯಲ್ಲಿ ಇದ್ದಿಲ್ಲ. ಆದರೆ ಭೀಷ್ಮ-ದ್ರೋಣರ ಬಗ್ಗೆ ದುರ್ಯೋಧನನು ಒಳಗೊಳಗೇ ಉರಿಯುತ್ತಿದ್ದನು. ಆ ಉರಿಯನ್ನೆಲ್ಲ ಕಾರಿಬಿಡುವ ಸಮಯವಲ್ಲದ್ದರಿಂದ, ಆದರೆ ಸಂಪೂರ್ಣವಾಗಿ ತನ್ನ ಒಳಗುಟ್ಟನ್ನು ಬಚ್ಚಿಡುವುದಕ್ಕೂ ಆಗದ್ದರಿಂದ ಮೇಲಿನಂತೆ ಸೂಚ್ಯವಾಗಿ, ಸಂದಿಗ್ಧರೀತಿಯಲ್ಲಿ 'ಮತ್ತೆ ಬೇರೆ ವೀರರು ನನಗಾಗಿ ತಮ್ಮ ಪ್ರಾಣವನ್ನೇ ಮುಡಿಪಿಟ್ಟಿದ್ದಾರೆ' ಎಂದು ಉಸುರಿದನು. ತನ್ನ ಮನೋಭಾವನೆಯನ್ನು ಸ್ವಲ್ಪ ಪರ್ಯಾಯದಿಂದ ವ್ಯಕ್ತಪಡಿಸಿದನು.

### ಬಿಲ್ಲುಸೈನ್ಯ.

ಗೆಲುವನ್ನು ಹಾರೈಸುವ ಅರಸನು ತನ್ನ ಇದ್ದಬಿದ್ದ ಪಡೆಯನ್ನೆಲ್ಲ ಒಮ್ಮೆಲೆ ರಣರಂಗಕ್ಕೆ ತಂದುನಿಲ್ಲಿಸುವುದಿಲ್ಲ; ತನ್ನ ಪಡೆಯಲ್ಲಿ ಕೆಲವು ವಿಭಾಗಗಳನ್ನು ಮಾಡಿ, ಅವುಗಳಲ್ಲಿ ಕೆಲವೊಂದು ತೀರ ಅವಶ್ಯಕವಾಗಿರುವಷ್ಟನ್ನು ಕಾಳಗದ ಚೂಣಿಗೆ ನಿಲ್ಲಿಸಿ ಉಳಿದುದನ್ನು ಹಿಂಬದಿಗೆ ಕಾದಿಡುವನು. ಚೂಣಿಯ ಪಡೆಯು ದಣಿದಾಗ ಹಿಂದಿನ ಕಾದಿಟ್ಟ ತಂಡವನ್ನು ಮುಂದೆ ಒಯ್ದು, ಮೊದಲಿನ ಪಡೆಗೆ ದಣಿವಾರಿಸಿಕೊಳ್ಳಲು ಅನುವುಮಾಡಿಕೊಡುವುದುಂಟು. ಇಂತು ಹೊಸ ಹುಮ್ಮಸದ ಹೊಸದಂಡು ರಣರಂಗದ ಮೇರೆ ಒಂದಲ್ಲಿ ಕಾಳಗದಲ್ಲಿ ಗೆಲುವು ನಿಶ್ಚಯವಾಗಿ ದೊರೆಯುವುದು. ದುರ್ಯೋಧನನು ಈ ವಿಚಾರದಿಂದಲೆ ಭೀಷ್ಮ-ದ್ರೋಣರನ್ನು ಆರಂಭದಲ್ಲಿಯೇ ಕಾಳಗಕ್ಕೆ ಅಟ್ಟಿದನು, ಮತ್ತು ಕರ್ಣನನ್ನು ಕಾದಿಟ್ಟ ಸೈನ್ಯದಮೇಲೆ ನಿಯಮಿಸಿದನು. ಏಕೆಂದರೆ ಕರ್ಣನು ಗೆದ್ದೇಗೆಲ್ಲುವನೆಂದು ದುರ್ಯೋಧನನಿಗೆ ಸಂಪೂರ್ಣ ವಿಶ್ವಾಸವಿದ್ದಿತು. ಆದರೆ ಕೊನೆಗೆ ಇವನು ಹಾರೈಸಿದುದೆಲ್ಲವೂ ಹುಸಿಯಾಯ್ತು! ಆಗ ಪರಿಸ್ಥಿತಿಯೇ ಹಾಗೆ ಒದಗಿಬಂದಿತು. ಅದಂತಿರಲಿ, ಪ್ರಸ್ತುತ ದುರ್ಯೋಧನನು ಎರಡೂ ಪಕ್ಷದ ಸೈನ್ಯದ ತುಲನೆಮಾಡುತ್ತಾನೆ. ಆತನ ಈ ಮಾತುಗಳು ಅಭ್ಯಸನೀಯವಾಗಿವೆ.

## (೪) ಉಭಯ ಸೈನ್ಯಗಳ ತುಲನೆ.

**ಅಪರ್ಯಾಪ್ತಂ ತದಸ್ಮಾಕಂ ಬಲಂ ಭೀಷ್ಮಾಭಿರಕ್ಷಿತಮ್ ॥**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಂ ಭೀಮಾಭಿರಕ್ಷಿತಮ್ ॥ ೧೦ ॥**

---

**ಅನ್ವಯ:—** ಅಸ್ಮಾಕಂ ಭೀಷ್ಮಾಭಿರಕ್ಷಿತಂ ತತ್ ಬಲಂ ಅಪರ್ಯಾಪ್ತಂ, ಏತೇಷಾಂ ತು ಭೀಮಾಭಿರಕ್ಷಿತಂ ಇದಂ ಬಲಂ ಪರ್ಯಾಪ್ತಂ ( ಅಸ್ತಿ ) ॥ ೧೦ ॥

**ಭೀಷ್ಮರು ಕಾಪಾಡುತ್ತಿರುವ ನಮ್ಮ ದಂಡು ಅಪರ್ಯಾಪ್ತವಾಗಿದೆ ; ಆದರೆ ಭೀಮನು ಕಾಪಾಡುತ್ತಿರುವ ಅವರ ದಂಡು ಪರ್ಯಾಪ್ತವಾಗಿದೆ. ॥ ೧೦ ॥**

**ಭಾವಾರ್ಥ:—** ಹೋರಾಟಕ್ಕೆ ಸಜ್ಜಾದ ಅರಸನು ಎಲ್ಲ ಸಾಧನಗಳನ್ನು ಹಾಗೂ ಕಾಲಪರಿಸ್ಥಿತಿಯನ್ನು ಸಂಪೂರ್ಣವಾಗಿ ಪರ್ಯಾಲೋಚಿಸಿ ತನ್ನ ಹಾಗೂ ಎದುರಾಳಿಗಳ ಬಲಾಬಲಗಳನ್ನು ತೂಗಿ ನೋಡುವುದು ಯೋಗ್ಯವಾಗಿದೆ. ತಮ್ಮ ಸೈನ್ಯವು ಸಾಕಷ್ಟಿದೆಯೋ ಇಲ್ಲವೋ ಎಂಬುದನ್ನು ವಿಚಾರಿಸಿ, ಕಡಿಮೆಯಿದ್ದರೆ ( ಅಪರ್ಯಾಪ್ತವಾಗಿದ್ದರೆ ), ಆ ಕೊರತೆಯನ್ನು ತುಂಬಿಕೊಳ್ಳಲು ಕೂಡಲೆ ಉಪಾಯಗಳನ್ನು ಯೋಚಿಸಬೇಕು.

---

### ಸ್ವ-ಪರ-ಸೈನ್ಯ.

(೧೦) ಈ ಶ್ಲೋಕದಲ್ಲಿ ದುರ್ಯೋಧನನು ಎರಡೂ ದಂಡುಗಳನ್ನು ಹೋಲಿಸಿ ನುಡಿದಿದ್ದಾನೆ. ಈ ತುಲನೆಯಲ್ಲಿ ತನ್ನ ದಂಡು '**ಅಪರ್ಯಾಪ್ತ**'ವೆಂದೂ ಪಾಂಡವರ ದಂಡು '**ಪರ್ಯಾಪ್ತ**'ವೆಂದೂ ಹೇಳಿದ್ದಾನೆ. ಶಬ್ದಗಳ ನಿಜವಾದ ಅರ್ಥವು ತಿಳಿಯಬೇಕಾದರೆ ಹಿಂದಿನ ಮತ್ತು ಮುಂದಿನ ಶ್ಲೋಕಗಳ ಟೀಕೆಯನ್ನು ಓದಿಕೊಳ್ಳಬೇಕು. '**ಪರ್ಯಾಪ್ತ**' ಮತ್ತು '**ಅಪರ್ಯಾಪ್ತ**' ಈ ಪದಗಳಿಗೆ ಸಂಸ್ಕೃತ ಭಾಷೆಯಲ್ಲಿ ಒಂದಕ್ಕೊಂದು ವಿಪರೀತವಾಗಿ ಎರಡು ಅರ್ಥಗಳು ಆಗಬಲ್ಲವು: **ಅಪರ್ಯಾಪ್ತ** = (೧) ಪೂರ್ಣ; ಸಾಕಷ್ಟು; ಮೇರೆಮೀರಿದ್ದು (೨) [ ಪರಿತಃ ಆಪ್ತುಂ ಶಕ್ಯಂ ] ನಾಲ್ಕೂ ದಿಕ್ಕಿನಿಂದ ಮುತ್ತಲು ಬರುವಂತಹದು, ಎಂದರೆ ಮೇರೆಯುಳ್ಳದು; ಸ್ವಲ್ಪ; ಅಪೂರ್ಣ. '**ಅಪರ್ಯಾಪ್ತ**' = ಅಪೂರ್ಣ, ಅಲ್ಪ; ಪರಿಮಿತ. (೨) [ನ ಪರಿತಃ ಆಪ್ತುಂ ಶಕ್ಯಮ್] ಸುತ್ತುಮುತ್ತಲು ಅಶಕ್ಯ; ಆದುದರಿಂದ ದೊಡ್ಡದು. ಇಂತಿವು ಎರಡೂ ಪರಸ್ಪರ ವಿರೋಧಿಯಾದ ಅರ್ಥಗಳುಂಟು. ಆದುದರಿಂದ, ಇಲ್ಲಿ ಗೀತೆಯಲ್ಲಿ ಯಾವ ಅರ್ಥವು ಸರಿಹೋಗುವುದು, ಎಂಬ ಬಗ್ಗೆ **ಟೀಕಾ**ಕಾರರಲ್ಲಿ ಹಲವು ಕಾಲದಿಂದ ವಾದವು ನಡೆದು ಬಂದಿದೆ. ಉದ್ಯೋಗ ಪರ್ವದಲ್ಲಿ (೫೪ ೬೦-೭೦) ದುರ್ಯೋಧನನು ಹೇಳಿರುವುದೇನೆಂದರೆ: 'ನನ್ನ ದಂಡು ಗುಣ, ಸಂಖ್ಯೆಗಳಲ್ಲಿ ಹಿರಿದಾಗಿದೆ. ಆದುದರಿಂದ ಗೆಲುವು ನನಗೆ ನಿಶ್ಚಿತ.' ತನ್ನ ಸೈನ್ಯವು ದೊಡ್ಡದು; ಸೇನಾಪತಿಗಳು ಶ್ರೇಷ್ಠರು; ಆದಕಾರಣ ತಾನೇ ಗೆಲ್ಲುವೆನೆಂಬ ನಂಬುಗೆಯು ದುರ್ಯೋಧನನಲ್ಲಿ, ಯುದ್ಧಕ್ಕೆ ಮೊದಲು, **ಮನೆಮಾಡಿಕೊಂಡಿತ್ತೆಂದು** ಈ ಮಾತಿನಿಂದ ವ್ಯಕ್ತವಾಗುತ್ತದೆ. ಅಲ್ಲದೆ ಯಾವ ಅರಸನೆ ಆಗಲಿ ಕಾಳಗಕ್ಕೆ ಅಣಿಯಾದ ಹೊತ್ತಿನಲ್ಲಿ ತನ್ನ ದಂಡಿಗೆ ಅಪೂರ್ಣ, ಅಲ್ಪ, ಅಪರ್ಯಾಪ್ತವೆಂದು ಹೇಳಿ ಅವರ ಹುಮ್ಮಸವನ್ನು ಕುಗ್ಗಿಸಲಾರನು. ತನ್ನ ದಂಡು ಕಡಿಮೆಯಿದ್ದರೂ ಅದು ಅಪರಿಮಿತವಾಗಿದೆ; ಗೆಲುವು ನಮಗೆ ಕಟ್ಟಿಟ್ಟದ್ದೇ' ಎಂದು ಹೇಳುವುದೆ ಸ್ವಾಭಾವಿಕವಾಗಿದೆ. ಈ ದೃಷ್ಟಿಯಿಂದ ಮೇಲಣ ಗೀತೆಯ ಶ್ಲೋಕದ ಅರ್ಥವು ಹೀಗೆ ಆಗುವುದು: 'ನಮ್ಮ ದಂಡು ಭೀಷ್ಮರ ಕಾಪಿನಲ್ಲಿದೆ. ಮತ್ತು ಅದು ಅಪರಿಮಿತವಾಗಿರುವುದರಿಂದ ಅದನ್ನು ಸುತ್ತುಮುತ್ತುವುದು ಅಶಕ್ಯವಾಗಿದೆ. ಆದರೆ ಭೀಮನ ಕಾಪಿನಲ್ಲಿರುವ ಪಾಂಡವರ ದಂಡು ಅಲ್ಪವಿರುವುದರಿಂದ ಅದನ್ನು ಮುತ್ತಿಬರುವುದು ಸಾಧ್ಯವಿದೆ.' ಆದುದರಿಂದ ಕೊನೆಗೆ ನಾವೇ ಗೆಲ್ಲುವೆವೆಂಬಲ್ಲಿ ಸಂದೇಹವಿಲ್ಲ, ಎಂದು ದುರ್ಯೋಧನನು ನೆರೆನಂಬಿದ್ದನು.

ಕೌರವರ ಸೈನ್ಯವು ಹನ್ನೊಂದು ಅಕ್ಷೌಹಿಣಿ; ಮತ್ತು ಪಾಂಡವರದು ಏಳು ಅಕ್ಷೌಹಿಣಿ. ಆದುದರಿಂದ ನಿಜವಾಗಿ ಸ್ವಲ್ಪ ಸೈನ್ಯವು ಪಾಂಡವರದು; ಕೌರವರದು ಹೆಚ್ಚು, ಎಂಬಲ್ಲಿ ಸಂದೇಹವಿಲ್ಲ. ಹನ್ನೊಂದು ಅಕ್ಷೌಹಿಣಿ ಸೈನ್ಯವು ಏಳು ಅಕ್ಷೌಹಿಣಿಯನ್ನು ಸಹಜವಾಗಿ ಮುತ್ತಬಲ್ಲುದು. ದುರ್ಯೋಧನನು ಮೊಗಲಿನಿಂದಲೂ ಹೀಗೆಯೆ ನಂಬಿಕೊಂಡಿದ್ದನು. ಆದರೆ ಹಸ್ತಿನಾಪುರದಲ್ಲಿ ಒದಗಿದ ಹಲವು ಸಂಗತಿಗಳಿಂದ ದುರ್ಯೋಧನನ ಮನಸಿನಲ್ಲಿ ಕೆಲವೊಂದು ಸಂದೇಹವು ಹುಟ್ಟಿಕೊಂಡಿತು: ಬೇರೆ ಬೇರೆ ಸಭೆಸಮ್ಮೇಲನಗಳಲ್ಲಿ ಭೀಷ್ಮ-ದ್ರೋಣಾದಿ ಪ್ರಮುಖ ವೀರರು ವ್ಯಕ್ತಪಡಿಸಿದ ಸ್ಪಷ್ಟವಾದ ಅಭಿಪ್ರಾಯಗಳಿಂದ ಅವರು ತನ್ನ ನಲುವಾಗಿ ಎಲ್ಲ ಶಕ್ತಿಯನ್ನು ಕೇಂದ್ರೀ-

ಕರಿಸಿ ಮನಸಾರೆ ಕಾದಲಾರರು ಎಂದು ಗ್ರಹಿಸಿಕೊಂಡನು. ಅದರಂತೆ ಭಗವಾನ್ ಶ್ರೀಕೃಷ್ಣನು ಶಾಂತಿದೂತನಾಗಿ ಬಂದಾಗ ಸಂಧಾನದ ಮಾತುಗಳನ್ನು ಆಡಲು ಕೂಡಿದ ಕೊನೆಯ ಒಡ್ಡೋಲಗದಲ್ಲಿ ದುರ್ಯೋಧನನು ಆತನನ್ನು ಬಂಧಿಸಲು ಮಾಡಿದ ಎತ್ತುಗಡೆಯು ರಾಜನೀತಿಗೆ ವಿರುದ್ಧವಾದ ನಿಂದ್ಯಕೃತ್ಯವೆಂದು ಅಲ್ಲಿ ಅನೇಕ ಸದಸ್ಯರು ದುರ್ಯೋಧನನನ್ನು ಹಳಿದರು; ಮತ್ತು ಭಗವಾನ್ ಶ್ರೀಕೃಷ್ಣನಲ್ಲಿ ಸಹಾನುಭೂತಿಯುಳ್ಳವರಾದರು. ಇದೆಲ್ಲವನ್ನೂ ದುರ್ಯೋಧನನು ಕಣ್ಣಾರೆ ಕಂಡಿದ್ದನು (ಮಭಾ. ಉದ್ಯೋ. ಪ. ೧೩೧). ಆದುದರಿಂದ ದುರ್ಯೋಧನನ ಮನಸು ಒಳಗೊಳಗೆ ಕೊರೆಯುತ್ತಿತ್ತು. ಸಂದೇಹಗ್ರಸ್ತವಾಗಿತ್ತು. ತನ್ನ ಸೈನ್ಯವು ದೊಡ್ಡದಿದ್ದರೂ ಅದರಲ್ಲಿ ತನ್ನ ಹೊತ್ತಿಗೆ ನಿಲುಕುವುದು ಎಷ್ಟೊ? ಎಂಬ ವಿಚಾರವು ಆತನನ್ನು ಬಾಧಿಸುತ್ತಿತ್ತು. ಮಹಾಸೇನಾನಾಯಕರಾದ ಭೀಷ್ಮ-ದ್ರೋಣರು ತನಗಾಗಿ ಮನಸಾರೆ ಕಾದದಿದ್ದರೆ ತನ್ನ ಸೈನ್ಯವು ಎಷ್ಟು ದೊಡ್ಡದಿದ್ದರೂ ಫಲವೇನು? ಆದುದರಿಂದಲೆ ಗೀತೆಯ ಮೂರನೆಯ ಶ್ಲೋಕದಲ್ಲಿ ಪಾಂಡವರ ಸೈನ್ಯವು 'ಮಹತೀಚಮೂ' ಎಂದು ಹೇಳಲ್ಪಟ್ಟಿದೆ. ಕೌರವರ ಸೈನ್ಯಕ್ಕೆ ಆ ಬಗೆಯ ವಿಶೇಷಣವನ್ನು ಎಲ್ಲಿಯೂ ಉಪಯೋಗಿಸಿಲ್ಲ

ಗೀತೆಯ ಮೊದಲನೆಯ ಅಧ್ಯಾಯದೊಳಗಿನ ೩ ರಿಂದ ೧೧ ವರೆಗಿನ ಶ್ಲೋಕಗಳು, ದುರ್ಯೋಧನು ದ್ರೋಣರನ್ನು ಕುರಿತು ಮಾಡಿದ ಭಾಷಣವೆ ಆಗಿದೆ. ಅರಸನು ತಾನೆ ಸೇನಾಪತಿಯ ಹತ್ತಿರ ಬಂದು, ಯುದ್ಧಾರಂಭದಲ್ಲಿ ತನ್ನ ಹಾಗೂ ತನ್ನ ಹಗೆಗಳ ದಂಡಿನ ಬಗ್ಗೆ ಕೆಲವೊಂದು ಸಂಗತಿಗಳನ್ನು ಬೆಸಗೊಳ್ಳುತ್ತಾನೆ. ಆ ಮಾತಿನಲ್ಲಿ ಅಪಮಾನಕಾರಕ ನುಡಿಗಳನ್ನೂ ಸೂಚ್ಯವಾಗಿ ಆಡಿಬಿಡುತ್ತಾನೆ. ದ್ರೋಣಾಚಾರ್ಯರು ಆ ಪದರುನುಡಿಗಳನ್ನು ಕೇಳಿಯೂ ಕೇಳದವರಂತೆ ಮರುಮಾತಾಡದೆ ಸುಮ್ಮನಿರುತ್ತಾರೆ! ಇದನ್ನು ನೋಡಿ ಪಿತಾಮಹ ಭೀಷ್ಮರು ಸಿಂಹಗರ್ಜನೆಯನ್ನು ಮಾಡಿ, ಶಂಖವನ್ನು ಊದಿದರು (೧೨ ರಿಂದ ಮುಂದೆ). ಆದರೆ ಭೀಷ್ಮಪಿತಾಮಹರೂ ದುರ್ಯೋಧನನಿಗೆ ಅನುಕೂಲ ಅಥವಾ ಪ್ರತಿಕೂಲವಾಗಿ ಒಂದು ಮಾತನ್ನೂ ಆಡಲಿಲ್ಲ. ಸಮ್ರಾಟನಾದ ರಾಜನು ಬಂದು ತಮಗೆ ಹೀಗೆ ಅಪಮಾನಮಾಡಿರಲು, ಆ ಮಹಾಸೇನಾಪತಿಗಳು ಮೂಕರಂತೆ ಸುಮ್ಮಗಿದ್ದು ಅದನ್ನು ಕಡೆಗಣಿಸಿದರು. ಹಿರಿಯ ಸೇನಾಪತಿಗಳ ಈ ರೀತಿಯನ್ನು ನೋಡಿ ದುರ್ಯೋಧನನ ನಿರಾಶೆಯು ಇನ್ನೂ ಹೆಚ್ಚಿರಬೇಕು. ಆ ನಿರಾಶೆಯು ದುರ್ಯೋಧನನ ಈ ಉದ್ಗಾರಗಳಲ್ಲಿ ವ್ಯಕ್ತವಾಗಿರಬೇಕು: 'ನಮ್ಮ ಸೈನ್ಯವು ಪಾಂಡವರ ದಂಡಿನ ಒಂದೂವರೆಪಟ್ಟು ಇದ್ದರೂ ಭೀಷ್ಮ (ಮತ್ತು ದ್ರೋಣ) ರ ನಾಯಕತ್ವದಲ್ಲಿರುವುದರಿಂದ ಅದು ಅಲ್ಪವಿದ್ದಂತೆಯೆ ಸರಿ. ಮತ್ತು ಪಾಂಡವರ ದಂಡು (ನಿಜವಾಗಿ ಸ್ವಲ್ಪವಿದ್ದರೂ) ಬಲವಂತನಾದ ಭೀಮನ ನೇತೃತ್ವದಲ್ಲಿರುವುದರಿಂದ ಅದು ಹಿರಿದು (ಅಗಿರುವಂತೆ) ಇದೆ.

ದಂಡು ದೊಡ್ಡದಿರಲಿ ಅಥವಾ ಸಣ್ಣದಿರಲಿ, ಅದರ ಸೋಲುಗೆಲುವುಗಳು ಮುಖ್ಯವಾಗಿ ಸೇನಾಪತಿಯನ್ನು ಅವಲಂಬಿಸಿವೆ. ಸೇನಾಪತಿಯು ಸ್ಫೂರ್ತಿ ಉತ್ಸಾಹಗಳಿಲ್ಲದೆ ಕೇವಲ ಪರಿಸ್ಥಿತಿಯ ಒತ್ತಾಯದಿಂದ ಯುದ್ಧಕ್ಕೆ ನಿಂತಿದ್ದರೆ ಆ ಸೈನ್ಯಕ್ಕೆ ಸೋಲು ತಪ್ಪಿದ್ದಲ್ಲ. ಕೌರವರ ಪಾಳೆಯದಲ್ಲಿ ಇದೇ ಸ್ಥಿತಿಯಿತ್ತು. ದುರ್ಯೋಧನನ ಅನ್ನದ ಋಣಕ್ಕಾಗಿ ಭೀಷ್ಮ-ದ್ರೋಣರಂತಹ ಧರ್ಮವಂತರು ತೀರ ಜೀವಿಸುತ್ತಿದ್ದರು. ಅವರು ಅಂತರಂಗದಲ್ಲಿ ಪಾಂಡವರ ಹಿತವನ್ನು ಬಯಸುತ್ತಿದ್ದರು ಮತ್ತು ಪಾಶುಪತ ಶಕ್ತಿಯನ್ನು ಉಪಯೋಗಿಸಿ, ಯುದ್ಧ ಮಾಡಿ ಪಾಂಡವರನ್ನು ನಿರ್ಮೂಲನಮಾಡುವುದಕ್ಕೆ ಅವರು ಸ್ವಲ್ಪವೂ ಸಿದ್ಧರಿದ್ದಿಲ್ಲ. ಕರ್ಣನಂತೆ ಭೀಷ್ಮ ದ್ರೋಣರೂ ಮನಸಪೂರ್ವಕವಾಗಿ ಪಾಂಡವರ ಹಗೆಗಳಾಗಿದ್ದರೆ ದುರ್ಯೋಧನನು ಜಯಶಾಲಿಯಾಗಬಹುದಾಗಿತ್ತು. ಭೀಷ್ಮ-ದ್ರೋಣರ ಮನಸಿನ ಒಲವನ್ನು ದುರ್ಯೋಧನನು ಚೆನ್ನಾಗಿ ಅರಿತಿದ್ದನು. ಆದರೆ ಭೀಷ್ಮ-ದ್ರೋಣರನ್ನು ಈ ಹೊತ್ತಿನಲ್ಲಿ ರಣರಂಗದಿಂದ ಅಥವಾ ಸೇನಾಪತಿಯ ಪದದಿಂದ ತಳ್ಳಿಬಿಡುವುದು ಯೋಗ್ಯವಾಗಲಾರದೆಂದು ದುರ್ಯೋಧನನು ಅರಿತಿದ್ದನು. ಆತನ ಮನಸ್ಸಿನೊಳಗಿನ ಈ ಅಸಮಾಧಾನವು ೧೦ ನೆಯ ಶ್ಲೋಕದಲ್ಲಿ ಸ್ಪಷ್ಟವಾಗಿ ವ್ಯಕ್ತವಾಗುತ್ತಿದೆ, ದ್ರೋಣರಿಗೆ ತನ್ನ ಕಳವಳವನ್ನು ವ್ಯಕ್ತಪಡಿಸುವದಕ್ಕಾಗಿಯೆ ಆತನು ಹೇಳಿದ್ದೇನೆಂದರೆ: 'ಭೀಷ್ಮರ ಅಧಿಪತ್ಯದಲ್ಲಿ ಇರುವ ನಮ್ಮ ದಂಡು ಅಪೂರ್ಣ (ಅ-ಪರ್ಯಾಪ್ತ) ವಾಗಿದೆ. ಮತ್ತು ಪಾಂಡವರ ದಂಡು ಭೀಮನ ಅಧಿಪತ್ಯದಲ್ಲಿರುವುದರಿಂದ ಪೂರ್ಣ (ಪರ್ಯಾಪ್ತ) ವಾಗಿದೆ.'

ಯುದ್ಧಕಾಲದಲ್ಲಿ ಸೇನಾನಾಯಕರನ್ನು ಬಿಚ್ಚುಮಾತಿನಿಂದ ಹೀಯಾಳಿಸಿ ಅಪಮಾನಗೊಳಿಸುವುದು ಜಾಣತನವಲ್ಲವೆಂಬ ಅರಿವು ದುರ್ಯೋಧನನಿಗೆ ಇತ್ತು. ಆದುದರಿಂದಲೆ ಆತನು ತನ್ನ ಒಡಲುರಿಯನ್ನು ಹೀಗೆ ಸಂದಿಗ್ಧ ಶಬ್ದಗಳಿಂದ ಹೊರಪಡಿಸಿರುವನು. ಆ ಮಾತಿನಿಂದ ದ್ರೋಣರಿಗೆ ಸಿಟ್ಟು ಬಂದರೆ, ತನ್ನ ನುಡಿಗಳಿಗೆ ಇರುವ ಇನ್ನೊಂದು ಸರಳಾರ್ಥವನ್ನು ಮುಂದೊಡ್ಡಿ

## (೫) ದುರ್ಯೋಧನನ ಆಜ್ಞೆ.

**ಅಯನೇಷು ಚ ಸರ್ವೇಷು ಯಥಾಭಾಗಮವಸ್ಥಿತಾಃ |**
**ಭೀಷ್ಮಮೇವಾಭಿರಕ್ಷಂತು ಭವಂತಃ ಸರ್ವ ಏವ ಹಿ ||೧೧||**

**ಅನ್ವಯ:—** ಭವಂತಃ ಸರ್ವೇ ಏವ ಹಿ ಸರ್ವೇಷು ಚ ಅಯನೇಷು ಯಥಾಭಾಗಂ ಅವಸ್ಥಿತಾಃ ಭೀಷ್ಮಂ ಏವ ಅಭಿರಕ್ಷಂತು ||೧೧||

ನಾರಾಗುವುದಕ್ಕೆ ಅವಕಾಶವನ್ನಿಟ್ಟುಕೊಂಡಿದ್ದನು. ಇಂತಹ ಇರುಕಿನಲ್ಲಿ ಸಿಕ್ಕಿಕೊಂಡಾಗ ಮಾನವನ ಹೃದಯದೊಳಗಿನ ಸಿಟ್ಟು ಇದೇ ಬಗೆಯಾಗಿ ದ್ವಂದ್ವಾರ್ಥಯುಕ್ತ ಶಬ್ದಗಳಿಂದ ಹೊರಡುವುದುಂಟು. ಆದುದರಿಂದ ದುರ್ಯೋಧನನ ಬಾಯಿಂದಲೂ ಇದೇ ಬಗೆಯಾದ ಮಾತುಗಳು ಹೊರಟಿದ್ದರೆ ಸೋಜಿಗವಲ್ಲ. ಭೀಷ್ಮ ಪರ್ವದಲ್ಲಿ ಇದೇ ತೆರನಾದ ಶ್ಲೋಕವುಂಟು (೫೧೦೪-೬). ಅಲ್ಲಿಯೂ ಇದೇ ಅರ್ಥವುಂಟೆಂದು ಹೇಳಲು ಅಡ್ಡಿಯಿಲ್ಲ.

ಇಲ್ಲಿ ಹತ್ತನೆಯ ಶ್ಲೋಕದಲ್ಲಿ ಭೀಷ್ಮರು ಕೌರವರ ಸೇನಾಪತಿಯೆಂದು ಹೇಳಿದೆ. ಮತ್ತು ಪಾಂಡವರ ಸೇನಾಪತಿ ಭೀಮನೆಂದಿದೆ. ಆದರೆ ನಿಜವಾಗಿ ಪಾಂಡವರ ಸೇನಾಪತಿಯು ಧೃಷ್ಟದ್ಯುಮ್ನನು. ಆದರೂ ಮೊದಲನೆಯ ದಿನ ಒಡ್ಡಿದ ವಜ್ರವ್ಯೂಹವನ್ನು ಕಾಪಾಡಲು ಅಲ್ಲಿ ಭೀಮನಂತಹ ಬಲಶಾಲಿಯೇ ಅವಶ್ಯಕನಾಗಿದ್ದನು. ಆದರಿಂದ ಇಲ್ಲಿ 'ಪಾಂಡವರ ಸೈನ್ಯವು ಭೀಮನ ಕಾಪಿನಲ್ಲಿದೆ' ಎಂದು ದುರ್ಯೋಧನನು ನುಡಿದಿದ್ದಾನೆ. ಏಕೆಂದರೆ ಪಾಂಡವರ ವ್ಯೂಹರಚನೆಯನ್ನು ನಿರೀಕ್ಷಿಸುತ್ತಲಿದ್ದ ದುರ್ಯೋಧನನಿಗೆ ಅದು ಹಾಗೆ ಕಾಣುತ್ತಿತ್ತು. ಆದಕಾರಣ ಭೀಮನೇ ಪಾಂಡವರ ಸೇನಾಪತಿಯೆಂದು ದುರ್ಯೋಧನನು ಗ್ರಹಿಸಿದ್ದನು. ದುರ್ಯೋಧನನು ಪಾಂಡವರ ಸೇನೆಗೆ 'ಭೀಮ-ನೇತ್ರ' ಎಂದರೆ ಭೀಮನೆ ನೇತಾರನೆಂದೂ, ಕೌರವರ ಸೇನೆಗೆ 'ಭೀಷ್ಮನೇತ್ರ' ಎಂದರೆ ಭೀಷ್ಮರೆ ಮುಂದಾಳುಗಳೆಂದೂ ಇನ್ನೊಂದೆಡೆಯಲ್ಲಿ ಹೇಳಿದ್ದಾನೆ (ಮಭಾ, ಭೀಷ್ಮಪ. ೫೧-೧). ಆದುದರಿಂದ ಗೀತೆಯು ಈ ಶ್ಲೋಕದಲ್ಲ ಭೀಮನು ಸೇನಾಪತಿಯೆಂದು ವರ್ಣಿಸಿದುದು ಪೂರ್ವಾಪರ ಸಂದರ್ಭಕ್ಕೆ ಸುಸಂಬದ್ಧವಾಗಿಯೆ ಇದೆ.

### ಪಕ್ಷವನ್ನು ಬಿಡಬೇಕೆ?

ಭೀಷ್ಮ ಮತ್ತು ದ್ರೋಣರಿಗೆ ಕೌರವರ ಕುಟಿಲ ರಾಜನೀತಿಯು ಒಪ್ಪಿಗೆಯಾಗದಿದ್ದಲ್ಲಿ ಅವರು ಕೌರವರ ಪಕ್ಷವನ್ನು ಬಿಟ್ಟು ಪಾಂಡವರ ಸಂಗಡದಲ್ಲಿ ಸೇರಿಕೊಳ್ಳಬೇಕಿತ್ತು, ಎಂದು ಕೆಲವರು ಹೇಳುತ್ತಾರೆ. ಆದರೆ ಹೀಗೆ ಇಕ್ಕಟ್ಟಿನ ಕಾಲದಲ್ಲಿ ಒಮ್ಮೆಲೆ ಪಕ್ಷವನ್ನು ಬದಲಿಸುವುದು ಹಿರಿಯರೆನಿಸಿದವರಿಗೆ ಭೂಷಣವಲ್ಲ. ಈ ಹೊತ್ತಿನಲ್ಲಿ ಭೀಷ್ಮದ್ರೋಣರು ಪಕ್ಷವನ್ನು ಬದಲಿಸಿದ್ದರೆ ಅವರು 'ಜೀವಗಳ್ಳ ಮುದುಕರು' ಎಂಬ ಅಪವಾದಕ್ಕೆ ಗುರಿಯಾಗುತ್ತಿದ್ದರು. **ಕಾಳಗ ಅಥವಾ ಸಾವಿಗೆ ಹೆದರಿ ತಮ್ಮ ಮೊದಲಿನ ಪಕ್ಷವನ್ನು ಬದಲಿಸಬೇಕೆಂಬ ಪುಕ್ಕಲತನದ ಹೇಡಿ ವಿಚಾರವು, ಶ್ರೇಷ್ಠವಾದ ಚಾರಿತ್ರ್ಯ, ಶೀಲಗಳುಳ್ಳ ಮಹನೀಯರಿಗೆ ಕನಸಿನಲ್ಲಿಯೂ ಸೋಂಕಲಾರದು.**

ಅಲ್ಲದೆ 'ಸತ್ಯವತಿಯ ಮಕ್ಕಳ ವಂಶವನ್ನು ತಾನು ಕಾಪಾಡುವೆನು' ಎಂದು ಭೀಷ್ಮರು ಪಣತೊಟ್ಟಿದ್ದರು. ಪ್ರತಿಜ್ಞಾಭಂಗವು ಭೀಷ್ಮರಿಂದ ಎಂದೂ ಸಂಭವಿಸಲಾರದು. ಯಾರ ಪಕ್ಷದಲ್ಲಿದ್ದು ಹಲವು ಕಾಲ ಕೆಲಸ ಮಾಡಿದ್ದಾಯ್ತೊ ಆ ಪಕ್ಷದಲ್ಲಿಯೆ ಕೊನೆಯ ವರೆಗೂ ನಿಲ್ಲುವುದು ಕರ್ತವ್ಯವಾಗಿದೆ. ಜೀವಕ್ಕೆ ಗಂಡಾಂತರವುಂಟಾದೊಡನೆಯೆ ಪಕ್ಷ ಬದಲಿಸುವುದು ಹೇಡಿತನವು. ಭೀಷ್ಮ-ದ್ರೋಣರಿಗೆ ತಮ್ಮ ಪಕ್ಷವು ಸೋಲುವುದೆಂದು ಗೊತ್ತಿತ್ತು. ತಮಗೆ ಸಾವು ಒದಗುವುದು ನಿಶ್ಚಿತವೆಂದೂ ಅವರು ಅರಿತಿದ್ದರು. ಇದೆಲ್ಲವನ್ನೂ ಬಲ್ಲವರಾಗಿದ್ದರೂ ಅವರು ರಣಭೂಮಿಯಿಂದ ಕದಲಲಿಲ್ಲ ಕಾದುತ್ತ ಕಾದುತ್ತಲೆ ಸಾವನ್ನು ಬರಮಾಡಿಕೊಳ್ಳಲು ಹಿಂಜರಿಯಲಿಲ್ಲ. ಆದರ್ಶರಾದ ಮಹಾಪುರುಷರಿಗೆ ಯೋಗ್ಯವಾದ ವರ್ತನವು ಇದೇ ಆಗಿದೆ ಭೀಷ್ಮ-ದ್ರೋಣರು ಪಾಂಡವರ ಪಕ್ಷಕ್ಕೆ ಬಂದಿದ್ದರೆ ಚೆನ್ನಾಗುತ್ತಿತ್ತು, ಎಂದು ಭಾವಿಸುವುದರಲ್ಲಿ ಹುರುಳಿಲ್ಲ. ಹಾಗೆ ಮಾಡಿದ್ದರೆ ಲೋಕಕ್ಕೆ ಒಂದು ಹೀನ ಮಾದರಿಯನ್ನು ಹಾಕಿಕೊಟ್ಟಂತೆ ಆಗುತ್ತಿತ್ತು. ಹಿರಿಯರ ನಡೆವಳಿಯೆ ಕಿರಿಯರಿಗೆ ಮೇಲ್ಪಂಕ್ತಿ. ಆದುದರಿಂದ ಆ ರೀತಿಯಿಂದ ಭೀಷ್ಮ-ದ್ರೋಣರು ವರ್ತಿಸಿದ್ದು ತೀರ ಯುಕ್ತವಾಗಿದೆ.

ದುರ್ಯೋಧನನು ದ್ರೋಣರೊಡನೆ ಮಾತನಾಡಿದ ಬಳಿಕ ಆತನು ತನ್ನ ಸೈನಿಕರಿಗೆ ಕೊಟ್ಟ ಅಪ್ಪಣೆಯನ್ನು ನೋಡಿರಿ:

(೧೧) ೩ ರಿಂದ ೧೦ ನೆಯ ಶ್ಲೋಕದ ವರೆಗೆ ಅರಸನಾದ ದುರ್ಯೋಧನನು ದ್ರೋಣರನ್ನು ಕುರಿತು ಆಡಿದ

**( ಇನ್ನು ) ನೀವೆಲ್ಲರೂ ಸೇರಿ ಎಲ್ಲ ಅಯನಗಳಲ್ಲಿ ಎಂದರೆ ವ್ಯೂಹದ ಬಾಗಿಲಿನ ಆಯಕಟ್ಟಿನ ನೆಲೆಗಳಲ್ಲಿ ನಿಮ್ಮ ಎಡೆಗಳಲ್ಲಿ ನಿಂತು ಎಲ್ಲ ಬದಿಗಳಿಂದಲೂ ಭೀಷ್ಮರನ್ನೇ ಕಾಪಾಡಬೇಕು.** || ೧೧ ||

**ಭಾವಾರ್ಥ.—** ಕಾಳಗದಲ್ಲಿ ಪ್ರತಿಯೊಬ್ಬ ಸೈನಿಕನೂ ತನಗೆ ನಿಯಮಿಸಿದ ಎಡೆಯಲ್ಲಿಯೆ ನಿಂತು ಕಾದತಕ್ಕದ್ದು; ಅಂಜಿ ಹಿಂಜರಿಯಲಾಗದು. ಸೇನಾಪತಿಯ ಅಪ್ಪಣೆಗಳನ್ನು ಆಚರಣೆಯಲ್ಲಿ ತರಲು ತತ್ಪರನಾಗಿರಬೇಕು. ಮತ್ತು ಎಲ್ಲರೂ ಸಂಘಟಿತ ಪ್ರಯತ್ನಮಾಡಿ ಸೇನಾಪತಿ ಹಾಗೂ ಸೇನಾನಾಯಕರ ರಕ್ಷಣೆಯನ್ನು ಮಾಡಬೇಕು. ತಮ್ಮ ಪಕ್ಷಕ್ಕೆ ಗೆಲುವು ದೊರೆಯಬೇಕೆಂದು ತಮ್ಮ ಶಕ್ತಿಸರ್ವಸ್ವವನ್ನೆಲ್ಲ ಸೂರೆಗೊಳ್ಳಬೇಕು. || ೧೧ ||

ಮಾತುಗಳಿವೆ. ದುರ್ಯೋಧನನು ಛಾಯೆಗಾಣಿಸಿ ನುಡಿದ ಕಟಕಿಯನ್ನು ಕೇಳಿದ ಮೇಲೂ ದ್ರೋಣರು ಬಿಟ್ಟಿನ್ನದೆ ಸುಮ್ಮನಿದ್ದರು! ದುರ್ಯೋಧನನು ಇದನ್ನು ಕಂಡು ವಿಸ್ಮಿತನಾಗಿ ನಿಂತುಕೊಂಡನು. ದ್ರೋಣರ ಉತ್ತರವಿಲ್ಲ. ಪಾಂಡವರನ್ನು ನಿರ್ಮೂಲ ಮಾಡುವುದಕ್ಕಾಗಿ ಆರಂಭಿಸಿದ ಈ ಯುದ್ಧಕ್ಕೆ ದ್ರೋಣಾಚಾರ್ಯರು ಸಂಪೂರ್ಣ ವಿರೋಧಿಗಳಾಗಿದ್ದರು. ಆದುದರಿಂದ, ಅವರಿಂದ ತನಗೆ ಅನುಕೂಲವಾದ ಉತ್ತರವು ದೊರೆತೀತೆಂದು ಹಾರೈಸುವುದು ನಿರರ್ಥಕವೆಂದು ದುರ್ಯೋಧನನಿಗೆ ಗೊತ್ತಾಗಲು ತಡಹಿಡಿದಿರಲಿಕ್ಕಿಲ್ಲ. ಇನ್ನು ಹೆಚ್ಚು ಕೆಣಕಿಸಿದರೆ ದ್ರೋಣರಿಗೆ ಅಸಹ್ಯವಾಗಿ, ಸುಮ್ಮನೆ ಅನರ್ಥಕ್ಕೆ ಎಡೆಗೊಟ್ಟಂತೆ ಆದೀತೆಂದು ಎಣಿಸಿ, ದುರ್ಯೋಧನನು ಆ ಮಾತುಗಳನ್ನು ಅಷ್ಟಕ್ಕೆ ನಿಲ್ಲಿಸಿದನು.

ಈ ಶ್ಲೋಕದಲ್ಲಿ ದುರ್ಯೋಧನನು ಹೇಳುವುದೇನೆಂದರೆ 'ಎಲ್ಲ ದಂಡಿನವರೂ ಭೀಷ್ಮರನ್ನು ಸಂರಕ್ಷಿಸಬೇಕು.' ನಿಜವಾಗಿ ಭೀಷ್ಮರು ಸ್ವತಃ ಮಹಾಪರಾಕ್ರಮಶಾಲಿಗಳು, ಅದ್ವಿತೀಯ ಶೂರರು. ಅವರಿಗೆ ಪರರ ಸಂರಕ್ಷಣೆಯ ಅವಶ್ಯಕತೆಯೇನು? 'ಶಿಖಂಡಿಯ ಮೇಲೆ ತಾನು ಶಸ್ತ್ರವನ್ನು ಎತ್ತಲಿಕ್ಕಿಲ್ಲ' ಎಂದು ಅವರು ಪಣತೊಟ್ಟಿದ್ದರು. ಶಿಖಂಡಿಯು ಮಹಾರಥನಾಗಿದ್ದರೂ, ಪುರುಷವೀರನಾಗಿದ್ದಿಲ್ಲ. ಆದುದರಿಂದ ಆತನೊಡನೆ ಕಾದುವುದಕ್ಕೆ ಭೀಷ್ಮರು ಸಿದ್ಧರಿದ್ದಿಲ್ಲ. ಪಾಂಡವರು ಶಿಖಂಡಿಯನ್ನು ಎದುರಿಗೆ ತಂದು ನಿಲ್ಲಿಸಿದರೆ ಭೀಷ್ಮರು ಶಸ್ತ್ರಗಳನ್ನು ಕೆಳಗಿಡುವುದು ನಿಶ್ಚಿತ; ಹಾಗಾದಲ್ಲಿ ವ್ಯರ್ಥವಾಗಿ ಭೀಷ್ಮರನ್ನು ಕಳಕೊಳ್ಳುವ ಪ್ರಸಂಗವು ತನಗೆ ಬಂದೀತೆಂದು ಮುಂಗಂಡು, ಎಲ್ಲ ದಂಡಾಳುಗಳಿಗೂ ದಳವಾಯಿಗಳಿಗೂ ದುರ್ಯೋಧನನು ಆಜ್ಞಾಪಿಸಿದ್ದೇನೆಂದರೆ: ಎಲೈ ಸೈನಿಕರೆ, ನಿಮ್ಮ ನಿಮ್ಮ ಕೈಕೆಳಗಿನ ಪಡೆಗಳನ್ನು ಸಜ್ಜುಗೊಳಿಸಿರಿ. ಪ್ರತಿಯೊಬ್ಬ ಸೇನಾನಾಯಕನೂ ತನ್ನ ಪಡೆಯ ಮುಂಗಡೆಯಲ್ಲಿರಲಿ. ಉಳಿದ ಎಲ್ಲ ವೀರರೂ ಜಾಗ್ರತೆಯಿಂದ ತಮ್ಮ ತಮ್ಮ ಎಡೆಗಳಲ್ಲಿ ನಿಲ್ಲಲಿ. ಯಾರೂ ತಮ್ಮ ಸ್ಥಳಗಳಿಂದ ಹಿಂಜರಿಯಕೂಡದು; ಸ್ಥಿರವಾಗಿ ನಿಂತು ಹೋರಾಡಬೇಕು. ಮತ್ತು ಎಲ್ಲರೂ ಸೇರಿ ಭೀಷ್ಮರನ್ನು ಕಾಪಾಡಬೇಕು. ಏಕೆಂದರೆ ಈ ಕಾಳಗದ ಸಂಪೂರ್ಣ ಹೊಣೆಯು ಭೀಷ್ಮ ಪಿತಾಮಹರ ಮೇಲಿದೆ.

ಭೀಷ್ಮ ( ಮತ್ತು ದ್ರೋಣ ) ರ ಮನಸ್ಥಿತಿಯು ದುರ್ಯೋಧನನಿಗೆ ಸಂಪೂರ್ಣವಾಗಿ ಗೊತ್ತಿತ್ತು. ಆದರೂ ಆತನಿಗೆ ಇವರನ್ನು ಸಂಪೂರ್ಣವಾಗಿ ಬಿಟ್ಟು ಬಿಡುವುದೂ ಸಾಧ್ಯವಿದ್ದಿಲ್ಲ. ಸಾಮ್ರಾಜ್ಯ ಮದದಿಂದ ಕೊಬ್ಬಿ, ಅನ್ಯಾಯ ಅನೀತಿಗಳಿಗೆ ಹೇಸದೆ ಪ್ರಜೆಗಳ ಸುಲಿಗೆಯನ್ನು ನಡೆಸಿದ ರಾಜರಿಗೆ ಈ ಬಗೆಯ ಪ್ರಸಂಗಗಳು ಕೊನೆಗೆ ಬಂದೇ ಬರುತ್ತವೆ. ಸಾಮ್ರಾಜ್ಯಕಾಮಿಯ ನಾಶಕ್ಕೆ ಅವರ ಪಕ್ಷದೊಳಗಿನ ಇಂತಹ ಅಸಂತುಷ್ಟ ವೀರರೆ ಹೆಚ್ಚು ಕಾರಣರಾಗುತ್ತಾರೆ.

ದ್ರೋಣರು ಮೌನವ್ರತನಾಗಿ ಸುಮ್ಮನಿದ್ದುದನ್ನು ಕಂಡು, ದುರ್ಯೋಧನನು ಪಿತಾಮಹ ಭೀಷ್ಮರನ್ನು ಅವಲೋಕಿಸಿದನು. ಭೀಷ್ಮಾಚಾರ್ಯರೂ ಯಾವ ಮಾತನ್ನಾಡಲಿಲ್ಲ. ಆದರೆ ಸಿಂಹದಂತೆ ಗಜರಿ ಗರ್ಜಿಸಿ, ತಮ್ಮ ಶಂಖವನ್ನು ಊದಿದರು. ಆ ವಿಚಾರವು ಮುಂದಿನ ಶ್ಲೋಕದಲ್ಲಿದೆ:

(೧೨) ಸಂಜಯನು ನುಡಿದನು. 'ಭೀಷ್ಮ ಪಿತಾಮಹರು ಗಜರಿ ಗರ್ಜಿಸಿ ಶಂಖವನ್ನೂದಿದರು; ಅರ್ಜುನನಿಗೆ ಆನಂದವನ್ನುಂಟು ಮಾಡಿದರು'. ಆದರೆ ಭೀಷ್ಮರು ಕೂಡ ಈ ಯುದ್ಧವಿರೋಧಿಗಳಾಗಿದ್ದರು. ದುರ್ಯೋಧನನಿಗೆ ಆನಂದವನ್ನುಂಟು ಮಾಡುವ ಇಚ್ಛೆಯಿದ್ದರೆ ಭೀಷ್ಮರು ಆತನೊಡನೆ ಮಾತಾಡಬಹುದಾಗಿತ್ತು. ಏನನ್ನೂ ನುಡಿಯದೆ ಬರಿ ಸಿಂಹಗರ್ಜನೆ ಮಾಡಿ ಶಂಖವನ್ನು ಊದುವರು! ಭೀಷ್ಮರು ಇದಕ್ಕೂ ಮೊದಲು ಹಲವು ಪ್ರಸಂಗಗಳಲ್ಲಿ ಆಡಿದ ಮಾತುಗಳಿಂದ ಅವರಿಗೆ ದುರ್ಯೋಧನನ ಕುಟಿಲ ರಾಜನೀತಿಯು ಎಳ್ಳಷ್ಟೂ ಸಮ್ಮತವಿದ್ದಿಲ್ಲವೆಂದು ಸ್ಪಷ್ಟವಾಗಿದೆ. ದ್ರೋಣಾಚಾರ್ಯರು

## (೬) ಶಂಖ-ನಾದ.

**ಸಂಜಯ ಉವಾಚ— ತಸ್ಯ ಸಂಜನಯನ್ ಹರ್ಷಂ ಕುರುವೃದ್ಧಃ ಪಿತಾಮಹಃ ।**
**ಸಿಂಹನಾದಂ ವಿನದ್ಯೋಚ್ಚೈಃ ಶಂಖಂ ದಧ್ಮೌ ಪ್ರತಾಪವಾನ್ ॥ ೧೨ ॥**
**ತತಃ ಶಂಖಾಶ್ಚ ಭೇರ್ಯಶ್ಚ ಪಣವಾನಕಗೋಮುಖಾಃ ।**
**ಸಹಸೈವಾಭ್ಯಹನ್ಯಂತ ಸ ಶಬ್ದಸ್ತುಮುಲೋಽಭವತ್ ॥ ೧೩ ॥**
**ತತಃ ಶ್ವೇತೈರ್ಹಯೈರ್ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ।**
**ಮಾಧವಃ ಪಾಂಡವಶ್ಚೈವ ದಿವ್ಯೌ ಶಂಖೌ ಪ್ರದಧ್ಮತುಃ ॥ ೧೪ ॥**

---

**ಅನ್ವಯ:—** ತಸ್ಯ ಹರ್ಷಂ ಸಂಜನಯನ್, ಪ್ರತಾಪವಾನ್ ಕುರುವೃದ್ಧಃ ಪಿತಾಮಹಃ, ಉಚ್ಚೈಃ ಸಿಂಹನಾದಂ ವಿನದ್ಯ, ಶಂಖಂ ದಧ್ಮೌ ॥ ೧೨ ॥ ತತಃ ಶಂಖಾಃ ಚ ಭೇರ್ಯಃ ಚ ಪಣವಾನಕಗೋಮುಖಾಃ ಸಹಸಾ ಏವ ಅಭ್ಯಹನ್ಯಂತ । ಸಃ ಶಬ್ದಃ ತುಮುಲಃ ಅಭವತ್ ॥ ೧೩ ॥ ತತಃ ಶ್ವೇತೈಃ ಹಯೈಃ ಯುಕ್ತೇ ಮಹತಿ ಸ್ಯಂದನೇ ಸ್ಥಿತೌ ಮಾಧವಃ ಪಾಂಡವಃ ಚ ದಿವ್ಯೌ ಶಂಖೌ ಪ್ರದಧ್ಮತುಃ ॥ ೧೪ ॥

**ಸಂಜಯನು ನುಡಿದನು:— ಆತನು (ದುರ್ಯೋಧನನು) ಹಿಗ್ಗಲೆಂದು ಕೌರವರಲ್ಲಿ ಹಿರಿಯರೂ ಪ್ರತಾಪಶಾಲಿಗಳೂ ಆದ ಪಿತಾಮಹ (ಭೀಷ್ಮ)ರು ಸಿಂಹದಂತೆ ಗಜರಿ ಗರ್ಜಿಸಿ, ಶಂಖವನ್ನು ಊದಿದರು. ॥೧೨॥ ಬಳಿಕ ಹಲವು ಶಂಖಗಳು, ಭೇರಿಗಳು, ಢಕ್ಕೆಗಳು, ಮದ್ದಳೆಗಳು, ಗೋಮುಖಗಳು ಒಮ್ಮೆಲೆ ಬಾಜಿಸಿದುವು. ಆ ಮೊರೆತವು ಬಹಳ ದೊಡ್ಡದಾಗಿತ್ತು. ॥ ೧೩ ॥ ತರುವಾಯ ಬೆಳ್ಗುದುರೆಗಳ ಹೆದ್ದೇರಿನಲ್ಲಿ ಕುಳಿತ ಶ್ರೀಕೃಷ್ಣಾರ್ಜುನರೀರ್ವರು ತಮ್ಮ ತಮ್ಮ ಶಂಖಗಳನ್ನು ಬಾಜಿಸಿದರು. ॥ ೧೪ ॥**

---

ಮತ್ತು ಭೀಷ್ಮರು ದುರ್ಯೋಧನನ ರಾಜ್ಯದೊಳಗಿನ ಮಹಾ ಸೇನಾಪತಿಗಳಾಗಿದ್ದರು. ಆದುದರಿಂದ ಅರಸನ ಅಪ್ಪಣೆಯಾಗುತ್ತಲೆ ಅವರು ತಮ್ಮ ಅಧಿಕಾರ ಸೂತ್ರಗಳನ್ನು ಸ್ವೀಕರಿಸಿ ಯುದ್ಧಕ್ಕೆ ಅಣಿಯಾದರು. ವರಿಷ್ಠರು ಕೊಟ್ಟ ಅಪ್ಪಣೆಯನ್ನು ಪಾಲಿಸುವುದು ಸೈನಿಕವೃತ್ತಿಯ ಜೀವನದ ಮುಖ್ಯ ಧರ್ಮವೆ ಆಗಿದೆ. ಆ ದೃಷ್ಟಿಯಿಂದ ಭೀಷ್ಮ-ದ್ರೋಣರ ಈ ಕೃತಿಯು ಯೋಗ್ಯವೆ ಆಗಿದೆ. ಆದರೆ ಅವರು ದುರ್ಯೋಧನನಿಗೆ ಸಂತೋಷಪಡಿಸುವುದಕ್ಕಾಗಿ ಸೇನಾಪತಿ ಪದವಿಯನ್ನು ಸ್ವೀಕರಿಸಿದರು ಎಂಬುದು ಮಾತ್ರ ಸರಿಯಲ್ಲ. ಪ್ರವಾಹ ಪತಿತನಾಗಿ ಅಥವಾ ಅನಿವಾರ್ಯ ಕರ್ತವ್ಯವೆಂದು ಯಾವುದೊಂದು ಕೆಲಸವನ್ನು ಮಾಡುವುದು ಬೇರೆ; ಆ ಕೆಲಸವು ಮೆಚ್ಚಿಕೆಯಾಗಿ ಮನಸಾರೆ ಅದನ್ನು ಒಲಿದು ಕೈಕೊಂಬುದು ಬೇರೆ. ಭೀಷ್ಮ-ದ್ರೋಣರು ಈಗ ಯುದ್ಧಕ್ಕೆ ಸಿದ್ಧರಾದುದು ಕೇವಲ ಕರ್ತವ್ಯವೆಂದು. ಉಪ್ಪುಂಡುದಕ್ಕಾಗಿ (ಜೋಳದ ಪಾಳಿಯೆಂದು). ದುರ್ಯೋಧನನ ರಾಜನೀತಿಯು ಸಮ್ಮತವಿದ್ದು, ಇದು ಧರ್ಮಯುದ್ಧವೆಂಬ ಭಾವನೆಯಿಂದ ಅವರು ಅದರಲ್ಲಿ ಭಾಗವಹಿಸಿದ್ದಲ್ಲ.

(೧೩) ಭೀಷ್ಮ ಪಿತಾಮಹರ ಸಿಂಹಗರ್ಜನೆ ಮತ್ತು ಶಂಖನಾದವು ಕಿವಿಗೆ ಬೀಳುತ್ತಲೆ ಕೌರವ ಸೈನ್ಯದಲ್ಲಿ ರಣವಾದ್ಯಗಳು ಪ್ರಚಂಡವಾಗಿ ನಿನದಿಸಿದುವು. ಶಂಖನಾದವೂ ರಣವಾದ್ಯ ಘೋಷವೂ ಯುದ್ಧದೊಳಗಿನ ಉತ್ಸಾಹದ ದ್ಯೋತಕವಾಗಿದೆ. ರಣವಾದ್ಯಗಳ ಘೋಷವು ಸೈನಿಕರನ್ನು ಕಾಳಗಕ್ಕೆ ಹುರಿದುಂಬಿಸಿ ಮೈಮರೆಯಿಸುವುದು. ಹುಮ್ಮಸವನ್ನು ಇಮ್ಮಡಿಸುವುದು. ಕೌರವ ಸೈನ್ಯದ ಈ ಕಹಳೆ ಕೊಂಬುಗಳ ಮೊರೆತವು, ಪಾಂಡವರಿಗೆ ಕಾಳಗದ ಔತಣವೆ ಆಗಿದ್ದಿತು. 'ನಾವು ಹೋರಟಿಗೆ ಅಣಿಯಾಗಿದ್ದೇವೆ. ನಿಮಗೆ ನಮ್ಮನ್ನು ಎದುರಿಸುವ ಎದೆಗಾರಿಕೆಯಿದ್ದರೆ ಮುಂದೆ ಬನ್ನಿ!' ಪಾಂಡವರಂತೂ ಮೊದಲೆ ಸಿದ್ಧರಾಗಿದ್ದರು. ಕೌರವರ ರಣವಾದ್ಯ ಘೋಷವನ್ನು ಕೇಳುತ್ತಲೆ, ಅವರೂ ಅದೇ ಬಗೆಯಾದ ಮಾರುತ್ತರವನ್ನಿತ್ತರು. ಅದರ ವಿವರವು ಮುಂದಿನ ಶ್ಲೋಕಗಳಲ್ಲಿದೆ:

(೧೪-೧೯) ಕೌರವರ ಸೈನ್ಯದಲ್ಲಿ ಭೀಷ್ಮ ಪಿತಾಮಹರ ಶಂಖನಾದದ ವರ್ಣನೆಯು ಮಾತ್ರ ಉಂಟು. ದ್ರೋಣರು ಶಂಖವನ್ನು ಊದಿದ ಸುದ್ದಿಯು ಇಲ್ಲ. ಕೌರವ ವೀರರಲ್ಲಿ ಪ್ರಮುಖರಾದವರು ಯಾರಾದರೂ ಹುಮ್ಮಸದ ಉಬ್ಬಿನಿಂದ ತಮ್ಮ ಶಂಖಗಳನ್ನು ನಿನದಿಸಿದ್ದರೆ ಅವರ ವರ್ಣನೆಯೂ ಇಲ್ಲಿ ಬರಬಹುದಾಗಿತ್ತು. ಆದರೆ ಕೌರವ ಸೇನೆಯಲ್ಲಿ, ಈ ಬಗೆಯ ಹುರುಪಿನಿಂದ

**ಪಾಂಚಜನ್ಯಂ ಹೃಷೀಕೇಶೋ ದೇವದತ್ತಂ ಧನಂಜಯಃ ।**
**ಪೌಂಡ್ರಂ ದಧ್ಮೌ ಮಹಾಶಂಖಂ ಭೀಮಕರ್ಮಾ ವೃಕೋದರಃ ॥ ೧೫ ॥**
**ಅನಂತ ವಿಜಯಂ ರಾಜಾ ಕುಂತೀಪುತ್ರೋ ಯುಧಿಷ್ಠಿರಃ ।**
**ನಕುಲಃ ಸಹದೇವಶ್ಚ ಸುಘೋಷಮಣಿ ಪುಷ್ಪಕೌ ॥ ೧೬ ॥**
**ಕಾಶ್ಯಶ್ಚ ಪರಮೇಷ್ವಾಸಃ ಶಿಖಂಡೀ ಚ ಮಹಾರಥಃ ।**
**ಧೃಷ್ಟದ್ಯುಮ್ನೋ ವಿರಾಟಶ್ಚ ಸಾತ್ಯಕಿಶ್ಚಾಪರಾಜಿತಃ ॥ ೧೭ ॥**
**ದ್ರುಪದೋ ದ್ರೌಪದೇಯಾಶ್ಚ ಸರ್ವಶಃ ಪೃಥಿವೀಪತೇ ।**
**ಸೌಭದ್ರಶ್ಚ ಮಹಾಬಾಹುಃ ಶಂಖಾನ್‌ದಧ್ಮುಃ ಪೃಥಕ್ ಪೃಥಕ್ ॥ ೧೮ ॥**
**ಸ ಘೋಷೋ ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ।**
**ನಭಶ್ಚ ಪೃಥಿವೀಂ ಚೈವ ತುಮುಲೋ ವ್ಯನುನಾದಯನ್ ॥ ೧೯ ॥**

**ಅನ್ವಯ :—** ಹೃಷೀಕೇಶಃ ಪಾಂಚಜನ್ಯಂ, ಧನಂಜಯಃ ದೇವದತ್ತಂ, ಭೀಮಕರ್ಮಾ ವೃಕೋದರಃ ಪೌಂಡ್ರಂ ಮಹಾಶಂಖಂ ದಧ್ಮೌ ॥ ೧೫ ॥ ಕುಂತೀಪುತ್ರಃ ರಾಜಾ ಯುಧಿಷ್ಠಿರಃ ಅನಂತ ವಿಜಯಂ, ನಕುಲಃ ಸಹದೇವಃ ಚ, ಸುಘೋಷಮಣಿಪುಷ್ಪಕೌ ॥ ೧೬ ॥ ಪರಮೇಷ್ವಾಸಃ ಕಾಶ್ಯಃ ಮಹಾರಥಃ ಶಿಖಂಡೀ ಚ, ಧೃಷ್ಟದ್ಯುಮ್ನಃ ವಿರಾಟಃ ಚ, ಅಪರಾಜಿತಃ ಸಾತ್ಯಕಿಃ ಚ ॥ ೧೭ ॥ ದ್ರುಪದಃ ದ್ರೌಪದೇಯಾಃ ಚ, ಮಹಾಬಾಹುಃ ಸೌಭದ್ರಃ ಚ, ಹೇ ಪೃಥಿವೀಪತೇ! ಪೃಥಕ್ ಪೃಥಕ್ ಸರ್ವಶಃ ಶಂಖಾನ್ ದಧ್ಮುಃ ॥ ೧೮ ॥ ಸಃ ತುಮುಲಃ ಘೋಷಃ ನಭಃ ಚ, ಪೃಥಿವೀಂ ಚ, ಏವ ವ್ಯನುನಾದಯನ್, ಧಾರ್ತರಾಷ್ಟ್ರಾಣಾಂ ಹೃದಯಾನಿ ವ್ಯದಾರಯತ್ ॥ ೧೯ ॥.

ಶ್ರೀಕೃಷ್ಣನು ಪಾಂಚಜನ್ಯವನ್ನು, ಅರ್ಜುನನು ದೇವದತ್ತವನ್ನು ಮತ್ತು ಭಯಂಕರ ಕರ್ಮಿಯಾದ ಭೀಮಸೇನನು ಪೌಂಡ್ರವೆಂಬ ಮಹಾಶಂಖವನ್ನು ಧ್ವನಿಗೆಯ್ದನು. ॥ ೧೫ ॥ ಕುಂತಿಯ ಮಗನಾದ ಯುಧಿಷ್ಠಿರ ರಾಜನು ಅನಂತ ವಿಜಯವನ್ನು ಮತ್ತು ನಕುಲ-ಸಹದೇವರುಗಳು ಸುಘೋಷಗಳ ಹಾಗು ಮಣಿಪುಷ್ಪಕಗಳನ್ನು ನಿನದಿಸಿದರು. ॥ ೧೬ ॥ ಮಹಾಧನುರ್ಧಾರಿಯಾದ ಕಾಶಿರಾಜನು, ಮಹಾರಥಿ ಶಿಖಂಡಿಯು, ಧೃಷ್ಟದ್ಯುಮ್ನನು, ವಿರಾಟರಾಜನು ಸೋಲನ್ನರಿಯದ ಸಾತ್ಯಕಿಯು, ದ್ರುಪದ ರಾಜನು ದ್ರೌಪದಿಯ ಎಲ್ಲ ಮಕ್ಕಳು, ಸುಭದ್ರೆಯ ಮಗು ಮಹಾಬಾಹು ಅಭಿಮನ್ಯುವು ಮೊದಲಾದವರೆಲ್ಲ ತಮ್ಮ ತಮ್ಮ ಶಂಖಗಳನ್ನು ಮೊಳಗಿಸಿದರು. ॥ ೧೭-೧೮ ॥ ಆ ಭೀಕರವಾದ ಶಂಖನಾದವು ನೆಲಮುಗಿಲುಗಳನ್ನೆಲ್ಲ ವ್ಯಾಪಿಸಿತು. ಆ ತುಮುಲ ಘೋಷವನ್ನು ಕೇಳಿ ದುರ್ಯೋಧನಾದಿ ಧೃತರಾಷ್ಟ್ರನ ಮಕ್ಕಳ ಎದೆಯೊಡೆಯಿತು. ॥ ೧೯ ॥

**ಭಾವಾರ್ಥ :—** ಯುದ್ಧಕಾಲದಲ್ಲಿ ರಣವಾದ್ಯಗಳನ್ನು ಮೊಳಗಿಸಿ, ತಮ್ಮ ಸೈನಿಕರ ಹುಮ್ಮಸವು ಇಮ್ಮಡಿಸುವಂತೆ, ಹಗೆಗಳ ಎದೆಯೊಡೆಯುವಂತೆ ಮಾಡುವುದು

ಹೋರಾಡುವ ಹುಮ್ಮಸವು ಕಾಣಿಸಿಕೊಳ್ಳುತ್ತಿದ್ದ ವೀರರು ವಿರಳ. ಒಳಗೊಳಗೆ 'ತಮ್ಮದು ಅಧರ್ಮ ಯುದ್ಧ' ವೆಂಬ ಭಾವನೆಯು ಅಂತರಂಗದಲ್ಲಿ ಕೊರೆಯುತ್ತಲಿದ್ದ ವೀರರು ಹಲವರಿದ್ದರು. ಸಂಬಳ ತಿಂದುದಕ್ಕಾಗಿ ಕಾಳಗಕ್ಕೆ ನಿಂತ ಬಾಡಿಗೆಯ ಬಂಟರೆ ಹೆಚ್ಚು. ಅಂಥವರ ಶಂಖನಾದದಲ್ಲಿ ಏನು ತಾನೆ ಜೀವವಿದ್ದೀತು? ಸುಮ್ಮನೆ ಊದಬೇಕೆಂದು ಊದಿದ ಶಂಖನಾದದ ವರ್ಣನೆಯನ್ನಾದರೂ ಏನು ಮಾಡುವುದು? ಅದೇ ಪಾಂಡವರ ಪಕ್ಷದಲ್ಲಿ ವೀರರ ಶಂಖನಾದವೂ ವರ್ಣನೀಯವಾಗಿದೆ. ಏಕೆಂದರೆ, ಅವರೆಲ್ಲ ಸ್ವರಾಜ್ಯ ಸಂಪಾದನೆಗಾಗಿ ತಮ್ಮ ಶಕ್ತಿಸರ್ವಸ್ವವನ್ನು ತೊಡಗಿಸಲು ಸಜ್ಜಾಗಿದ್ದರು. ತಮ್ಮ ಶಕ್ತಿ-ಸಂಘಟಿತತೆಗಳ ಬಲದಿಂದ 'ಇಹದಲ್ಲಿ ಸ್ವರಾಜ್ಯ ಇಲ್ಲವೆ ಸತ್ತರೆ ವೀರಸ್ವರ್ಗ ಇವುಗಳಲ್ಲಿ ಯಾವುದೊಂದನ್ನು ಪಡೆಯದೆ ಮರಳುವಂತಿಲ್ಲ;' ಎಂದು ವೀಳ್ಯವನ್ನು ಎತ್ತಿದ್ದರು. ಅವರಲ್ಲಿ ಹೇಡಿಯೊಂದು ಅಲ್ಲಗ ವಿಚಾರಕ್ಕೆ ಎಡೆಯು ಇದ್ದಿಲ್ಲ.

ಈ ಶಂಖನಾದಗಳ ವಿವರವಾದ ವರ್ಣನೆಗಳಿಂದ, ಪಾಂಡವರ ಪಕ್ಷದಲ್ಲಿ ಕಂಡು ಬರುತ್ತಿದ್ದ ಆವೇಶ

## (೭) ಅರ್ಜುನನು ಸೈನ್ಯ ನಿರೀಕ್ಷಿಸಿದುದು.

**ಅಥ ವ್ಯವಸ್ಥಿತಾನ್ ದೃಷ್ಟ್ವಾ ಧಾರ್ತರಾಷ್ಟ್ರಾನ್ ಕಪಿಧ್ವಜಃ ।**
**ಪ್ರವೃತ್ತೇ ಶಸ್ತ್ರಸಂಪಾತೇ ಧನುರುದ್ಯಮ್ಯ ಪಾಂಡವಃ ॥ ೨೦ ॥**

---

**ಅನ್ವಯ:—** ಅಥ ಕಪಿಧ್ವಜಃ ಪಾಂಡವಃ ಧಾರ್ತರಾಷ್ಟ್ರಾನ್ ವ್ಯವಸ್ಥಿತಾನ್ ದೃಷ್ಟ್ವಾ ಶಸ್ತ್ರಸಂಪಾತೇ ಪ್ರವೃತ್ತೇ ( ಸತಿ ) ಧನುಃ ಉದ್ಯಮ್ಯ— ॥ ೨೦ ॥

**ಇನ್ನು ಕೌರವರು ಅಣಿಯಾಗಿದ್ದು, ಜೋಡಿಸಿ ಶಸ್ತ್ರಗಳ ಆಘಾತಕ್ಕೆ ಆರಂಭವಾಗುವದೆಂದು ಕಂಡು ಕಪಿಧ್ವಜವನ್ನುಳ್ಳ ಅರ್ಜುನನು ಬಿಲ್ಲನ್ನು ಎತ್ತಿದನು. ॥ ೨೦ ॥**

**ಭಾವಾರ್ಥ:—** ಹೋರಾಟದ ಹೊತ್ತು ಬರುತ್ತಲೆ ಪ್ರತಿಯೊಬ್ಬ ವೀರನೂ ತನ್ನ ಸಂಪೂರ್ಣ ಸಿದ್ಧತೆಯನ್ನು ಮಾಡಿಕೊಂಡು ಮುಂದುವರಿಯಬೇಕು.

---

ಉತ್ಸಾಹಗಳು ಕೌರವರ ಕಡೆಗೆ ಇದ್ದಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದಕಾರಣ ಭೀಷ್ಮರ ನೇತೃತ್ವದಲ್ಲಿದ್ದ (ಕೌರವ) ಸೈನ್ಯವು ಅಪೂರ್ಣವಾಗಿದ್ದಿತು; ಭೀಮನ ನಾಯಕತ್ವದಲ್ಲಿ ನಿಂತ ಪಾಂಡವ ಸೇನೆಯು ಪೂರ್ಣವಾಗಿದ್ದಿತು' ಎಂದು ಹತ್ತನೆಯ ಶ್ಲೋಕದ ಅರ್ಥಮಾಡುವುದೆ ಹೆಚ್ಚು ಯುಕ್ತವೆಂದು ಹೇಳಬೇಕಾಗುತ್ತದೆ. ತಮ್ಮ ದಂಡಿನ ಈ ನಿರುತ್ಸಾಹದ ಸ್ಥಿತಿಯನ್ನು ನೋಡಿಯೆ 'ತಮ್ಮ ದಂಡು ಅಪೂರ್ಣ' ವೆಂದು ದುರ್ಯೋಧನನು ಉಸುರಿರಬೇಕು. ಹತ್ತನೆಯ ಶ್ಲೋಕದ ಅರ್ಥಮಾಡುವಾಗ, ಶಂಖನಾದಗಳ ವರ್ಣನೆಯ ನೆರವನ್ನು ಪಡೆದುಕೊಳ್ಳುವುದು ಅವಶ್ಯಕವಾಗಿದೆ. ಏಕೆಂದರೆ ಇದರಲ್ಲಿ ಯಾರ ಉತ್ಸಾಹ, ಆವೇಶಗಳು ಎಷ್ಟು ಎಂಬುದು ಚೆನ್ನಾಗಿ ಗೊತ್ತಾಗುತ್ತದೆ.

ಈ ಬಗೆಯಾಗಿ ಶಂಖಗಳನ್ನು ಮೊಳಗಿಸಿ ಕಾಳಗಕ್ಕೆ ಕೈ ಬೀಸಿಗೊಡನೆ, ವೀರನಾದ ಅರ್ಜುನನು ತನ್ನ ಎದುರಾಳಿಗಳ ದಂಡನ್ನು ನಿರೀಕ್ಷಿಸುವುದಕ್ಕಾಗಿ ಮುಂದುವರಿದನು.

(೨೦) 'ಧೃತರಾಷ್ಟ್ರನ ದಂಡು ಯುದ್ಧಕ್ಕೆ ಸನ್ನದ್ಧವಾಗಿರುವುದನ್ನು ಕಂಡು ಅರ್ಜುನನು ತನ್ನ ಬಿಲ್ಲನ್ನು ಎತ್ತಿದನು. ಮತ್ತು ಬಿಲ್ಲಿಗೆ ಬಾಣವನ್ನು ಹೂಡುವ ಮೊದಲು ಭಗವಾನ್ ಶ್ರೀಕೃಷ್ಣನಿಗೆ ಬಿನ್ನವಿಸಿದ್ದೇನೆಂದರೆ—' ಎಂಬುದು ಈ ಶ್ಲೋಕದ ಆಶಯವಿದೆ.

ಇಲ್ಲಿ ಅರ್ಜುನನನಿಗೆ 'ಕಪಿ ಧ್ವಜ' ನೆಂದು ಹೇಳಿದೆ. ಅರ್ಜುನನ ಧ್ವಜದಲ್ಲಿ ಕಪಿ ಎಂದರೆ ಮಂಗನ ಅಥವಾ ಹನುಮನ ಚಿಹ್ನವಿತ್ತು. ಮಹಾಭಾರತದ ಕೆಲವು ವರ್ಣನೆಗಳಲ್ಲಿ ಅರ್ಜುನನ ಧ್ವಜದಂಡದ ಮೇಲೆ ಪ್ರತ್ಯಕ್ಷ ಹನುಮಂತನೆ ಕುಳಿತಿದ್ದನೆಂದು ಹೇಳಲಾಗಿದೆ; ಕೆಲವೆಡೆಗಳಲ್ಲಿ ಹನುಮನು ಭುಭುಃಕಾರ ಶಬ್ದ ಮಾಡಿದನೆಂದೂ ವರ್ಣಿಸಿದ್ದಾಗಿದೆ. ಇದರಿಂದ ನಿಜವಾದ ಹನುಮನೆ ಧ್ವಜ ದಂಡದಲ್ಲಿದ್ದನೆಂದು ಕಾಣುತ್ತದೆ. ಆದರೆ ಧ್ವಜಪಟವು ಬಟ್ಟೆಯದಿದ್ದು ಅದರಲ್ಲಿ ಯಾವುದೊಂದು ತನಗೆ ಇಷ್ಟವಾದ ಚಿಹ್ನವು ಇರುವುದು ಲೋಕರೂಢಿ. ಅದರಂತೆ ಅರ್ಜುನನ ಪತಾಕೆಯ ಮೇಲೆ ಹನುಮನ ಚಿಹ್ನವಿರುವುದು ಸ್ವಾಭಾವಿಕವಾಗಿದೆ. ಪ್ರತಿಯೊಬ್ಬ ವೀರನ ಧ್ವಜದ ಮೇಲೆ ಬೇರೆ ಬೇರೆ ಚಿಹ್ನಗಳಿರುತ್ತಿದ್ದವು. ದ್ರೋಣಾಚಾರ್ಯರ ಧ್ವಜದ ಮೇಲೆ ಕಮಂಡಲು ಇದ್ದಿತು.

'ಕಪಿ' ಶಬ್ದವು ವೇದದಲ್ಲಿ '**ಸೂರ್ಯ**' ವಾಚಕವಾಗಿಯೂ ಇದೆ. '**ಕ**' ಎಂದರೆ ನೀರು, '**ಪಿ**' ಎಂದರೆ ಕುಡಿವವನು. ಸೂರ್ಯನು ನೀರನ್ನು ಹೀರಿಕೊಳ್ಳುವನು. ಆದುದರಿಂದ ಆತನಿಗೆ ಈ ಹೆಸರು. ಈ ಅರ್ಥವನ್ನು ಇಲ್ಲಿ ಗ್ರಹಿಸಿದರೆ ಅರ್ಜುನನ ಧ್ವಜವು ಸೂರ್ಯಚಿಹ್ನಾಂಕಿತವಾಗಿತ್ತೆಂದು ಹೇಳಬೇಕಾಗುತ್ತದೆ. 'ಏತಾದೇವ ಸೇನಾ ಸೂರ್ಯಕೇತವಃ' ಎಂದು ಅಥರ್ವವೇದದಲ್ಲಿ ಹೇಳಿದೆ (೫-೨೧-೧೨) ಆದರೆ ಮಹಾಭಾರತದಲ್ಲಾಗಲಿ ರಾಮಾಯಣದಲ್ಲಾಗಲಿ, ಸೂರ್ಯಧ್ವಜದ ವರ್ಣನೆಗಳಿಲ್ಲ. ಆದುದರಿಂದ ಅರ್ಜುನನದು ಹನುಮದ್ಧ್ವಜವೆ ಆಗಿರಬೇಕು. ಏಕೆಂದರೆ ಮಹಾಭಾರತದಲ್ಲಿ ಹಾಗೆ ಸ್ಪಷ್ಟವಾಗಿ ಹೇಳಿದ್ದಾಗಿದೆ.

ಅರ್ಜುನನ ಕಪಿಧ್ವಜವು ಯಾತರ ದ್ಯೋತಕ? ಮಂಗವು ಚಂಚಲತೆಯ ಮೂರ್ತಿ. ಅದುವೆ ಅರ್ಜುನನ ಮನಸಿನ ಪ್ರೀತಿಯ ಧ್ವಜ ಚಿಹ್ನ, ಅರ್ಜುನನ ಮಂಗ ಮನಸಿನ ಚಾಂಚಲ್ಯದ ಅನುಭವವು ಇದೀಗ ಬರಲಿದೆ. ವಿಜಯಕ್ಕಾಗಿ ಪಾಂಡವ ಪಕ್ಷದವರೆಲ್ಲ ನೆರೆನಂಬಿಕೊಂಡಿರುವುದು ಅರ್ಜುನನನ್ನು, ಅರ್ಜುನನು ಕಾಳಗದಿಂದ ಹಿಂದೆಗೆದರೆ ಪಾಂಡವರಿಗೆ ಸ್ವರಾಜ್ಯ ಪ್ರಾಪ್ತಿಯ

ಆಸೆಯೆ ಇಲ್ಲ. ಅರ್ಜುನನೂ ತನ್ನ ಮೇಲಣ ಹೊಣೆಯನ್ನು ಬಲ್ಲವನಾಗಿದ್ದನು. ಆದರೆ ಮನಸಿನ ಹುಟ್ಟುಗುಣ ಹೋಗುವುದಾದರೂ ಹೇಗೆ? ಯುದ್ಧದ ಸಿದ್ಧತೆಯಿಂದ ಆತನು ರಣರಂಗಕ್ಕೆ ಬಂದುದರಲ್ಲಿ ಸಂದೇಹವೆ ಇಲ್ಲ. ಎದುರಾಳಿಗಳ ಶಂಖನಾದವು ಕೇಳಬರುತ್ತಲೆ ಆತನೂ ಅದಕ್ಕೆ ಮಾರುತ್ತರವೆಂದು ಭೋರ್ಗರೆವ ಶಂಖನಾದವನ್ನು ಮೊಳಗಿಸಿ ಬಿಲ್ಲನ್ನು ಎತ್ತಿದುದೂ ನಿಜ. ಆದರೆ ಅಷ್ಟರಲ್ಲಿ ಆತನಿಗೆ ಎರಡೂ ಸೈನ್ಯಗಳೊಳಗಿನ ವೀರರನ್ನು ನಿರೀಕ್ಷಿಸುವ ಇಚ್ಛೆಯಾಯ್ತು. ಆ ಮೇರೆಗೆ ಎರಡೂ ದಂಡುಗಳ ಮೇಲು ನೋಟವನ್ನು ಮುಗಿಸುವಷ್ಟರಲ್ಲಿ ಆತನಿಗೆ, ಯುದ್ಧದ ದುಷ್ಪರಿಣಾಮಗಳ ಭೀಕರ ಚಿತ್ರವು ಕಣ್ಣೆದುರು ಕಟ್ಟಿದಂತಾಗಿ ಕಾಳಗದಿಂದ ಮರಳುವ ಬುದ್ಧಿಯುಂಟಾಯ್ತು! **ಸ್ವರಾಜ್ಯಸಂಪಾದನೆಗಾಗಿ ಹೋರಾಡಲು ಸೊಂಟಕಟ್ಟಿದ ವೀರರಲ್ಲಿ ಈ ಬಗೆಯ ಚಂಚಲತೆಯು ಲೇಸಲ್ಲ. ಸ್ವರಾಜ್ಯಕ್ಕಾಗಿ ಕಾದಲು ಬದ್ಧಪ್ರತಿಜ್ಞರಾದ ವೀರರು 'ಸ್ಥಿತಪ್ರಜ್ಞ'ರಾಗಿರಬೇಕು. ಅವರಿಗೆ ಚಂಚಲತೆಯೆಂಬುದು ಅಪಥ್ಯಕರ. ಕಾಳಗದ** ಎಲ್ಲ ಸಿದ್ಧತೆಯಾಗಿ **ಕೈಗೆ ಕೈ ಹತ್ತುವ ಹೊತ್ತಿಗೆ ವೀರನೆನಿಸಿದವನು ಹೋರಾಟದಿಂದ ಹಿಂದೆಗೆದರೆ ಆತನೊಬ್ಬನಿಂದ ಇಡೀ ಸ್ವರಾಜ್ಯಪಕ್ಷಕ್ಕೆ ಹಾನಿ ತಟ್ಟುವುದು.** ಪಾಂಡವರದು ಸತ್ಪಕ್ಷವಾಗಿತ್ತು. ಆದುದರಿಂದ ಭಗವಾನ್ ಶ್ರೀಕೃಷ್ಣನು ಅವರ ಬೆಂಬಲವಾಗಿದ್ದನು. ಶ್ರೀಕೃಷ್ಣನು ಅರ್ಜುನನಿಗೆ ಚೆನ್ನಾಗಿ ಬುದ್ಧಿಗಲಿಸಿ— ಉಪದೇಶಿಸಿ, ಆತನ ಚಂಚಲತೆಯನ್ನು ದೂರ ಮಾಡಿದನು. 'ಸ್ಥಿತಪ್ರಜ್ಞ'ನನ್ನಾಗಿಸಿದನು. ಆಗ ಅರ್ಜುನನು ಯುದ್ಧ ಮಾಡಲು ಸಮರ್ಥನಾದನು. ಮನಸಿನ ಚಂಚಲತೆಯು ಅಳಿದು ಹೋಗದೆ ಮಾನವನು ತನ್ನ ಕರ್ತವ್ಯವನ್ನು ಸರಿಯಾಗಿ ಜರುಗಿಸಲಾರನು. ಅರ್ಜುನನ ಕಪಿಧ್ವಜವು ಆತನ ಚಂಚಲ ಮನಸ್ಥಿತಿಯ ದ್ಯೋತಕವಾಗಿರಬೇಕೆಂದು ತೋರುತ್ತದೆ.

ಇಲ್ಲಿ ಇನ್ನೂ ಒಂದು ವಿಚಾರಣೀಯವಾದ ಅಂಶವಿದೆ. ಅರ್ಜುನನು ಇಂದ್ರನ ಮಗನು. ವೇದದಲ್ಲಿ ಇಂದ್ರವೆಂಬ ಪದವು ವಿದ್ಯುದ್ವಾಚಕವಾಗಿದೆ. ಮಾನವರ ಮನಸು ಈ ವಿದ್ಯುದಂಶದಿಂದ ಉಂಟಾಗಿದೆ. ಉಳಿದ ಇಂದ್ರಿಯಗಳು ಸೂರ್ಯಾದಿ ಇತರ ದೇವತೆಗಳಿಂದ ಆಗಿವೆ.

| | |
|---|---|
| ವಿಶ್ವಸೃಷ್ಟಿ | ಮಾನವದೇಹ |
| ಇಂದ್ರ (ವಿದ್ಯುತ್) | ಮನಸು (ವೈದ್ಯುತಂ) |
| ಸೂರ್ಯ | ಕಣ್ಣು |
| ವಾಯು | ಪ್ರಾಣ |
| ದಿಕ್ಕು | ಕಿವಿ |
| ಅಗ್ನಿ | ಮಾತು |
| ಆಪ್ | ನಾಲಗೆ |

ಹೀಗೆ ಬೇರೆ ಬೇರೆ ದೇವತೆಗಳಿಂದ ಬೇರೆ ಬೇರೆ ಇಂದ್ರಿಯಗಳು ಸಿದ್ಧವಾಗಿವೆ. ವಿಶ್ವಸೃಷ್ಟಿಯಲ್ಲಿ ಇಂದ್ರನು ಉಳಿದ ಎಲ್ಲ ದೇವತೆಗಳಿಗೆ ಒಡೆಯನು. ಅದರಂತೆ ಮಾನವ ಮನಸು ಉಳಿದ ಎಲ್ಲ ಇಂದ್ರಿಯಗಳಿಗೆ (ಶರೀರದೊಳಗಿನ ದೇವತಾಂಶಗಳ) ಅರಸು. ಮನಸು ಗೆದ್ದರೆ ಎಲ್ಲ ಇಂದ್ರಿಯಗಳು ಗೆದ್ದಂತೆ; ಮನಸು ಸೋತರೆ ಎಲ್ಲ ಇಂದ್ರಿಯಗಳೂ ಸೋತಂತೆ. ಪಾಂಡವರ್ಕೌರವರ ಸೋಲುಗೆಲುವು ಅರ್ಜುನನನ್ನು ಅವಲಂಬಿಸಿರುವಂತೆ ಇಂದ್ರಿಯಗಳ ಸೋಲುಗೆಲುವೂ ಮನಸ್ಸಿನ ಮೇಲೆ ಅವಲಂಬಿಸಿದೆ. ಮನಸಿನೊಡನೆ ಪ್ರಾಣಗಳ ಸಂಬಂಧವು ನಿತ್ಯವಾಗಿದೆ. ಯೋಗಶಾಸ್ತ್ರದಲ್ಲಿ ಈ ಮಾತು ಬಂದಿದೆ. ಪ್ರಾಣವು ವಾಯುವಿನ ಅಂಶವಾಗಿದೆ:

**ವಾಯುಃ ಪ್ರಾಣೋ ಭೂತ್ವಾ ನಾಸಿಕೇ ಪ್ರಾವಿಶತ್**

ಐ. ಉ. ೧.

ವಾಯುವೆ ಪ್ರಾಣವಾಗಿ ಮೂಗಿನಲ್ಲಿ ಪ್ರವೇಶಿಸಿತು. ಪ್ರಾಣವು ಮನಸಿನ ಒಡನಾಡಿಯಾಗಿದೆ. ಇದನ್ನು ಕುರಿತು ಯೋಗಗ್ರಂಥಗಳಲ್ಲಿ ಹೀಗೆ ಹೇಳಿದೆ:

**ಮಾರುತಂ ಧಾರಯೇದ್ಯಸ್ತು ನ ಮುಕ್ತೋ ನಾತ್ರ ಸಂಶಯಃ||**

ಹ. ಯೋ. ಪ್ರ. ೧ ೪೯

**ಮಾರುತೇ ಮಧ್ಯಸಂಚಾರೇ ಮನಃಸ್ಥೈರ್ಯಂ ಪ್ರಜಾಯತೇ ||**

ಹ. ಯೋ. ಪ್ರ. ೨ ೪೨.

**ಚಲೇ ವಾತೇ ಚಲಂ ಚಿತ್ತಂ ನಿಶ್ಚಲೇ ನಿಶ್ಚಲಂ ಭವೇತ್ ||**

ಹ. ಯೋ. ಪ್ರ. ೨.೨.

'ಮಾರುತವೆಂದರೆ ಗಾಳಿಯು ಸ್ಥಿರವಾಗುತ್ತಲೆ ಮನುಷ್ಯನು ಮುಕ್ತನಾಗುತ್ತಾನೆ. ಗಾಳಿ (ಪ್ರಾಣ) ಮಧ್ಯಸಂಚಾರಿಯಾಗುತ್ತಲೆ ಮನಸು ಸ್ಥಿರವಾಗುತ್ತದೆ. ಗಾಳಿಯು (ಪ್ರಾಣ) ಹೊಯ್ದಾಡಿದರೆ ಮನಸು ಅಲ್ಲಾಡುವುದು. ಮತ್ತು ಗಾಳಿ (ಪ್ರಾಣ) ನೆಟ್ಟನೆ ನಿಂತರೆ ಮನಸು ಗಟ್ಟಿಯಾಗುವುದು.' ಈ ಉಲ್ಲೇಖಗಳು ಪ್ರಾಣ ಮತ್ತು ಮನಸುಗಳ ದೃಢಸಂಬಂಧವನ್ನು ಪುಷ್ಟೀಕರಿಸುತ್ತವೆ. **ಮಾನವ ದೇಹದಲ್ಲಿ ಮನಸು ಇಂದ್ರಪುತ್ರನು; ಪ್ರಾಣವು ವಾಯುಪುತ್ರನು. ಅರ್ಜುನನ ಧ್ವಜದಂಡದಲ್ಲಿರುವ ಕಪಿ—ಹನುಮನೂ ವಾಯುಪುತ್ರನು. ಇವೆಲ್ಲವೂ ಎಷ್ಟು ಹೊಂದುಗೂಡಿವೆ! ಈ ಹೊಂದಿಕೆಯು ಕೇವಲ ಘುಣಾಕ್ಷರನ್ಯಾಯದಂತೆ ಸಹಜವಾಗಿರಲಾರದು,**

ಹೃಷೀಕೇಶಂ ತದಾ ವಾಕ್ಯಮಿದಮಾಹ ಮಹೀಪತೇ ।
ಅರ್ಜುನ ಉವಾಚ— ಸೇನಯೋರುಭಯೋರ್ಮಧ್ಯೇ ರಥಂ ಸ್ಥಾಪಯ ಮೇಽಚ್ಯುತ ॥ ೨೧ ॥

ಅನ್ವಯ :— (ಹೇ) ಮಹೀಪತೇ ತದಾ ಹೃಷೀಕೇಶಂ ಇದಂ ವಾಕ್ಯಂ ಆಹ| ಹೇ ಅಚ್ಯುತ! ಉಭಯೋಃ ಸೇನಯೋಃ ಮಧ್ಯೇ ಮೇ ರಥಂ ಸ್ಥಾಪಯ || ೨೧ ||

**ಮತ್ತು ಎಲೈ ರಾಜನೇ ಆತನು ಶ್ರೀಕೃಷ್ಣನಿಗೆ ಹೀಗೆಂದನು : ಎಲೈ ಶ್ರೀಕೃಷ್ಣನೆ, ಈ ಎರಡೂ ದಂಡುಗಳ ನಡುವೆ ನನ್ನ ತೇರನ್ನು ಒಯ್ದು ನಿಲ್ಲಿಸು. || ೨೧ ||**

ಉದ್ದೇಶಪೂರ್ವಕವಾದ ರಚನೆಯು ಇಲ್ಲಿ ಕಂಡುಬರುತ್ತಿದೆ. ಈ ಒಡಲೆಂಬ ತೇರಿನಲ್ಲಿ ಕುಳಿತು ಧರ್ಮದ (ಸತ್ವದ) ಗೆಲುವಿಗಾಗಿ ಮನಸು ಹೋರಾಡುತ್ತಿದೆ. ಅದಕ್ಕೆ ಪ್ರಾಣವು ನೆರವನ್ನಿತ್ತಿದೆ. ಈ ಧರ್ಮ-ಕಾರ್ಯಕ್ಕೆ ಪರಮಾತ್ಮನು ಬೆಂಬಲವೀಯುತ್ತಾನೆ.

ಆದುದರಿಂದ ಅರ್ಜುನನ ಧ್ವಜದಲ್ಲಿ ಹನುಮನಿದ್ದುದು ಒಂದು ಸನಾತನ (ನಿತ್ಯ) ತತ್ವದ ಸೂಚಕವಾಗಿದೆಯೆಂಬುದು ಮೇಲಣ ವಿವರಣೆಯಿಂದ ಗೊತ್ತಾಗಬಹುದು. ಅರ್ಜುನನು ಇಂದ್ರಪುತ್ರನೆಂಬುದೂ, ಹನುಮನು ವಾಯುಪುತ್ರನೆಂಬುದೂ ಒಂದು ರೂಪಕವಾಗಿದೆಯೆಂಬುದು ಮನದಟ್ಟಾದರೆ ವಾಯುಪುತ್ರ ಮಾರುತಿ, ಇಂದ್ರಪುತ್ರ ಅರ್ಜುನರ ಪ್ರತ್ಯಕ್ಷ ದರ್ಶನವಾಗಬಲ್ಲುದು. ಮತ್ತು ಪರಮಾತ್ಮನಿಂದ ನಡಸಲ್ಪಡುವ ಈ ಒಡಲೆಂಬ ತೇರಿನಲ್ಲಿ ಕಪಿಧ್ವಜನಾದ ಅರ್ಜುನನು ಹೇಗೆ ಆರೂಢನಾಗಿರುವನೆಂಬುದೂ ಗೊತ್ತಾಗುವುದು.

ನಮ್ಮ ಅರ್ಜುನನು ಇನ್ನು ಏನು ಮಾಡುವನೆಂಬುದನ್ನು ನೋಡಿ :

(೨೧-೨೩) ಇಲ್ಲಿ ಅರ್ಜುನನು ಭಗವಾನ್ ಅಚ್ಯುತನಿಗೆ ಬಿನ್ನವಿಸಿದ್ದೇನೆಂದರೆ: 'ನನ್ನ ತೇರನ್ನು ಎರಡೂ ದಂಡಿನ ನಡುವೆ ಒಯ್ದು ನಿಲ್ಲಿಸು. ನಾನು ಈ ಎಲ್ಲ ವೀರರನ್ನು ಒಮ್ಮೆ ಅವಲೋಕಿಸುವೆನು.' ಶ್ರೀಕೃಷ್ಣನಿಗೆ 'ಅಚ್ಯುತ' ಎಂದು ಹೇಳಿದ್ದಾಗಿದೆ. 'ಅ-ಚ್ಯುತ' ಎಂದರೆ 'ಎಂದೂ ಚ್ಯುತಿ-ಬೀಳು ಇಲ್ಲದವನು; ತನ್ನ ಸ್ಥಾನ [illegible] ಢವಾಗಿರುವವನು; ಧ್ರುವನಂತೆ [illegible] ಹೊ[illegible]ಟವಿಲ್ಲದವನು; ಅಳಿ[illegible]; ಎ[illegible] ಬಾಳುವವನು, [illegible]ಳುವವನು : ಬಲವಿಲ್ಲದವನು. ಅರ್ಜುನನು ಚಂಚಲನು; ಆತನ ಸಂಕಲ್ಪಗಳು ಸ್ಥಿರವಾಗಿ ಉಳಿಯುವುದಿಲ್ಲ. ಆದರೆ ಆತನ ಬೆಂಬಲಿಗನಾದ ಗೆಳೆಯನು ಧ್ರುವನಂತೆ [illegible] ನಲ್ಲ ಅರ್ಜುನನ ಸಂಪೂರ್ಣ ಶ್ರದ್ಧೆಯಿದೆ. ಈ ಶ್ರದ್ಧೆಯು ಅರ್ಜುನನನ್ನು ಕಾಳಗದ ಕೋಲಾಹಲದೊಳಗಿಂದ ಯಶಸ್ವಿಯಾಗಿ ಪಾರುಮಾಡಿತು; ಗೆಲುವನ್ನಿತ್ತು; ಲೋಕದಲ್ಲ ಧರ್ಮರಾಜ್ಯವನ್ನು ನೆಲೆಗೊಳಿಸಿದ ಶ್ರೇಯಸ್ಸನ್ನು ಕೊಟ್ಟಿತು.

ನರ-ನಾರಾಯಣರಿಬ್ಬರೂ ಒಂದೇ ತೇರಿನಲ್ಲಿ ನಿಂತಿದ್ದಾರೆ. ನರನ ಗೆಯ್ಮೆಗೆ ನಾರಾಯಣನು ನೆರವಾಗುವನು. ಪೌರುಷಯುಕ್ತನಾದ ನರ (ಮಾನವ) ನು ನಾರಾಯಣನಲ್ಲಿ ನೆಚ್ಚಿನಂಬಿ, ಆತನನ್ನು ತನ್ನ ಜೀವದ ಗೆಳೆಯನೆಂದು ಭಾವಿಸಿದರೆ ಈ ಲೋಕದಲ್ಲಿ ಯಶಸ್ವಿಯಾಗಿ ಪಾರಾಗುವನು. ಪ್ರತಿಯೊಬ್ಬ ನರನಿಗೂ ಜೀವನರಂಗದಲ್ಲಿ ಹೋರಾಡಬೇಕಾಗುವುದು ನಿಶ್ಚಿತ. ಆದುದರಿಂದ ಆತನು ಅರ್ಜುನನಂತೆ ನಾರಾಯಣನಲ್ಲಿ ಸಂಪೂರ್ಣ ಶ್ರದ್ಧೆಯನ್ನಿಟ್ಟು ನಡೆದುಕೊಂಡರೆ, ಆತನಿಗೆ ಅದು ಯಾವಾಗಲೂ ಕಲ್ಯಾಣಕರವಾಗದೆ ಇರದು.

ಅರ್ಜುನನು ಇನ್ನು ರಣರಂಗವನ್ನು ಪ್ರವೇಶಿಸಿ ವೀರರನ್ನು ಅವಲೋಕಿಸಿದ ಬಳಿಕ ಏನು ಮಾಡುವನೆಂಬುದನ್ನು ನೋಡಿ :

(೨೧-೨೩) ಇಲ್ಲಿ ಶ್ರೀಕೃಷ್ಣನಿಗೆ 'ಹೃಷೀಕೇಶ'ನೆಂದು ಕರೆದಿದೆ 'ಹೃಷೀಕೇಶ' ಎಂದರ ಇಂದ್ರಿಯಗಳ ಈಶನಾದವನೆ 'ಹೃಷೀಕೇಶನು.' ಯಾವನು ಇಂದ್ರಿಯಗಳನ್ನು ತನ್ನ ಅಂಕೆಯಲ್ಲಿ ಇರಿಸಿರುವನೊ ಇಲ್ಲವೆ ಇಂದ್ರಿಯಗಳ ಮೇಲೆ ಸ್ವಾಮಿತ್ವವಿದ್ದು ಅವನ್ನು ಸತ್ಕರ್ಮದಲ್ಲಿ ತೊಡಗಿಸಿರುವನೂ, ಅಥವಾ ಯಾವನ ಇಂದ್ರಿಯಗಳು ಸ್ವಾಭಾವಿಕವಾಗಿಯೆ ದುಷ್ಕರ್ಮಕ್ಕೆ ಎಳಸುವುದಿಲ್ಲವೊ ಆತನಿಗೆ 'ಹೃಷೀಕೇಶ'ನೆಂಬ ಹೆಸರು ಸಲ್ಲುವುದು ಶ್ರೀಕೃಷ್ಣನು 'ಹೃಷೀಕೇಶ' (ಹೃಷೀಕ+ಈಶ) ನಾಗಿದ್ದನು. ಆದುದರಿಂದಲೆ ಆತನು ಅಚ್ಯುತನು; ಎಂದರೆ ಅವಿನಾಶಿ, ಸ್ಥಿರ, ದೃಢನಾಗಿದ್ದನು. ಯಾರಿಗೆ ಅಚಂಚಲ, ಸ್ಥಿರ, ದೃಢರಾಗಬೇಕೆಂಬ ಹಂಬಲವಿದೆಯೋ ಅವರು 'ಹೃಷೀಕೇಶ' ರಾಗಬೇಕು. ಮತ್ತು ತಮ್ಮ ಎಲ್ಲ ಇಂದ್ರಿಯಗಳನ್ನು ಆಧೀನದಲ್ಲಿರಿಸಿಕೊಂಡು ಅಡ್ಡ-

ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವಸ್ಥಿತಾನ್ ।
ಕೈರ್ಮಯಾ ಸಹ ಯೋದ್ಧವ್ಯಮಸ್ಮಿನ್ ರಣಸಮುದ್ಯಮೇ ॥ ೨೨ ॥
ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ ಸಮಾಗತಾಃ ।
ಧಾರ್ತರಾಷ್ಟ್ರಸ್ಯ ದುರ್ಬುದ್ಧೇರ್ಯುದ್ಧೇ ಪ್ರಿಯಚಿಕೀರ್ಷವಃ ॥ ೨೩ ॥
ಸಂಜಯ ಉವಾಚ— ಏವಮುಕ್ತೋ ಹೃಷೀಕೇಶೋ ಗುಡಾಕೇಶೇನ ಭಾರತ ।
ಸೇನಯೋರುಭಯೋರ್ಮಧ್ಯೇ ಸ್ಥಾಪಯಿತ್ವಾ ರಥೋತ್ತಮಮ್ ॥ ೨೪ ॥
ಭೀಷ್ಮದ್ರೋಣ ಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಮ್ ।
ಉವಾಚ ಪಾರ್ಥ ಪಶ್ಯೈತಾನ್ ಸಮವೇತಾನ್ ಕುರೂನಿತಿ ॥ ೨೫ ॥

**ಅನ್ವಯ :—** ಯಾವತ್ ಅಹಂ ಯೋದ್ಧುಕಾಮಾನ್ ಅವಸ್ಥಿತಾನ್ ಏತಾನ್ ನಿರೀಕ್ಷೇ; ಅಸ್ಮಿನ್ ರಣಸಮುದ್ಯಮೇ ಮಯಾ ಕೈಃ ಸಹ ಯೋದ್ಧವ್ಯಂ? || ೨೨ || ದುರ್ಬುದ್ಧೇಃ ಧಾರ್ತರಾಷ್ಟ್ರಸ್ಯ, ಯುದ್ಧೇ ಪ್ರಿಯಚಿಕೀರ್ಷವಃ ಯೇ ಏತೇ ಅತ್ರ ಸಮಾಗತಾಃ ತಾನ್ ಯೋತ್ಸ್ಯಮಾನಾನ್ ಅಹಂ ಅವೇಕ್ಷೇ || ೨೩ ||

**ಸಂಜಯಃ ಉವಾಚ :—** ಹೇ ಭಾರತ! ಏವಂ ಗುಡಾಕೇಶೇನ ಉಕ್ತಃ ಹೃಷೀಕೇಶಃ, ಉಭಯೋಃ ಸೇನಯೋಃ ಮಧ್ಯೇ, ಭೀಷ್ಮದ್ರೋಣಪ್ರಮುಖತಃ ಸರ್ವೇಷಾಂ ಚ ಮಹೀಕ್ಷಿತಾಂ (ಪ್ರಮುಖೇ) ರಥೋತ್ತಮಂ ಸ್ಥಾಪಯಿತ್ವಾ, 'ಪಾರ್ಥ! ಏತಾನ್ ಸಮವೇತಾನ್ ಕುರೂನ್ ಪಶ್ಯ' ಇತಿ ಉವಾಚ || ೨೫ ||

“ಆಗ ನಾನು, ಇಲ್ಲಿ ಹೋರುವ ಹಂಬಲದಿಂದ ಅಣಿಯಾಗಿ ನಿಂತ ವೀರರನ್ನು ನಿರೀಕ್ಷಿಸುವೆನು ಮತ್ತು ಯಾರೊಡನೆ ಕಾದಬೇಕಾಗಿದೆಯೆಂಬುದನ್ನು ನೋಡುವೆನು || ೨೨ || ದುರ್ಬುದ್ಧಿಯಾದ ಧೃತರಾಷ್ಟ್ರಪುತ್ರನಾದ ದುರ್ಯೋಧನನ ಹಿತವನ್ನು ಮಾಡುವ ಇಚ್ಛೆಯಿಂದ ಇಲ್ಲಿ ನೆರೆದು ಕಾದಲನುವಾದ ಆ ಬಂಟರನ್ನು ನಿರೀಕ್ಷಿಸುವೆನು. || ೨೩ || ಸಂಜಯನು ನುಡಿದನು: 'ಎಲೈ ಭರತಕುಲೋತ್ಪನ್ನ ಧೃತರಾಷ್ಟ್ರನೆ, ಅರ್ಜುನನು ಇಂತು ಶ್ರೀಕೃಷ್ಣನನ್ನು ಕುರಿತು ಮಾತನಾಡಿದೊಡನೆಯೇ, ಆತನು ಭೀಷ್ಮದ್ರೋಣರ ಎದುರಿನಲ್ಲಿ ಮತ್ತು ಎಲ್ಲ ಅರಸರ ಮುಂದುಗಡೆಯಲ್ಲಿ ತೇರನ್ನು ನಿಲ್ಲಿಸಿ, ಅರ್ಜುನನನ್ನು ಕುರಿತು ಹೀಗೆಂದನು: 'ಅರ್ಜುನನೆ! ಇಲ್ಲಿ ಸೇರಿದ ಕೌರವ ವೀರರನ್ನು ನೋಡು. || ೨೫ ||

**ಭಾವಾರ್ಥ :—** ಕಾದಲಣಿಯಾದ ವೀರನು, ತನ್ನವರನ್ನು ಅಂತು ಇರಿಯಲನುವಾದ ಎದುರಾಳಿಗಳಲ್ಲಿ ಇರುವ ಬಂಟರಾರು, ಅವರ ಯೋಗ್ಯತೆಯೇನು ಎಂಬುದನ್ನು ಚೆನ್ನಾಗಿ ತಿಳಿದುಕೊಂಡು ಬಳಿಕ ಆ ನೇರೆಗೆ ಅವರೊಡನೆ ಹೋರಾಡಬೇಕು.

---

ದಾರಿಗೆ ಎಂದೂ ಹೋಗಗೊಡಲಾಗದು. ಇಂದ್ರಿಯಗಳು ಸ್ವಾಧೀನದಲ್ಲಿದ್ದವನೇ '**ಭಗವಂತ**'ನು ಎಂದರೆ ಭಾಗ್ಯವಂತನಾಗಬಲ್ಲನು. 'ಶ್ರೀ-ಕೃಷ್ಣ'ನು ಎಂದರೆ ಶ್ರೀ (ಲಕ್ಷ್ಮಿ) ಯನ್ನು ತನ್ನೆಡೆಗೆ ಆಕರ್ಷಣಮಾಡಿಕೊಳ್ಳುವವನು, ಅಥವಾ '**ಕೃಷ್ಣ**'ನೆಂದರೆ ಎಲ್ಲರನ್ನೂ ತನ್ನಲ್ಲಿ ಆಕರ್ಷಣ ಮಾಡುವವನು ಆಗಬಲ್ಲನು. '**ಪುರುಷೋತ್ತಮನು**' (ಪುರುಷರಲ್ಲಿ ಶ್ರೇಷ್ಠನು) ಆಗುವುದಕ್ಕೆ ಇದುವೆ ನಿಜವಾದ ಯುಕ್ತಿಯಾಗಿದೆ. **ಪರಮಾತ್ಮನ ನಾಮದಿಂದ ಮನುಷ್ಯನು ಪಾವನನಾಗುತ್ತಾನೆ**, ಎಂಬುದುಂಟು. ಅದರ ರಹಸ್ಯವಾದರೂ ಇಲ್ಲಿಯೆ ಇದೆ. **ತಾನು ಹೇಳುವ ದೇವರನಾಮದಲ್ಲಿ ತಲ್ಲೀನನಾಗಿ**, ಅದರಂತೆ ಅರಿತು ಆಚರಿಸುವವನಾಗಿ ಬಾಳಿದರೆ ಜೀವನದಲ್ಲಿ ಇದಕ್ಕಿಂತಲೂ ಹೆಚ್ಚಿನ ಧನ್ಯತೆಯೇನಿದೆ? ಜೀವನವು ಸಾರ್ಥಕವಾಗಬೇಕೆಂದು ತಳಮಳಿಸುವವರು ಅವಶ್ಯವಾಗಿ ಇದರ ವಿಚಾರಮಾಡಬೇಕು.

ಈ ಶ್ಲೋಕಗಳಲ್ಲಿ '**ಗುಡಾಕೇಶ**'ನೆಂದು ಅರ್ಜುನನಿಗೆ ಹೇಳಿದೆ. '**ಗುಡಾ**' ಎಂದರೆ ನಿದ್ರೆ; ಮತ್ತು '**ಈಶ**'ನೆಂದರೆ ಒಡೆಯ. ಆದುದರಿಂದ ಗುಡಾಕೇಶನೆಂದರೆ ನಿದ್ರೆಯ ಒಡೆಯನಾದವನು ಎಂದರ್ಥ. ನಿದ್ರೆ, ಆಲಸ್ಯ, ಬೇಸರ ಮೊದಲಾದ ದೋಷಗಳನ್ನು ಹೋಗಲಾಡಿಸಿಕೊಂಡವನೆ ಗುಡಾಕೇಶನು. ಈತನಿಗೆ ಕೆಲಸದಲ್ಲಿರುವಾಗ ನಿದ್ರೆ ಅಥವಾ ಬೇಸರವೆ ಬರುವುದಿಲ್ಲ. ವಿಶ್ರಾಂತಿ-

ಯನ್ನು ಪಡೆಯುವುದು ಅಥವಾ ಬಿಡುವುದು ಈತನ ಇಚ್ಛೆಯನ್ನು ಅವಲಂಬಿಸಿರುತ್ತದೆ. ವಿಶ್ರಾಂತಿ ಅಥವಾ ನಿದ್ರೆಯು, ಬೇಕೆಂದೊಡನೆ ಈತನಿಗೆ ದೊರೆಯಬಲ್ಲದು. ಈತನು ಬಯಸಿದಾಗ ಬಯಸಿದಷ್ಟೇ ಹೊತ್ತು ಗಾಢವಾದ ನಿದ್ರೆ ಅಥವಾ ವಿಶ್ರಾಂತಿಯನ್ನು ಪಡೆಯಬಲ್ಲನು. ಒಂದರ್ಧಗಳಿಗೆ ನಿದ್ರೆ ಬೇಕೆಂದೊಡನೆ ಅಷ್ಟೆ ಕಾಲ ಗಾಢ ನಿದ್ರೆಗೆಯ್ದು, ಕೂಡಲೆ ಎದ್ದು ಕೆಲಸಕ್ಕೆ ತೊಡಗುವನು. ಈತನು ನಿದ್ರಾವಶನಾಗಿ ಮೈಮರೆತು ಅವಧಿಮೀರಿ ಎಂದೂ ಮಲಗುವುದಿಲ್ಲ. ಇಂತಹನೆ ಗುಡಾಕಾ-ಈಶನು ಅಥವಾ ನಿದ್ರೆಯ ಒಡೆಯನು, ಲೋಕದಲ್ಲಿ ಈ ಬಗೆಯಾಗಿ ನಿದ್ರೆಯ ಒಡೆಯರಾದವರು ಸ್ವಲ್ಪ ಜನ. ಬಹುಜನರು, ಹಾಸುಗೆಯ ಮೇಲೆ ಬಿದ್ದುಕೊಂಡು ಮಲಗಬೇಕೆಂದರೂ ನಿದ್ದೆ ಬಾರದೆ ಈ ಮಗ್ಗುಲಿಂದ ಆ ಮಗ್ಗುಲಿಗೆ ಹೊರಳಾಡುತ್ತಿರುತ್ತಾರೆ. ಮತ್ತು ನಿದ್ರೆ ತಿಳಿದು ಏಳುವಾಗಲೂ ಮೈಮುರಿಯುತ್ತ ಆಕಳಿಸುತ್ತಲೆ ಹೊರಬರುತ್ತಾರೆ. ಒಂದು ಕೊಳದಲ್ಲಿ ಒಮ್ಮೆಲೆ ಹೊಗು-ವಂತೆ, ಬಯಸಿದಾಗ ಥಕ್ಕನೆ ನಿದ್ರೆಹೋಗಬಲ್ಲವನು, ಮತ್ತು ಏಳುವಾಗ ತಿಳಿಗೊಳದಿಂದ ಹೊರಬರುವವನಂತೆ, ಬೇಸರದ ಕೆಸರನ್ನು ತೊಳೆದುಕೊಂಡು ತಿಳಿಯಾಗಿ, ಉತ್ಸಾಹವಂತನಾಗಿ ಹೊರಬರುವನು. ಇಂತಹನಿಗೆ ನಿದ್ರೆಯ ಮೇಲೆ ಒಡೆತನವಿದ್ದವನೆಂದು ಹೇಳಬಹು-ದಾಗಿದೆ. ಇದು ಒಂದು ಮಹಾಸಿದ್ಧಿಯಿದೆ. ಎಲ್ಲರಿಗೂ ಸಾಧ್ಯವಲ್ಲದ ಕೆಲಸವಾಗಿದೆ. ಆ ಕಾಲದ ಭಾರತೀಯ ವೀರರಲ್ಲಿ ಅರ್ಜುನನು ಮಾತ್ರ ಗುಡಾಕೇಶನಾಗುವ ಸಿದ್ಧಿಯನ್ನು ಪಡೆದಿದ್ದನು. ಮನಸಿನ ತೂಕವನ್ನು ಸರಿಯಾಗಿ ಹಿಡಿಯಬಲ್ಲವನಿಗೆ ಈ ಸಿದ್ಧಿಯು ದೊರೆಯ ಬಲ್ಲುದು. ಇದು ಅತ್ಯಂತ ಕಠಿನವಾದ ಕೆಲಸವಾಗಿದೆ. ಈ ಸಿದ್ಧಿಯನ್ನು ಪಡೆದವರು ಪ್ರಶಾಂತಮನಸಿನವರಾ-ಗಿರುತ್ತಾರೆ. ಮುಖದಲ್ಲಿ ಪ್ರಸನ್ನತೆಯು ನಲಿಯು-ತ್ತಿರುತ್ತದೆ. ಶರೀರದ ಮೇಲೆ ಮುಪ್ಪಿನ ಪರಿಣಾಮವು ಗೋಚರವಾಗುವುದಿಲ್ಲ.

ಅರ್ಜುನನು ಇಂದ್ರಪುತ್ರನಿರುವುದರಿಂದ ಆಧ್ಯಾತ್ಮಿಕ ದೃಷ್ಟಿಯಿಂದ ಆತನು ಶರೀರದಲ್ಲಿ ಮನಸಿನ ಸ್ಥಾನ-ದಲ್ಲಿರುವನೆಂದು ಇಪ್ಪತ್ತನೆಯ ಶ್ಲೋಕದ ಟೀಕೆಯಲ್ಲಿ ಹೇಳಿದ್ದಾಗಿದೆ. ಮನಸ್ಸೇ ನಿದ್ರೆಯ ಒಡೆಯನಾಗಿದೆ. ಮನಸು ಮಲಗಿದಾಗಲೆ ಮಾನವನಿಗೆ ನಿದ್ರೆ. ಉಳಿದ ಇಂದ್ರಿಯಗಳನ್ನು ಎಷ್ಟೋ ಶಾಂತವಾಗಿರಿಸಿದರೂ ಮನಸು ತನ್ನ ವ್ಯಾಪಾರಗಳನ್ನು ನಿಲ್ಲಿಸಿ ಒರಗಿಕೊಳ್ಳುವ-ವರೆಗೆ ನಿದ್ರೆಯೆ ಸಾಧ್ಯವಿಲ್ಲ. ಈ ದೃಷ್ಟಿಯಿಂದ ವಿಚಾರಿಸಿದರೆ, ಗುಡಾಕೇಶವೆಂಬ ಹೆಸರು ಮನಸಿಗೇ ಸಂಪೂರ್ಣವಾಗಿ ಉಚಿತವಾಗಿದೆ. ಅರ್ಜುನನಿಗೂ ಗುಡಾಕೇಶನೆಂದೇ ಹೆಸರುಂಟು. ಕೌರವ ಪಾಂಡವ ವೀರರಲ್ಲಿ ಅರ್ಜುನನೊಬ್ಬನೇ ಗುಡಾಕೇಶನಾಗಿದ್ದನು. ಒಡಲೊಳಗಿನ ಎಲ್ಲ ಇಂದ್ರಿಯಗಳಲ್ಲಿಯೂ ಮನಸ್ಸೇ ಗುಡಾಕೇಶ ( ನಿದ್ರೆಯ ಸ್ವಾಮಿ ). ಓದುಗರು ಈ ಹೋಲಿಕೆಯನ್ನು ಪರಾಮರ್ಶಿಸಿ ಇದರ ಸ್ವಾರಸ್ಯವನ್ನು ಚೆನ್ನಾಗಿ ತಿಳಿದುಕೊಳ್ಳಬೇಕು.

ಈ ಶ್ಲೋಕದಲ್ಲಿ ಧೃತರಾಷ್ಟ್ರನಿಗೆ 'ಭರತ'ನೆಂದು ಸಂಬೋಧಿಸಿದೆ. ಮುಂದೆ ಕೆಲವೆಡೆಗಳಲ್ಲಿ ಅರ್ಜುನನಿಗೂ ಇದೇ ಹೆಸರಿನಿಂದ ಕರೆದುದುಂಟು. ಮಹಾಭಾರತದಲ್ಲಿ ಯುಧಿಷ್ಠಿರಾದಿ ಉಳಿದ ವೀರರಿಗೂ ಈ ಹೆಸರಿಂದ ಉಲ್ಲೇಖಿಸಿದ್ದಾಗಿದೆ. **ಭಾರತದೇಶದ ಹಿತವನ್ನು ಬಯಸುವವನೇ ಭರತನು; ಭಾರತದಲ್ಲಿ ನೆಲಸಿದವರ ಸೇವೆಗೆಯ್ಯುವನು, ಭಾರತದ ಭಾಷೆಯು ಸ್ವಭಾಷೆ-ಯಾಗಿರುವವನು, ಭಾರತದ ನಾಡು, ನುಡಿಗಳ ಏಳ್ಗೆಗಾಗಿ ಆತ್ಮಸಮರ್ಪಣಕ್ಕೆ ಸಿದ್ಧನಾಗಿರುವವನು, ಅಥವಾ ಇದು ತನ್ನ ಸ್ವಾಭಾವಿಕ ಕರ್ತವ್ಯವೆಂದು ನೆರೆನಂಬಿರುವವನು ಭರತನು.** ಧೃತರಾಷ್ಟ್ರ ಮತ್ತು ದುರ್ಯೋಧನರು ಸಾಮ್ರಾಜ್ಯ ಸಂಚಾಲಕರಾಗಿದ್ದುದ-ರಿಂದ ಇದು ಅವರ ಕರ್ತವ್ಯವಾಗಿದ್ದಿತು. ಆದರೆ ಅವರು ಅದನ್ನು ನೆರವೇರಿಸಲಿಲ್ಲ. ಅರ್ಜುನಾದಿ ಪಾಂಡವರ ಮೇಲೂ ಇದೆ ಹೊಣೆಯಿದ್ದಿತು. ಆದುದರಿಂದಲೆ ಅವರು ಭರತಭೂಮಿಯ ಬೇರುಬಿಡುತ್ತಲಿದ್ದ ಅಧರ್ಮದ ರಾಜ್ಯ-ವನ್ನು ನಾಶಮಾಡಿ ಧರ್ಮರಾಜ್ಯವನ್ನು ನೆಲೆಗೊಳಿಸಬೇ-ಕೆಂದು ಆತ್ಮಸಮರ್ಪಣಕ್ಕೆ ಸಿದ್ಧರಾಗಿದ್ದರು. ಹೀಗೆ ಧರ್ಮ ರಾಜ್ಯವನ್ನು ಸ್ಥಾಪಿಸುವುದು ಪರಮೇಶ್ವರನ ಅವತಾರ ಕಾರ್ಯವಾಗಿದೆ. ಆದುದರಿಂದ ಈ ಕಾರ್ಯಕ್ಕೆ ನೆರವಾಗು-ವವರೆಲ್ಲರೂ ಪರಮೇಶ್ವರನ ಸೇವಕರೆ ಆಗಿರುತ್ತಾರೆ. ಕೌರವರು ತಮ್ಮ ಕರ್ತವ್ಯವನ್ನು ಪಾಲಿಸಲಿಲ್ಲ. ಪಾಂಡ-ವರು ಅದನ್ನು ಸರಿಯಾಗಿ ಪಾಲಿಸಿದರು. ಆದುದರಿಂದಲೆ ಪರಮೇಶ್ವರನು ಪಾಂಡವರಿಗೆ ನೆರವಾದನೆಂದು ಹೇಳು-ವುದುಂಟು. ಆ ನೆರವು ಕೌರವರಿಗೆ ಸಿಗಲಿಲ್ಲ. ಇಂತು ಪರಮಾತ್ಮನ ಕಾರ್ಯಕ್ಕಾಗಿ ನೆರವಾಗುವವರಿಗೇ ಪರಮೇ-ಶ್ವರನು ಬೆಂಬಲಿಗನಾಗಿರುತ್ತಾನೆ. 'ಎರಡೂ ದಂಡು ಗಳ ನಡುವೆ ತೇರನ್ನು ಒಯ್ದು ನಿಲ್ಲಿಸು,' ಎಂಬ ಮಾತಿನ ಆಧ್ಯಾತ್ಮಿಕ ಅರ್ಥವು ಒಳಿತು ಮತ್ತು ಕೆಡಕುಗಳ ನಡುವೆ ಒಡಲೆಂಬ ತೇರು ಯಾವಾಗಲೂ ನಿಂತಿರುತ್ತದೆ. 'ಶರೀರಂ ರಥಮೇವ ತು। ಇಂದ್ರಿಯಾಣಿ ಹಯಾನಾಹುಃ ॥'

ತತ್ರಾಪಶ್ಯತ್ ಸ್ಥಿತಾನ್ ಪಾರ್ಥಃ ಪಿತೃನಥ ಪಿತಾಮಹಾನ್ ।
ಆಚಾರ್ಯಾನ್ ಮಾತುಲಾನ್ ಭ್ರಾತೃನ್ ಪುತ್ರಾನ್ ಪೌತ್ರಾನ್ ಸಖೀಂಸ್ತಥಾ ॥ ೨೬ ॥
ಶ್ವಶುರಾನ್ ಸುಹೃದಶ್ಚೈವ ಸೇನಯೋರುಭಯೋರಪಿ ।
ತಾನ್ಸಮೀಕ್ಷ್ಯ ಸ ಕೌಂತೇಯಃ ಸರ್ವಾನ್ ಬಂಧೂನವಸ್ಥಿತಾನ್ ॥ ೨೭ ॥
ಕೃಪಯಾಪರಯಾಽಽವಿಷ್ಟೋ ವಿಷೀದನ್ನಿದಮಬ್ರವೀತ್ ।

## (೮) ಅರ್ಜುನನ ಮಿಡುಕು ಮತ್ತು ಅದರ ಪರಿಣಾಮ.

ಅರ್ಜುನ ಉವಾಚ— ದೃಷ್ಟ್ವೇದಂ ಸ್ವಜನಂ ಕೃಷ್ಣ ಯುಯುತ್ಸುಂ ಸಮುಪಸ್ಥಿತಮ್ ॥ ೨೮ ॥
ಸೀದಂತಿ ಮಮ ಗಾತ್ರಾಣಿ ಮುಖಂ ಚ ಪರಿಶುಷ್ಯತಿ ।
ವೇಪಥುಶ್ಚ ಶರೀರೇ ಮೇ ರೋಮಹರ್ಷಶ್ಚ ಜಾಯತೇ ॥ ೨೯ ॥

---

**ಅನ್ವಯ:—** ಅಥ ಪಾರ್ಥಃ ಉಭಯೋಃ ಸೇನಯೋಃ ಅಪಿ, ತತ್ರ ಸ್ಥಿತಾನ್ ಪಿತೃನ್, ಪಿತಾಮಹಾನ್, ಆಚಾರ್ಯಾನ್, ಮಾತುಲಾನ್, ಭ್ರಾತೃನ್, ಪುತ್ರಾನ್, ಪೌತ್ರಾನ್, ತಥಾ ಸಖೀನ್ ॥ ೨೬ ॥ ಶ್ವಶುರಾನ್ ಸುಹೃದಃ ಚ ಏವ ಅಪಶ್ಯತ್ । ಸಃ ಕೌಂತೇಯಃ ತಾನ್ ಸರ್ವಾನ್ ಬಂಧೂನ್ ಅವಸ್ಥಿತಾನ್ ಸಮೀಕ್ಷ್ಯ ॥ ೨೭ ॥ ಪರಯಾ ಕೃಪಯಾ ಆವಿಷ್ಟಃ, ವಿಷೀದನ್ ಇದಂ ಅಬ್ರವೀತ್ । ಹೇ ಕೃಷ್ಣ ! ಇಮಂ ಸ್ವಜನಂ ಯುಯುತ್ಸುಂ ಸಮುಪಸ್ಥಿತಂ ದೃಷ್ಟ್ವಾ ॥ ೨೮ ॥ ಮಮ ಗಾತ್ರಾಣಿ ಸೀದಂತಿ, ಮುಖಂ ಚ ಪರಿಶುಷ್ಯತಿ, ಮೇ ಶರೀರೇ ವೇಪಥುಃ ಚ ರೋಮ-ಹರ್ಷಃ ಚ ಜಾಯತೇ ॥ ೨೯ ॥

**ಅಲ್ಲಿ ಅರ್ಜುನನಿಗೆ, ಎರಡೂ ದಂಡಿನಲ್ಲಿ ಇರುವ ತನ್ನ ತಾತಂದಿರು, ಅಜ್ಜಂದಿರು, ಆಚಾರ್ಯರು, (ಸೋದರ) ಮಾವಂದಿರು, ಅಣ್ಣತಮ್ಮಂದಿರು, ಮಕ್ಕಳು, ಮೊಮ್ಮಕ್ಕಳು, ಮಾವಂದಿರು, ಮತ್ತು ಗೆಳೆಯರು ಕಾಣಿಸಿಕೊಂಡರು. ॥ ೨೬ ॥ ಅಲ್ಲಿ ನಿಂತವರೆಲ್ಲ ತನ್ನ ಬಳಗದವರೆ ಎಂಬುದನ್ನು ಕಂಡು, ಅರ್ಜುನನು ॥ ೨೭ ॥ ತೀರ ಕರಳುಕರಗಿ (ಎದೆತುಂಬಿದವನಾಗಿ), ಮಿಡುಕುತ್ತ ಇಂತು ಉಸುರಿದನು:— ಎಲೈ ಕೃಷ್ಣನೆ, ಕಾಳಗದ ಹಂಬಲದಿಂದ ಇಲ್ಲಿ ನೆರೆದ ನನ್ನ ಆಪ್ತಬಾಂಧವರನ್ನು ಕಂಡು ॥ ೨೮ ॥ ನನ್ನ ಅವಯವಗಳು ಸಡಲಿದುವು; ಬಾಯಿ ಆರಿತು. ನನ್ನಲ್ಲಿ ನಡುಕವುಂಟಾಯ್ತು. ಮೈ ಜುಮ್ಮೆಂದಿತು ॥ ೨೯ ॥**

**ಭಾವಾರ್ಥ:—** ಬಂಧುಬಳಗದಲ್ಲಿರುವ ಮೋಹವು ಅಮಿತಿ ಮೀರಿ ಮನುಷ್ಯನು ತೀರ ಆಯತ್ತ ಹೊತ್ತಿನಲ್ಲಿ ಕರ್ತವ್ಯಪರಾಙ್ಮುಖನಾಗುವನು. ಆದುದರಿಂದ ಕರ್ತವ್ಯಚ್ಯುತಿಗೆ ಕಾರಣವಾಗುವ ಇಂತಹ ಮೋಹದಿಂದ ತಮ್ಮನ್ನು ಪ್ರತಿಯೊಬ್ಬರೂ ಕಾಪಾಡಿಕೊಳ್ಳಬೇಕು.

---

(ಕಠ ಉ. ೩. ೩-೪) 'ಒಡಲೆಂಬುದೆ ತೇರು; ಇಂದ್ರಿಯಗಳೆ ಅದಕ್ಕೆ ಹೂಡಿದ ಕುದುರೆಗಳು.' ಇಂದ್ರಿಯಗಳ ಸಂಚಾಲಕವಾದ ಮನಸು ಈ ತೇರನ್ನೆಸಗುವ ಸಾರಥಿಯಾಗಿದೆ.

ಇನ್ನು ಅರ್ಜುನನು ಎರಡೂ ಸೈನ್ಯಗಳನ್ನು ನಿರೀಕ್ಷಿಸುವನು. ಅಲ್ಲಿ ಆತನು ಕಂಡುದೇನು? ಆತನ ಮನಸಿನ ಮೇಲೆ ಆದ ಪರಿಣಾಮವೇನೆಂಬುದು ಮುಂದಿನ ಶ್ಲೋಕಗಳಲ್ಲಿದೆ.

(೨೬-೨೮) ಅರ್ಜುನನು, ಎರಡೂ ದಂಡಿನಲ್ಲಿ ಕಾದಲನುವಾಗಿ ನಿಂತವರಲ್ಲಿ ತನ್ನಗೆ ಹತ್ತಿ-ಹೊಂದಿದವರು, ಪೂಜ್ಯರು, ಗೆಳೆಯರೇ ತುಂಬಿಕೊಂಡಿರುವುದನ್ನು ಕಂಡು ಆತನಿಗೆ ತುಂಬ ದುಃಖವು ಆವರಿಸಿಕೊಂಡಿತು. ಅವರೆಲ್ಲರ ವಿಷಯಕ್ಕೆ ಅರ್ಜುನನಿಗೆ ಕರುಣೆ, ದಯೆ ಅಥವಾ ಕೃಪೆ ಉಂಟಾಯ್ತು. ಯುದ್ಧಕ್ಕೆ ಅವನೆಂದೂ ಬೆದರಿದವನಲ್ಲ. ಆತನು ವೀರನಾಗಿದ್ದನು. ಅತುಲ ಶೌರ್ಯವು ತನ್ನಲ್ಲಿ ಉಂಟೆಂಬುದನ್ನು ಆತನು ಚೆನ್ನಾಗಿ ಅರಿತಿದ್ದನು. ಆದುದರಿಂದಲೆ, ಕಾಳಗದಲ್ಲಿ ಇವರೆಲ್ಲ ಸಾವು-ನೋವಿಗೆ ಈಡಾಗುವರೆಂದು ಆತನು ನಿಶ್ಚಿತವಾಗಿ ಭಾವಿಸಿದ್ದನು ಕಾಳಗಕ್ಕೆ ಆರಂಭವಾದ ಮೇಲೆ ಇದನ್ನು ತನಗೆ ತಡೆಯುವುದು ಅಶಕ್ಯವಾಗಿತ್ತು. ತನ್ನ ಬಿಲ್ಲ

**ಗಾಂಡೀವಂ ಸ್ರಂಸತೇ ಹಸ್ತಾತ್ ತ್ವಕ್ಚೈವ ಪರಿದಹ್ಯತೇ।**
**ನಚಶಕ್ನೋಮ್ಯವಸ್ಥಾತುಂ ಭ್ರಮತೀವ ಚ ಮೇ ಮನಃ ॥ ೩೦ ॥**

---

**ಅನ್ವಯ :—** ಹಸ್ತಾತ್ ಗಾಂಡೀವಂ ಸ್ರಂಸತೇ, ತ್ವಕ್ ಚ, ಏವ ಪರಿದಹ್ಯತೇ, ಅವಸ್ಥಾತುಂ ಚ, ನ ಶಕ್ನೋಮಿ, ಮೇ ಮನಃ ಭ್ರಮತಿ ಇವ ॥ ೩೦ ॥

**ಗಾಂಡೀವ ಧನುಸ್ಸು ನನ್ನ ಕೈಯಿಂದ ಕಳಚಿ ಕೆಳಗೆ ಬೀಳುತ್ತಲಿದೆ; ನನ್ನ ಮೈ ಉರಿಯುತ್ತದೆ. ಅದರಿಂದ ನನಗೆ ನಿಲ್ಲಲಿಕ್ಕೆ ಆಗಲೊಲ್ಲದು ; ನನ್ನ ಮನಸು ಭ್ರಮಿಸುತ್ತಲಿದೆ. ॥ ೩೦ ॥**

**ಭಾವಾರ್ಥ :—** ಮೋಹ ಮತ್ತು ಕರುಣೆ ಇವು ಮಹಾ ಮಹಾ ವೀರರನ್ನೂ ನಿರ್ಬಲರನ್ನು ಮಾಡುತ್ತವೆ. ಮೋಹದಿಂದ ಬಲವು ಕುಂದುತ್ತದೆ. ಆದಕಾರಣ ಯಾರೂ ಮೋಹವಶರಾಗಬಾರದು.

---

ಬಲ್ಮೆ, ಶ್ರೀಕೃಷ್ಣನ ಬುದ್ಧಿ ಕೌಶಲ್ಯಗಳ ಬಲದಿಂದ ಈ ಯುದ್ಧದಲ್ಲಿ ತಾನು ನಿಃಸಂಶಯವಾಗಿ ಗೆಲ್ಲುವೆನೆಂದು ಅರ್ಜುನನ ನಂಬುಗೆಯಿತ್ತು. ತನಗೆ ವಿಜಯವು ನಿಶ್ಚಿತವಾದ್ದರಿಂದ ಎದುರಾಳಿಗಳಾದ ಭೀಷ್ಮ-ದ್ರೋಣರು, ಮತ್ತು ಉಳಿದ ಆಪ್ತಭಾಂಧವರು ಕಾಳಗದಲ್ಲಿ ಹತರಾಗುವುದೂ ನಿಶ್ಚಿತ. ಇಂತು ತನ್ನ ಕೈಯಿಂದ ತನ್ನ ಬಳಗದ ಹಿರಿಕಿರಿಯರೆಲ್ಲ ಮಡಿಯುವರೆಂಬ ಚಿತ್ರವು ಕಣ್ಣಿದುರು ಕಟ್ಟಿ, ಅರ್ಜುನನ ಕರುಳು ಕರಗಿತು. ಮನಸು ಮಿಡುಕಿತು. ದುಃಖವು ಆವರಿಸಿ ದೀನನಾಗಿ ಆತನು ಉಸುರಿದನು.

(೨೮-೩೦) ಕಾಳಗಕ್ಕೆ ಹೆದರಿ ಅರ್ಜುನನ ಅವಸ್ಥೆ ಹೀಗಾಯ್ತೆನ್ನಲು ಅವಕಾಶವೇ ಇಲ್ಲ. ಪ್ರತ್ಯಕ್ಷ ಶಿವನೊಡನೆ ಹೋರಾಡಲು ಹಿಂಜರಿಯದ ಅದಿರದ ಎದೆಯ ಬಲ್ಲಂಟನಿವನು. ರಣದುರಂಧರನು. ಆದರೆ ಈ ಪ್ರಸಂಗದಲ್ಲಿ ಆ ಲೋಕೈಕವೀರನ ಪಾಡು ಹೀಗೇಕಾಯ್ತು ? 'ಕೇವಲ ತಮಗೆ ಪಟ್ಟ ದೊರೆಯಬೇಕೆಂದು—ಸ್ವಾರ್ಥಕ್ಕಾಗಿ, ತನಗೆ ಪರಮ ಪೂಜ್ಯರಾದ ಗುರು-ಹಿರಿಯರನ್ನೂ, ಸ್ವಕೀಯರನ್ನೂ ಕೊಲ್ಲಬೇಕೆ ? ಅಹಾ ! ಎಂತಹ ಘೋರ, ಭಯಂಕರ ಕೃತ್ಯ ! ಇದು ತನ್ನಿಂದ ಎಂದೆಂದಿಗೂ ಆಗಕೂಡದು !' ಎಂದು ಅರ್ಜುನನ ಮನಸಿನಲ್ಲಿ ಹೊಯ್ದಾಟವು ಆರಂಭವಾಯ್ತು. ಕರುಣೆ ತಲೆದೋರಿತು. ಭಾವನಾವಶನಾದನು. ವಿಚಾರಶಕ್ತಿಯು ನಡೆಯದಾಯ್ತು. ಮೋಹವಶನಾಗಿ ದುರ್ಬಲನಾದನು.

ಧೃತರಾಷ್ಟ್ರನು ಸಂಜಯನನ್ನು ಪಾಂಡವರ ಕಡೆಗೆ ಕಳುಹಿ ಶಾಂತಿ, ಸಂಧಾನದ ಉಪದೇಶವನ್ನು ಅವರಿಗೆ ಕೇಳಿಸಿದ, ಆ ಹಿಂದಿನ ಪ್ರಸಂಗವನ್ನು ವಾಚಕರು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು. ಸಾಮ್ರಾಜ್ಯವಾದಿಗಳು ಹರಡಿದ ಮಾಯಾಜಾಲದಲ್ಲಿ ಸರಲಸ್ವಭಾವದ ಒಳ್ಳೊಳ್ಳೆಯ ಜನರು ಸಿಕ್ಕಿಕೊಂಡು ಹೇಗೆ ಕರ್ತವ್ಯಚ್ಯುತರಾಗುವರೆಂಬುದನ್ನು ಇಲ್ಲಿ ಮನಗಾಣಬಹುದು. ಸಂಜಯನ ಮೋಸಗಾರಿಕೆಯು ಮರುಳುಗೊಳಿಸುವ ಆ ಸವಿಮಾತಿನ ದುಷ್ಪರಿಣಾಮವು ಅರ್ಜುನನ ಮೇಲೆ ಆಯ್ತು ; ಆತನಿಗೆ ತನ್ನ ನಿಜವಾದ ಕರ್ತವ್ಯವೇನೆಂಬುದನ್ನು ಮರೆಯಿಸಿತು. ಅಯೋಗ್ಯ ಸ್ಥಾನದಲ್ಲಿ ದಯೆದೋರುವುದು ಅಯೋಗ್ಯವಾಗಿದೆ. ಧರ್ಮಕ್ಕಾಗಿ ಹೋರುವಾಗ ಇಲ್ಲದ ಕರುಣೆಗೆ ಎಡೆಗೊಡುವುದು ಅಧರ್ಮವಾಗಿದೆ. ಸಾಮ್ರಾಜ್ಯವಾದಿ ಹಗೆಗಳ ಕವಡು ಅರಿಯದೆ, ಸ್ವರಾಜ್ಯಕ್ಕಾಗಿ ಹೋರಾಡಲು ಸಿದ್ಧನಾದ ಜಗದೇಕವೀರನೂ ಮೋಸಹೋಗಿ, ಸ್ವಕರ್ತವ್ಯದಿಂದ ಹಿಂಜರಿದನು.

**ದೇಹದ ಮೇಲೆ ಖಿನ್ನತೆಯ ಪರಿಣಾಮಗಳು.**

ಖಿನ್ನತೆ, ಮೋಹ ಮತ್ತು ಕರುಣೆ ಇವೆಲ್ಲವೂ ಮನುಷ್ಯನ ಬಲವನ್ನು ಕುಂದಿಸುತ್ತವೆ. ಒಳ್ಳೇ ಬಲಶಾಲಿಯೆನಿಸಿದವನೂ ದುರ್ಬಲನಾಗುತ್ತಾನೆ. ಇದಕ್ಕೆ ಭ್ರಮರದ ಉದಾಹರಣವನ್ನು ಹೇಳುವುದುಂಟು. ಬಿರುಸಾದ ಕಟ್ಟಿಗೆಯನ್ನು ಕೊರೆದು ತೂತು ಮಾಡಬಲ್ಲ ಭ್ರಮರವು ಇರುಳಿನಲ್ಲಿ ಕಮಲಿನಿಗೆ ಮೋಹಿತನಾಗಿ ಅಲ್ಲಿಯೆ ಸೆರೆಯಾಳಾಗಿರುತ್ತದೆ. ಕಮಲದ ಪಕಳೆಯಂತಹ ಸೂಕ್ಷ್ಮವೂ ಕೋಮಲವೂ ಆದ ಪದಾರ್ಥವನ್ನು ಭೇದಿಸುವುದಕ್ಕೂ ಅದು ಅಸಮರ್ಥವಾಗುತ್ತದೆ. ನಾ, ನಾ ಎಂದು ಹೆಮ್ಮೆಬಡುವ ಬಲ್ಲಾಳ್ಗಳೂ, ಬಿಲ್ಲಾಳ್ಗಳೂ ಹೆಣ್ಣು ಅಥವಾ ಹೆಂಡಕ್ಕೆ ಮನಸೋತು ಹೇಗೆ ಹತಬಲರಾಗುತ್ತಾರೆಂಬುದಕ್ಕೆ ಇತಿಹಾಸವೆ ಸಾಕ್ಷಿಯಾಗಿದೆ. ಇದೇ ಪಾಡು, ಸ್ವಜನ-ಮೋಹದಿಂದ ಅರ್ಜುನನದೂ ಆಯ್ತು.

ಖಿನ್ನತೆಯಿಂದ ಶರೀರದೊಳಗಿನ ನರಗಳ ಬಲ ಕುಂದುವುದು. ಅದರಿಂದ ಮೈಕೈಗಳೊಳಗಿನ ಕಸುವು ಕಡಿಮೆ

ಯಾಗುವುದು. ನಾಲಗೆಯಲ್ಲಿ ನೀರು ಊರುವುದು ನಿಂತು, ಬಾಯಿ ಆರುವುದು. ಪಚನಕ್ರಿಯೆಯ ಮೇಲೆ ಇದರ ಪರಿಣಾಮವಾಗುವುದು. ಖಿನ್ನತೆಯು ಹೆಚ್ಚು ದಿನ ಹಾಗೆ ಉಳಿದರೆ ಅಗ್ನಿಮಾಂದ್ಯದ ರೋಗವು ಅಂಟಿ-ಕೊಳ್ಳುವುದು. ಎಷ್ಟೋ ಜನರಿಗೆ ಮನಸಿನ ಮೇಲಾದ ವಿಪರೀತ ಆಘಾತದಿಂದ ಅವರು ಗಂಡುಗೇಡಿಗಳಾದ ಉದಾಹರಣಗಳೂ ಉಂಟು.

ಮನಸಿನ ಕಳವಳದಿಂದ ಕಸುವು ಕುಂದಿ; ಪೈಯಲ್ಲಿ ನಿಲ್ಲುವ ಶಕ್ತಿಯೂ ಉಳಿಯುವುದಿಲ್ಲ. ಮೈ ನಡುಗು-ವುದು; ಒರಟು ಬರುವುವು; ಮೈಬಣ್ಣ ಗುಂದುವುದು. ಕಸಿವಿಸಿಯಿಂದ ಮೈ ಉರಿಯುವುದು.

ಈ ಸ್ಥಿತಿಯಲ್ಲಿ ತಿಂದ ಅನ್ನವು ಅರಗುವುದಿಲ್ಲ. ದೇಹ ಶಕ್ತಿ ಬೆಳೆಯುವುದಿಲ್ಲ. ಮನಸಿನ ಕಳವಳವು ಹೆಚ್ಚಾಗಿ ನೆತ್ತರವು ಸುಡುವುದು. ಮೈ ಉರಿಯುವುದು. ಮಿದುಳು ನಿಃಶಕ್ತವಾಗುವುದು. ತಿಳಿಗೇಡಿತನವು ಹೆಚ್ಚಾಗುವುದು. ಹುಚ್ಚು ಹಿಡಿವ ಹೊತ್ತು ಒದಗುವುದು. ಈ ಸ್ಥಿತಿಯಲ್ಲಿ ಐಹಿಕ ಅಥವಾ ಪಾರಲೌಕಿಕ ಯಾವ ಸಿದ್ಧಿಯನ್ನೂ ಆತನು ಪಡೆಯಲಾರನು. ಮೋಹ, ಖಿನ್ನತೆಗಳ ಜೊತೆಗೆ ಮದ, ಮತ್ಸರಗಳು ಸೇರಿಕೊಂಡಿದ್ದವಿದ್ದರಂತೂ ಆ ಪಾಡು ಇದಕ್ಕೂ ವಿಪರೀತ!

ಸಾಮ್ರಾಜ್ಯವಾದಿಯಾದ ಧೃತರಾಷ್ಟ್ರನು, ಸಂಜಯನ ಮುಖಾಂತರವಾಗಿ ಹಿತೋಪದೇಶದ ನೆಪದಿಂದ ಪಾಂಡ-ವರ ಮೇಲೆ ( ಮರುಳುಗೊಳಿಸುವ ಮಾತುಗಳ ) ಜಾಲ-ವನ್ನು ಪಸರಿಸಿದನು. ಅದರಲ್ಲಿ ಅರ್ಜುನನು ತಿಳಿಯದೆ ಸಿಕ್ಕಿಬಿದ್ದನು. ಯುದ್ಧಕಾಲದಲ್ಲಿ ಆತನನ್ನು ಕರುಣೆಯು ಆವರಿಸಿದುದರಿಂದ ಮನಸು ಖಿನ್ನವಾಯ್ತು. ದುರ್ಯೋ-ಧನನು ಮುಂದೊಡ್ಡಿದ ಧನದ ಆಮಿಷಕ್ಕೆ ಬಾಯಿ-ಬಿಟ್ಟಿದ್ದಿಲ್ಲ; ಸ್ವರಾಜ್ಯಸಂಪಾದನೆಗಾಗಿ ಹಂಬಲಿಸುವ ಈ ವೀರರು ಕೌರವರು ಕೊಡಬಯಸಿದ ದೊಡ್ಡ ಅಧಿಕಾರ ಪದವಿ ಮುಂತಾದ ಬೇರೆ ಯಾವ ಪ್ರಲೋಭನಗಳಿಗೂ ವಶರಾಗಲಿಲ್ಲ. ಕರುಣೆಯೊಂದು ಮಾತ್ರ ಅರ್ಜುನನ್ನು ಆವರಿಸಿ ಹಣ್ಣು ಮಾಡಿತು. ಧನ, ಅಧಿಕಾರ, ಅಥವಾ ಪದವಿಗಳ ಬೇಟಕ್ಕೆ ಇವರು ಮೋಸಹೋಗಿದ್ದರೆ, ತಮಗೆ ದೊರೆತ ಸಣ್ಣಪುಟ್ಟ ಹಕ್ಕುಬಾಧ್ಯತೆಗಳಿಂದಲೆ ಉಬ್ಬಿ, ಕೊಬ್ಬಿ ಪಡೆಯತಕ್ಕುದನ್ನು ಪಡೆದೆವೆಂಬ ಭ್ರಾಂತಿ-ಯಲ್ಲಿರುತ್ತಿದ್ದರು. ಮತ್ತು ಅಲ್ಪಸಂತುಷ್ಟಿಯ ಸಂಕು-ಚಿತ ಜೀವನದಲ್ಲಿ ತಲೆದೋರುವ ಹೀನ ಭಾವನೆಗಳು ಪ್ರಬಲವಾಗಿ ಪಾಂಡವರು ತಮ್ಮ ತಮ್ಮೊಳಗೆ ಒಬ್ಬ-ರೊಬ್ಬರ ಹಗೆಗಳಾಗುತ್ತಿದ್ದರು ಆದರೆ ಅವರಿಗೆ ಸ್ವರಾಜ್ಯದ ಹೊರತು ಬೇರೆ ಯಾತರಿಂದಲೂ ತೃಪ್ತಿಯಿದ್ದಿಲ್ಲ. ಆದುದರಿಂದ ಆ ಹೆಗ್ಗುರಿಯನ್ನು ಮುಂದಿಟ್ಟುಕೊಂಡು ನಡೆದ ಪಾಂಡವರು ಹೊನ್ನಿಗೆ ಆಸೆಪಡಲಿಲ್ಲ. ಅಧಿಕಾರ ಪದವಿಗಳನ್ನು ಬಯಸಲಿಲ್ಲ. 'ಗುರುಹಿರಿಯರು ಬಂಧು ಬಳಗದವರನ್ನು ಹೇಗೆ ಕೊಲ್ಲಲಿ? ಸ್ವಕುಲನಾಶವನ್ನು ಹೇಗೆ ಮಾಡಲಿ?' ಎಂಬ ಮೋಹವೊಂದೇ ಅರ್ಜುನನನ್ನು ಮರುಳು ಮಾಡಿತು.

ಸಾಮ್ರಾಜ್ಯವಾದಿಗಳಾದ ಆಡಳಿತಗಾರರು ತಾವು ಗೆದ್ದ ಜನಗಳಲ್ಲಿ ಬುದ್ಧಿಭೇದವನ್ನುಂಟುಮಾಡುತ್ತಾರೆ. ತಮಗೆ ಇಷ್ಟವಾದ ವಿಚಾರಗಳನ್ನು ಅವರ ತಲೆಯಲ್ಲಿ ಬಿತ್ತುವ ಎತ್ತುಗಡೆಯನ್ನು ಮಾಡುತ್ತಾರೆ. ಸೋತವ-ರಲ್ಲಿ ಮತ್ತೆ ಎಂದೂ ಆತ್ಮವಿಶ್ವಾಸವು ಅಂಕುರಿಸದಂತೆ ಪ್ರಚಾರ ನಡಿಸುತ್ತಾರೆ. ಅವರ ಕರ್ತೃತ್ವಶಕ್ತಿಯು ಬೆಳೆದು ಫಲಿಸಲು ಎಂದೂ ಅವಕಾಶವನ್ನೇ ಕೊಡುವುದಿಲ್ಲ. ಬಗೆ ಬಗೆಯ ಆಮಿಷಗಳನ್ನು ಜನರ ಮುಂದೆ ಒಡ್ಡಿ ಅವರನ್ನು ಸ್ವರಾಜ್ಯವಿಷಯಕ ಪ್ರಯತ್ನಗಳಿಂದ ದೂರ ಸೆಳೆಯು-ತ್ತಾರೆ. ಅವರಲ್ಲಿ ಬುದ್ಧಿಭೇದವನ್ನು ಹೆಚ್ಚಿಸುವ ವಿಚಾರ-ಗಳಿಗೆ ಪ್ರೋತ್ಸಾಹಿಸುತ್ತಾರೆ. ಒಡಕನ್ನುಂಟುಮಾಡು-ತ್ತಾರೆ. ಕೌರವರು ಇಂತಹ ಹಲವು ಕುಯುಕ್ತಿಗಳನ್ನು ಮಾಡಿ ನೋಡಿದರು. ಪಾಂಡವರಿಗೆ ರಾಜ್ಯದಾಡಳಿತದ ಅನುಭವವು ಸಿಕ್ಕಬಾರದೆಂದು, ತಾವೂ ಅರಸರಾಗಿ ಆಳಬಹುದೆಂಬ ಆತ್ಮವಿಶ್ವಾಸವು ಬೆಳೆಯಬಾರದೆಂದು ಕುತಂತ್ರದಿಂದ ಹದಿಮೂರು ವರುಷ ಅವರನ್ನು ಕಾಡಿಗೆ ಅಟ್ಟಿದರು. ಈ ಅವಧಿಯಲ್ಲಿ, ಅವರಿಗೆ ಕಾಳಗ ಮಾಡುವ —ಹೋರಾಡುವ ಕಲೆಯು ಮರೆತು ಹೋಗಿ, ಸ್ವರಾಜ್ಯಕ್ಕೆ ಅವರು ಅಪಾತ್ರರಾಗುವರೆಂದೂ ಕೌರವರು ಎಣಿಸಿರಬೇಕು. ಸಂಜಯನ ಮುಖದಿಂದ ಬೆಲ್ಲದಂತಹ ಮಾತುಗಳನ್ನಾಡಿಸಿ, ಉದಾತ್ತತತ್ವಗಳನ್ನು ಹೇಳಿಸಿ ಪಾಂಡವರಿಗೆ ಕುಂಕ್ಷಣವನ್ನೂ ಕೊಡಿಸಿದರು. ಅರ್ಜು-ನನು ವಿಚಾರಮೂಢನಾಗಿ ಬೆಪ್ಪನಂತೆ ಶಸ್ತ್ರಸನ್ಯಾಸಕ್ಕೆ ಸಿದ್ಧನಾಗುದು ಆ ಕುಂಕ್ಷಣದ ಫಲವೆಂದೇ ಹೇಳಬಹುದು. ಆದುದರಿಂದಲೇ ಸಾಮ್ರಾಜ್ಯಶಾಹಿಯ ನಾಡಿಗರು ಉಪ-ದೇಶಿಸುವ ಯಾವ ಬಗೆಯ ತತ್ವವಿಚಾರಗಳಿಗಾಗಲಿ, ಧರ್ಮವಿಚಾರಗಳಿಗಾಗಲಿ ಕಿವಿಗೊಡುವಾಗ ಜಿತರಾಷ್ಟ್ರ-ದವರು ಎಷ್ಟು ಎಚ್ಚರದಿಂದ್ದಷ್ಟೂ ತಡಿಮೆ. ಜ್ಞಾನಾ-ಮೃತವನ್ನು ಉಣಿಸುವೆವೆಂದು ಅವರು ಬಿಜನಾಗದಂತೆ ಸಿಹಿಯಾದ ನಂಜುನುಣಿಸಬಹುದು. ನರಶ್ರೇಷ್ಠನೆನಿಸಿದ ಅರ್ಜುನನೇ ಸಂಜಯನ ಉಪದೇಶಕ್ಕೆ ಬಲಿಬಿದ್ದ ಬಳಿಕ ಉಳಿದವರ ಪಾಡೇನು?

ಅರ್ಜುನನು (ಸಂಜಯನ ಉಪದೇಶದ ಪರಿಣಾಮದಿಂದ) ಹತಬಲನಾದನು. ಲೀಲೆಯಿಂದ ಎತ್ತುತ್ತಲಿದ್ದ ಗಾಂಡೀವ ಧನುಷ್ಯವನ್ನು ಹಿಡಿಯುವುದಕ್ಕೂ, ತನ್ನ ಕಾಲಮೇಲೆ ತಾನು ನಿಲ್ಲುವುದಕ್ಕೆ ಸಹ ಅಸಮರ್ಥನಾದನು. ಯುದ್ಧ ಮಾಡುವ ಮಾತಂತೂ ದೂರ ಉಳಿಯಿತು! ಸಂಜಯನ ಒಂದು ದಿನದ ಶಿಕ್ಷಣದ ಪರಿಣಾಮವಿದು ಮತ್ತೆ! ಹುಲಿಯಂತೆ ಇದ್ದ ನರವೀರನು ಆಗ ಇಲಿಯಾದನು. ವಜ್ರಕ್ಕಿಂತ ಕಠೋರವೃತ್ತಿಯ ಧೀರನು ಮೇಣದಿಂದಲೂ ಮಿದುವಾಗಿ ಬಿಟ್ಟನು! ಇದೆಲ್ಲವೂ ಏತರಿಂದ ಆಯ್ತು? ಹಗೆಗಳ ಮರುಳ್ಗೊಳಿಸುವ ಸಪ್ಪೆಮಾತುಗಳಿಗೆ ಕಿವಿಗೊಟ್ಟುದರ ದುಷ್ಪರಿಣಾಮವಿದು!

## ಅನುಭವ ಶೂನ್ಯತೆ.

ಸಾಮ್ರಾಜ್ಯವಾದಿಗಳು, ಜಿತರಾಷ್ಟ್ರದವರಿಗೆ ಅರಸುತನಗೆಯ್ವ ಸಂಧಿಗಳನ್ನೆ ಒದಗಿಸಿ ಕೊಡುವುದಿಲ್ಲ. ಅದರಂತೆ ಅವರಿಗೆ ಯುದ್ಧ ಮಾಡುವ ಅನುಭವವೂ ಸಿಕ್ಕದಂತೆ ಜಾಗರೂಕರಾಗಿರುತ್ತಾರೆ. ಏಕೆಂದರೆ, ಅವರಲ್ಲಿ ತಾವು ಆಡಳಿತವನ್ನು ನಡಿಸಬಲ್ಲೆವು, ಕಾಳಗ ಮಾಡಿ ಹಗೆಗಳನ್ನು ಹೊಡೆದೋಡಿಸಬಲ್ಲೆವು ಎಂಬ ಆತ್ಮವಿಶ್ವಾಸವುಂಟಾದರೆ ಸಾಮ್ರಾಜ್ಯದ ಬೇರುಗಳು ಸಡಿಲುವುದಕ್ಕೆ ತಡವೆ ಇಲ್ಲ. ಕೌರವರು ಪಾಂಡವರನ್ನು ೧೨ ವರ್ಷ ಅಡವಿಗೆ ಅಟ್ಟಿದ್ದೇಕೆ? ಮೇಲೊಂದು ವರುಷ ಅಜ್ಞಾತವಾಗಿ ತಲೆ ಮರೆಯಿಸಿಕೊಂಡಿರಲು ಹಚ್ಚಿದ್ದೇಕೆ? ಪಾಂಡವರಿಗೆ ನಾಡನ್ನು ಆಳುವ ಅನುಭವವೆ ದೊರೆಯಬಾರದೆಂದು ಕೌರವರ ಹಂಚಿಕೆ. ಅಜ್ಞಾತವಾಸದಲ್ಲಿ ಆಶ್ರಯದಾತನು ಎಂದುದನೆ ಎಂದು ಬಾಳುವ ದೈನ್ಯವೃತ್ತಿಯು ಒಮ್ಮೆ ಮೈಯುಂಡಿತೆಂದರೆ ಬಳಿಕ ಪಾಂಡವರಲ್ಲಿ ತಮ್ಮ ಸ್ವರಾಜ್ಯಸಂಪಾದನೆಯಲ್ಲಿ ಹಂಬಲವೇ ಉಳಿಯಲಿಕ್ಕಿಲ್ಲವೆಂದು ಕೌರವರಾಯನ ಹಾರೈಕೆ! ಅಜ್ಞಾತವಾಸದಲ್ಲಿ ಥಕ್ಕನೆ ಇಂತಹ ಎಡೆಯಲ್ಲಿ ಪಾಂಡವರಿರುವರೆಂದು ಗೊತ್ತಾದರೆ ಮತ್ತೆ ಹದಿಮೂರು ವರುಷ ಕಾಡಾಡಿಗಳಾಗುವ ಹದರಿಕೆ ಬೇರೆ! ಸಾಮ್ರಾಜ್ಯವಾದಿಗಳ ಇಂತಹ ಈ ಹೆದರಿಕೆಯ ಅಂಜಿಕೆಯ ಅಳುಕಿನ ವಾತಾವರಣದ ದುಷ್ಪರಿಣಾಮಗಳು ಮನುಷ್ಯನ ಮೇಲೆ ಎಷ್ಟಾಗುವುವು, ಎಂಬುದನ್ನು ನೋಡಬೇಕಾಗಿದ್ದರೆ, ಅರ್ಜುನನೇ ಇದಕ್ಕೆ ಒಳ್ಳೆಯ ಉದಾಹರಣವಾಗಿದ್ದಾನೆ. ಗಂಡುಗಲಿಯೆನಿಸಿದ ಅರ್ಜುನನು ಈ ಅವಧಿಯಲ್ಲಿ ಗಂಡುಗೇಡಾಗಿ, ನಪುಂಸಕನಾದನು. ಗಂಡುತೊತ್ತಾಗಿ ಹೆಣ್ಣಿನಂತೆ ಜೀವಿಸಬೇಕಾಯ್ತು! ಐದಿ ಹನ್ನೆರಡು ವರುಷಗಳ ವನವಾಸದ ದುಷ್ಪರಿಣಾಮಗಳೇ ಇಷ್ಟು ಆದ ಬಳಿಕ, ಹಲವು ವರುಷಗಳಿಂದ ಪಾರತಂತ್ರ್ಯದಲ್ಲಿ ಕೊಳೆಯುತ್ತಿರುವವರ ಗತಿ ಏನಾಗಬೇಕು?

## ನಪುಂಸಕತ್ವ.

ಅರ್ಜುನನು ಗಂಡುಗೇಡಿಯಾಗಿದ್ದನೆಂಬುದು ಕೌರವರಿಗೆ ಗೊತ್ತಿದ್ದಿತೊ ಇಲ್ಲವೊ, ಆ ಮಾತು ಹೋಗಲಿ. ಸಂಜಯನ ಕವಡು ಉಪದೇಶವು ಅರ್ಜುನನ ಮೇಲೆಯೆ ವಿಶೇಷ ಪರಿಣಾಮವನ್ನು ಮಾಡಿದುದಕ್ಕೆ ಇದೂ ಒಂದು ಮುಖ್ಯಕಾರಣವಾಗಿದ್ದಿತೆಂದು ತೋರುತ್ತದೆ. ಭಾರತೀಯ ಯುದ್ಧಕ್ಕೆ ಮುಂಚೆ ಒಂದು ವರುಷ ಅರ್ಜುನನಿಗೆ ನಪುಂಸಕತ್ವವು ಪ್ರಾಪ್ತವಾಗಿತ್ತು. ಗಂಡುತೊತ್ತಾಗಿ ವಿರಾಟನಲ್ಲಿದ್ದನು. ಒಂದು ಕಾಲದಲ್ಲಿ ತ್ರಿಭುವನ ಸುಂದರಿಯನ್ನು ತನ್ನ ಗಂಡುಗಾಡಿಯ ಬರಿ ನೋಟದಿಂದಲೆ ಮರುಳು ಮಾಡಿದ ಗಂಡುಗಲಿ ಅರ್ಜುನನನ್ನು ಈಗ ರೂಪಸಂಪನ್ನೆಯರಾದ ನವಯೌವನೆಯರ ಪರಿವಾರದಲ್ಲಿರಿಸಲು ವಿರಾಟನಿಗೆ ಸ್ವಲ್ಪವೂ ಸಂಕೋಚವೆನಿಸಲಿಲ್ಲ! ಇಷ್ಟು ಆತನು ನಿಃಸಂದಿಗ್ಧವಾಗಿ ನಪುಂಸಕನಾಗಿದ್ದನು! ಒಂದು ವರುಷದ ತರುವಾಯ ಕೆಲವೊಂದು ಉಪಾಯಗಳಿಂದ ಆತನು ತನ್ನ ಈ ಕುಂದನ್ನು ಹೋಗಲಾಡಿಸಿಕೊಂಡರೂ ಮೊದಲಿನ ಗಂಡುಗೇಡಿತನದ ಕುಸಂಸ್ಕಾರಗಳು ಮಾತ್ರ ಸಂಪೂರ್ಣವಾಗಿ ಅಳಿದುಹೋಗಲಿಲ್ಲ. ಅಲ್ಲದೆ ಆಗ ಪೆಣ್ಮಣಿಗಳ ಮಧ್ಯದಲ್ಲಿಯೆ ಕಾಲಕಳೆಯಬೇಕಾದುದರಿಂದ ಮೋಹ, ದಯೆ, ಕರುಣೆ ಮುಂತಾದ ಸ್ತ್ರೀಯರಿಗೆ ಸಹಜವಾದ ಕೋಮಲ ಗುಣಗಳು ಆತನಲ್ಲಿ ಬೆಳೆದುಕೊಂಡು ಬಂದುವು! ಆದುದರಿಂದ ಸಂಜಯನ ದಯೆಯ ಉಪದೇಶವು ಅರ್ಜುನನ ಮನಸಿನ ಮೇಲೆ ಅಚ್ಚೊತ್ತಿದಂತೆ ನಿಚ್ಚಳಾಗಿ ಮೂಡಿತು. ಉಳಿದವರ ಮೇಲೆ ಈ ಉಪದೇಶದ ಪರಿಣಾಮವೆ ಆದಂತಿಲ್ಲ! ಇದರಿಂದ ಪೂರ್ವ ಸಂಸ್ಕಾರಗಳ ಮಹತ್ವವು ಎಷ್ಟೆಂಬುದು ಸ್ಪಷ್ಟವಾಗುತ್ತದೆ. ಈ ಕಾರಣದಿಂದಲೆ ಸಾಮ್ರಾಜ್ಯವಾದಿಗಳು, ಜಿತರಾಷ್ಟ್ರದ ಜನರಲ್ಲಿ ಉಚ್ಚಸಂಸ್ಕಾರಗಳು ಲುಪ್ತವಾಗುವಂತೆಯೂ ಹೀನ ಸಂಸ್ಕಾರಗಳು ಬೇರೂರುವಂತೆಯೂ ಹಲವು ಹಂಚಿಕೆಗಳನ್ನು ಮಾಡುತ್ತಾರೆ. ಸೋತನಾಡಿಗರು ಎಂದೂ ತಲೆಯೆತ್ತದಂತೆ, ಸ್ವರಾಜ್ಯಕ್ಕಾಗಿ ಹಂಬಲಿಸದಂತೆ ಇವೆಲ್ಲ ಹಂಚಿಕೆಗಳ ಮುಖ್ಯೋದ್ದೇಶವಾಗಿರುತ್ತದೆ.

ಅರ್ಜುನನ ಮೈ ಮತ್ತು ಮನಸುಗಳು ತೀರ ಬಲಹೀನವಾಗಿದ್ದುವು. ಆತನು ತನ್ನಿಂದ ಕಾದುವುದಕ್ಕಾಗುವುದಿಲ್ಲವೆಂದು ಕೈಲಾಗದವನಂತೆ ನಿಂತು ಬಿಟ್ಟನು! ಆತನ ಮನಸಿನಿಂದ ದುರ್ಬಲನಾಗಿದ್ದಂತೆ ತನ್ನ ಧೀಶಕ್ತಿಯನ್ನೂ

ನಿಮಿತ್ತಾನಿ ಚ ಪಶ್ಯಾಮಿ ವಿಪರೀತಾನಿ ಕೇಶವ ।
ನಚ ಶ್ರೇಯೋಽನುಪಶ್ಯಾಮಿ ಹತ್ವಾ ಸ್ವಜನಮಾಹವೇ ॥ ೩೧ ॥

**ಅನ್ವಯಃ**— ಹೇ ಕೇಶವ ! ನಿಮಿತ್ತಾನಿ ವಿಪರೀತಾನಿ ಚ ಪಶ್ಯಾಮಿ । ಆಹವೇ ಚ ಸ್ವಜನಂ ಹತ್ವಾ ಶ್ರೇಯಃ ನ ಅನುಪಶ್ಯಾಮಿ ॥ ೩೧ ॥

**ಎಲೈ ಕೇಶವನೆ, ಈಗ ನನಗೆ ಎಲ್ಲ ವಿಪರೀತ ಲಕ್ಷಣಗಳು ಕಾಣುತ್ತಿವೆ. ನಮ್ಮ ಬಳಗದವರನ್ನು ಕಾಳಗದಲ್ಲಿ ಕೊಂದು ನಮಗೆ ಯಾವ ಶ್ರೇಯಸ್ಸು ದೊರೆಯಲಾರದೆಂದು ಕಾಣುತ್ತದೆ.**

---

ಕಳೆದುಕೊಂಡಿದ್ದನು. ಲೋಕವೆಲ್ಲ ನಿರರ್ಥಕವಾಗಿ ತೋರಲಾರಂಭಿಸಿತು ! ಆಗ ಆತನು ಹೀಗೆಂದನು :

**ಶೋಕೋದ್ರೇಕದ ದುಷ್ಪರಿಣಾಮಗಳು.**

(೩೧) 'ಎಲ್ಲ ಲಕ್ಷಣಗಳು' ವಿಪರೀತವಾಗಿ ತೋರುತ್ತಿವೆ, ಎಂದು ಅರ್ಜುನನು ಉಸುರಿದ್ದಾನೆ. ಮನಸು ತಿರುಗಿದೊಡನೆ ಎಲ್ಲವೂ ತಿರುಗಿದಂತೆ ತೋರುತ್ತದೆ. **'ಮನಸು ಹೇಡಿಯಾಗಿದ್ದರೆ ಸೋಲು ತಪ್ಪಿದ್ದಲ್ಲ. ಮನಸು ಬಲಶಾಲಿಯಾಗಿದ್ದರೆ ಗೆಲುವು ದೂರವಿಲ್ಲ.'** ಅರ್ಜುನನ ಮನಸೆ ಹೇಡಿಯಾಯ್ತು. ಆದರಿಂದ ಆತನಿಗೆ ಎಲ್ಲೆಡೆಯಲ್ಲಿಯೂ ಅಶುಭ ಸೂಚನೆಗಳು ಕಾಣುತ್ತಿದುವು ! ಇದೆಲ್ಲವೂ ಮನಸಿನ ಆಟವು. ಆದುದರಿಂದ ಸಾಮ್ರಾಜ್ಯವಾದಿ ಧೃತರಾಷ್ಟ್ರನು ಅರ್ಜುನನ ಮನಸ್ಸನ್ನೆ ಭ್ರಾಂತಿಯಲ್ಲಿ ಕೆಡಹುವ ಹೊಂಚುಹಾಕಿದನು. ಸಂಜಯನನ್ನು ಕಳುಹಿ ಉಪದೇಶ ಮಾಡಿಸಿದನು. ಅರ್ಜುನನು ಕಾಳಗಕ್ಕೆ ಹೊರಟಾಗ ಮೊದಲು ಆತನಿಗೆ ಒಂದೂ ಅವಲಕ್ಷಣವು ಗೋಚರಿಸಲಿಲ್ಲ. ಮುಂದೆ ಸ್ವಲ್ಪ ಹೊತ್ತಿನಲ್ಲಿ ಎಲ್ಲವೂ ವಿಪರೀತವಾಯ್ತು ! ಇದಕ್ಕೆ ಕಾರಣವೇನು ? ರಣಾಂಗಣಕ್ಕೆ ಹೊರಟಾಗ ಅರ್ಜುನನ ಮನಸಿನಲ್ಲಿ ತುಂಬಿ ತುಳುಕುತ್ತಲಿದ್ದ ಉತ್ಸಾಹವು ಮುಂದೆ ಸ್ವಲ್ಪ ಹೊತ್ತಿನಲ್ಲಿ ಮಾಯವಾಯ್ತು ! ಹೊರಗಿನ ಜಗತ್ತು ಇದ್ದುದು ಇದ್ದಂತೆಯೆ ಇತ್ತು. ಅದರಲ್ಲಿ ಯಾವ ಬದಲಾವಣೆಗಳೂ ಆಗಿರಲಿಲ್ಲ. ಬದಲಾದುದು ಅರ್ಜುನನ ಮನಸು ಮಾತ್ರ. ಆದರಿಂದ ಎಲ್ಲೆಡೆಗೂ ಆತನಿಗೆ ವಿಪರೀತ ಲಕ್ಷಣಗಳು ಕಾಣತೊಡಗಿದುವು. **ಯಾರ ಭಾವನೆಗಳು ಹೇಗೋ ಹಾಗೆಯೆ ಲೋಕವು ಅವರಿಗೆ ಭಾಸವಾಗುವುದು.** ಕಾಮಣಿಯಾದವನಿಗೆ ಜಗತ್ತು ಹಳದಿ ಕಾಣುವುದು. ಇದು ಆತನ ದೃಷ್ಟಿದೋಷ. ನಮಗೆ ಶೀತು ಹಿಡಿದು ನಡುಕವುಂಟಾದಾಗ ಎಲ್ಲೆಲ್ಲೂ ಚಳಿಯೆ ತುಂಬಿಕೊಂಡಂತೆ ಭಾಸವಾಗುತ್ತದೆ. ಇದು ನಮ್ಮ ಶಾರೀರಿಕ ದೋಷ. ಉದಾಸೀನ ಮನಸ್ಕನಿಗೆ ಲೋಕವೆಲ್ಲ ಉದಾಸೀನವಾಗಿಯೆ ತೋರುವುದು ! ಉತ್ಸಾಹಿಗೆ ಉತ್ಸಾಹಯುಕ್ತವಾಗಿ ತೋರುವುದು. ಇದೆಲ್ಲಕ್ಕೂ ಆತನ ಮನಸೆ ಕಾರಣವು. ಹಲವರು ದೈವ, ಹಣೆಬರಹ ಎಂದು ಮುಮ್ಮಲನೆ ಮರಗುವುದುಂಟು. ನಿಜವಾಗಿ ನೋಡಿದಲ್ಲಿ ಹೀಗೆಲ್ಲ ಹೇಳುವುದು ವ್ಯರ್ಥ. ಮನುಷ್ಯನು ತನ್ನಲ್ಲಿ ಸದ್ಗುಣಗಳನ್ನು ಹೆಚ್ಚಿಸಿಕೊಂಡರೆ ಲೋಕದಲ್ಲೆಲ್ಲ ಸದ್ಗುಣಗಳೆ ಕಾಣುವುವು. ತಾನು ಹೇಡಿಯೂ ದುರ್ಗುಣಿಯೂ ಆಗಿದ್ದರೆ ಲೋಕವೆಲ್ಲ ಹಾಗೆಯೆ ಕಾಣುವುದು. ಇದಕ್ಕಾಗಿಯೆ ಪುರಾತನರು 'ಆತ್ಮಶುದ್ಧಿ'ಯ ಮಹತ್ವವನ್ನು ವರ್ಣಿಸಿದ್ದಾರೆ.

ಅರ್ಜುನನನ್ನು ಉದಾಸೀನತೆಯು ಆವರಿಸಿತು ಖಿನ್ನನಾದನು. ಅದರಿಂದ ಆತನ ಮನಸು ದೋಷಯುಕ್ತವಾಯ್ತು ಎಲ್ಲೆಡೆಗೂ ಅವಲಕ್ಷಣಗಳು ಕಾಣಲಾರಂಭಿಸಿದುವು. ಆತನಿಂದ ಖಿನ್ನತೆಯು ದೂರವಿದ್ದಾಗ ಅದೆ ಅರ್ಜುನನಲ್ಲಿ ವಿಜಯೋತ್ಸಾಹವು ತುಂಬಿ ತುಳುಕುತ್ತಲಿತ್ತು. **ಲೋಕವು ಒಂದು ನಿಲುಗನ್ನಡಿಯಂತಿದೆ. ಅದರಲ್ಲಿ ನಾವು ಯಾವ ಭಾವಭಂಗಿಯಿಂದ ನಿಂತು ನೋಡುವೆವೊ ಆ ಬಗೆಯಾಗಿಯೆ ನಮಗೆ ಪ್ರತಿಬಿಂಬವು ಕಾಣಿಸಿಕೊಳ್ಳುವುದು. ಆದುದರಿಂದ ಯಾರಿಗಾಗಲಿ, ಎಲ್ಲೆಡೆಯಲ್ಲೂ ವಿಪರೀತ ಲಕ್ಷಣಗಳು ಕಾಣಹತ್ತಿದರೆ, ಆಗ ತನ್ನಲ್ಲಿಯೆ ಏನಾದರೂ ತಪ್ಪಿದೆಯೆಂದು ತಿಳಿಯಬೇಕು. ಮತ್ತು ಆ ತಪ್ಪನ್ನು ತಿದ್ದಿಕೊಳ್ಳಲು ಯತ್ನಿಸಬೇಕು. ತನ್ನ ಅಂತರಂಗದೊಳಗಿನ ದೋಷಗಳು ದೂರವಾಗುತ್ತಲೆ ಜಗತ್ತಿನಲ್ಲಿ ಎಲ್ಲೆಡೆಗೂ ಶುಭಲಕ್ಷಣಗಳು ಗೋಚರಿಸಹತ್ತುವುವು.**

'ಸ್ವಜನರನ್ನು ಕೊಂದು ನಮ್ಮ ಕಲ್ಯಾಣವು ಆಗಲಾರದು' ಎಂದು ಅರ್ಜುನನು ಇನ್ನೂ ಒಂದು ಆಕ್ಷೇಪವನ್ನು ಎತ್ತಿದ್ದಾನೆ ! ಇಲ್ಲಿ ಅರ್ಜುನನು ಹಗೆಗಳನ್ನು 'ಸ್ವಜನರು' ಎಂದು ಗ್ರಹಿಸಿದ್ದಾನೆ! ರಕ್ತಸಂಬಂಧವಿದ್ದ ಮಾತ್ರಕ್ಕೆ ಯಾರೂ 'ಸ್ವಜನರು' ಆಗಲಾರರು ಎಂಬು-

## (೯) ಸ್ವಜನ ಮೋಹ

**ನ ಕಾಂಕ್ಷೇ ವಿಜಯಂ ಕೃಷ್ಣ ನ ಚ ರಾಜ್ಯಂ ಸುಖಾನಿಚ ।**
**ಕಿಂ ನೋ ರಾಜ್ಯೇನ ಗೋವಿಂದ ಕಿಂ ಭೋಗೈರ್ಜೀವಿತೇನ ವಾ ॥ ೩೨ ॥**

ಅನ್ವಯ:— ಹೇ ಕೃಷ್ಣ! ವಿಜಯಂ ನ ಕಾಂಕ್ಷೇ, ರಾಜ್ಯಂ ಸುಖಾನಿ ಚ ನ (ಕಾಂಕ್ಷೇ) | ಹೇ ಗೋವಿಂದ! ನಃ ರಾಜ್ಯೇನ ಕಿಮ್ ? ಭೋಗೈಃ ಜೀವಿತೇನ ವಾ ಕಿಮ್ ? ॥ ೩೨ ॥

**ಎಲೈ ಕೃಷ್ಣನೆ, ನಾನು ಗೆಲುವನ್ನು ಬಯಸುವುದಿಲ್ಲ, ನನಗೆ ರಾಜ್ಯವು ಬೇಡ, ಮತ್ತು ಆ ಸುಖಗಳು ಬೇಡ. ಎಲೈ ಗೋವಿಂದನೆ, ನಮಗೆ (ಆ) ರಾಜ್ಯದಿಂದಾದರೂ ಏನು ಲಾಭ? ಸುಖೋಪಭೋಗಗಳಿಂದಾದರೂ ಏನು ಬಂತು? ಬಾಳಿ ಬದುಕಿಯಾದರೂ ಏನು ಫಲ? ॥ ೩೨ ॥**

ದನ್ನು ಅರ್ಜುನನು ಆಗ ತೀರ ಮರೆತುಬಿಟ್ಟನು! 'ಸ್ವ-ಜನರು' ಎಂದರೆ ತಮ್ಮವರು. ತಮ್ಮವರು ಯಾರು? ತಮಗೆ ಹಿತಮಾಡುವವರು; ಕಲ್ಯಾಣವನ್ನು ಬಯಸುವವರು. ಅನ್ಯಾಯ ಮಾಡದವರು. ಸತ್ಯದ ಕಡೆಗೆ ಒಯ್ಯುವವರು; ಇವರೆ ಸ್ವಜನರು. ಸಜ್ಜನರು.

ಆದರೆ ಯಾರು ಪಾಂಡವರ'ಸ್ವರಾಜ್ಯವನ್ನು **ಮೋಸದಿಂದ ಸೆಳೆದುಕೊಂಡರೊ ಅವರನ್ನು ಕಾಡಿಗೆ ಅಟ್ಟಿ ನಾಡಾಡಿಗಳನ್ನಾಗಿ ಮಾಡಿದರೊ, ಅಡಿಗಡಿಗೆ ಅಪಮಾನ, ಉಪಹಾಸಗಳನ್ನು ಸಹಿಸಹಚ್ಚಿ ಗೋಳಾಡಿಸಿದರೊ, ಮತ್ತು ಕೊನೆಗೆ ತಾವು ಕೊಟ್ಟ ವಚನಗಳನ್ನು ಮರಿಯಲಿಕ್ಕೂ ಹೇಸಲಿಲ್ಲವೊ, ಇಂತಹ ಸಾಮ್ರಾಜ್ಯವಾದಿಗಳು ತಮ್ಮ ಜಾತಿಕುಲಸಂಬಂಧಿಗಳಾಗಿದ್ದರೂ ಅವರು 'ಸ್ವಜನ'ರಾಗಲಾರರು.** ಅರ್ಜುನನು ಈ ತಾರತಮ್ಯವನ್ನು ತಿಳಿದುಕೊಳ್ಳಬೇಕಾಗಿತ್ತು. ಆದರೆ ಅನುಚಿತ ದಯಾದಾಕ್ಷಿಣ್ಯದ ಭಾವನೆಗಳಿಂದ ಸಂಭ್ರಾಂತನಾದ ಅರ್ಜುನನಲ್ಲಿ ಈ ವಿವೇಕವನ್ನು ಅಪೇಕ್ಷಿಸುವುದು ಉಚಿತವಾಗಲಾರದು.

**ಹಿರಿಯ ಹೊಣೆಗಾರಿಕೆ.**

ಆಗ ಅರ್ಜುನನ ಮೇಲೆ ಕೇವಲ ಸ್ವ-ರಾಜ್ಯವನ್ನು ಮರಳಿ ಪಡೆವ ಹೊಣೆಯೊಂದೇ ಇದ್ದಿಲ್ಲ. **'ಪ್ರಪಂಚದಲ್ಲಿ ಅನ್ಯಾಯ, ಒತ್ತಾಯಗಳಿಂದ ಪರರ ದೇಶಗಳನ್ನು ಬಗೆಬಗೆಗಳಿಂದ ಸೂರೆಗೆಯ್ವ ಸಂಘಗಳ ನಿರ್ಮೂಲನಮಾಡಿ, ಎಲ್ಲೆಡೆಗೂ ಧರ್ಮರಾಜ್ಯಕ್ಕೆ ಪೋಷಕವಾದ ಸ್ವಾತಂತ್ರ್ಯ, ಸಮತೆಯ ವಾತಾವರಣವನ್ನುಂಟು ಮಾಡುವುದು'** ಇದೂ ಒಂದು ಶ್ರೇಷ್ಠತಮವಾದ ಹೆಚ್ಚಿನ ಹೊಣೆಯೂ ಆತನ ಮೇಲಿದ್ದಿತು. ಭಗವಾನ್ ಮನಮೋಹನ ಶ್ರೀಕೃಷ್ಣನು ಈ ಕಾರ್ಯಕ್ಕಾಗಿಯೆ ಸನ್ನದ್ಧನಾಗಿದ್ದು ಅರ್ಜುನನಿಗೆ ಬೆಂಬಲನ್ನೀವ ಆಶ್ವಾಸನವನ್ನೂ ಕೊಟ್ಟಿದ್ದನು ಅರ್ಜುನನು ಸ್ವರಾಜ್ಯ ಸಂಪಾದನೆಗಾಗಿ ಹೋರಾಡುವಲ್ಲಿ ಆತನ ಸ್ವಾರ್ಥದೊಂದಿಗೆ ಒಂದು ಮಹೋಪಕಾರದ ಕಾರ್ಯವೂ ಕೈಗೂಡುತ್ತಿದ್ದಿತು. ಆದುದರಿಂದ ನಿಜವಾದ ಸ್ವಜನರು ಯಾರು ಪರರು ಯಾರು ಎಂಬ ಬಗ್ಗೆ ಆತನು ಸಂದೇಹಪಟ್ಟುಕೊಳ್ಳುವುದು ಯೋಗ್ಯವಾಗದ್ದಿಲ್ಲ. ಆದರೆ ಆಗಬಾರದ್ದು ಆಗಿಹೋಯಿತು! ಬೇಡವೆಂದುದೇ ಬಂದು ಬಿಡುವುದು! ಮತ್ತು, ಒಮ್ಮೆ ಬುದ್ಧಿಭ್ರಂಶವಾದ ಬಳಿಕ ಮುಂದಿನ ಅವನತಿಗೆ ತಡೆಯೆ ಉಳಿಯುವುದಿಲ್ಲ. ಅರ್ಜುನನು ಬಂಧುಬಳಗದವರೆಂಬ ವ್ಯಾಮೋಹದಲ್ಲಿ ಸಿಲುಕಿ, ಭಗವಾನ್ ಶ್ರೀಕೃಷ್ಣನು ಯೋಜಿಸಿದ ಜಗದ್ವ್ಯಾಪಕವಾದ ಧರ್ಮಸಂಸ್ಥಾಪನೆಯ ಮಹಾಕಾರ್ಯದಲ್ಲಿ ಅಂಶತಃ ನೆರವಾಗುವುದಕ್ಕೆ ದೊರೆತ ಅಪೂರ್ವ ಯೋಗವನ್ನು ಕಳೆದುಕೊಂಡನು. ಆತನು ಬಲು ಸಂಕುಚಿತ ದೃಷ್ಟಿಯ ಕಿರುಕುಳ ಸಂಸಾರಿಕನಂತೆ ತನ್ನ ಆಪ್ತರು, ಇಷ್ಟರುಗಳ ಮಾತುಗಳನ್ನು ಆಡಲಾರಂಭಿಸಿದನು! ವಿಶಾಲದೃಷ್ಟಿಯನ್ನು ಕಳೆದುಕೊಂಡ ಕೂಡಲೆ ಮನುಷ್ಯನು ಕ್ಷುಲ್ಲಕ ವಿಚಾರಗಳಲ್ಲಿ ಹೇಗೆ ಮುಳುಗುವನೆಂಬುದಕ್ಕೆ, ಕರ್ತವ್ಯಚ್ಯುತನಾಗುವನೆಂಬುದಕ್ಕೆ ಅರ್ಜುನನ ಈ ಅವಸ್ಥೆಯೆ ಸಾಕ್ಷಿಯಾಗಿದೆ.

(೩೨-೩೪) ಅರ್ಜುನನು ತನ್ನ ಕರಳು ಕಕ್ಕುಲತೆಯ ಜನರ ಮೋಹದಿಂದ ರಾಷ್ಟ್ರೀಯ ಕಾರ್ಯಕ್ಕೆ ತಿಲಾಂಜಲಿಯನ್ನೀಯುತ್ತಿದ್ದಾನೆ! ನಿಜವಾಗಿ ವಿಚಾರಿಸಿದರೆ, **'ರಾಷ್ಟ್ರಕಾರ್ಯಕ್ಕೆ ಅಡ್ಡಬರುವ ಆಪ್ತಸಂಬಂಧಗಳಿಗೆ ನೀರು ಬಿಡಬೇಕು'.** ಆದರೆ ಭರತೋತ್ತಮನೆನಿಸಿದ ಅರ್ಜುನನು, ಭಾರತದ ನೇತಾರನು. ಈ ಹೊತ್ತಿನಲ್ಲಿ ಸ್ವಜನರ ಮೋಹದಿಂದ ಕಣ್ಗೆಟ್ಟುದರಿಂದ ಆತನ ಬಾಯಿಂದ ವಿಪರೀತ ಮಾತುಗಳು ಹೊರಬೀಳುತ್ತಲಿವೆ!

**ಯೇಷಾಮರ್ಥೇ ಕಾಙ್ಕ್ಷಿತಂ ನೋ ರಾಜ್ಯಂ ಭೋಗಾಃ ಸುಖಾನಿ ಚ |**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾನ್ ತ್ಯಕ್ತ್ವಾ ಧನಾನಿ ಚ || ೩೩ ||**
**ಆಚಾರ್ಯಾಃ ಪಿತರಃ ಪುತ್ರಾಸ್ತಥೈವ ಚ ಪಿತಾಮಹಾಃ |**
**ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ ಸಂಬಂಧಿನಸ್ತಥಾ || ೩೪ ||**

---

ಯೇಷಾಂ ಅರ್ಥೇ ನಃ ರಾಜ್ಯಂ ಕಾಂಕ್ಷಿತಮ್, ಭೋಗಾಃ (ಕಾಂಕ್ಷಿತಾಃ), ಸುಖಾನಿಚ (ಕಾಂಕ್ಷಿತಾನಿ); ತೇ ಇಮೇ ಆಚಾರ್ಯಾಃ, ಪಿತರಃ, ಪುತ್ರಾಃ, ತಥಾ ಏವಚ ಪಿತಾಮಹಾಃ, ಮಾತುಲಾಃ, ಶ್ವಶುರಾಃ, ಪೌತ್ರಾಃ, ಶಾಲ್ಯಾಃ, ತಥಾ ಸಂಬಂಧಿನಃ ಪ್ರಾಣಾನ್ ಧನಾನಿ ತ್ಯಕ್ತ್ವಾ, ಯುದ್ಧೇ ಅವಸ್ಥಿತಾಃ! || ೩೩, ೩೪ ||

**ಯಾರಿಗಾಗಿ ನಾವು ರಾಜ್ಯ, ಭೋಗ, ಮತ್ತು ಸುಖಗಳನ್ನು ಬಯಸಿದೆವೊ, ಆ ಗುರುಹಿರಿಯರು, ಮಕ್ಕಳು, ಅಜ್ಜಂದಿರು, ಮಾವಂದಿರು, ಮೊಮ್ಮರು, ಭಾವಮೈದುನರು, ಹಕ್ಕಿಹೊಂದಿದವರು ಇವರೆಲ್ಲ ಜೀವಿತವಿತ್ತಗಳ ಆಸೆ ತೊರೆದು ಕದನಕ್ಕೆ ನಿಂತಿದ್ದಾರೆ.** || ೩೩, ೩೪ ||

---

ಬಂಧು ಒಳಗದ ಮೋಹದಿಂದ ವಿಚಾರಗೇಡಿಯಾಗಿ ಅರ್ಜುನನು ಎಂಥ ಮಾತುಗಳನ್ನಾಡುತ್ತಾನೆ ನೋಡಿ: 'ನನಗೆ ಗೆಲುವು ಬೇಕಾಗಿಲ್ಲ,' (**ನ ಕಾಂಕ್ಷೇ ವಿಜಯಂ**) ಎಂದು ತನ್ನ ಬಾಯಿಂದಲೆ ಹೇಳುತ್ತಿದ್ದಾನೆ. ತಾನೇ '**ವಿಜಯ**'ನಾಗಿದ್ದು ತನಗೆ '**ವಿಜಯ ಬೇಡ**' ಎನ್ನುತ್ತಾನೆ! ಈ ಮಾತಿನಿಂದ ತನ್ನನ್ನು ತಾನೇ ನಿರಾಕರಿಸಿದಂತೆ ಆಯ್ತು! ಇದುವೆ ಆತ್ಮಘಾತ! ತಿಳುವಳಿಕೆಯಿದ್ದವನ ಬಾಯಿಂದ ಇಂಥ ಆತ್ಮಘಾತಕ ಮಾತುಗಳು ಎಂದೂ ಹೊರಡಲಾರವು. ಆದರೆ ಅರ್ಜುನನ ಮನಸಿನ ಮೇಲೆ! ಸಂಜಯನ ಆತ್ಮಘಾತಕ ವಿಚಾರಗಳ ಪರಿಣಾಮವು ಇರುವ ವರೆಗೆ ಆತನು (ಅರ್ಜುನನು) ಇದಕ್ಕಿಂತ ಬೇರೆ ತೆರನಾಗಿ ನಡೆಯುವುದು ಸಾಧ್ಯವೆ ಇಲ್ಲ. ಪರಕೀಯ (ವಿರೋಧಿಗಳ) ಶಿಕ್ಷಣದ ದುಷ್ಪರಿಣಾಮಗಳು ಹೀಗೆ ಆಗುವುದು ನಿಶ್ಚಿತ. ಆ ಶಿಕ್ಷಣ ಪಡೆದವರಲ್ಲಿ ವಿಪರೀತ ವಿಚಾರಗಳು ತಲೆದೋರದೆ ಇರಲಾರವು. ಆದುದರಿಂದ ಪೆರವರ ಕೈಯಲ್ಲಿ ತಮ್ಮ ನಾಡಿನ ತಲೆಯನ್ನು ಎಂದೂ ಒಪ್ಪಿಸಲಾಗದು.

### ಬಾಳಿನ ಗುರಿ.

ಬೆಳಗೆ ಇಲ್ಲದಿದ್ದರೆ ಅದು ಬಾಳುವೆಯೆ ಅಲ್ಲ. **ಧರ್ಮ, ಅರ್ಥ, ಕಾಮ** ಮತ್ತು **ಮೋಕ್ಷ** ಎಂಬ ಇದು ನಾಲ್ಕು ಬಗೆಯ ಬೆಳವಿಯಿದೆ. ತನ್ನ ಪಾಲಿಗೆ ಬಂದ, ತನ್ನ ಸ್ಥಾನಮಾನಕ್ಕೆ ಸಲ್ಲುವ ಕರ್ತವ್ಯವನ್ನು ಪರಿಪಾಲಿಸುವುದು; ಧನಸಂಚಯ ಮಾಡುವುದು; ಧರ್ಮಕ್ಕೆ ವಿರೋಧಿಯಲ್ಲದ ಸುಖಗಳನ್ನು ಉಪಭೋಗಿಸುವುದು; ಮತ್ತು ಬಂಧನಗಳನ್ನು ಹರಿದೊಗೆದು ಮುಕ್ತನಾಗುವುದು. ಹೀಗಿದು ಮಾನವರ ಬಾಳಿನ ಗುರಿಯಾಗಿದೆ. ಕರ್ತವ್ಯಪಾಲನೆಯೆ ಧರ್ಮ; ಇದು ಮೊದಲ ಗುರಿ. ಬಂಧನಗಳನ್ನು ಹರಿದು ಸ್ವಾತಂತ್ರ್ಯಪಡೆಯುವುದು—**ಮುಕ್ತ**ನಾಗುವುದು ಇದು ಕೊನೆಯ ಗುರಿ. ಜೀವನದಲ್ಲಿ ಪಡೆಯಬೇಕಾದುದೆ ಇದು **ಸ್ವಾತಂತ್ರ್ಯ ಸಂಪಾದಿಸುವುದೇ ಜೀವನದೊಳಗಿನ ಶ್ರೇಷ್ಠವಾದ ವಿಜಯ**ವಾಗಿದೆ. ಆದುದರಿಂದ 'ನನಗೆ ವಿಜಯ ಬೇಡ'ವೆಂದು ಯಾರೂ ಹೇಳಲಿಕ್ಕಾಗದು. ವಿಜಯವೆ ಬೆಳಗೆ ವಿಜಯವೆ ಪಳ್ಗೆ. ಬೆಳಗೆ-ಪಳ್ಗೆಗಳಿಲ್ಲದ ಬಾಳು ಬಾಳಲ್ಲ. ಹಾಗೆ ಬದುಕುವುದರಲ್ಲಿ ಹುರುಳಿಲ್ಲ. ಅದುವೆ ಜೀವನ್ಮೃತಾವಸ್ಥೆ, ನರವೀರನು ತನಗೆ 'ವಿಜಯ ಬೇಡ'ವೆಂದು ಮಾತನಾಡುವುದು ಎಷ್ಟು ಅನುಚಿತ! ಇದು ಅರ್ಜುನನ ಸ್ವಧರ್ಮಕ್ಕೆ ವಿರೋಧಿಯಾದ ಮಾತು. ಮೋಹವೂ ತಿಳಿಗೇಡಿತನವೂ, ಅರ್ಜುನನ್ನು ಎಂಥ ಅಧಃಪಾತಕ್ಕೆ ಒಯ್ಯಲಿದೆಯೆಂಬುದನ್ನು ಇಲ್ಲಿ ಕಾಣಬಹುದು.

ತಿಳಿಗೇಡಿಯಾಗಿ ಅರ್ಜುನನು ಮುಂದೆ ಮತ್ತೆ ಒಡನುಡಿಯುವುದೇನೆಂದರೆ. '**ನನಗೆ ಸುಖವೂ ಬೇಡ; ರಾಜ್ಯವೂ ಬೇಡ.**' ಅರ್ಜುನನು ಚತುರ್ವಿಧ ಪುರುಷಾರ್ಥಗಳಲ್ಲಿ 'ವಿಜಯವು' ತನಗೆ ಬೇಡವೆಂದು ಹೇಳಿ, ತಾನು ಬಂಧನದಲ್ಲಿ, ಪಾರತಂತ್ರ್ಯದಲ್ಲಿ ಇರಲು ಒಪ್ಪಿದಂತಾಯ್ತು! ತನಗೆ ಮೋಕ್ಷವು ಬೇಡವೆಂದಂತಾಯ್ತು! ಹುಟ್ಟಿದುದೆ ವ್ಯರ್ಥವಾಯ್ತು. ಏಕೆಂದರೆ ಸ್ವಾತಂತ್ರ್ಯವನ್ನು (ಮೋಕ್ಷ) ಪಡೆಯುವುದೆ ಜೀವನ ಇತಿಕರ್ತವ್ಯವಾಗಿದೆ. ಆ ಕರ್ತವ್ಯವನ್ನು ನೆರವೇರಿಸುವುದೆ ಈತನಿಗೆ ಬೇಡವಾಗಿದೆ! ನನಗೆ ಸುಖವೂ ಬೇಡ; ಸ್ವರಾಜ್ಯವೂ ಬೇಡ, ಎಂದು ಗಳಹುತ್ತಾನೆ! '**ಅರ್ಥ**' ಮತ್ತು **ಕಾಮ**ಗಳೆಂಬ ಪುರುಷಾರ್ಥಗಳೆ ಇವು ಇವೂ ಈತನಿಗೆ ಇಷ್ಟವಿಲ್ಲ! **'ಅರ್ಥ, ಕಾಮ, ಮತ್ತು ಮೋಕ್ಷಗಳು ಎಂಬ ತ್ರಿವಿಧ ಪುರುಷಾರ್ಥಗಳೆ ಬೇಡವಾಗಿದ್ದರೆ ಮಾನವನಾಗಿ**

ಹುಟ್ಟಿದ್ದಾದರೂ ಏತಕ್ಕೆ? ಯಾರಿಗೆ ಧರ್ಮಾರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಲ್ಲಿ ಹಂಬಲವಿಲ್ಲವೊ ಅವರಿಗೆ ಬದುಕಿ ಬಾಳುವ ಅಧಿಕಾರವೆ ಇಲ್ಲ. ಇಂತಹರು ಭೂಮಿಗೆ ಭಾರ; ಕೂಳಿಗೆ ಕಾಲರು. 'ನನಗೆ ಸುಖವು ಬೇಡ; ಸ್ವರಾಜ್ಯವು ಬೇಡ, ವಿಜಯವೂ ಬೇಡ'ಎಂದು ಹೇಳುವಾಗ ಅರ್ಜುನನ ಮುಂದೆ ಇನ್ನೂ ಒಂದು ಪ್ರಶ್ನೆಯು ನಿಂತಿತು: 'ಹಾಗಾದರೆ ನಾನು ಬದುಕಿದುದಾದರೂ ಏತಕ್ಕೆ?' ಎಂಬ ಪ್ರಶ್ನೆಯು ತಲೆದೋರಿ, ಮುಂದೆ ಆತನು ತಾನಾಗಿಯೆ 'ಆಯ್ತು, ಇನ್ನು ನಾನು ಬದುಕಿಯಾದರೂ ಮಾಡುವುದೇನಿದೆ?' ಎಂದು ಉಸಿರುಗರೆಯುತ್ತಾನೆ! ಖೇದಜನ್ಯ ಕೀಳು ವಿಚಾರ ಪರಂಪರೆಯು ಮನುಷ್ಯನಲ್ಲಿ ಒಮ್ಮೆ ತಲೆದೋರಿದ ಬಳಿಕ, ಕೊನೆಗೆ ಆತನು ತನ್ನ ಕೊನೆಯನ್ನು (ಸಾವನ್ನು) ಬಯಸಹತ್ತುವನು. ಹೀಗೆ ಖೇದವು ಮನುಷ್ಯನ ಘಾತ ಮಾಡುವುದು. ಆದುದರಿಂದ ಖೇದಕರ ವಿಚಾರಗಳಿಗೆ ಎಂದೂ ಇಂಬುಗೊಡಲಾಗದು. ಉತ್ಸಾಹಕರ ಪೌರುಷದ (ಪುರುಷಾರ್ಥದಾಯಕ) ವಿಚಾರಗಳನ್ನೆ ಹೃದಯದಲ್ಲಿ ನೆಲೆಗೊಳಿಸಬೇಕು.

## ಬಂಧುಬಳಗದ ವ್ಯಾಮೋಹ.

ಅರ್ಜುನನು ತನ್ನ ಹತ್ತಿರಹೊಂದಿದವರನ್ನು ಕಂಡು ಎದೆಕರಗಿದವನಾದನು. 'ಗುರುಹಿರಿಯರು, ಮಾವಂದಿರು ಭಾವಂದಿರು, ಅಣ್ಣತಮ್ಮಂದಿರು, ಮಕ್ಕಳು ಮೊಮ್ಮಕ್ಕಳು ಮೊದಲಾದವರಿಲ್ಲದೆ ಅನುಭವಿಸುವ ಸುಖವು ಸುಖವೆ? ಅವರಿಲ್ಲದೆ ರಾಜ್ಯಭೋಗ, ಸುಖಸಂಪತ್ತುಗಳು ಯಾರಿಗೆ? ಯಾರೊಡಗೂಡಿ ಸುಖಸಂಪತ್ತನ್ನು ಉಪಭೋಗಿಸಬಹುದಾಗಿದ್ದಿತೊ, ಆ ನನ್ನ ಬಳಗವೆಲ್ಲ ಜೀವಿತ ವಿತ್ತಗಳ ಆಸೆ ತೊರೆದು ರಣರಂಗದಲ್ಲಿ ನಿಂತಿದೆ! ಅವರೆಲ್ಲರು ಈ ಯುದ್ಧದಲ್ಲ ಮಡಿದರೆ ಬಳಿಕ ಈ ರಾಜ್ಯ, ಸುಖ, ಸಂಪತ್ತುಗಳು ಯಾರಿಗೆ? ಇವರೆಲ್ಲರೂ ನನಗೆ ಹತ್ತಿರಹೊಂದಿದ ಜನಗಳು. ಇವರನ್ನು ಸಾಯಿಸುವುದು ನನಗೆ ಉಚಿತವಲ್ಲ.' ಎಂದು ಅರ್ಜುನನು ಚಿಂತಿಸುತ್ತಿದ್ದಾನೆ. ಆತನು ಮತ್ತೆ ಶ್ರೀಕೃಷ್ಣನಿಗೆ ಕೇಳಿಕೊಳ್ಳುವುದೇನಂದರೆ: 'ಎಲೈ ಕೃಷ್ಣನೆ ನಿನಗೆ ಗೋವಿಂದ'ನೆಂದು ಹೆಸರಿದೆ. 'ಗೋ' ಎಂದರೆ ಇಂದ್ರಿಯಗಳು. 'ವಿಂದ' ಎಂದರೆ ಅಂಕೆಯಲ್ಲಿ ಇಡುವವನು. ಗೋವಿಂದನೆಂದರೆ ಇಂದ್ರಿಯ ವೃತ್ತಿಗಳನ್ನು ಅಂಕೆಯಲ್ಲಿ ಇಟ್ಟುಕೊಳ್ಳುವವನೆಂದರ್ಥ. ಆದುದರಿಂದ ಸಂಯಮಿಯಾದ (ಗೋವಿಂದ) ನೀನು ಸ್ವಜನ ಸಂಹಾರದಂತಹ ಆತತಾಯಿಗಳ ಕೆಲಸಕ್ಕೆ ಹುರಿದುಂಬಿಸಬೇಕೆ? ನನ್ನ ಸುಖಭೋಗಗಳನ್ನು ಸಂಪಾದಿಸಲು—ಸ್ವಾರ್ಥಕ್ಕಾಗಿ ಈ ಗುರುಹಿರಿಯರ, ಮಕ್ಕಳು ಮರಿಗಳ ಕೊಲೆಗೆ ಎಳೆಸಲೆ? ಮತ್ತು ಅವರ ನೆತ್ತರದಿಂದ ಮಾಸಿದ ಆ ರಾಜ್ಯವೈಭವದಲ್ಲಿ ಹಿಗ್ಗಿಗೊಳ್ಳಲೆ?'

## ಕುಟುಂಬ ಮತ್ತು ರಾಷ್ಟ್ರ.

ಈ ಬಗೆಯ ವಿಚಾರ ಪರಂಪರೆಯಲ್ಲಿ ಸಿಲುಕಿ ಅರ್ಜುನನು ರಾಷ್ಟ್ರಕಾರ್ಯಕ್ಕೆ ವಿಘ್ನವನ್ನುಂಟುಮಾಡುತ್ತಿದ್ದಾನೆ. ಅರ್ಜುನನ ಮುಂದೆ ಈಗ ಎರಡು ಪ್ರಶ್ನೆಗಳಿವೆ: (೧) ಲೋಕೋದ್ಧಾರದ ರಾಷ್ಟ್ರಕಾರ್ಯ; ಮತ್ತು (೨) ಸ್ವಜನ ಸಂರಕ್ಷಣೆಯ ಕೌಟುಂಬಿಕ ಕೆಲಸ. ಇಲ್ಲಿ ಅರ್ಜುನನು ಮೊದಲನೆಯದಕ್ಕಿಂತ ಎರಡನೆಯದೆ ಹಿರಿದೆಂದು ಗ್ರಹಿಸಿದ್ದಾನೆ. ಕೌರವರು ತಮ್ಮ ನಡೆವಳಿಯಿಂದ ಲೋಕಕ್ಕೆ ಅನ್ಯಾಯ ಅನೀತಿಯ ಪಾಠಗಳನ್ನು ಕಲಿಸುತ್ತಿದ್ದರು. ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ, ಎಂಬ ಗಾದೆಇದೆ. ಕೌರವರು ಸಾಮ್ರಾಜ್ಯಧಾರಿಗಳಾಗಿ ಲೋಕದಲ್ಲಿ ಹಿರಿಯರೆಂದು ಮೆರೆಯುತ್ತಿದ್ದರು. ಕೌರವರು ಮಾಡದ ಅನ್ಯಾಯವಿಲ್ಲ. ಸಾಮ್ರಾಜ್ಯವನ್ನು ಉಳಿಸುವುದಕ್ಕಾಗಿ ಮತ್ತು ಬೆಳೆಸುವುದಕ್ಕಾಗಿ ಅವರು ಕೆಲವರಿಗೆ ನಂಜುಣಿಸಿದರು; ಕೆಲರಿಗೆ ಬೆಂಕಿಯಲ್ಲಿ ಸುಟ್ಟರು. ಹಲವರ ಸ್ವತ್ತು ಸುಲಿದರು; ಮೋಸದಿಂದ ನಾಡಗಳನ್ನು ಸೆಳೆದರು; ಕಾಡಿಗೆ ಅಟ್ಟಿದರು. ಇನ್ನು ಕೆಲರನ್ನು ಕೊಲ್ಲಿಸಲಿಕ್ಕೂ ಹೇಸಲಿಲ್ಲ. ಹೆಣ್ಣುಮಕ್ಕಳನ್ನು ಒಡ್ಡೋಲಗದಲ್ಲಿ ಅವಮಾನಗೊಳಿಸಿದರು. ಜನರಿಗೆ ಸುಳ್ಳು ಆಸೆಗಳನ್ನು ಹಚ್ಚಿದರು. ಹಲವು ಆಶ್ವಾಸನಗಳ ಘೋಷಣೆ ಮಾಡಿದರು. ಆದರೆ ಕೊಟ್ಟ ಒಂದು ವಚನವನ್ನೂ ಪಾಲಿಸಲಿಲ್ಲ. ಕೊನೆಗೆ ಕಾಳಗವಿಲ್ಲದೆ ಒಂದು ಹಿಡಿ ಮಣ್ಣೂ ನಿಮಗೆ ದೊರೆಯದು, ಎಂದು ಹೇಳಿದರು! ಇದು ಕೌರವರ ನಡೆವಳಿಯ ಮಾದರಿ! ಸಾಮ್ರಾಟನೂ ಮತ್ತು ಅವನ ಮಂತ್ರಿಗಳೂ ಇವರೆ ಈ ತೆರನಾಗಿ ನಡೆದುಕೊಂಡರೆ, ಮುಂದೆ ಲೋಕದ ಗತಿಯೇನು? ಆದುದರಿಂದ ಅನ್ಯಾಯ ಅನೀತಿಯಿಂದ ವರ್ತಿಸುತ್ತಿದ್ದ ಧೃತರಾಷ್ಟ್ರ ಪುತ್ರರನ್ನು ಸಾಮ್ರಾಜ್ಯಪದದಿಂದ ತಳ್ಳಿ ಅವರ ಸ್ಥಳದಲ್ಲಿ ನ್ಯಾಯನೀತಿಯಿಂದ ನಡೆವ—ಧರ್ಮಮರ್ಯಾದೆಯಲ್ಲಿ ಇರುವ ಲೋಕಮಾನ್ಯರಾದ ರಾಜಪುರುಷರಿಗೆ ಪಟ್ಟಗಟ್ಟುವುದು ಆ ಕಾಲದ ರಾಷ್ಟ್ರೀಯ ಮುಖಂಡರ ಆದ್ಯಕರ್ತವ್ಯವೆ ಆಗಿದ್ದಿತು. ಇದುವೆ ಆಗಿನ ರಾಷ್ಟ್ರಕಾರ್ಯ. ಈ ರಾಷ್ಟ್ರಕಾರ್ಯವನ್ನು ಈಡೇರಿಸಿ, ಲೋಕವನ್ನು ಅನ್ಯಾಯದ ಒತ್ತಾಯದಿಂದ ಬಿಡಿಸುವುದು ಆ ಕಾಲದ ವಿಚಾರವಂತರಾದ ತಲೆಯಾಳುಗಳ ಮೊದಲ

ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ ಮಧುಸೂದನ ।
ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ಕಿಂ ನು ಮಹೀಕೃತೇ ॥ ೩೫ ॥
ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾ ಪ್ರೀತಿಃ ಸ್ಯಾಜ್ಜನಾರ್ದನ ।
ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥ ೩೬ ॥
ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್ ।
ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ ಮಾಧವ ॥ ೩೭ ॥

---

**ಅನ್ವಯ:—** ಹೇ ಮಧುಸೂದನ! (ಮಾಂ) ಘ್ನತಃ ಅಪಿ ಏತಾನ್, ತ್ರೈಲೋಕ್ಯರಾಜ್ಯಸ್ಯ ಹೇತೋಃ ಅಪಿ ಹಂತುಂ ನ ಇಚ್ಛಾಮಿ, ಕಿಂ ನು ಮಹೀಕೃತೇ ? ॥ ೩೫ ॥ ಹೇ ಜನಾರ್ದನ! ಧಾರ್ತರಾಷ್ಟ್ರಾನ್ ನಿಹತ್ಯ ನಃ ಕಾ ಪ್ರೀತಿಃ ಸ್ಯಾತ್ ? ಏತಾನ್ ಆತತಾಯಿನಃ ಹತ್ವಾ ಅಸ್ಮಾನ್ ಪಾಪಂ ಏವ ಆಶ್ರಯೇತ್ ॥ ೩೬ ॥ ತಸ್ಮಾತ್ ಸ್ವಬಾಂಧವಾನ್ ಧಾರ್ತರಾಷ್ಟ್ರಾನ್ ಹಂತುಂ ವಯಂ ನ ಅರ್ಹಾಃ । ಹೇ ಮಾಧವ! ಹಿ ಸ್ವಜನಂ ಹತ್ವಾ ವಯಂ ಕಥಂ ಸುಖಿನಃ ಸ್ಯಾಮ ? ॥ ೩೭ ॥

**ಎಲೈ ಮಧುಸೂದನನೆ, ನನ್ನನು ಕೊಂದರೂ ನಾನು ಇವರನ್ನು ಕೊಲ್ಲಲಾರೆ. ಮೂಲೋಕದ ರಾಜ್ಯವು ದೊರೆಯುವುದೆಂದರೂ ನಾನಿವರನ್ನು ಹೊಡೆಯಲಾರೆ. ಬಳಿಕ ನೆಲದ ಬೆಲೆಯೇನು ನನಗೆ? ॥ ೩೫ ॥ ಎಲೈ ಜನಾರ್ದನನೆ, ಧೃತರಾಷ್ಟ್ರನ ಮಕ್ಕಳನ್ನು ಕೊಂದು ನಮ್ಮ ಕಲ್ಯಾಣವು ಏನಾಗಬೇಕಾಗಿದೆ? ಈ ಆತತಾಯಿಗಳನ್ನು ಕೊಂದು ನಾನೆ ಪಾಪಕ್ಕೆ ಪಕ್ಕಾಗಬೇಕಾದಿತು. ॥ ೩೬ ॥ ಆದುದರಿಂದ ನಮ್ಮ ಬಾಂಧವರಾದ ಈ ಕೌರವರನ್ನು ಕೊಲ್ಲುವುದು ನಮಗೆ ತಕ್ಕುದಲ್ಲ. ಎಲೈ ಮಾಧವನೆ! ನಮ್ಮ ಜನರನ್ನು ಕೊಂದು ನಾವು ಸುಖಿಗಳಾಗುವುದು ಎಂತು? ॥ ೩೭ ॥**

---

ಕೆಲಸವಾಗಿತ್ತು. ಈ ಕರ್ತವ್ಯಪಾಲನೆಯೆ ನಿಜವಾದ ಧರ್ಮ. ಇದಕ್ಕೆ ಹೊರತಾಗಿ ನಡೆವುದೇ ಅಧರ್ಮ. ರಾಷ್ಟ್ರವನ್ನು ಕಡೆಗಣಿಸಿ, ತನ್ನ ಹೆಂಡತಿ ಮಕ್ಕಳು, ಅಣ್ಣತಮ್ಮಂದಿರು, ತಾಯಿತಂದೆ ಎಂದು ಮುಂತಾಗಿ ಸ್ವಜನಬಾಂಧವರ ವ್ಯಾಮೋಹದ ಕೆಸರಲ್ಲಿ ಹೊರಳಾಡು-ವವರೆಲ್ಲ ಪತಿತರು. ನಿಂದ್ಯರು. ಅರ್ಜುನನು ಸ್ವಜನ ಸಂರಕ್ಷಣೆಗೆ ಹೆಚ್ಚು ಮಹತ್ವವನ್ನು ಕೊಟ್ಟದರಿಂದ ರಾಷ್ಟ್ರಕಾರ್ಯಕ್ಕೆ ವಿಮುಖನಾದನು. ಅಧರ್ಮದಲ್ಲಿ ಅಡಿಯಿಟ್ಟನು. ಈ ಅಧಾರ್ಮಿಕ ಪ್ರವೃತ್ತಿಯು ಆತ-ನಿಂದ ಹೀಗೆ ಒಡನುಡಿಸಿದೆ:

(೩೫-೩೭) ಬಳಗದವರ ಕಳವಳದಿಂದ ದೀನನಾದ ಅರ್ಜುನನು ನುಡಿಯುವುದೇನೆಂದರೆ: "ಈ ಜನರು ನನ್ನನ್ನು ಕೊಂದರೂ ನಾನು ಇವರನ್ನು ಕೊಲ್ಲಲಾರೆ, ಅವರನ್ನು ಕೊಂದು ಸ್ವರ್ಗ, ಮೃತ್ಯು, ಪಾತಾಳಗಳ, ಮೂಲೋಕದ ರಾಜ್ಯವು ದೊರೆಯುವುದೆಂದು ಎದೆ ತಟ್ಟಿ ಹೇಳಿದರೂ ನಾನು ಅವರನ್ನು ಕೊಲ್ಲಲು ಕೈ ಎತ್ತಲಾರೆ. ಎಂದ ಮೇಲೆ ಬರಿ ಈ ಭೂಲೋಕದ ರಾಜ್ಯಕ್ಕಾಗಿ ಅವರನ್ನು ಹೊಡೆಯಲು ನಾನು ಮನಸ್ಸು ಮಾಡಬಹುದೇ? ಕೌರವರು ನಮ್ಮ ಬಂಧುಗಳು. ಆದುದರಿಂದ ಅವರನ್ನು ಕೊಂದರೆ ನಮ್ಮ ಕಲ್ಯಾಣವಾಗಲಾರದು. ಅವರು ಆತತಾಯಿಗಳು ಎಂಬುದು ನಿಜ. ಆದರೆ ಆತತಾಯಿಗಳನ್ನು ಕೊಲ್ಲುವುದರಿಂದ ಪಾಪವೇ ಬರುತ್ತದೆ. ಏಕೆಂದರೆ ತಮ್ಮ ಬಳಗದವರನ್ನು ಕೊಲ್ಲುವುದರಿಂದ ಯಾರು ತಾನೆ ಸುಖಿಗಳಾದಾರು?"

**ಆತತಾಯಿಗಳ ಕೊಲೆ.**

ಆತತಾಯಿಗಳು ಯಾರೆಂಬುದನ್ನು ಶಾಸ್ತ್ರವು ಹೀಗೆ ಹೇಳುತ್ತದೆ.

**ಅಗ್ನಿದೋಗರದಶ್ಚೈವ ಶಸ್ತ್ರೋನ್ಮತ್ತೋ ಧನಾಪಹಃ।**
**ಕ್ಷೇತ್ರ ದಾರ ಹರಶ್ಚೈತಾನ್ ಷಡ್**
**ವಿದ್ಯಾದಾತತಾಯಿನಃ ॥**
(ಶುಕ್ರನೀತಿ)

**ಗುರುಂ ವಾ ಬಾಲ ವೃದ್ಧೌ ವಾ ಬ್ರಾಹ್ಮಣಂ ವಾ**
**ಬಹುಶ್ರುತಂ ।**
**ಆತತಾಯಿನಮಾಯಾನ್ತಂ ಹನ್ಯಾದೇವಾಽ**
**ವಿಚಾರಯನ್ ॥**
**ಅಗ್ನಿದೋ ಗರದಶ್ಚೈವ ಶಸ್ತ್ರಪಾಣಿರ್ಧನಾಪಹಃ ।**
**ಕ್ಷೇತ್ರ ದಾರಹರಶ್ಚೈವ ಷಡೇತೇ ಹ್ಯಾತತಾಯಿನಃ ॥**
**ಉದ್ಯತಾಸಿರ್ವಿಷಾಗ್ನಿಭ್ಯಾಂ ಶಾಪೋದ್ಯತ ಕರಸ್ತಥಾ।**
**ಆಥರ್ವಣೇನ ಹನ್ತಾ ಚ ಪಿಶುನಶ್ಚಾಪಿ ರಾಜನಿ ॥**

**ಭಾರ್ಯಾರಿಕ್ಥಾಪಹಾರೀ ಚ ರನ್ಧ್ರಾನ್ವೇಷಣತತ್ಪರಃ।**
**ಏವಮಾದ್ಯಾನ್ವಿಜಾನೀಯಾತ್ಸರ್ವಾನೇವಾತ**
**ತಾಯಿನಃ ॥**
**ನಾತತಾಯಿವಧೇ ದೋಷೋ ಹನ್ತುರ್ಭವತಿ ಕಶ್ಚನ।**
**ಪ್ರಕಾಶಂ ವಾಽಪ್ರಕಾಶಂ ವಾ ಮನ್ಯುಸ್ತಂ**
**ಮನ್ಯುಮೃಚ್ಛತಿ ॥**

( ಮನುಂ, ೮-೩೫೦-೩೫೧ )

"ಬೆಂಕಿಯನ್ನು ಹಚ್ಚುವವನು, ನಂಜನುಣಿಸುವವನು, ಶಸ್ತ್ರದಿಂದ ಹೊಡೆಯುವವನು, ಹೊಲ, ಹೆಣ್ಣು, ಮತ್ತು ಹೊನ್ನುಗಳನ್ನು ಅಪಹರಿಸುವವನು, ಶಪಿಸುವವನು, ಮಂತ್ರ, ಮಾಟ ಮಾಡುವವನು ಅರಸರಲ್ಲಿ ಚಾಡಿ-ಹೇಳುವವನು, ಹೆಂಗಸರ ಹಣವನ್ನು ಎತ್ತುವವನು, ಹೆರವರ ಹುಳುಕುಗಳನ್ನು ಹುಡುಕುವುದರಲ್ಲಿ ತತ್ಪರನು, ಇಂತಹರೆಲ್ಲರಿಗೆ ಆತತಾಯಿಗಳೆಂದು ಹೆಸರು.

" ಆತತಾಯಿಯು ಗುರುವಿರಲಿ, ಬಾಲನಿರಲಿ, ವೃದ್ಧ-ನಿರಲಿ, ಅಥವಾ, ಬಹುಶ್ರುತ ಬ್ರಾಹ್ಮಣನಿರಲಿ, ಅವನನ್ನು ಯಾವ ವಿಚಾರಕ್ಕೂ ಎಡೆಗೊಡದೆ ಒಮ್ಮೆಲೇ ಕೊಲ್ಲ-ಬೇಕು. ಎಲ್ಲರಿಗೂ ತಿಳಿಯುವಂತೆ ಅಥವಾ ಯಾರಿಗೂ ತಿಳಿಯದಂತೆ, ಜೀವಹರಣ ಮಾಡುವ ಆತತಾಯಿಯನ್ನು ಕೊಲ್ಲುವವನಿಗೆ ಯಾವ ಬಗೆಯಿಂದಲೂ ಕೊಲೆಯ ಪಾಪವು ತಟ್ಟುವುದಿಲ್ಲ. ಏಕೆಂದರೆ ಆ ಆತತಾಯಿಯ ಕ್ರೂರತೆಯೇ ಆತನಿಗೆ ಮುಳುವಾಗುತ್ತದೆ."

ಪುರಾತನ ಶಾಸ್ತ್ರಕಾರರು ಆತತಾಯಿಯು ಯಾರೆಂಬು ದನ್ನು ವಿವರಿಸಿ, ಅಂಥ ಆತತಾಯಿಯನ್ನು ಕೂಡಲೆ ಕೊಲ್ಲಬೇಕೆಂದು ಆಜ್ಞಾಪಿಸಿದ್ದಾರೆ. ಆದರೆ ಅರ್ಜುನನು ವಿಪರೀತವಾಗಿ ಮಾತನಾಡುತ್ತಾನೆ ! ಈ 'ಆತತಾಯಿ-ಗಳನ್ನು ಕೊಂದರೆ ನಮಗೆ ಪಾಪ ತಟ್ಟುವುದು !' ಎಂದು ಹೇಳುತ್ತಾನೆ. ಸಾಮ್ರಾಜ್ಯ ಸಿಂಹಾಸನಾರೂಢರಾದ ಕೌರವರು ಆತತಾಯಿಗಳಾಗಿರುವರೆಂಬ ಬಗ್ಗೆ ಅರ್ಜು-ನನಿಗೆ ಸಂದೇಹವೆ ಇಲ್ಲ. ತಾನೇ ಕೌರವರಿಗೆ ಆತತಾಯಿ-ಗಳೆಂದು ಸಂಬೋಧಿಸಿದ್ದಾನೆ. ಆದರೂ ಅವರನ್ನು ಕೊಲ್ಲಕೂಡದೆಂದು ಹೇಳುವ ಕಾರಣವೇನು ? ಅವರು ತನ್ನ ಬಳಗದವರು, ಎಂಬ ಭಾವನೆಯೆ ಇದಕ್ಕೆ ಕಾರಣ. ಆಪ್ತಬಾಂಧವರು ಆತತಾಯಿಗಳಾಗಿದ್ದರೂ, ಅನ್ಯಾಯ ಅನೀತಿವಂತರಾಗಿದ್ದರೂ ಅವರನ್ನು ಶಿಕ್ಷಿಸಲಾಗದು ; ರಕ್ಷಿಸಬೇಕು, ಎಂದು ಅರ್ಜುನನು ಈ ಕಾಲಕ್ಕೆ ಗ್ರಹಿಸಿಕೊಂಡಿದ್ದಾನೆ !

ಒಂದು ವೇಳೆ ಹಸ್ತಿನಾಪುರದಲ್ಲಿ ಕೌರವರ ಬದಲು ಬೇರೆ ಹೆರವರು ಯಾರಾದರೂ ರಾಜರಾಗಿದ್ದು ಅವರು ಅನ್ಯಾಯ ನಡಸಿದ್ದರೆ ಅವರೊಡನೆ ಕಾದಲು ಅರ್ಜು-ನನು ಸಿದ್ಧನಾಗಬಹುದಾಗಿತ್ತು. ಆದರೆ ಕೌರವರು ತಮ್ಮ ದೇಶದವರು ; ತಮ್ಮ ಕುಲದವರು ; ರಕ್ತ-ಸಂಬಂಧಿಕರು, ಆದುದರಿಂದಲೆ ಅವರನ್ನು ಕೊಲ್ಲಲು ಅರ್ಜುನನ ಆಕ್ಷೇಪ. 'ನಿವಾತಕವಚರಂತಹ ಪ್ರಬಲ-



ರಾದ ಪರಕೀಯರನ್ನು ತಾನು ನಿರ್ಮೂಲಗೊಳಿಸಬಹುದು. ಆದರೆ ತನ್ನ ಬಳಗದವರನ್ನು ಹೇಗೆ ಸಂಹರಿಸಲಿ?' ಎಂದು ಅರ್ಜುನನ ಪ್ರಶ್ನೆ! ಸ್ವಜನರು ಮತ್ತು ಪರಕೀಯರು-ಗಳನ್ನು ನಡಸಿಕೊಳ್ಳುವುದರಲ್ಲಿ ತಾರತಮ್ಯವು ಬೇಕು ಎಂದು ಅರ್ಜುನನ ವಿಚಾರವಿದ್ದಂತೆ ತೋರುತ್ತದೆ. ಪರಕೀಯ ರಾಜರೊಡನೆ ಕಾದಬಹುದು. ಸ್ವದೇಶದ ಅರಸರೊಡನೆ ಹೇಗೆ ಹೋರುವುದು ? ಎಂಬುದು ಅರ್ಜುನನ ವಿಚಾರ.

ನಿಜವಾಗಿ ವಿಚಾರಿಸಿದಲ್ಲಿ ಅನ್ಯಾಯಿಯು, ಪ್ರಜಾ-ದ್ರೋಹಿಯು ಸ್ವಕೀಯನೆ ಇರಲಿ, ಪರಕೀಯನೆ ಇರಲಿ ಅವನ ಪ್ರತಿಕಾರ ಮಾಡುವುದು ಕರ್ತವ್ಯವೆ ಆಗಿದೆ. ಆದರೆ ಸ್ವಜನರ ಅನ್ಯಾಯಗಳನ್ನು ಕಡೆಗಣಿಸ-ಬೇಕು, ಕ್ಷಮಿಸಬೇಕು ಎಂದು ಅರ್ಜುನನು ಹೇಳುವನು. ಇದುವೆ ಆತನ ಮೋಹ. ಇದೆ ಅವಿಚಾರ, ತಿಳಿಗೇಡಿತನ.

ಮನುಷ್ಯನು ಮೇಲಣ ಮಟ್ಟಕ್ಕೆ ಏರಿದಂತೆ ಆತನ ಕರ್ತವ್ಯದ ಕ್ಷೇತ್ರವು ವಿಸ್ತೃತವಾಗುತ್ತ ಹೋಗುವುದು. ಆತನು ಶೂರನು, ಧೀರನು, ಧೀಮಂತನು ಆದಂತೆ ಆತನ ಹೊಣೆಗಾರಿಕೆಯು ಹೆಚ್ಚುತ್ತ ಹೋಗುವುದು. ಆದರೆ ಅದನ್ನು ತಪ್ಪಿಸಿಕೊಳ್ಳುವುದು, ಅಥವಾ ಅದಕ್ಕೆ ವಿಪರೀತವಾಗಿ ನಡೆದುಕೊಳ್ಳುವುದು ಅನ್ಯಾಯವಾಗಿದೆ. ಮಾನವನ ಉನ್ನತಿಯ ಕ್ರಮವನ್ನೂ ಅದಕ್ಕನುಗುಣ-ವಾಗಿ ವಿಸ್ತೃತವಾಗುವ ಕಾರ್ಯಕ್ಷೇತ್ರವನ್ನೂ ಕೆಳಗಿನ ಆಕೃತಿಯಿಂದ ತಿಳಿದುಕೊಳ್ಳಬಹುದಾಗಿದೆ

ವ್ಯಕ್ತಿಯು ಬೆಳೆದಂತೆ ಆತನ ಕಾರ್ಯಕ್ಷೇತ್ರವೂ ಹೇಗೆ ಬೆಳೆಯುವುದೆಂಬುದು ಮೇಲಿನ ಆಕೃತಿಯಿಂದ ಸ್ಪಷ್ಟವಾಗು-ವುದು ರಾಷ್ಟ್ರೀಯ ಕಾರ್ಯಕ್ಷೇತ್ರದಲ್ಲಿ ಕೆಲಸಮಾಡುವ ಅಧಿಕಾರ, ಶಕ್ತಿಗಳು ಉಂಟಾದ ವೀರಪುರುಷರು ಲೋಭಿಗಳಾಗಿ ಅಥವಾ ಮೋಹಕ್ಕೆ ಒಳಗಾಗಿ, ಕುಟುಂ-ಬದ ಅಥವಾ ಪರಿವಾರದ ಸ್ವಾರ್ಥವನ್ನು ಸಾಧಿಸಲು ರಾಷ್ಟ್ರಹಿತವಿಘಾತಕರಾದರೆ ಅವರಂತಹ ನಿಂದ್ಯರೂ ನೀಚರೂ ಬೇರೆ ಯಾರೂ ಅಲ್ಲ. ಇಂದು ಅರ್ಜುನನ ವಿಚಾರಗಳು ಆತನನ್ನು ಈ ಅಧಃಪಾತಕ್ಕೆ ಒಯ್ಯುತ್ತಿ-ದ್ದುವು. ಈ ಲೋಕದಲ್ಲಿ ಸಮಾಜ (ರಾಷ್ಟ್ರ) ವನ್ನು ಬಿಟ್ಟು ವ್ಯಕ್ತಿಗೆ ಅಸ್ತಿತ್ವವೇ ಇಲ್ಲ. ವ್ಯಕ್ತಿಯು ಲೋಕದ ಅಂಶ ಆದುದರಿಂದ ಪ್ರತಿಯೊಬ್ಬನೂ ತನ್ನ ಸುಖ ದೊಡನೆ ಸಾಮುದಾಯಿಕ ಕಲ್ಯಾಣವನ್ನೂ ನೆನೆಯಬೇಕು. ಆರಂಭದ ಮಟ್ಟದೊಳಗಿನ ವೈಯಕ್ತಿಕ ಸ್ವಾರ್ಥವು ಕೊನೆಗೆ ಅಖಿಲ ಲೋಕದ ಹಿತಸಾಧನೆಯಲ್ಲಿ ವಿಕಸಿತ-ವಾಗಬೇಕು. ಇದುವೆ ಮಾನವೀಯ ಕರ್ತವ್ಯಗಳ ಸ್ವಾಭಾವಿಕವಾದ ವಿಕಾಸಕ್ರಮವಾಗಿದೆ.

ಹೀಗೆ ವಿಕಾಸಗೊಳ್ಳದ ಮಾನವನ ಜೀವನಕ್ಕೆ ಎಲ್ಲಿಯೊ ತಡೆಯುಂಟಾಗಿದೆಯೆಂದು ತಿಳಿಯಬೇಕು. ಸ್ವಾರ್ಥದ ರೋಗಬಾಧೆಯಾಗಿದೆಯೆ? ಎಂದು ಆತ್ಮನಿರೀಕ್ಷಣೆ ಮಾಡಿಕೊಳ್ಳಬೇಕು. ಊಟ, ನಿದ್ದೆ, ಮರಿಗಳನ್ನು ಹೆರು-ವುದು, ಮನುಷ್ಯನೇ ಏಕೆ? ಪಶುಗಳೂ ಮಾಡುತ್ತವೆ. ಮನುಷ್ಯನ ಮನುಷ್ಯತ್ವವು ಎಲ್ಲಿದೆ? ಸ್ವಾರ್ಥವು ವಿಕಸಿತವಾಗಿ ಅದು ವಿಶಾಲವಾದ ಸಾಮೂಹಿಕ ಹಿತದಲ್ಲಿ ಪರಿಣಮಿಸುವುದರಲ್ಲಿಯೆ ಮನುಷ್ಯನ ಮನುಷ್ಯತ್ವವಿದೆ. ಕೇವಲ ಸ್ವಾರ್ಥಾಂಧನಾಗಿ ನಡೆದುಕೊಂಡರೆ ಮಾನವನ ಅಧೋಗತಿಗೆ ತಡವಿಲ್ಲ. ಏಕಾಕಿಯಾಗಿ ಮಾನವನು ಬದುಕಿರುವುದೆ ಸಾಧ್ಯವಿಲ್ಲ; ಮದುವೆಯಾಗಿ ಕುಟುಂ-ಬಸ್ಥನಾಗುತ್ತಲೆ ಮನೆತನಕ್ಕಾಗಿ ಆತ್ಮಸಮರ್ಪಣೆ ಮಾಡುವನು. ಇದಕ್ಕೂ ಮುಂದಡಿಯಿಟ್ಟು ಮಾನವನು ತನ್ನ ಜೀವನವನ್ನು ವಿಕಸಿತಗೊಳಿಸಿಕೊಂಡಂತೆ ರಾಷ್ಟ್ರ ಕಾರ್ಯಕ್ಕಾಗಿ ತನ್ನನ್ನು ಅರ್ಪಿಸಿಕೊಳ್ಳುವನು. ಇದಕ್ಕೂ ಮೇಲ್ಮಟ್ಟದ ಜೀವನದಲ್ಲಿ ಮಾನವ ಕುಟುಂಬಕ್ಕಾಗಿ ಆತ್ಮಸಮರ್ಪಣ ಮಾಡುವನು. ಇಂತು ಸ್ವಾಭಾವಿಕ-ವಾಗಿ ಅರಳಬೇಕಾದ ಜೀವನವನ್ನು ಮುರುಟಿಸಿ ಸಂಕುಚಿತಗೊಳಿಸಿದರೆ ಅದುವೆ ಮಾನವನ ಅಧಃಪಾತ. ಆತ್ಮಘಾತ. ಆದುದರಿಂದ ಹಿಂದೂ ಮುಖಂಡರು ಗಳೆನಿಸಿ, ನಾಡಿನ ನೇತಾರರೆನಿಸಿ, ಹೊತ್ತುಬಂದಾಗ ಸ್ವಾರ್ಥಿಗಳಾಗಿ ವರ್ತಿಸಿದರೆ ಅವರಂತಹ ಪಾತಕಿಗಳು ಅವರೇ.

ಮದುವೆಯಾಗಿ ಹೆಂಡತಿಯನ್ನು ಹೊರೆಯಲಾರದವನು ಪಾಪಿ ಮಕ್ಕಳನ್ನು ಪಡೆದು ಅವರ ಪೋಷಣ ಶಿಕ್ಷಣ-ವನ್ನು ಸರಿಯಾಗಿ ನಡಿಸದವನು ಪತಿತ. ಇದರಂತೆ ಗುಣಕರ್ಮವಿಭಾಗದಂತೆ ಬ್ರಾಹ್ಮಣ, ಕ್ಷತ್ರಿಯ ಮತ್ತು ವೈಶ್ಯರಾಗಿರುವವರ ಮೇಲೆಯೂ ರಾಷ್ಟ್ರದ ಹಿರಿದಾದ ಹೊಣೆಯಿರುತ್ತದೆ. ಕ್ಷತ್ರಿಯನಾದ ಅರ್ಜುನನು ನಾಡಿ-ನೊಳಗಿನ ಸಮಾಜಧರ್ಮವನ್ನು ಸರಿಯಾಗಿ ಉಳಿವಂತೆ ಕಾಯುವುದಕ್ಕೆ ಹೊಣೆಗಾರನಾಗಿದ್ದನು. ಸಾಮ್ರಾಜ್ಯ ವಾದಿಗಳಾದ ಕೌರವರು ಸಮಾಜದ ಸಾಂಘಿಕ ಶಕ್ತಿ-ಯನ್ನೆ ಸಟಲಿಸಿ ಅದನ್ನು ವೈಯಕ್ತಿಕ ಸ್ವಾರ್ಥದ ಕೈಗೊಂಬೆ ದಾಗಿಗೆ ಹಚ್ಚಿದ್ದರು. ಸ್ವೇಚ್ಛಾಚಾರ, ಸ್ವಾರ್ಥಾಂಧತೆಗೆ ಉತ್ತೇಜನವನ್ನು ಕೊಡುತ್ತಿದ್ದರು. ಆದುದರಿಂದ ಕೌರವರನ್ನು ಶಿಕ್ಷಿಸಿ ರಾಷ್ಟ್ರವನ್ನು ಧರ್ಮಮಾರ್ಗಕ್ಕೆ ಹಚ್ಚುವುದು ಅರ್ಜುನನಂತಹ ವೀರರ ರಾಷ್ಟ್ರೀಯ ಕರ್ತವ್ಯವಾಗಿತ್ತು. ಆದರೆ ಸ್ವಜನಮೋಹದಿಂದ ಸಂಕು-ಚಿತ ದೃಷ್ಟಿಯವನಾದ ಅರ್ಜುನನು ಕರ್ತವ್ಯಭ್ರಷ್ಟ-ನಾಗಿ ರಾಷ್ಟ್ರಹಿತದ ಘಾತಮಾಡುತ್ತಿದ್ದನು.

ಈ ಜಗತ್ತಿನಲ್ಲಿ ವ್ಯಕ್ತಿಯು ತೀರ ಸ್ವತಂತ್ರವಿಲ್ಲ. ಪ್ರತಿಯೊಬ್ಬರ ಸುಖವು ಇನ್ನೊಬ್ಬರನ್ನು ಅವಲಂಬಿಸಿದೆ. ಕೇವಲ ನನ್ನ ಮಟ್ಟಿಗೆ ನಾನು, ಎಂಬುದು ಸಾಧ್ಯವೇ ಇಲ್ಲ. ಎಲ್ಲ ಸ್ಥಿರ ಚರ ವಸ್ತುಗಳು ಸೇರಿ ಸಂಘಟಿತವಾಗಿ ಈ ವಿರಾಟ್ ರೂಪಿಯಾದ ಮಹತ್ ಬ್ರಹ್ಮವಾಗಿದೆ. 'ಈ ಬ್ರಹ್ಮಾಂಡವೆಲ್ಲವೂ ಒಂದು ವಿರಾಟ್ ದೇಹ; ನಾನು ಅದರ ಒಂದಂಶ; 'ಎಂಬ ನಿತ್ಯ ಜಾಗೃತ ಪ್ರಜ್ಞೆಯುಳ್ಳವನಾಗಿ ಮಾನವನು ಪ್ರತಿಕ್ಷಣದಲ್ಲಿಯೂ ನಡೆದುಕೊಳ್ಳಬೇಕು. ಈ ಹಿರಿದಾದ ಅರಿವೆ ನಮ್ಮ ಜೀವನದ ಗುರುವಾಗಬೇಕು. ಈ ಗುರುವಿನ ಕೈಯಲ್ಲಿ ನಮ್ಮ ಜೀವನವನ್ನು ಒಪ್ಪಿಸಿದರೆ ಸಾಮುದಾಯಿಕ ಅಥವಾ ರಾಷ್ಟ್ರೀಯ ಹಿತಕ್ಕೆ ಪೋಷಕವಾಗುವಂತೆ ನಮ್ಮ ಇರವು ತನ್ನತಾನೆ ಮಾರ್ಪಡುವುದು.

ಮುಂದಿನ ಪುಟದಲ್ಲಿ ( ೪೯ ) ಕೊಟ್ಟಿರುವ ವ್ಯಷ್ಟಿ ಮತ್ತು ಸಮಷ್ಟಿಯ ಪರಸ್ಪರ ಸಂಬಂಧವನ್ನು ತೋರಿಸುವ ಆಕೃತಿಯನ್ನು ಕೊಟ್ಟಿದೆ. ಯಾವ ವ್ಯಕ್ತಿಯೂ ಸ್ವತಂತ್ರವಿಲ್ಲವೆಂಬುದನ್ನು ಈ ಆಕೃತಿಯಿಂದ ಮನಗಾಣಬಹುದು. ನಮ್ಮ ಜೀವನವು ಪರಸ್ಪರಾವಲಂಬಿಯಾಗಿದೆ. ಆದುದರಿಂದ ಪ್ರತಿಯೊಬ್ಬರೂ ತಮ್ಮ ಶಕ್ತಿಸಾಮರ್ಥ್ಯಗಳನ್ನು ಬೆಳೆಸಿಕೊಂಡು, ಲೋಕಕಲ್ಯಾಣಕ್ಕಾಗಿ ಅವನ್ನೆಲ್ಲ ವೆಚ್ಚ ಮಾಡಬೇಕು. ಸಮಷ್ಟಿಗಾಗಿ ವ್ಯಷ್ಟಿಯು ಆತ್ಮಸಮರ್ಪಣವನ್ನು ಮಾಡಬೇಕು. ಇದುವೆ ವ್ಯಷ್ಟಿಯ ಧರ್ಮ; ಕರ್ತವ್ಯ.

ವಿಶ್ವದ ಸಂಕ್ಷಿಪ್ತ ರೂಪವೆ ವ್ಯಷ್ಟಿ--ವ್ಯಕ್ತಿ. ಮತ್ತು ವ್ಯಕ್ತಿಯ ವಿಕಸಿತವಾದ ಪರಿಣತ ರೂಪವೆ ಸಮಷ್ಟಿ—ವಿಶ್ವ.

**ನಾಸಿಕೇ ನಿರಭಿದ್ಯೇತಾಂ, ನಾಸಿಕಾಭ್ಯಾಂ ಪ್ರಾಣಃ,**
**ಪ್ರಾಣಾದ್ವಾಯುಃ ।**
**ಅಕ್ಷಿಣೀ ನಿರಭಿದ್ಯೇತಾಮಕ್ಷಿಭ್ಯಾಂ ಚಕ್ಷುಶ್ಚಕ್ಷುಷ**
**ಆದಿತ್ಯಃ ॥** ಇತ್ಯಾದಿ.

— ಐತರೇಯ ೧.೪

' ಮೂಗಿನ ಹೊರಳೆಗಳಾದುವು. ಹೊರಳೆಗಳಿಂದ ಪ್ರಾಣವು, ಪ್ರಾಣದಿಂದ ವಾಯುವು ಆಯ್ತು. ಕಣ್ಣುಗಳಾದುವು. ಕಣ್ಣಿನಿಂದ ಚಕ್ಷುರಿಂದ್ರಿಯಗಳಾದುವು. ಚಕ್ಷುರಿಂದ್ರಿಯದಿಂದ ಸೂರ್ಯನಾದನು.'

ಇಂತು ವೈಯಕ್ತಿಕ ಬೀಜದಿಂದ ವಿಶ್ವದೊಳಗಿನ ಮಹಾಶಕ್ತಿಗಳು ತಲೆದೋರಿದುವು. ಆದುದರಿಂದ ವ್ಯಕ್ತಿಗಳೊಳಗಿನ ಬೀಜಶಕ್ತಿಗಳ ಆತ್ಯಂತಿಕ ವಿಕಾಸವೆ ವಿಶ್ವವು. ಹೀಗಿದು ವ್ಯಕ್ತಿಯು ಎಲ್ಲ ವಿಶ್ವದ ಬೀಜವು.

**ವಾಯುಃ ಪ್ರಾಣೋ ಭೂತ್ವಾ ನಾಸಿಕೇ ಪ್ರಾವಿಶತ್;**
**ಆದಿತ್ಯಃ ಚಕ್ಷುಃ ಭೂತ್ವಾ ಅಕ್ಷಿಣೀ ಪ್ರಾವಿಶತ್ ।**

—ಐತರೇಯ ಉ. ೨.೪.

ವಾಯುವು ಪ್ರಾಣವಾಗಿ ಮೂಗನ್ನು ಹೊಕ್ಕಿತು. ಸೂರ್ಯನು ನೇತ್ರೇಂದ್ರಿಯನಾಗಿ ಕಣ್ಣನ್ನು ಹೊಕ್ಕನು. ಹೀಗೆ ಬೇರೆ ವಿಶ್ವಶಕ್ತಿಗಳಿಂದ ವೈಯಕ್ತಿಕ ಸೂಕ್ಷ್ಮ ಬೀಜಶಕ್ತಿಗಳು ಆದುವು. ವ್ಯಕ್ತಿಯು ಒಂದು ಸೂಕ್ಷ್ಮ ಬಿಂದುವು. ವಿಶ್ವವು ಈ ಬಿಂದುವಿನ ಪರಮವಿಕಾಸದ ಮೇರೆಯಾಗಿದೆ. ಇದನ್ನೇ ಮುಂದಿನ ಆಕೃತಿಯಲ್ಲಿ ತೋರಿಸಲಾಗಿದೆ.

ಇದನ್ನು ಚೆನ್ನಾಗಿ ಪರಿಶೀಲಿಸಿದಲ್ಲಿ, **ವಿಶ್ವದಲ್ಲಿ ವ್ಯಕ್ತಿಯೂ ವ್ಯಕ್ತಿಯಲ್ಲಿ ವಿಶ್ವವೂ ಅಳವಟ್ಟಿದೆ,** ಎಂದು ಮನವರಿಕೆಯಾಗದೆ ಇರದು. ಗೀತೆ, ಉಪನಿಷತ್ತುಗಳೂ ಇದನ್ನೇ ಪುಷ್ಟೀಕರಿಸುತ್ತವೆ

**ಸರ್ವಭೂತಸ್ಥಮ್ ಆತ್ಮಾನಂ ಸರ್ವಭೂತಾನಿ ಚ**
**ಆತ್ಮನಿ**

—ಭ. ಗೀ. ೬.೨೯

**ಯಸ್ತು ಸರ್ವಾಣಿ ಭೂತಾನ್ಯಾತ್ಮನ್ಯೇವಾನು ಪಶ್ಯತಿ ।**
**ಸರ್ವಭೂತಸ್ಥಮಾತ್ಮಾನಮ್ ॥**

—ಈಶ ಉ. ೬.

' ಎಲ್ಲ ಪ್ರಾಣಿಮಾತ್ರಗಳಲ್ಲಿ ತನ್ನನ್ನೂ ತನ್ನಲ್ಲಿ ಎಲ್ಲ ಪ್ರಾಣಿಮಾತ್ರಗಳನ್ನೂ ಯಾರು ಕಾಣುವರೊ ' ಅವರೇ ತತ್ವತಃ ಈ ವಿಶ್ವವನ್ನು ಅರಿಯುವರು. ಈ ತಿಳಿವು ತಲೆದೋರಿದವನಲ್ಲಿ ಕೌಟುಂಬಿಕ ಪರಿವಾರದ ವ್ಯಾಮೋಹವೆ ಉಂಟಾಗಲಾರದು. ಆತನಿಗೆ ತನ್ನಲ್ಲಿ ಅಥವಾ ಸಮಾಜದಲ್ಲಿ ಈ ಬಗೆಯ ತುಚ್ಛ ವ್ಯಾಮೋಹವುಂಟಾದುದನ್ನು ಸಹಿಸಲಿಕ್ಕೆ ಆಗದೆ, ಆ ದೋಷವನ್ನು ದೂರ ಮಾಡುವುದಕ್ಕಾಗಿ ಹಣಗಾಡಬೇಕೆಂದೆನಿಸುವುದು. ' ತನಗೇಕಪ್ಪಾ ಹೆರವರ ಗೊಡವೆ ? ' ಎಂದು ಕಣ್ಣೆದುರು ನಡೆದ ಅನ್ಯಾಯಗಳನ್ನು ಕಂಡು ಕಣ್ಣು ಮುಚ್ಚಿಕೊಂಡು ಸುಮ್ಮನಿರಲಿಕ್ಕಾಗುವುದಿಲ್ಲ. ಏಕೆಂದರೆ ಆತನು ತಾನು ಬೇರೆ, ಸಮಾಜ ಬೇರೆ ಎಂದು ಗ್ರಹಿಸಿರುವುದಿಲ್ಲ. ಒಂದು ವ್ಯಕ್ತಿಯ ದೋಷದಿಂದ ಸಮಾಜವು ದೂಷಿತವಾಗುತ್ತಿದ್ದರೆ ಆ ವ್ಯಕ್ತಿಯನ್ನು ತಿದ್ದಬೇಕು. ಇಂತಹ ತಪ್ಪುಗಾರಿಕೆಯು ಯಾವುದೊಂದು ಸಂಘ ಅಥವಾ ಬಣದಿಂದ ಆಗುತ್ತಿದ್ದರೆ ಅದನ್ನೂ ದಾರಿಗೆ ತರಲೆಬೇಕು. ಈ ತಪ್ಪುಗಾರಿಕೆಯು ಸ್ವಕೀಯರದಿರಲಿ, ಅಥವಾ ಪರಕೀಯರದಿರಲಿ ಎರಡೂ ಅಷ್ಟೇ ಅಸಹ್ಯ. ಎರಡೂ ಅಷ್ಟೇ ಶಾಸನಾರ್ಹ.

(ಬ್ರಹ್ಮಾಂಡ ಮತ್ತು ವ್ಯಕ್ತಿ ಇವುಗಳ ಸಂಬಂಧವನ್ನು ತೋರಿಸುವ ಚಿತ್ರ)

ಇಂದ್ರ
ವಿಶ್ವದೇವ
ಅಗ್ನಿ
ಆದಿತ್ಯಾ
ನಾರಾಯಣ
(ಪರಮೇಷ್ಠಿ)
ಅಧಿದೈವತ
ಬ್ರಹ್ಮಣಸ್ಪತಿ
ವಾಯು
ಮರುತಃ
ಅನ್ಯ ದೇವ
ರುದ್ರ
ಇ.
ವಿ– ಭೂತಿ
ವಿಶ್ವ
ಇ.
ಬ್ರಾಹ್ಮಣ
ಧನಿ
ವೈಶ್ಯ
ಶೂದ್ರ
ಜಗತ್
ರಾಷ್ಟ್ರ
ವೈಶ್ವಾನರ
ಅಧಿಭೂತ
ಶೂರ ಕ್ಷತ್ರಿಯ
ಧಾರಕ
(ಪ್ರಾಣಿಸಮಷ್ಟಿ)
ಸಮಾಜ
ಜ್ಞಾನಿ
(ಸಂ– ಭೂತಿ)
ಧನ್ಯತೆ
ಶೌರ್ಯ
ಜ್ಞಾನ
ಸೇವೆ
ವೈಯಕ್ತಿಕ ಗುಣ
ವ್ಯಕ್ತಿ
(ಅ– ಸಂ– ಭೂತಿ) ಮಾನವ

---

ವೃಕ್ಷ
ವೃಕ್ಷ
ಬೀಜ
ಬೀಜ
ಬೀಜ
ವಿಶ್ವ
ವಿಶ್ವ
ವ್ಯಕ್ತಿ
ವ್ಯಕ್ತಿ
ವ್ಯಕ್ತಿ
ಸಂಘ
ಸಂಘ

ಶರೀರದೊಳಗಿನ ಯಾವುದೊಂದು ಅವಯವವು ರೋಗ ಹಿಡಿದು ಅಥವಾ ಕೊಳೆತು ಇಡಿ ದೇಹಕ್ಕೆ ಅದರಿಂದ ಅಪಾಯ ತಟ್ಟುತ್ತಿದ್ದರೆ ಅದನ್ನು ಕತ್ತರಿಸಿ ಚೆಲ್ಲಲೇ ಬೇಕಲ್ಲವೆ? ಇಲ್ಲವಾದರೆ ಜೀವಕ್ಕೆ ಎರವಾಗುವ ಹೊತ್ತು ಬರುವುದು. ಅದರಂತೆ ಅಪರಾಧಮಾಡುವ ವ್ಯಕ್ತಿಯೆ ಇರಲಿ, ಸಂಘವೇ ಇರಲಿ ಅದನ್ನು ಶಿಕ್ಷಿಸಲೆ ಬೇಕು. ಇಲ್ಲದಿದ್ದರೆ ಅದರಿಂದ ಮಾನವ ಕುಟುಂಬದ ಹಿತಕ್ಕೆ ಬಾಧೆ ಬಾರದೆ ಇರದು. ಆದುದರಿಂದ ಆತತಾಯಿಗಳು ತಮ್ಮವರು ಎಂಬ ಮೋಹದಿಂದ, ಅವರನ್ನು ಕ್ಷಮಿಸುವುದು ತೀರ ಅಯೋಗ್ಯವಾಗಿದೆ. ಸ್ವಜನರಾದರೂ ಅವರು ಸಮಾಜಪುರುಷನ ವಿರಾಟ್ ದೇಹದ ಒಂದು ಅಂಗವಾಗಿದ್ದಾರೆ. ಒಂದು ಅಂಗವು ಕೆಟ್ಟರೆ ಅಥವಾ ಕೊಳೆತರೆ ಆ ದೋಷದಿಂದ ಇಡಿ ದೇಹವೆ ಕೆಟ್ಟು ಹಾಳಾಗುವುದು. ಆದುದರಿಂದ ಶಾಸ್ತ್ರದಲ್ಲಿ ಹೀಗೆ ಹೇಳಿದೆ:

**ತ್ಯಜೇದೇಕಂ ಕುಲಸ್ಯಾರ್ಥೇ, ಗ್ರಾಮಸ್ಯಾರ್ಥೇ**
**ಕುಲಂತ್ಯಜೇತ್ ।**
**ಗ್ರಾಮಂ ಜನಪದಸ್ಯಾರ್ಥೇ, ಆತ್ಮಾರ್ಥೇ**
**ಪೃಥಿವೀಂ ತ್ಯಜೇತ್ ॥**

'ಕುಲದ ಹಿತಕ್ಕಾಗಿ ಒಂದು ವ್ಯಕ್ತಿಯನ್ನು, ಊರಹಿತಕ್ಕಾಗಿ ಒಂದು ಕುಲವನ್ನು, ರಾಷ್ಟ್ರಹಿತಕ್ಕಾಗಿ ಒಂದು ಊರನ್ನು ತೊರೆಯಬೇಕು.' ಇದೆ ಮೇರೆಗೆ ಅನ್ಯಾಯದಿಂದ ಪ್ರಜಾಪೀಡನೆ ನಡಸಿದವರೂ ನಿಂದ್ಯರೂ ಆದ ಕೌರವರನ್ನು ಸಮಾಜ ಸುವ್ಯವಸ್ಥೆಗಾಗಿ, ರಾಷ್ಟ್ರ ಕಲ್ಯಾಣಕ್ಕಾಗಿ ಶಿಕ್ಷಿಸಲೆ ಬೇಕು. ಇಲ್ಲದೆ ಹೋದರೆ ಈ ಸಾಮ್ರಾಜ್ಯವಾದಿಗಳ ಅನೀತಿಯಿಂದ ಇಡಿ ಜಗತ್ತಿನಲ್ಲಿಯೆ ಅಶಾಂತಿಯುಂಟಾಗುವುದು.

## ವಿಶ್ವ-ರೂಪ.

ಭಗವದ್ಗೀತೆಯನ್ನು ಉಪದೇಶಿಸುವಾಗ ಭಗವಾನ್ ಶ್ರೀಕೃಷ್ಣನು 'ವಿಶ್ವ-ರೂಪ'ನಾಗಿದ್ದನು. ಆಗ ಅರ್ಜುನ ವೃತ್ತಿಯು 'ವ್ಯಕ್ತಿರೂಪ'ವಾಗಿತ್ತು; ಅಥವಾ 'ಪರಿವಾರ ರೂಪ'ವೆಂದರೂ ಸಲ್ಲುವುದು. ಹೀಗೆ ಅಲ್ಪ ದೃಷ್ಟಿಯುವ ನಾದುದರಿಂದಲೆ ಅರ್ಜುನನು ಮೋಹವಶನಾದನು. ವಿಶಾಲದೃಷ್ಟಿಯ—ವಿಶ್ವರೂಪನಾದ ಶ್ರೀಕೃಷ್ಣನು ಆತನ ಮೋಹವನ್ನು ತನ್ನ ದಿವ್ಯ ಉಪದೇಶದಿಂದ ಹೋಗಲಾಡಿಸಿದನು. ಈ ಲೋಕದಲ್ಲಿ ಕೆಲವು 'ವ್ಯಕ್ತಿರೂಪ,' ಕೆಲರು 'ಪರಿವಾರರೂಪ,' ಕೆಲರು 'ಜಾತಿರೂಪ,' ಕೆಲರು 'ರಾಷ್ಟ್ರರೂಪ,' ಕೆಲರು 'ಮಾನವ ಕುಟುಂಬರೂಪ' ... ಇನ್ನು ಕೆಲರು 'ಪ್ರಾಣಿಸಮಷ್ಟಿರೂಪ,' ಕೆಲರು 'ವಿಶ್ವರೂಪ'ರೂ ಆಗಿರುವುದುಂಟು. ಆದುದರಿಂದ ಅವರ ಆಚಾರ, ವಿಚಾರ, ಉಚ್ಚಾರಗಳಲ್ಲಿ ವ್ಯತ್ಯಾಸವು ಕಂಡುಬರುತ್ತದೆ. ಇವರಲ್ಲಿ ಮೇಲು ಮೇಲಿನ ಮಟ್ಟದಲ್ಲಿರುವವರು ತಮ್ಮ ಆ ಮಟ್ಟಕ್ಕೆ ತಕ್ಕಂತಹ ಹೊಣೆಯನ್ನು ಹೊರಲು ತಪ್ಪಿದರೆ ಕರ್ತವ್ಯಭ್ರಷ್ಟತೆಯ ಕಲಂಕವು ಅವರಿಗೆ ಬರುವುದು. ಅರ್ಜುನನು ಭರತನು, ಭಾರತದ ಪ್ರತಿನಿಧಿ, ರಾಷ್ಟ್ರೀಯ ವೀರ. ಆತನು ತನ್ನ ಮೇಲಿನ ದುಷ್ಟನಿಗ್ರಹದ ಹೊಣೆಯನ್ನು ಹೊರಲು ತಪ್ಪಿದರೆ, ಸ್ವಜನ ವ್ಯಾಮೋಹದಿಂದ ರಾಷ್ಟ್ರೀಯ ಕರ್ತವ್ಯಕ್ಕೆ ಪರಾಙ್ಮುಖನಾದರೆ ಅದು ಆತನ ಅಧಃಪಾತವೇ ಸರಿ. ಅರ್ಜುನನು ಈ ಹೊತ್ತಿನಲ್ಲಿ ಪರಿವಾರದವರ ಅಲ್ಪ ದೃಷ್ಟಿಯನ್ನು ತೊರೆದು ಲೋಕಕಲ್ಯಾಣದ ವಿಶಾಲ ದೃಷ್ಟಿಯನ್ನು ಸ್ವೀಕರಿಸಿದ್ದರೆ ಆತನಿಗೆ ಈ ಮೋಹವೆ ಉಂಟಾಗುತ್ತಿದ್ದಿಲ್ಲ. ಜ್ಞಾನಿಯಂತೆ ನಡೆದುಕೊಳ್ಳಬಹುದಾಗಿತ್ತು.

ಕುಟುಂಬ, ಪರಿವಾರವೆ ಕೊನೆಯ ಗುರಿಯಾಗಿಟ್ಟುಕೊಂಡವನು, ತನ್ನವರ ದುಃಖಗಳಿಂದ ದುಃಖಿತನಾಗುವನು. ಅವರ ದುಃಖನಿವಾರಣೆಗಾಗಿ ತನ್ನನ್ನು ಕಷ್ಟದಲ್ಲಿ ಹಾಕಿಕೊಳ್ಳುವನು. ಅರ್ಜುನನು ತನ್ನ ಪರಿವಾರದವರ ಸುಖಕ್ಕಾಗಿ ತಾನು ಅರಸುತನವನ್ನು ಬಿಟ್ಟುಕೊಡಲಿಕ್ಕೂ ಸಿದ್ಧನಾಗಿರುವನು. ಬಿಕ್ಕೆ ಬೇಡಿ ಬದುಕಲಿಕ್ಕೆ ಮನಸು ಮಾಡಿರುವನು. ಶ್ರೀಕೃಷ್ಣನ ನೋಟ ವಿಶಾಲನೋಟ. ವಿಶ್ವವ್ಯಾಪಕ ದೃಷ್ಟಿ. ವಿಶ್ವರೂಪನು ಆತನು. ಆದುದರಿಂದ ಅಖಿಲ ಲೋಕಕಲ್ಯಾಣವೆ ಗುರಿಯಾಗಿರುವ ಶ್ರೀಕೃಷ್ಣನು ವಿಶ್ವಸ್ಥಿತಿಗೆ ಅಡ್ಡ ಬರುವ ನರಾಧಮರನ್ನು ಎಂದೂ ದುರ್ಲಕ್ಷಿಸಲಾರನು. ವಿಶ್ವವನ್ನೂ ಧರ್ಮಮರ್ಯಾದೆಯಲ್ಲಿ ಇರಿಸಲು ಆತನು ಯಾವಾಗಲೂ ಸಿದ್ಧನು. ಇದುವೆ ತನ್ನ ಕರ್ತವ್ಯವೆಂದು ಆತನ ನೆರೆನಂಬುಗೆ. ಈ ವಿಶ್ವದೃಷ್ಟಿಯಿಟ್ಟ ಶ್ರೀಕೃಷ್ಣನಿಗೆ ಯಾವ ಒಗೆಯ ಶೋಕ ಮೋಹಗಳೂ ಸೋಂಕಲಾರವು. ಆತನು ಎಂದೂ ಕರ್ತವ್ಯಭ್ರಷ್ಟನಾಗುವುದೂ ಸಾಧ್ಯವಿಲ್ಲ. ಪರಿವಾರದ ದೃಷ್ಟಿಯುವನೆ ನರನು; ವಿಶ್ವದೃಷ್ಟಿಯುವನೆ ನಾರಾಯಣನು. ಈ ಭೂಮಿಕೆಯಿಂದಲೆ ಶ್ರೀಭಗವದ್ಗೀತೆಯಲ್ಲಿ ಇವರಿಬ್ಬರ ಸಂವಾದವಿದೆ.

ಅರ್ಜುನನು ಪರಿವಾರರೂಪನಾಗಿ ರಾಷ್ಟ್ರೀಯ ಕರ್ತವ್ಯಕ್ಕೆ ತಪ್ಪುತ್ತಿದ್ದಾನೆ. 'ರಾಷ್ಟ್ರ ಉಳಿಯಲಿ, ಹಾಳಾಗಲಿ; ಜಗತ್ತಿನ ಕಲ್ಯಾಣವಾಗಲಿ, ಅಕಲ್ಯಾಣವಾಗಲಿ; ಅದರ ಲೆಕ್ಕ ನನಗೇಕೆ? ನನ್ನ ಪರಿವಾರದ ಚಿಂತೆ ನನಗೆ. ಅವರ ಸುಖವೇ ನನ್ನ ಸುಖ. ನಾನು ನನ್ನ ಸ್ವಜನರ ಹಿತವನ್ನು ಮಾತ್ರ ನೋಡ-

## (೧೦) ಕುಲಕ್ಷಯ ಮತ್ತು ಮಿತ್ರದ್ರೋಹ

**ಯದ್ಯಪ್ಯೇತೇ ನ ಪಶ್ಯಂತಿ ಲೋಭೋಪಹತಚೇತಸಃ ।**
**ಕುಲಕ್ಷಯಕೃತಂ ದೋಷಂ ಮಿತ್ರದ್ರೋಹೇ ಚ ಪಾತಕಮ್ ॥ ೩೮ ॥**
**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿವರ್ತಿತುಮ್ ।**
**ಕುಲಕ್ಷಯಕೃತಂ ದೋಷಂ ಪ್ರಪಶ್ಯದ್ಭಿರ್ಜನಾರ್ದನ ॥ ೩೯ ॥**

---

**ಅನ್ವಯ:—** ಯದ್ಯಪಿ ಏತೇ ಲೋಭೋಪಹತಚೇತಸಃ ಕುಲಕ್ಷಯಕೃತಂ ದೋಷಂ, ಮಿತ್ರದ್ರೋಹೇ ಚ ಪಾತಕಂ ನ ಪಶ್ಯಂತಿ ॥ ೩೮ ॥ ಹೇ ಜನಾರ್ದನ! ಕುಲಕ್ಷಯ ಕೃತಂ ದೋಷಂ ಪ್ರಪಶ್ಯದ್ಭಿಃ ಅಸ್ಮಾಭಿಃ ಅಸ್ಮಾತ್ ಪಾಪಾತ್ ನಿವರ್ತಿತುಂ ಕಥಂ ನ ಜ್ಞೇಯಮ್ ? ॥ ೩೯ ॥

**ಈ ಕೌರವರು ಲೋಭದಿಂದ ಆವರಿಸಿದ ಚಿತ್ತವೃತ್ತಿಯುಳ್ಳವರಾದುದರಿಂದ ಅವರಿಗೆ ಕುಲನಾಶ ಮಾಡುವುದರಿಂದ ಬರುವ ದೋಷವು ಮತ್ತು ಮಿತ್ರದ್ರೋಹದ ಪಾತಕವು, ಒಂದು ವೇಳೆ ಕಾಣುತ್ತಿರಲಿಕ್ಕಿಲ್ಲ. ॥ ೩೮ ॥ ಆದರೆ, ಎಲೈ ಜನಾರ್ದನನೆ! ಕುಲನಾಶದ ದೋಷವು ನಮಗೆ ಕಾಣುತ್ತಿರುವಾಗಲೂ ನಾವು ಈ ಪಾಪಕದಿಂದ ದೂರವಾಗುವ ವಿಚಾರವನ್ನೇಕೆ ಮಾಡಬಾರದು ?**

**ಭಾವಾರ್ಥ :—** ಎದುರಾಳಿಗಳು ಧರ್ಮಾಧರ್ಮದ ವಿಚಾರವನ್ನು ತೊರೆದಿದ್ದರೆ ಅದು ಅವರ ತಪ್ಪು. ಅವರು ತಪ್ಪುಗಾರರಾದರೆಂದು ನಾವೂ ಹಾಗೆಯೆ ತಪ್ಪುಮಾಡುವುದು ಉಚಿತವಲ್ಲ. ನಾವು ಯಾವಾಗಲೂ ಧರ್ಮದ ಮರ್ಯಾದೆಯಲ್ಲಿಯೆ ನಡೆದುಕೊಳ್ಳತಕ್ಕದ್ದು.

---

ತಕ್ಕವನು.' ಎಂದು ಅರ್ಜುನನು ಗಳಪುತ್ತಲಿದ್ದಾನೆ. ಇದುವೆ ಅರ್ಜುನನ ದೃಷ್ಟಿದೋಷ. ಮನುಷ್ಯನ ದೃಷ್ಟಿಯು ಸಂಕುಚಿತವಾಗುತ್ತಲೆ ಅತನಿಂದ ಅಕೃತ್ಯಗಳಾಗುವುವು

ಅರ್ಜುನನು ಶ್ರೀಕೃಷ್ಣನನ್ನು 'ಮಧುಸೂದನ' ಎಂದು ಕರೆದಿದ್ದಾನೆ. ಮಧುಸೂದನನೆಂದರೆ 'ಮಧು ದೈತ್ಯನನ್ನು ಕೊಂದವನು,' ಎಂಬರ್ಥ. ಮಧುದೈತ್ಯನು ಶ್ರೀಕೃಷ್ಣನ ಜಾತಿಬಾಂಧವನಲ್ಲ. ವಿದೇಶದ ಅಸುರನು. 'ಮಧುಸೂದನ' ಎಂದು ಸಂಬೋಧಿಸಿ ಅರ್ಜುನನು ಶ್ರೀಕೃಷ್ಣನೆ ನೀನು ಕೊಂದುದು ಮಧು ದೈತ್ಯನನ್ನು! ಪರಕೀಯನನ್ನು ಸ್ವಜನರನ್ನಲ್ಲ!' ಎಂದು ವ್ಯಂಗ್ಯವಾಗಿ ಸೂಚಿಸಿದ್ದಾನೆ.

ಅಲ್ಲದೆ, '**ಜನಾರ್ದನ**' ಮತ್ತು '**ಮಾಧವ**' ಎಂಬ ಹೆಸರಿನಿಂದ ಶ್ರೀಕೃಷ್ಣನನ್ನು ಕರೆವಲ್ಲಿಯೂ ಒಂದು ಧ್ವನಿಯಿದೆ. 'ನೀನು ಕಂಸನನ್ನು ಕೊಂದಿರುವೆ. ಆತನು ನಿನ್ನ ಸೋದರಮಾವನೆಂಬುದೂ ನಿಜ. ಆದರೆ ನೀನು **ಜನಾರ್ದನನು** (ಜನ+ಅರ್ದನ). ಜನರ ಮರ್ದನ ಮಾಡುವುದು, ಮಡಿಪುವುದು ನಿನ್ನ ಕೆಲಸವೆ ಆಗಿದೆ. ಹಾಗೆ ನಾನು ಮಾಡಲಾರೆ.' 'ನೀನು **ಮಾಧವನು** (ಮಾ+ಧವ) ಎಂದರೆ ಲಕ್ಷ್ಮಿಯನ್ನು ಆಳುವವನೆಂದರ್ಥ, ಆದುದರಿಂದ ಧನಕನಕಾದಿಗಳಿಗಾಗಿ ನೀನು ಮಾನವನನ್ನು ಕೊಲ್ಲಬಲ್ಲೆ' ತಾಪ್ಪುದ ದುಡ್ಡು ತಾಯಿ-ಮಕ್ಕಳನ್ನೂ ಕೆಡಿಸುವುದು. ಆದರೆ ನಾನು ಈ ನಿಯಮಕ್ಕೆ ದಾಸನಾಗಲಾರೆ. ನೀನು ಮಾಧವನಾದ್ದರಿಂದ ಹಣಸ್ವಾಮ್ಯಕ್ಕಾಗಿ ಬೇಕಾದುದನ್ನು ಮಾಡಬಲ್ಲೆ, ನಾನು ನರನು. ಐಶ್ವರ್ಯದಲ್ಲಿ ರಮಿಸತಕ್ಕವನಲ್ಲ. ಆದುದರಿಂದ ಮಾ-ಧವನೆ ನಿನ್ನ ದೃಷ್ಟಿಯೆ ಬೇರೆ. ನರನಾದ ನನ್ನ ದೃಷ್ಟಿಯೆ ಬೇರೆ. ನನಗೆ ಈ ಅರಸುತನವೂ ಬೇಡ; ಈ ಸುಖಭೋಗಗಳೂ ಬೇಡ. ಅಷ್ಟೇ ಏಕೆ? ಮೂಲೋಕದ ಒಡೆತನವೂ ನನಗೆ ಬೇಡ, ನನ್ನ ಬಂಧು-ಬಳಗದವರಾದ ಕೌರವರು ಆತತಾಯಿಗಳಾಗಿದ್ದರೂ ನಾನು ಅವರನ್ನು ಕೊಲ್ಲಲಾರೆ' ಎಂಬ ಕಟುಕಿಯು ಅರ್ಜುನನ ಮಾತಿನಲ್ಲಿದೆ.

ಹೀಗೆ ಮಾಧವ! ಮಧುಸೂದನ! ಎಂದು ವ್ಯಂಗ್ಯವಾಗಿ ನುಡಿದು ಅರ್ಜುನನು ಮುಂದೆ ಹೇಳುವುದೇನೆಂದರೆ :

(೩೮—೩೯) ಅರ್ಜುನನು ಹೇಳುವುದೇನೆಂದರೆ : 'ಲೋಭಿಯಾದವನು ಯಾವ ನಿಂದ್ಯಕರ್ಮಕ್ಕೂ ಹೇಸುವುದಿಲ್ಲ. ಕೌರವರು ಲೋಭಿಗಳಾಗಿದ್ದಾರೆ. ಆದುದರಿಂದ ಅವರು ಕುಲಕ್ಷಯಕ್ಕೂ ಸಿದ್ಧರಾಗಿರುವರು. ಅವರು ಲೋಭಾಂಧರಾದರೂ ತಿಳುವಳಿಕೆಯುಳ್ಳವರಾದ ನಾವೇಕೆ ಅವರಂತೆಯೆ ತಪ್ಪುದಾರಿಯನ್ನು ತುಳಿಯಬೇಕು?

'ಅಧಿಕಾರವು ಬಂದಾಗ ತಾವು ಎಸಗಿದ ಅಕೃತ್ಯವೂ ಸುಕೃತ್ಯವೇ ಎಂದು ಹೇಳಿಕೊಳ್ಳುವುದು ವಾಡಿಕೆಯಾಗಿದೆ.' ಸಾಮ್ರಾಜ್ಯ ರಕ್ಷಣೆಗಾಗಿ, ನಿಂದ್ಯವಾದ ಹೀನಕರ್ಮಗಳನ್ನು ಮಾಡಲು ಸಾಮ್ರಾಜ್ಯವಾದಿಗಳಿಗೆ ಸ್ವಲ್ಪವೂ ಸಂಕೋಚವೆನಿಸುವುದಿಲ್ಲ. ಆದರೆ ನ್ಯಾಯನೀತಿಗಳ ತಳಹದಿಯ ಮೇಲೆ ಕಟ್ಟತಕ್ಕ ಸ್ವರಾಜ್ಯಕ್ಕಾಗಿ ಹೆಣಗುತ್ತಿರುವ ನಾವೂ ಧೃತರಾಷ್ಟ್ರ ಪುತ್ರರಂತೆ ಕೀಳ್ಗೆಲಸಕ್ಕೆ ಕೈಯಿಕ್ಕುವುದು ಸರಿಯೆ? ನಾವು ಯಾವಾಗಲೂ ಆತ್ಮಶುದ್ಧಿಯ ಕಡೆಗೆ ದೃಷ್ಟಿಯನ್ನಿಟ್ಟು ಕೆಲಸಗಳನ್ನು ಮಾಡುತ್ತಿರಬೇಕು.

ಆತ್ಮನಿರೀಕ್ಷಣೆಯಿಂದ ಮುಂದಡಿಯಿಡುತ್ತಿರಬೇಕು. ಅಡಿಗಡಿಗೂ ತಪ್ಪುತಡಿಗಳನ್ನು ತಿದ್ದಿಕೊಳ್ಳುವ ಬುದ್ಧಿಯಿರಬೇಕು. ಪಾಪದಿಂದ ದೂರವಿರಲು ಹೆಣಗಬೇಕು. ಹೀಗಿರುವಾಗ ಕುಲಕ್ಷಯ, ಮಿತ್ರದ್ರೋಹ, ಪಿತೃದ್ರೋಹ, ಗುರುಹತ್ಯೆ, ಸಂಸ್ಕೃತಿವಿನಾಶ ಮೊದಲಾದ ಘೋರ ಭೀಕರ ಪಾಪಗಳು ಅಡಕವಾಗಿರುವ ಈ ಯುದ್ಧವನ್ನು ಆರಂಭಿಸುವುದು ಯುಕ್ತವೆ? ಸತ್ಯ, ನ್ಯಾಯ, ನೀತಿಗಳ ಮಹತ್ವವನ್ನು ಹೇಳುವ, ಸ್ವರಾಜ್ಯಾಭಿಲಾಷಿಗಳಾದ ನಾವೇ ಹೀಗೆ ಕುಕರ್ಮಿಗಳಾದರೆ, ಸಾಮ್ರಾಜ್ಯಶಾಹಿಯ ಆಡಳಿತಗಾರರ ದೋಷಗಳಿಗೇಕೆ ಹೆಸರಿಡಬೇಕು? ನಾವೂ ಅದೇ ಬಗೆಯಾಗಿ ಪಾತಕಿಗಳಾದರೆ, ಸಾಮ್ರಾಜ್ಯವಾದಿಗಳಾದ ಕೌರವರನ್ನು ತಳ್ಳಿ ಜೇರಿಯುವದು ರಾಜ್ಯಶಾಸನ ನಡೆಯಿಸಬೇಕೆಂದು ಹೇಳುವುದರಲ್ಲ ಹುರುಳಿಲ್ಲ. ಹಾಗೆ ನೋಡಿದರೆ, ನಾವು ಯುದ್ಧಮಾಡುವುದರಿಂದ ಒದಗಬಹುದಾದ ಪಾತಕಗಳಂತಹ ಭಯಂಕರ ಪಾಪಗಳು ಕೌರವರಿಂದ ಒಂದೂ ಆಗಿಲ್ಲ. ಆದುದರಿಂದ ಸ್ವಲ್ಪ ಪಾತಕಿಯನ್ನು ಒಡಿಸಿ ಹೆಚ್ಚಿನ ಪಾಪಿಗೆ ಪಟ್ಟಗಟ್ಟುವುದು ಯಾವ ಜಾಣ್ಮೆ?

### ಇಬ್ಬರ ಅಪರಾಧಗಳು.

'ಕಾಳಗದಲ್ಲಿ ಇತ್ತಂಡದವರೂ ಕೊಲೆಮಾಡಬೇಕಾಗುವುದು. ಆದುದರಿಂದ ನಮ್ಮಂತೆ ಕೌರವರೂ ಪಿತೃಹತ್ಯಾದಿ ಪಾತಕಗಳಿಗೆ ಗುರಿಯಾಗುವರು' ಎಂದು ಶ್ರೀಕೃಷ್ಣನೆ, ನೀನೆನ್ನಬಹುದು. ತೋರಿಕೆಯಲ್ಲಿ ಈ ಮಾತು ನಿಜವೆನಿಸುವಂತಿದೆ. ಆದರೆ ಕೌರವರು ಲೋಭದಿಂದ ಕುರುಡರಾಗಿರುವುದರಿಂದ ಅವರಿಗೆ ತಾವು ಮಾಡುವ ಪಾತಕಗಳ ಅರಿವಿಲ್ಲ. ಅವರು ತಿಳಿಗೇಡಿಗಳಾಗಿದ್ದಾರೆ. ಆದರೆ ನಾವು ತಿಳಿದವರೂ ತಿಳಿಗೇಡಿಗಳಂತೆಯೆ ನಡೆದುಕೊಳ್ಳಬೇಕೆ? ಒಬ್ಬನೂ ಹಸುವನ್ನು ಕೊಂದನೆಂದು ಅವನ ಕರುವನ್ನು ಕೊಲ್ಲುವುದು ನ್ಯಾಯವೆ? ಈ ನೆಲದ ಒಡೆತನವಷ್ಟೇ ಏಕೆ? ಮೂಲೋಕದ ಪಟ್ಟವನ್ನು ಕಟ್ಟಿದರೂ ಈ ಗುರುದ್ರೋಹಾದಿ ನಿಂದ್ಯಕರ್ಮಗಳಿಗೆ ನನ್ನ ಕೈಯೇಳದು.

### ಮುಳ್ಳಿನಿಂದ ಮುಳ್ಳು ಕೀಳುವುದು.

ಅರ್ಜುನನ ಮೇಲಣ ವಿಚಾರಸರಣಿ ಮೇಲ್ತೋರಿಕೆಯಲ್ಲಿ ಸರಿಯಿರಬಹುದು. ಕಾಲಿಗೆ ಒಂದು ಮುಳ್ಳು ನಟ್ಟಾಗ ಅದನ್ನು ಕಿತ್ತಿ ಹೊರಚೆಲ್ಲಲಿಕ್ಕೆ ಇನ್ನೊಂದು ಮುಳ್ಳನ್ನು ಉಪಯೋಗಿಸಬೇಕಾಗುತ್ತದೆ. ಮೊದಲೇ ಒಂದು ಮುಳ್ಳು ನಟ್ಟಿರುವಾಗ ಇನ್ನೊಂದು ಮುಳ್ಳನ್ನು ಚುಚ್ಚುವುದು ಸರಿಯೇ? ಎಂಬ ಶಂಕೆಯಿಂದ ಮೊದಲಿನ ನೋವೇ ಇರಲೆಂದು ಸುಮ್ಮನಿರಲಿಕ್ಕಾದೀತೆ? ಇಂತಹ ಪರಿಸ್ಥಿತಿಯಲ್ಲಿ ಮೊದಲಿನ ಮುಳ್ಳು ಅಪಕಾರಕ; ಎರಡನೆಯದು ಉಪಕಾರಕವೆಂದೇ ಹೇಳಬೇಕಾಗುತ್ತದೆ. ಸ್ವರಾಜ್ಯ-ಸಂಪಾದನೆಗಾಗಿ ಹೋರುವುದು ಅನಿವಾರ್ಯವಾದ ಅವಶ್ಯಕ ಕರ್ತವ್ಯವು. ಸಾಮ್ರಾಜ್ಯದ ವಜ್ರಮುಷ್ಟಿಯಲ್ಲ ಸಿಕ್ಕು ನುಚ್ಚುನುರಿಯಾಗುತ್ತಿರುವ ತಮ್ಮ ರಾಷ್ಟ್ರವನ್ನು ಉಳಿಸಲು, ಸ್ವರಾಜ್ಯವನ್ನು ಗಳಿಸಲು ಸಾಮ್ರಾಜ್ಯಶಾಹಿಯಿಂದ ಒದಗುತ್ತಿರುವ ಅನ್ಯಾಯಗಳನ್ನು ನಿವಾರಿಸಲು ಯುದ್ಧವು ಅಪರಿಹಾರ್ಯವಾದುದರಿಂದ ಅದರಲ್ಲಿ ದೋಷಗಳನ್ನು ಎಣಿಸಕೂಡದು. ಇಂತಹ ಯುದ್ಧವು ನಿರ್ದುಷ್ಟವಾದ ಧರ್ಮಯುದ್ಧ. ಮತ್ತ ಸ್ವರಾಜ್ಯ ಸಂಪಾದನೆಗಾಗಿ ಹೂಡಿದ ಯುದ್ಧವನ್ನು ವಿರೋಧಿಸಿ ಸಾಮ್ರಾಜ್ಯವಾದಿಗಳು ಮಾಡುವ ಕೃತ್ಯಗಳು ತೋರಿಕೆಯಲ್ಲಿ ನ್ಯಾಯ ನೀತಿಯವಾಗಿ ಕಂಡರೂ ಅವು ಅವರ ಮೊದಲಿನ ಪಾತಕಗಳಿಂದ ಕಲಂಕಿತವಾಗಿರುತ್ತವೆ. ಆದುದರಿಂದ ಅವು ಸದೋಷವೆಂದೇ ಎಣಿಸಬೇಕು.

ಇನ್ನು 'ನಾವು ಇಬ್ಬರೂ ಅಷ್ಟೇ ಪಾತಕಿಗಳೆಂದ ಒಳಿಕ ಕೌರವರು ಏಕೆ ಬೇಡ? ನಮಗೇ ಏಕೆ ಪಟ್ಟ?' ಎಂಬ ಅರ್ಜುನನ ಮಾತಿನಲ್ಲೂ ಹುರುಳಿಲ್ಲ. ಏಕೆಂದರೆ ಕೌರವ ಮತ್ತು ಪಾಂಡವರಿಬ್ಬರ ಕೈಯಿಂದಲೂ ಯುದ್ಧದಲ್ಲಿ ಆಗುವ ಪಾತಕಗಳು ಅಷ್ಟಷ್ಟೇ ಇವೆ, ಎಂದು ಗ್ರಹಿಸಿದರೂ ಕೌರವರ ಈ ಮೊದಲಿನ ಅನ್ಯಾಯಗಳನ್ನು ಇದರಲ್ಲಿ ಕೂಡಿಸಿದರೆ, ಪಾಂಡವರಿಗಿಂತ ಕೌರವರ ಪಾಪಗಳು ಹೆಚ್ಚಾಗುವುವು.

ಪಾಂಡವರು ನಿಜವಾಗಿ ಯುದ್ಧವು ತಪ್ಪಿದರೆ ತಪ್ಪಲಿ, ಎಂದು ಮೊದಲಿನಿಂದಲೂ ಪ್ರಯತ್ನಿಸಿದ್ದಾರೆ. ಐದು ಹಳ್ಳಿಗಳನ್ನು ಕೊಟ್ಟರೂ ಸಾಕೆಂದು ದುರ್ಯೋಧನನಿಗೆ ತಿಳಿಸಿದ್ದಾರೆ. ಅರ್ಧರಾಜ್ಯಕ್ಕೆ ಅಧಿಕಾರಿಗಳಾದರೂ ಐದು

## (೧೧) ಕುಲಕ್ಷಯದ ದುಷ್ಪರಿಣಾಮಗಳು

**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ ।**
**ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ ॥ ೪೦ ॥**
**ಅಧರ್ಮಾಭಿಭವಾತ್ ಕೃಷ್ಣ ಪ್ರದುಷ್ಯಂತಿ ಕುಲಸ್ತ್ರಿಯಃ ।**
**ಸ್ತ್ರೀಷು ದುಷ್ಟಾಸು ವಾರ್ಷ್ಣೇಯ ಜಾಯತೇ ವರ್ಣಸಂಕರಃ ॥ ೪೧ ॥**
**ಸಂಕರೋ ನರಕಾಯೈವ ಕುಲಘ್ನಾನಾಂ ಕುಲಸ್ಯ ಚ ।**
**ಪತಂತಿ ಪಿತರೋ ಹ್ಯೇಷಾಂ ಲುಪ್ತಪಿಂಡೋದಕಕ್ರಿಯಾಃ ॥ ೪೨ ॥**
**ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ ।**
**ಉತ್ಸಾದ್ಯಂತೇ ಜಾತಿಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ ॥ ೪೩ ॥**
**ಉತ್ಸನ್ನ ಕುಲಧರ್ಮಾಣಾಂ ಮನುಷ್ಯಾಣಾಂ ಜನಾರ್ದನ ।**
**ನರಕೇ ನಿಯತಂ ವಾಸೋ ಭವತೀತ್ಯನುಶುಶ್ರುಮ ॥ ೪೪ ॥**
**ಅಹೋ ಬತ ಮಹತ್ಪಾಪಂ ಕರ್ತುಂ ವ್ಯವಸಿತಾ ವಯಮ್ ।**
**ಯದ್ರಾಜ್ಯಸುಖಲೋಭೇನ ಹಂತುಂ ಸ್ವಜನಮುದ್ಯತಾಃ ॥ ೪೫ ॥**

---

**ಅನ್ವಯ:—** ಕುಲಕ್ಷಯೇ ಸನಾತನಾಃ ಕುಲಧರ್ಮಾಃ ಪ್ರಣಶ್ಯಂತಿ, ಉತ ಧರ್ಮೇ ನಷ್ಟೇ ಅಧರ್ಮಃ ಕೃತ್ಸ್ನಂ ಕುಲಂ ಅಭಿಭವತಿ ॥ ೪೦ ॥ ಹೇ ಕೃಷ್ಣ ! ಅಧರ್ಮಾಭಿಭವಾತ್ ಕುಲಸ್ತ್ರಿಯಃ ಪ್ರದುಷ್ಯಂತಿ । ಹೇ ವಾರ್ಷ್ಣೇಯ ! ಸ್ತ್ರೀಷು ದುಷ್ಟಾಸು ವರ್ಣಸಂಕರಃ ಜಾಯತೇ ॥ ೪೧ ॥ ಸಂಕರಃ ಕುಲಘ್ನಾನಾಂ ಕುಲಸ್ಯ ಚ ನರಕಾಯ ಏವ (ಭವತಿ); ಹಿ ಏಷಾಂ ಪಿತರಃ ಲುಪ್ತಪಿಂಡೋದಕಕ್ರಿಯಾಃ (ಸಂತಃ) ಪತಂತಿ ॥ ೪೨ ॥

ಕುಲಘ್ನಾನಾಂ ಏತೈಃ ವರ್ಣಸಂಕರಕಾರಕೈಃ ದೋಷೈಃ ಶಾಶ್ವತಾಃ ಜಾತಿಧರ್ಮಾಃ ಕುಲಧರ್ಮಾಃ ಚ ಉತ್ಸಾದ್ಯಂತೇ ॥ ೪೩ ॥ ಹೇ ಜನಾರ್ದನ ! ಉತ್ಸನ್ನ ಕುಲಧರ್ಮಾಣಾಂ ಮನುಷ್ಯಾಣಾಂ ನರಕೇ ನಿಯತಂ ವಾಸಃ ಭವತಿ, ಇತಿ ಅನುಶುಶ್ರುಮ ॥ ೪೪ ॥ ಅಹೋ ! ಬತ ಮಹತ್ಪಾಪಂ ಕರ್ತುಂ ವಯಂ ವ್ಯವಸಿತಾಃ, ಯತ್ ರಾಜ್ಯಸುಖಲೋಭೇನ ಸ್ವಜನಂ ಹಂತುಂ ಉದ್ಯತಾಃ ॥ ೪೫ ॥

**ಕುಲಕ್ಷಯದಿಂದ ಸನಾತನ ಪರಂಪರಾಗತವಾದ ಕುಲಧರ್ಮಗಳು ಅಳಿಯುವುವು. ಮತ್ತು ಕುಲಧರ್ಮಗಳು ಅಳಿಯುವುದರಿಂದ ಕುಲಗಳಲ್ಲಿ ಅಧರ್ಮದ ಪ್ರಭಾವವು ಹೆಚ್ಚಾಗುವುದು. ॥ ೪೦ ॥ ಎಲೈ ಕೃಷ್ಣನೇ ! ಕುಲವೆಲ್ಲವೂ ಅಧಾರ್ಮಿಕವಾದರೆ ಸ್ತ್ರೀಯರ ಕುಲೀನತೆಯು ಹಾಳಾಗುವುದು. ಎಲೈ ಯಾದವಕುಲೋತ್ಪನ್ನನಾದ ಶ್ರೀಕೃಷ್ಣನೆ ! ಹೆಣ್ಣುಮಕ್ಕಳು ಕೆಟ್ಟರೆ ವರ್ಣಗಳ ಬೆರಿಕೆಯಾಗುವುದು. ॥೪೧॥ ಹೀಗೆ ಬೆರಿಕೆಯಾದಲ್ಲಿ ಬೆರಿಕೆಯಾದವರು ಮತ್ತು ಅವರ ಕುಲದವರೂ ನರಕದಲ್ಲಿ ಬೀಳುವರು. ಮತ್ತು ಅವರ ಪಿತೃಗಳು, ಪಿಂಡಪ್ರದಾನ, ಜಲತರ್ಪಣಾದಿ ಕ್ರಿಯೆಗಳು ಲುಪ್ತವಾದುದರಿಂದ ಪತಿತರಾಗುತ್ತಾರೆ. ॥ ೪೨ ॥ ಕುಲನಾಶಕರ ಈ ಬೆರಿಕೆಯ ನಡೆವಳಿಯ ತಪ್ಪಿನಿಂದ ಪುರಾತನ ಜಾತಿಧರ್ಮಗಳು ಕುಲಧರ್ಮಗಳು ನಷ್ಟವಾಗುತ್ತವೆ. ॥ ೪೩ ॥ ಎಲೈ ಜನಾರ್ದನನೆ! ಕುಲಧರ್ಮಗಳು ನಷ್ಟವಾದ ಮನುಷ್ಯರಿಗೆ ನಿಶ್ಚಯವಾಗಿಯೂ ನರಕದಲ್ಲಿ ವಾಸಮಾಡಬೇಕಾಗುವುದೆಂದು ನಾವು ಕೇಳುತ್ತೇವೆ. ॥ ೪೪ ॥ ಅಹಹಾ ! ನಾವು ಎಂತಹ ಮಹತ್ಪಾಪವನ್ನುಮಾಡಲೆಳಸಿದ್ದೇವೆ ! ರಾಜ್ಯಸುಖದ ಆಸೆಯಿಂದ ಸ್ವಜನರನ್ನೂ ಕೊಲ್ಲಲು ನಾವು ಸಿದ್ಧರಾಗಿದ್ದೇವೆ ! ॥ ೪೫ ॥**

---

ಹಳ್ಳಿಗಳಿಂದಲೆ ಸಂತುಷ್ಟರಾಗಿರಲು ಸಿದ್ಧರಿದ್ದರು. ಆದರೆ ಯುದ್ಧಕ್ಕೆ ಒತ್ತಾಯ ಪಡಿಸಿದರು. ಆದುದರಿಂದ ಈ
**ಕೌರವರು ಏನನ್ನೂ ಕೊಡಲು ಒಪ್ಪದೆ ಪಾಂಡವರನ್ನು ಯುದ್ಧದ ದೋಷಗಳ ಹೊಣೆಯು ಪಾಂಡವರ ಮೇಲೆ**

**ಭಾವಾರ್ಥ:—** ಮನೆತನದಲ್ಲಿ ಹಿರಿಯರಾದವರನ್ನು ಕೊಲ್ಲುವುದರಿಂದ ಹೆಣ್ಣುಮಕ್ಕಳು ಅನಾಚಾರಿಗಳಾಗುವರು. ಮತ್ತು ಹೆಣ್ಣುಮಕ್ಕಳು ದುರಾಚಾರಿಗಳಾದರೆ ಕುಲವೆಲ್ಲವೂ ಕೆಟ್ಟುಹೋಗುವುದು. ಅದು ಸತ್ವಗೇಡಿಯಾಗುವುದು. ಆದುದರಿಂದ ಕುಲದ ಘಾತಮಾಡುವುದು ತುಂಬ ಅನರ್ಥಕಾರಿಯಾಗಿದೆ.

---

ಇಲ್ಲವೇ ಇಲ್ಲ. ಕುಲಕ್ಷಯಾದಿ ಎಲ್ಲ ಪಾತಕಗಳಿಗೆ ಆದಿಕಾರಣನು ದುರ್ಯೋಧನನೆ ಆಗಿದ್ದಾನೆ. ಪಾಂಡವರು ನಿಜವಾಗಿ ನಿರ್ದೋಷಿಗಳಾಗಿದ್ದಾರೆ.

ಆದರೆ ಅರ್ಜುನನು ಮೋಹವಶನಾಗಿ ಎಲ್ಲವನ್ನೂ ತಿರುವು ಮುರುವಾಗಿ ಎಣಿಸಿದ್ದಾನೆ. ಆತನು ಮುಂದೆ ನುಡಿಯುವುದೇನೆಂದರೆ :

(೪೦–೪೫) ಹೋರಟೆಗೆ ಹರೆಯದವರಲ್ಲದೆ
ಬೇರೆ ಯಾರು ತಕ್ಕವರು ?

**ಷೋಡಶಾತ್ ಸಪ್ತತಿವರ್ಷಪರ್ಯಂತಂ**
**ಯೌವನಮ್**
—ವಾತ್ಸಾಯನ

ಹದಿನಾರರಿಂದ ಎಪ್ಪತ್ತರವರೆಗೆ ಹರೆಯ ಕಾಲವೆಂದು ವಾತ್ಸಾಯನನ ಮತವಿದೆ. ಮತ್ತು ಈ ವಯಸ್ಸಿನ ಒಳಗಿನವರೆ ರಣರಂಗದಲ್ಲಿ ನಿಲ್ಲಲು ಯೋಗ್ಯರು. ಭೀಷ್ಮ-ದ್ರೋಣರಂತಹ ಮುದುಕರೂ ಕೆಲ ಸಾರೆ ಕಾಳಗಕ್ಕೆ ಬರಬೇಕಾಗುವುದು. ಆದರೆ ಅದು ನಿಯಮವಲ್ಲ. ಅಪವಾದ ಸಾಮಾನ್ಯವಾಗಿ ಕಾಳಗದಲ್ಲಿ ಮಾರಿದೇವಿಗೆ ಬಲಿಯಾಗತಕ್ಕವರು ಹೊಸ ಹುಮ್ಮಸದ ಹರಯದವರೆ. ತರುಣರೆ ರಾಷ್ಟ್ರದ ಸತ್ವಸಾರ. ಮುಖ್ಯವಾಗಿ ಅಂತಹ ಸತ್ವಶಾಲಿಗಳಾದ ತರುಣರಿಂದ ಆದ ಹದಿನೆಂಟು ಅಕ್ಷೌಹಿಣಿ ಸೈನ್ಯವೆ ಯುದ್ಧದಲ್ಲಿ ಜೀವವನ್ನು ಸೂರೆಗೆಯ್ಯಲು ಸಜ್ಜಾಗಿ ನಿಂತಿದ್ದಿತು.

**ಅಕ್ಷೌಹಿಣ್ಯಾಃ ಪ್ರಮಾಣಂ ತು ಖಾಂಗಾ-**
**ಷ್ಟೈಕದ್ವಿಕೈರ್ಗಜೈಃ ।**
**ರಥೈರೇತೈರ್ಹಯೈಸ್ತ್ರಿಘ್ನೈಃ ಪಂಚಘ್ನೈಶ್ಚ**
**ಪದಾತಿಭಿಃ ॥**

ಒಂದು ಅಕ್ಷೌಹಿಣಿಯಲ್ಲಿ ೨೧,೮೭೦ ಆನೆ ; ೨೧೮೭೦ ತೇರು ; ೬೫,೬೧೦ ಕುದುರೆ ; ೧,೦೯,೩೫೦ ಕಾಲಾಳು, ಹೀಗೆ ಎಲ್ಲವೂ ಸೇರಿ ೨,೧೮,೭೦೦ ಸಂಖ್ಯೆಯಾಗುವುದು. ಇದರಲ್ಲಿ ಒಂದು ಆನೆಯೊಂದಿಗೆ ಹತ್ತು ಹನ್ನೆರಡು ಜನ ಮಾವಟಿಗ ಮುಂತಾದವರು ; ಒಂದೊಂದು ಕುದುರೆಯೊಡನೆ ಇಬ್ಬರು ಮೂವರು ರಾವುತನೆ ಮೊದಲಾದವರು ; ಒಂದೊಂದು ತೇರಿನೊಡನೆ ಇಪ್ಪತ್ತು ಇಪ್ಪತ್ತೈದು ಜನ ; ಹೀಗೆ ಈ ಜನಗಳನ್ನೂ ಲೆಕ್ಕಕ್ಕೆ ಹಿಡಿದರೆ ಒಂದು ಅಕ್ಷೌಹಿಣಿಗೆ ೮–೧೦ ಲಕ್ಷದ ವರೆಗೆ ಸಂಖ್ಯೆಯಾಗುವುದು. ಮಹಾ ಅಕ್ಷೌಹಿಣಿಯು ೧೩, ೨೧, ೨೪, ೯೦೦ ಸಂಖ್ಯೆಯದಾಗಿದೆ.

**ಖದ್ವಯಂ ನಿಧಿವೇದಾಕ್ಷಿ ಚಂದ್ರಾಕ್ಷ್ಯಗ್ನಿ**
**ಹಿಮಾಂಶುಭಿಃ ।**
**ಮಹಾಕ್ಷೌಹಿಣೀ ಪ್ರೋಕ್ತಾ ಸಂಖ್ಯಾಗಣಿತಕೋ**
**ವಿದೈಃ ॥**

ಹೀಗೆ ಹದಿನೆಂಟು ಅಕ್ಷೌಹಿಣಿ ಸೈನ್ಯವು ರಣದೇವತೆಗೆ ಬಲಿಯಾಗಲು ಸಿದ್ಧವಾಗಿತ್ತು. ಇದು ಸುಮಾರು ನಲುವತ್ತು ಲಕ್ಷ ಸೈನ್ಯವಾಗುವುದು. ಇದು ಭರತ ಖಂಡದ ಸಾರಸರ್ವಸ್ವ. ಇದರೊಳಗಿಂದ ಅಳಿದು ಉಳಿದ ಜನ ತೀರ ಸ್ವಲ್ಪ. ಬಹುತರ ಎಲ್ಲ ದಂಡು ತುಂಡರಿಸಲ್ಪಟ್ಟಿತು. ನೋವು ಸಾವುಗಳಿಗೆ ಈಡಾಯ್ತು. ಇಷ್ಟು ಜನ ಕೆಚ್ಚೆದೆಯ ಗಂಡುಗಲಿಗಳಿಗೆ ಭಾರತವು ಎರವಾಯ್ತು. ನಾಡಿನಲ್ಲಿ ಇನ್ನುಳಿದರಾರು ? ಹೇಡಿ ಹೆಣ್ಣುಗಂಡುಗಳು ! ಜೀವಗಳ್ಳರು, ಮೈಗಳ್ಳರು ! ಮುದುಕರು ಮಕ್ಕಳು ! ಅಥವಾ ಕಾಳಗದಲ್ಲಿ ಕೈಕಾಲುಗಳನ್ನು ಕಳೆದುಕೊಂಡು ಊನರಾಗಿ, ದೀನರಾಗಿ ಬಾಳಬೇಕಾದವರು ! ಆದುದರಿಂದ ಈ ಮಹಾಯುದ್ಧದಿಂದ ರಾಷ್ಟ್ರದೊಳಗಿನ ಕರ್ತೃತ್ವಶಾಲಿಗಳ ಪರಂಪರೆಯೆ ನಷ್ಟವಾಯ್ತು ! ಭಾರತೀಯ ಉಚ್ಚ ಸಂಸ್ಕೃತಿಯ ಇಳಿಗಾಲಕ್ಕೆ ಆರಂಭವಾಯ್ತು !

ಅರ್ಜುನನೂ ಶ್ರೀಕೃಷ್ಣನಿಗೆ ಇದೆ ಮಾತನ್ನು ವಿವರಿಸಿ ಹೇಳಿದ್ದಾನೆ : ಯುದ್ಧಾನಂತರ ಒದುಕುವ ಮಕ್ಕಳಿಗೆ, ಹಿರಿಯರೆಲ್ಲ ಮೊದಲೆ ಮಡಿದು ಹೋದುದರಿಂದ ಅವರ ಅನುಭವ, ಜ್ಞಾನಗಳ ಲಾಭವು ದೊರೆಯದೆ ಅವರು ತಮ್ಮ ಸಂಸ್ಕೃತಿಗೆ ಎರವಾಗುತ್ತಾರೆ. ಲಕ್ಷಾವಧಿ ಹೆಣ್ಣುಮಕ್ಕಳು ಅನಾಥರಾಗುವರು. ಅವರಲ್ಲಿ ಅನೇಕರು ದಿಕ್ಕಿಲ್ಲದವರಾಗಿ ಹೊಟ್ಟೆಯಪಾಡಿಗೆ ಹರವರ ತೊತ್ತುಗಳಾಗಿ ಬಾಳಬೇಕಾಗುವುದು. ಅನೇಕರು, ಎಳೆಯ ವಯಸ್ಸಿನ ತರುಣಿಯರು, ದೇಹಧರ್ಮದ ಒತ್ತಾಯದಿಂದ ಇನ್ನೊಬ್ಬನ ಕೈಹಿಡಿದ ಹೊತ್ತು ಬರುವುದು. ಹೀಗಾಗಿ ಅನೇಕಾನೇಕ ಮನೆತನಗಳು ಹಾಳಾಗುವುವು. ಹಲವು ಹೇಳಹೆಸರಿಲ್ಲದಂತಾಗುವುವು. ಹೆಣ್ಣುಮಕ್ಕಳು

ಯದಿ ಮಾಮಪ್ರತೀಕಾರಮಶಸ್ತ್ರಂ ಶಸ್ತ್ರಪಾಣಯಃ ।
ಧಾರ್ತರಾಷ್ಟ್ರಾ ರಣೇ ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥ ೪೬ ॥
ಸಂಜಯ ಉವಾಚ— ಏವಮುಕ್ತ್ವಾರ್ಜುನಃ ಸಂಖ್ಯೇ ರಥೋಪಸ್ಥ ಉಪಾವಿಶತ್ ।
ವಿಸೃಜ್ಯ ಸಶರಂ ಚಾಪಂ ಶೋಕಸಂವಿಗ್ನಮಾನಸಃ ॥ ೪೭ ॥

**ಅನ್ವಯಃ—** ಯದಿ ಶಸ್ತ್ರಪಾಣಯಃ ಧಾರ್ತರಾಷ್ಟ್ರಾಃ ಅಶಸ್ತ್ರಂ ಅಪ್ರತೀಕಾರಂ ಮಾಂ ರಣೇ ಹನ್ಯುಃ, ತತ್ ಮೇ ಕ್ಷೇಮತರಂ ಭವೇತ್ ॥ ೪೬ ॥ ಸಂಖ್ಯೇ ಏವಂ ಉಕ್ತ್ವಾ, ಶೋಕಸಂವಿಗ್ನಮಾನಸಃ ಅರ್ಜುನಃ ಸಶರಂ ಚಾಪಂ ವಿಸೃಜ್ಯ, ರಥೋಪಸ್ಥೇ ಉಪಾವಿಶತ್ ॥ ೪೭ ॥

**ಶಸ್ತ್ರಧಾರಿಗಳಾದ ಧೃತರಾಷ್ಟ್ರಪುತ್ರರು ನಿಃಶಸ್ತ್ರನಾದ ಮತ್ತು ಪ್ರತಿಕಾರ ಶೂನ್ಯನಾದ ನನ್ನನ್ನು ಈ ಕಾಳಗದಲ್ಲಿ ಕೊಂದರೂ ಅದು ನನಗೆ ಲೇಸಾದುದೇ. ॥ ೪೬ ॥ ಸಂಜಯನೆಂದನು: ರಣಭೂಮಿಯಲ್ಲಿ ಇಂತು ಮಾತನಾಡಿ ಶೋಕಾಕುಲಚಿತ್ತನಾದ ಅರ್ಜುನನು ಬಿಲ್ಲು ಬಾಣಗಳನ್ನು ಚೆಲ್ಲಿ ತೇರಿನಲ್ಲಿಯೇ ಕುಳಿತು ಬಿಟ್ಟನು. ॥ ೪೭ ॥**

ಅಡ್ಡದಾರಿಗೆ ಬೀಳುವುದರಿಂದ ಕುಲಗಳ ಕಲಬೆರಿಕೆಯಾಗುವುದು. ಮಕ್ಕಳ ಮೇಲೆ ಹೀನ ಸಂಸ್ಕಾರಗಳು ಆಗುವುವು. ಅದರಿಂದ ರಾಷ್ಟ್ರವು ಅಧೋಗತಿಗೆ ಇಳಿಯುವುದು. ಆದುದರಿಂದ ಯುದ್ಧವು ಒಂದು ಘೋರ ಪಾತಕದ ಆಗರವಾಗಿದೆ. ರಾಜ್ಯಲೋಭದಿಂದ ಒಂದು ಜನಾಂಗವನ್ನು ಸಮೂಲ ನಾಶಗೊಳಿಸುವುದು ಯೋಗ್ಯವಲ್ಲ. ಆದಕಾರಣ ನಾನು ಯುದ್ಧಕ್ಕೆ ಪ್ರವೃತ್ತನಾಗಲಾರೆನು.

ಇಂತು ಅರ್ಜುನನು ಬಣ್ಣಿಸಿದುದು ಕಾಳಗದ ಭಯಾನಕ ವಾಸ್ತವ ಚಿತ್ರವಾಗಿದೆ. ಕೊಲೆ–ಸುಲಿಗೆಗಳಿಲ್ಲದೆ ಕಾಳಗವೆಂತಹುದು? ಯುದ್ಧವೆಂದ ಬಳಿಕ ಇವೆಲ್ಲವೂ ನಡೆಯತಕ್ಕುದೆ. ಆದರೆ ಇದೆಲ್ಲವೂ ಪ್ರವಾಹಪತಿತ ಕರ್ಮ. ಎಂದರೆ ಪರಿಸ್ಥಿತಿಯ ಒತ್ತಾಯದಿಂದ ಒದಗತಕ್ಕುದು. ಇದರ ದೋಷವೆಲ್ಲವೂ ಮುಖ್ಯವಾಗಿ ಮೊದಲು ಕಾಳಗಕ್ಕೆ ಕಾಲುಕೆದರಿ ನಿಂತವರ ಮೇಲೆಯೆ ಇದೆ. ಮತ್ತು ಲೋಕದಲ್ಲಿ ಹಲವು ಕಾಲದಿಂದಲೂ ನಡೆದ ಬಗೆಬಗೆಯ ಅನ್ಯಾಯದ ಕ್ರೂರ ಕೃತ್ಯಗಳ ಫಲವಾಗಿ ಒಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಯುದ್ಧವು ಅನಿವಾರ್ಯ ಕರ್ಮವಾಗುತ್ತದೆ. ಅಂತಹ ಪರಿಸ್ಥಿತಿಯಲ್ಲಿ ಯಾರು ಒಬ್ಬಿಬ್ಬರು 'ಯುದ್ಧವು ಬೇಡ' ಎಂದು ಶಾಂತಿ ಪಾಠವನ್ನು ಹೇಳಿದರೂ ಅದು ನಿಲ್ಲುತ್ತಿರುವುದಿಲ್ಲ. ಒದಗುವುದು ಒದಗಿಯೆ ತೀರುವುದು. ಹಿಂದಿನ ಅನ್ಯಾಯ ಅನೀತಿಗಳ ಪ್ರಾಯಶ್ಚಿತ್ತಕ್ಕಾಗಿ ರಣಯಜ್ಞವು ಅಪರಿಹಾರ್ಯವಾಗುತ್ತಿರುತ್ತದೆ. ಭಾರತೀಯ ಯುದ್ಧವು ಈ ಬಗೆಯಾಗಿ ಅಪರಿಹಾರ್ಯವಾಗಿ ಪರಿಣಮಿಸಿತ್ತು. ಅದನ್ನು ಆಗಗೊಡದಿರುವುದಕ್ಕೆ ಯಾರಿಂದಲೂ ಸಾಧ್ಯವಿದ್ದಿಲ್ಲ. ರಾಜ್ಯಾಧಿಕಾರಿಗಳು ಪಾತಕಿಗಳಾಗಿ ವರ್ತಿಸಲಾರಂಭಿಸಿದಾಗ ಲೋಕದಲ್ಲಿ ಅನ್ಯಾಯ ಅನೀತಿಯು ಹೆಚ್ಚಳವು ಆಗುವುದು. ಶಂತನುವು ಹೆಣ್ಣಿನ ಹುಚ್ಚಿನಿಂದ ಮುಪ್ಪಿನಕಾಲದಲ್ಲಿ ಹೊಸ ಮದುವೆಯಾದನು. ಮೊದಲಿನ ಹೆಂಡತಿಯ ಮಗನು ಎಲ್ಲ ಬಗೆಯಿಂದಲೂ ಪಟ್ಟಕ್ಕೆ ಯೋಗ್ಯನಾಗಿದ್ದರೂ ಆತನ ಯುವರಾಜಪದದ ಹಕ್ಕನ್ನು ಕಸಿದು, ಹೊಸ ಹೆಂಡತಿಯ ಮಗನೆ ಪಟ್ಟಾಧಿಕಾರಿಯೆಂದು ಸಾರಿದನು. ಈ ಬಗೆಯಾದ ಅನೇಕಾನೇಕ ಅನ್ಯಾಯಗಳು ನಾಡಿನಲ್ಲಿ ಹೆಚ್ಚಾಗುತ್ತ ನಡೆದುದರಿಂದ ರಾಷ್ಟ್ರಕ್ಕೆ ಈ ದುಷ್ಕರ್ಮಗಳ ಭಾರವು ಅಸಹ್ಯವಾಗುತ್ತಿತ್ತು. ಪುರಾಣಗಳಲ್ಲಿ ವರ್ಣಿಸಲ್ಪಟ್ಟ 'ಭೂಮಿ-ಭಾರ'ವು ಇದೆ. ಈ ಅನ್ಯಾಯಗಳನ್ನು ತಡೆದು ಹಿಡಿಯುವುದಕ್ಕೆ ಯುದ್ಧದ ಹೊರತಾಗಿ ಅನ್ಯಮಾರ್ಗವೆ ಉಳಿಯುವುದಿಲ್ಲ. ಯುದ್ಧವನ್ನು ಆಗಗೊಡಬಾರದೆಂದು ನಡೆವ ಪ್ರಯತ್ನಗಳು ಯುದ್ಧದ ಬೇಗೆಯನ್ನು ಹೆಚ್ಚಿಸುವುದಕ್ಕೇ ಕಾರಣವಾಗುವುವು. ಇಂತಹ ಪರಿಸ್ಥಿತಿಯಲ್ಲಿ ಅರ್ಜುನನಂತಹ ಒಬ್ಬಿಬ್ಬರು ಯುದ್ಧಕ್ಕೆ ಬೆನ್ನು ತೋರಿದರೆ ಆಗಬೇಕಾದುದೇನು? ರಣರಂಗದಿಂದ ಕಾಲ್ತೆಗೆಯುವುದು ವೀರಕ್ಷತ್ರಿಯನೆನಿಸಿದ ಅರ್ಜುನನಿಗೆ ಅಯೋಗ್ಯವಾಗಿದೆ. ಹೊತ್ತನ್ನು ಅರಿಯುವ ಗುಣವು ಅರ್ಜುನನಲ್ಲಿ ಈಗ ಲುಪ್ತವಾದಂತಾಗಿದೆ.

ಇಲ್ಲಿ ೪೧ನೆಯ ಶ್ಲೋಕದಲ್ಲಿ ಶ್ರೀಕೃಷ್ಣನಿಗೆ 'ವಾರ್ಷ್ಣೇಯ,' ಎಂದರೆ 'ವೃಷ್ಣಿಗಳ ಕುಲದಲ್ಲಿ ಜನಿಸಿದವನೆ' ಎಂದು ಸಂಬೋಧಿಸಲಾಗಿದೆ. 'ನೀನೂ ವೃಷ್ಣಿ ಕುಲದಲ್ಲಿ ಹುಟ್ಟಿದವನು. ನಿನ್ನ ಆ ಕುಲದ ನಾಶವು ಆಗಿ, ವರ್ಣಸಂಕರವಾದರೆ ನಿನಗೆ ಸೇರಬಹುದೆ? ನಿನಗೆ ನಿನ್ನ ಕುಲವು ಪ್ರಿಯವಾಗಿರುವಂತೆ, ನನಗೆ ನನ್ನ ಕುಲವೂ

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಅರ್ಜುನ ವಿಷಾದಯೋಗೋ ನಾಮ ಪ್ರಥಮೋಽಧ್ಯಾಯಃ ॥ ೧ ॥

ಸೇರುವುದು. ಆದುದರಿಂದ ಈ ಘೋರ ಯುದ್ಧದಲ್ಲಿ ನನ್ನನ್ನು ನೂಕುವುದು ಯೋಗ್ಯವಲ್ಲ' ಎಂದು ಅರ್ಜುನನು 'ವಾರ್ಷ್ಣೇಯ' ಎಂಬ ಸಂಬೋಧನೆಯಿಂದ ಸೂಚಿಸಿದ್ದಾನೆ.

ಇಂತು ಅರ್ಜುನನು ಯುದ್ಧದಿಂದ ಹೊರಗಾಗುವ ವಿಚಾರವನ್ನು ನಿರ್ಧರಿಸಿ ಕೊನೆಗೆ ಹೇಳುವುದೇನೆಂದರೆ:

(೪೬) ಯುದ್ಧದಿಂದ ಸ್ವಕುಲನಾಶವು ಆಗುವುದಿದ್ದರೆ ಆಗಲಿ; ಪ್ರಿಯ ಆರ್ಯಸಂಸ್ಕೃತಿಯು ಹಾಳಾದರೆ ಅದೂ ಹಾಳಾಗಲಿ; ನಾನಂತೂ ಕಾದಲಾರೆನು; ಕೈಯಲ್ಲಿ ಆಯುಧಗಳಿಲ್ಲದೆ ಇರುವ ನನ್ನ ಮೇಲೆ ಹಗೆಗಳು ಬಾಣಗಳನ್ನೆಸೆಯಲಿ; ಅದರಲ್ಲಿ ನಾನು ಸಾವಿಗೆ ಈಡಾಗಲಿ; ನನ್ನ ನಿಶ್ಚಯದಿಂದ ನಾನು ಹಿಂಜರಿಯಲಾರೆನು; ಎಂದು ಅರ್ಜುನನು ತನ್ನ ವಿಚಾರವನ್ನು ಶ್ರೀಕೃಷ್ಣನಿಗೆ ಅರುಹಿದನು. **ನಿರ್ವೈರನಾದ, ನಿಃಶಸ್ತ್ರನಾದ, ಅನತ್ಯಾಚಾರಿಯಾದ, ಹಾಗೂ ಶಾಂತನಿರುವ ತನ್ನ ಮೇಲೆ ಶತ್ರುಗಳು ಬಾಣಗಳನ್ನು ಸುರಿಸಿದರೆ, ಅದು ನನಗೆ ಕಲ್ಯಾಣಕಾರಕವೆ ಆದೀತು;** ಎಂದು ಅರ್ಜುನನು ಭಾವಿಸಿದ್ದಾನೆ!

ಪರಾಕ್ರಮಶಾಲಿಯಾದ ವೀರನಾಗಿದ್ದು ಅಹಿಂಸಾವ್ರತಿಯಾಗುವುದರಲ್ಲಿಯೆ ಭೂಷಣವಿದೆ. ತಾನಂತೂ ಯುದ್ಧವು ಆಗಬಾರದೆಂದು ಮನಃಪೂರ್ವಕವಾಗಿ ಪ್ರಯತ್ನಿಸಿದ್ದೇನೆ ಸಾಮ್ರಾಜ್ಯವಾದಿಗಳಾದ ದುಷ್ಟ ಕೌರವರು ತಮ್ಮ ಪಾಶವೀಶಕ್ತಿಯ ಬಿಂಕದಿಂದ ಕೊಬ್ಬಿ ನ್ಯಾಯಾನ್ಯಾಯಗಳನ್ನು ಲೆಕ್ಕಿಸದೆ ನನ್ನ ಕೊಲೆಮಾಡಿದರ ಅದೂ ಒಳ್ಳಿತೇ ಆಯ್ತು; ಏಕೆಂದರೆ ಅದರಿಂದ ಲೋಕಕ್ಕೆಲ್ಲ ಈ ಸಾಮ್ರಾಜ್ಯವಾದಿಗಳ ನಿಜಸ್ವರೂಪವು ಗೊತ್ತಾಗಿ ಅವರ ವಿನಾಶವು ತನ್ನ ತಾನೆ ಆಗುವುದು ಎಂದು ಅರ್ಜುನನ ಮಾತಿನ ಆಶಯವಾಗಿದೆ. ಶಾಂತಿವಾದಿಯೂ ಅಹಿಂಸಾವೃತ್ತಿಯವನೂ, ಅಜಾತಶತ್ರುವೂ, ನಿಃಶಸ್ತ್ರನೂ ಆದವನನ್ನು ಪಾಶವೀಶಕ್ತಿಯ ಬಲದಿಂದ ಹಿಂಸೆಗೊಳಿಸಿದರೆ, ಅಥವಾ ಕೊಂದರೆ ಆತನನ್ನೂ ಪೀಡಿಸಿದರೆ, ಆತನ ಒಂದು ಹನಿನೆತ್ತರು ನೆಲದ ಮೇಲೆ ಬಿದ್ದರೆ ಅದು ಮಹಾಪ್ರಳಯಕ್ಕೆ ಕಾರಣವಾದೀತು. ಆದುದರಿಂದಲೆ ನಿಃಶಸ್ತ್ರನಾದ ಅನತ್ಯಾಚಾರಿಯ ಮೇಲೆ ಕೈಯೆತ್ತಲಾಗದು ಎಂದು ಧ್ವನಿತಮಾಡಿ ಅರ್ಜುನನು ತನ್ನ ಮಾತನ್ನು ಮುಗಿಸುತ್ತಾನೆ.

(೪೭) ಸಂಜಯನು ಧೃತರಾಷ್ಟ್ರನಿಗೆ ಅರ್ಜುನನ ಈ ಅವಸ್ಥೆಯನ್ನು ವರ್ಣಿಸಿದನು: ಅರ್ಜುನನು ಅಂತು ತನ್ನ ಧನುರ್ಬಾಣಗಳನ್ನು ಚೆಲ್ಲಿ ತೇರಿನಲ್ಲಿ ಕುಳಿತುಬಿಟ್ಟನು. ಆತನ ಉತ್ಸಾಹವು ನಷ್ಟವಾಗಿದೆ. ಬಂಟತನವು ಬರಿದಾಗಿದೆ. ಉಕ್ಕಿನ ಎದೆಯ ವೀರನು ಮೇಣದ ಎದೆಯವನಾಗಿ ದುಃಖದಿಂದ ಕಾತರಗೊಂಡಿದ್ದಾನೆ. ಹುರುಪು ಹುಮ್ಮಸಗಳು ಎಳ್ಳಷ್ಟೂ ಉಳಿದಿಲ್ಲ.

ಈ ಸುದ್ದಿಯನ್ನು ಕೇಳಿ ಧೃತರಾಷ್ಟ್ರನು ಹಿಗ್ಗಿರಲಿಕ್ಕೆ ಸಾಕು. ಏಕೆಂದರೆ ತಾನು ಸಂಜಯನ ಮುಖದಿಂದ ಮಾಡಿಸಿದ ಮಂತ್ರೋಪದೇಶವು ಸಫಲವಾಯ್ತೆಂದು ಆತನು ಭಾವಿಸಿದನು. ಸಾಮ್ರಾಜ್ಯವಾದಿಗಳಾದ ಕೌರವರಿಗೆ ಪರಮಾವಧಿ ಸಂತೋಷಕ್ಕೆ ಕಾರಣವಾಯ್ತು. ತಮ್ಮ ಸಾಮ್ರಾಜ್ಯವು ಇನ್ನು ನಿಷ್ಕಂಟಕವಾಯಿತು; ಎಂದು ಅವರು ವಿಜಯೋತ್ಸಾಹದಿಂದ ಉಬ್ಬಿದರು. ಆದರೆ ಈ ಲೋಕದಲ್ಲಿ ಮಾನವನ ಎಣಿಕೆಯನ್ನು ಮೀರಿದ ಒಂದು ಈಶಶಕ್ತಿಯು ವಿಶ್ವವನ್ನು ಆಳುತ್ತಲಿದೆ. ಅದು ಈ ಕುನ್ನಿಮಾನವರ ಹೆಮ್ಮೆಯ ಎಣಿಕೆಗಳನ್ನು ಒಂದೂ ಲೆಕ್ಕಿಸದೆ ತನ್ನ ವಿಶ್ವಸಂರಕ್ಷಣೆಯ ಗುರಿಯನ್ನು ಸಾಧಿಸಲಿಕ್ಕೆ ಇವರನ್ನೆಲ್ಲ ಕೈಗೊಂಬೆಗಳಂತೆ ಆಡಿಸುತ್ತದೆ. ಆದುದರಿಂದಲೆ 'ದೈವಮುಂ ಮೀರಿ ಬಾಳಲ್ ನೆರೆವರಾರ್ ?' ಎಂದು ಮಹಾಕವಿಗಳು ಒಡನುಡಿದಿದ್ದಾರೆ.

ಸ್ವರಾಜ್ಯಸಂಪಾದನೆಗಾಗಿ ಹೆಣಗಾಡುವವರಿಗೆ ಅಡಿಗಡಿಗೆ ಬರುವ ಇಂತಹ ನಿರಾಶೆಯ ಪ್ರಸಂಗಗಳಿಂದ ಪರಮಾತ್ಮನಲ್ಲಿ ಅವರ ಭಕ್ತಿವಿಶ್ವಾಸಗಳು ದಿನದಿನಕ್ಕೂ ಹೆಚ್ಚಾಗುವುವು. ಮತ್ತು ಆತನ ಬೆಂಬಲವನ್ನು ಪಡೆದು ಲೋಕಕಲ್ಯಾಣಕ್ಕಾಗಿ ದುಡಿವ ಈ ತ್ಯಾಗವೀರರ ಶಕ್ತಿಯು ಬೆಳೆಯುವುದು. ತಮ್ಮ ಗೆಲುವಿನ ಉಬ್ಬಿನಲ್ಲಿ ಕೊಬ್ಬಿದ ಸಾಮ್ರಾಜ್ಯಶಾಹಿಯಿಂದ ಒದಗುವ ಅನ್ಯಾಯಗಳು ಅವರ ನಾಶಕ್ಕೆ ಕಾರಣವಾಗುವುವು. ಆದರೆ ಅವರಿಗೆ ಕೊನೆಯವರೆಗೂ ತಮ್ಮ ವಿನಾಶದ ಅರಿವೆ ಉಂಟಾಗುವುದಿಲ್ಲ.

**ಇಂತು ಶ್ರೀಮದ್ಭಗವದ್ಗೀತಾ ರೂಪಿಯಾದ ಉಪನಿಷತ್ತಿನಲ್ಲಿ ಹೇಳಿದ ಬ್ರಹ್ಮವಿದ್ಯೆಯಿಂದ ನಿಶ್ಚಿತವಾದ ಯೋಗಶಾಸ್ತ್ರವಿಷಯಕ ಶ್ರೀಕೃಷ್ಣಾರ್ಜುನನ ಸಂವಾದದೊಳಗಿನ ಅರ್ಜುನ ವಿಷಾದಯೋಗವೆಂಬ ಹೆಸರಿನ ಮೊದಲನೆಯ ಅಧ್ಯಾಯವು ಮುಗಿದುದು.**



# ಗೀತಾ-ವಿಚಾರ

**'ಶ್ರೀಮದ್ಭಗವದ್ಗೀತೆಯ'** ವಿಷಯದಲ್ಲಿ ಆದರವಿಲ್ಲದ ಸುಶಿಕ್ಷಿತ ಮಾನವನೇ ದೊರೆಯಲಾರನು. ಹಿಂದೂ ಜನರಿಗಂತೂ ಶ್ರೀಮದ್ಭಗವದ್ಗೀತೆಯೆಂದರೆ ತುಂಬ ಭಕ್ತಿ ವಿಶ್ವಾಸ. ವೈದಿಕಪರಂಪರಾಭಿಮಾನಿಗಳಿರಲಿ, ಆಧುನಿಕ ವಿಚಾರದವರಿರಲಿ ಶ್ರೀ ಮದ್ಭಗವದ್ಗೀತೆಯು ಅವರ ಮನಸ್ಸನ್ನು ಆಕರ್ಷಿಸದೆ ಬಿಟ್ಟಿಲ್ಲ. ಸನಾತನ ಧರ್ಮಾಭಿಮಾನಿಗಳಿಗೆ ಇದು ತಮ್ಮ ತತ್ವಜ್ಞಾನದ ಮೂಲಾಧಾರ ಗ್ರಂಥವೆನಿಸುತ್ತದೆ. ಆಧುನಿಕರಿಗೆ, ಅತ್ಯಂತ ಆಧುನಿಕವೆನಿಸುವ ಹಲವು ವಿಚಾರಗಳು ಇದರಲ್ಲಿ ಅಡಕವಾಗಿರುವುದನ್ನು ಕಂಡು, ಇದು ಅವರ ಅಭಿಮಾನ ಪ್ರೀತಿಯ ಗ್ರಂಥವಾಗಿದೆ. ಶ್ರೀಮದ್ಭಗವದ್ಗೀತೆಯ ಮೇಲೆ, ಭಾರತ ವರ್ಷದಲ್ಲಿ ಈ ವರೆಗೆ ಆಗಿರುವ ಎಲ್ಲ ಟೀಕೆ, ಟಿಪ್ಪಣಿ, ಭಾಷ್ಯ, ಭಾಷಾಂತರ, ರೂಪಾಂತರಾದಿಗಳನ್ನೆಲ್ಲ ಒಂದೆಡೆಗೆ ಸಂಗ್ರಹಿಸುವುದು ಒಂದೆರಡು ವ್ಯಕ್ತಿಗಳ ಅಳವು ಮೀರಿದ ಕೆಲಸವಾಗಿದೆ! ಇವೆಲ್ಲವು ಸೇರಿದರೆ ಎಷ್ಟೋ ಕೋಟಿಸಂಖ್ಯೆಯ ಗ್ರಂಥಗಳಾಗುವುವು.

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ**
**ದೇಹಮಾಶ್ರಿತಃ ।**
**ಪ್ರಾಣಾಪಾನ-ಸಮಾಯುಕ್ತಃ ಪಚಾಮ್ಯನ್ನಂ**
**ಚತುರ್ವಿಧಮ್ ॥**

-- ಭ. ಗೀ. ೧೫-೧೪

ಎಂಬ ಈ ಶ್ಲೋಕವನ್ನು ಹೇಳದೆ ಉಣ್ಣದ ಜನಗಳಿದ್ದಾರೆ! ಗೀತೆಯ ವಿಚಾರಗಳನ್ನು ಆಚಾರದಲ್ಲಿ ತರಲು ಆಜನ್ಮ ಪ್ರಯತ್ನ ನಡಿಸಿದುದರಲ್ಲಿಯೆ ಧನ್ಯತೆಯನ್ನು ತಾಳುವ ಮಹಾಮಹಾ ಜನಗಳಿದ್ದಾರೆ!

ಹಿಂದೂ ಜನರ ಪುರಾತನ ಗ್ರಂಥ. ಹಿಂದೂ ದೇಶದಲ್ಲಿ ಇದರ ವಿಷಯಕ್ಕೆ ಆದರ ಪ್ರೀತಿಗಳಿದ್ದರೆ ಸೋಜಿಗವಿಲ್ಲ. ಆದರೆ ಯುರೋಪ, ಅಮೇರಿಕೆಗಳಲ್ಲಿಯೂ ಇರುವ ಗೀತೆಯ ಖ್ಯಾತಿಯನ್ನು ನೋಡಿದರೆ ಈ ಗ್ರಂಥದ ಶ್ರೇಷ್ಠತೆಯ ಮನವರಿಕೆಯಾಗದೆ ಇರದು. ಗೀತೆಯು ಮೂಲತಃ ಸಂಸ್ಕೃತ ಗ್ರಂಥವು. ಆದರೂ ಗೀತೆಯ ಭಾಷಾಂತರಗಳು ಆಗದ ಶ್ರೇಷ್ಠ ಭಾಷೆಯು ಜಗತ್ತಿನಲ್ಲಿ ಉಂಟೆ ಎಂಬುದೆ ಸಂದೇಹಾಸ್ಪದವಾಗಿದೆ. ಹಿಂದೂ ಜನರು ತಮ್ಮ ಮತಪ್ರಸಾರಾರ್ಥವಾಗಿ ಜಗತ್ತಿನ ಬೇರೆ ಬೇರೆ ಭಾಷೆಗಳಲ್ಲಿ ತಾವೇ ಭಾಷಾಂತರಿಸಿ ಪ್ರಚಾರಪಡಿಸಿದ್ದಲ್ಲ, ಮತ್ತೆ! ಬೈಬಲ್ಲಿನಂತಹ ಕೆಲವು ಮತಪ್ರಸಾರಕ ಗ್ರಂಥಗಳನ್ನು ಆಯಾ ಮತೀಯರು ತಮ್ಮ ಧರ್ಮಪ್ರಸಾರಾರ್ಥಕವಾಗಿ ಜಗತ್ತಿನಲ್ಲೆಲ್ಲ ಸಂಚರಿಸಿ ಅಲ್ಲಲ್ಲಿಯ ಭಾಷೆಗಳಲ್ಲಿ ಭಾಷಾಂತರಿಸಿ ಪ್ರಕಟಿಸಿದ್ದಾರೆ. ಆದರೆ ಗೀತೆಯ ಮಾತು ಹಾಗಲ್ಲ. ಇಂಗ್ಲಿಷ್, ಫ್ರೆಂಚ್, ಜರ್ಮನ್, ಪರ್ಶಿಯನ್ ಮುಂತಾದ ಭಾಷೆಗಳಲ್ಲಿ ಆದ ಶ್ರೀಮದ್ಭಗವದ್ಗೀತೆಯ ಭಾಷಾಂತರಗಳು ಆಯಾ ಭಾಷೆಗಳೊಳಗಿನ ತತ್ವಪ್ರಿಯರಾದ ವಿದ್ವಾಂಸರು ಸ್ವಯಂಸ್ಫೂರ್ತಿಯಿಂದ ಮಾಡಿದುವುಗಳಾಗಿವೆ. ಈ ದೃಷ್ಟಿಯಿಂದ ಶ್ರೀಮದ್ಭಗವದ್ಗೀತೆಯು ಜಗತ್ತಿನ ವಿದ್ವಜ್ಜನರಿಂದ ಪಡೆದ ಮನ್ನಣೆಯು ಅಪೂರ್ವವಾಗಿದೆ. ಅನುಪಮೇಯವಾಗಿದೆ.

**ಈ ಗ್ರಂಥದ ಹೆಸರು.**

**'ಶ್ರೀಮದ್ಭಗವದ್ಗೀತೆ,' 'ಭಗವದ್ಗೀತೆ,'** ಅಥವಾ **'ಗೀತೆ'** ಎಂದು ಇದಕ್ಕೆ ಹೆಸರುಂಟು. 'ಭಗವಂತನ ಗೀತೆ' ಎಂದು ಇದರ ಅರ್ಥ. ಸಾಕ್ಷಾತ್ ಪರಮಾತ್ಮನ ಮುಖಕಮಲದಿಂದ ಒಂದ ಹಾಡು ಎಂದು ಭಾವಿಕರೆಲ್ಲರೂ ಒಪ್ಪುತ್ತಾರೆ. ಭಗವಾನ್ ಶ್ರೀಕೃಷ್ಣನು ಅರ್ಜುನನಿಗೆ ಮಾಡಿದ ತತ್ವೋಪದೇಶವೇ ಶ್ರೀಮದ್ಭಗವದ್ಗೀತೆ, ಎಂಬುದು ಲೋಕವಿಶ್ರುತವಾದ ಸಂಗತಿಯು. ಧರ್ಮಸಂಸ್ಥಾಪನೆಗಾಗಿ ತಲೆದೋರಿದ ಪುರುಷೋತ್ತಮನು ಶ್ರೀಕೃಷ್ಣನು. ಆತನು ತಾನು ಅರಿತು ಆಚರಿಸಿದ ಶ್ರೇಷ್ಠ ತತ್ವಗಳನ್ನೇ ಗೀತೆಯ ರೂಪದಿಂದ ಅರ್ಜುನನಿಗೆ ಉಪದೇಶಿಸಿದ್ದಾನೆ. ಈ ಉಪದೇಶದಂತೆ ವರ್ತಿಸಿದರೆ ಜೀವನದ ಉದ್ಧಾರವಾಗುವುದರಲ್ಲಿ ಸಂದೇಹವೆ ಇಲ್ಲ. ಈ ಉಪದೇಶದಂತೆ ನಡೆವವರಿಗೆ ಹೊಟ್ಟೆ-ಬಟ್ಟೆಯ ಚಿಂತೆಯೆ ಉಳಿಯುವುದಿಲ್ಲ. ಇಂತಹ ಪರಮಕಲ್ಯಾಣಕಾರಕವಾದ ಉಪದೇಶವು ಈ ಗ್ರಂಥದಲ್ಲಿ ಅಡಕವಾಗಿರುವುದರಿಂದಲೆ ಇದು ಲೋಕದಲ್ಲೆಲ್ಲ ಶ್ರೇಷ್ಠವಾದ ಅಪ್ರತಿಮ ಗ್ರಂಥವೆಂದು ವಿಖ್ಯಾತವಾಗಿದೆ.

ಸಂಸ್ಕೃತ ಭಾಷೆಯಲ್ಲಿ **'ಗೀತಾ'** ಗ್ರಂಥಗಳು ಎಣಿಕೆಯಿಲ್ಲದಷ್ಟಿವೆ. **ರಾಮಗೀತಾ, ಅನುಗೀತಾ** ಎಂದು ಮುಂತಾಗಿ ಹಲವು ಹೊತ್ತಿಗೆಗಳಿದ್ದರೂ **'ಗೀತೆ'** ಎಂದೊಡನೆ 'ಶ್ರೀಮದ್ಭಗವದ್ಗೀತೆಯೆ' ಎಲ್ಲರ ಕಣ್ಣಮುಂದೆ ನಿಲ್ಲುತ್ತದೆ! ಇಂತಿದು ಸಾಹಿತ್ಯದೊಳಗಿನ ಎಲ್ಲ ಗೀತೆಗಳನ್ನೂ ಮೆಟ್ಟಿನಿಂತು ತನ್ನ ಸ್ವಯಂಪ್ರಭೆಯಿಂದ ಮೆರೆಯುತ್ತಲಿದೆ!

ಗೀತೆಯ ಪ್ರತಿಯೊಂದು ಅಧ್ಯಾಯದ ಕೊನೆಗೂ ಮುಂದೆ ಕಾಣಿಸಿದ ಸಂಕಲ್ಪವು ಉಂಟು:

ಇತಿ ಶ್ರೀಮದ್ಭಗವದ್ಗೀತಾ ಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ [ಪುರುಷೋತ್ತಮಯೋಗೋ ನಾಮ ಪಂಚದಶೋ] ಧ್ಯಾಯಃ ॥೧೫॥

ಇಲ್ಲಿ ಕಾಣಿಸಿಕೊಳ್ಳುವ '**ಶ್ರೀಮದ್ಭಗವದ್ಗೀತಾ, ಉಪನಿಷತ್, ಬ್ರಹ್ಮವಿದ್ಯಾ ಯೋಗಶಾಸ್ತ್ರ, ಶ್ರೀಕೃಷ್ಣಾರ್ಜುನ ಸಂವಾದ**' ಈ ಐದರಲ್ಲಿ ಪ್ರತಿಯೊಂದು ಹೆಸರೂ ಈ ಗ್ರಂಥಕ್ಕೆ ಸಲ್ಲುವಂತಿದೆ. ಇವುಗಳಲ್ಲಿ 'ಉಪನಿಷತ್' ಎಂಬ ಹೆಸರು ಹೆಚ್ಚು ಸಮರ್ಪಕವಾಗಿದೆ. ಏಕೆಂದರೆ ಗೀತೆಯು ಎಲ್ಲ ಉಪನಿಷತ್ತುಗಳ ಸಾರವಾಗಿದೆ.

**ಸರ್ವೋಪನಿಷದೋ ಗಾವೋ, ದೋಗ್ಧಾ**
**ಶ್ರೀ ಗೋಪಾಲನಂದನಃ ।**
**ಪಾರ್ಥೋ ವತ್ಸಃ ಸುಧೀರ್ಭೋಕ್ತಾ ದುಗ್ಧಂ**
**ಗೀತಾಮೃತಂ ಮಹತ್ ॥**

'ಎಲ್ಲ ಉಪನಿಷತ್ತುಗಳೆಂಬ ಗೋವುಗಳು; ಅವನ್ನು ಕರೆವವನು ಭಗವಾನ್ ಗೋಪಾಲಕೃಷ್ಣನು; ಹಿರಿದಾದ ಗೀತಾಮೃತವೆಂಬುದೇ ಆತನು ಕರೆದ ಹಾಲು; ಆ ಹಾಲನ್ನು ಒಳ್ಳೆ ಧೀಮಂತನಾದ ಅರ್ಜುನನೆಂಬ ಕರುವು ಕುಡಿಯುತ್ತದೆ.' ಆದುದರಿಂದ ಇದಕ್ಕೆ ಉಪನಿಷದ್ ಎಂದರೂ ಸಲ್ಲುವುದು. ಉಪನಿಷತ್ ಎಂದರೆ (ಉಪ) ಸಮೀಪದಲ್ಲಿ (ನಿ) ನಿಸ್ಸಂದೇಹವಾಗಿ (ಸದ್)ಒಯ್ಯುವ ಜ್ಞಾನ ಎಂಬರ್ಥ, ಗೀತೆಯಲ್ಲಿ ಹೇಳಿದ ತತ್ವವಿಚಾರವು ಮನುಷ್ಯನನ್ನು ನಿಃಸಂದೇಹವಾಗಿ ಪರಮಾತ್ಮನ ಹತ್ತಿರಕ್ಕೆ ಒಯ್ಯಬಲ್ಲುದಾದ್ದರಿಂದ ಇದಕ್ಕೆ ಉಪನಿಷತ್ತೆಂಬ ಹೆಸರು ಉಚಿತವಾಗಿದೆ.

ಈ ಗೀತೆಗೆ '**ಬ್ರಹ್ಮವಿದ್ಯೆ**' ಎಂದೂ ಹೆಸರು. **ಬ್ರಹ್ಮ**ವೆಂಬುದು ಅತಿ ಮಹತ್‌ಶಕ್ತಿಯ ನಾಮಾಭಿಧಾನ. ಆ ಮಹಚ್ಛಕ್ತಿಯನ್ನು ಅರಿತುಕೊಂಡು ಅದನ್ನು ತನ್ನಲ್ಲಿ ಅಳವಡಿಸಿಕೊಳ್ಳಲು ಬ್ರಹ್ಮವಿದ್ಯೆಯು ದಾರಿತೋರುವುದು. ಪ್ರತಿಯೊಬ್ಬ ಮನುಷ್ಯನಿಗೂ ತನ್ನ ಕಿರಿತನದ ಅರಿವು ಅಡಿಗಡಿಗೂ ಉಂಟಾಗುತ್ತಿರುತ್ತದೆ. ಆದರೆ ಬ್ರಹ್ಮವಿದ್ಯೆಯ ಬಲದಿಂದ ಆತನಿಗೆ ತನ್ನಲ್ಲಿ ಹುದುಗಿಕೊಂಡಿರುವ ಅನಂತಶಕ್ತಿಯ ಅರಿವು ತಲೆದೋರುವುದು. ಮತ್ತು ತನ್ನೊಳಗಿನ ಆ ಸುಪ್ತಶಕ್ತಿಯನ್ನು ಜಾಗೃತಗೊಳಿಸಿ ಸ್ವ-ಪರಕಲ್ಯಾಣಕ್ಕಾಗಿ ಅದನ್ನು ಹೇಗೆ ಉಪಯೋಗಿಸಿಕೊಳ್ಳಬೇಕೆಂಬುದು ಬ್ರಹ್ಮವಿದ್ಯೆಯ ಸಾಧನೆಯಿಂದ ತಿಳಿಯುವುದು.

ಈ ಗೀತೆಗೆ '**ಯೋಗಶಾಸ್ತ್ರ**'ವೆಂಬುದೂ ಯೋಗ್ಯವೇ ಆಗಿದೆ. ಏಕೆಂದರೆ ಇದರೊಳಗಿನ ಪ್ರತಿಯೊಂದು ಅಧ್ಯಾಯದಲ್ಲಿ ಒಂದೊಂದು ಬಗೆಯ ಯೋಗವನ್ನು ವಿವರಿಸಿದ್ದಾಗಿದೆ: ೧. ವಿಷಾದಯೋಗ, ೨. ಸಾಂಖ್ಯಯೋಗ, ೩. ಕರ್ಮಯೋಗ, ೪. ಜ್ಞಾನಕರ್ಮಸಂನ್ಯಾಸಯೋಗ, ಬ್ರಹ್ಮಾರ್ಪಣಯೋಗ, ಜ್ಞಾನಯೋಗ, ಕರ್ಮಬ್ರಹ್ಮಾರ್ಪಣಯೋಗ, ೫. ಕರ್ಮಸಂನ್ಯಾಸಯೋಗ, ೬. ಧ್ಯಾನಯೋಗ, ಆತ್ಮಸಂಯಮನಯೋಗ, ಅಧ್ಯಾತ್ಮಯೋಗ, ೭. ಜ್ಞಾನವಿಜ್ಞಾನಯೋಗ, ೮. ಬ್ರಹ್ಮಾಕ್ಷರನಿರ್ದೇಶಯೋಗ, ಅಕ್ಷರಬ್ರಹ್ಮಯೋಗ, ೯. ರಾಜವಿದ್ಯಾರಾಜಗುಹ್ಯಯೋಗ, ೧೦. ವಿಭೂತಿಯೋಗ, ೧೧. ವಿಶ್ವರೂಪದರ್ಶನಯೋಗ, ೧೨. ಭಕ್ತಿಯೋಗ, ೧೩. ಪ್ರಕೃತಿಪುರುಷವಿವೇಕಯೋಗ, ಕ್ಷೇತ್ರಕ್ಷೇತ್ರಜ್ಞವಿವೇಕಯೋಗ, ೧೪. ಗುಣತ್ರಯವಿಭಾಗಯೋಗ, ೧೫. ಪುರುಷೋತ್ತಮಯೋಗ, ೧೬. ದೈವಾಸುರಸಂಪದ್ವಿಭಾಗಯೋಗ, ೧೭ ಶ್ರದ್ಧಾತ್ರಯವಿಭಾಗಯೋಗ, ೧೮. ಸಂನ್ಯಾಸಯೋಗ. ಈ ಹದಿನೆಂಟು ಬಗೆಯ ಯೋಗಗಳೆಲ್ಲವೂ ಗೀತೆಯ ಯೋಗಶಾಸ್ತ್ರದಲ್ಲಿ ಒಳಗೊಂಡಿವೆ.

ಈ ಗೀತೆಗೆ "**ಶ್ರೀಕೃಷ್ಣಾರ್ಜುನಸಂವಾದ**"ವೆಂದೂ ಕರೆಯುವುದುಂಟು. ಇದು **ಪೂರ್ಣಸಿದ್ಧ ಮತ್ತು ಸಾಧಕ ಇವರಿಬ್ಬರಲ್ಲಿ ನಡೆದ ಸಂವಾದ**ವಿದೆ. ಅರ್ಜುನನು ಗೆಲವುಪಡೆಯಲು ಹೆಣಗುತ್ತಿರುವ ಸಾಧಕನು; ಪೂರ್ಣಸಿದ್ಧಪುರುಷನಿಂದ **ಪೂರ್ಣತ್ವ**ವನ್ನು ಪಡೆವ ಗುಟ್ಟನ್ನು ಅರಿತುಕೊಳ್ಳುವ ಹಂಬಲದ ಸಾಧಕನು ಇವನು. ಅರಿತುದನ್ನು ಆಚರಿಸಿ ತಾನೂ ಪರಿಣತಸ್ಥಿತಿಗೆ ಮುಟ್ಟತಕ್ಕವನು ಇವನು. ಒರ್ವ ಅಜ್ಞನು ತತ್‌ಜ್ಞನಾಗಲು-ಪೂರ್ಣಪ್ರಜ್ಞನಾಗಲು ಮಾಡಬೇಕಾದ ಸಾಧನೆಯ ಸಂಪೂರ್ಣವಿವರಣೆಯು **ಗೀತೆ**ಯಲ್ಲಿದೆ. ಆದುದರಿಂದ ಇದು ಪ್ರತಿಯೊಬ್ಬ ಸಾಧಕನಿಗೂ ಅತ್ಯಂತ ಉಪಯುಕ್ತವಾದ ಮತ್ತು ಯಾವಾಗಲೂ ಮನನೀಯವಾದ ಗ್ರಂಥವಾಗಿದೆ. ಆದಕಾರಣ ಮಾನವಕೋಟಿಯ ಉದ್ಧಾರಕ್ಕೆ ಕಾರಣವಾದ ಮಹಾಗ್ರಂಥವಿದೆಂದು ಹೇಳಿದರೆ ತಪ್ಪಾಗಲಿಕ್ಕಿಲ್ಲ.

ಗೀತೆಯ ಪ್ರತಿಯೊಂದು ಅಧ್ಯಾಯದ ಕೊನೆಗೂ 'ಯೋಗ' ಎಂಬ ಶಬ್ದವು ಕಾಣಿಸಿಕೊಳ್ಳುವುದಷ್ಟೆ. ಇಲ್ಲಿ '**ಯೋಗ**' ಎಂಬುದಕ್ಕೆ '**ಕರ್ಮಯೋಗ**'ವೆಂಬರ್ಥವೇ ಉಂಟೆಂದು ಪ್ರತಿಪಾದಿಸಿ, **ಲೋಕಮಾನ್ಯ ತಿಲಕರು** ತಮ್ಮ ಭಗವದ್ಗೀತೆಯ ಟೀಕೆಗೆ '**ಕರ್ಮಯೋಗಶಾಸ್ತ್ರ**' ವೆಂಬ ಸಮರ್ಪಕವಾದ ಹೆಸರನ್ನು ಕೊಟ್ಟಿರುವರು.

ತಮ್ಮ ಆ ಗ್ರಂಥಕ್ಕೆ "**ಶ್ರೀಮದ್ಭಗವದ್ಗೀತಾರಹಸ್ಯ**"ವೆಂದೂ ಕರೆದಿರುವರು. ಶ್ರೀಮದ್ಭಗವದ್ಗೀತೆಯ ರಹಸ್ಯವು '**ಕರ್ಮಯೋಗ**'ವೇ ಆಗಿದೆಯೆಂಬುದನ್ನು ಎಲ್ಲರೂ ಒಪ್ಪಲೇಬೇಕು. ಮನುಷ್ಯನು ಎಂತು ನಡೆದುಕೊಂಡರೆ, ಆತನು ಕರ್ಮಬಂಧನದಲ್ಲಿ ಸಿಕ್ಕಿಬೀಳಲಿಕ್ಕಿಲ್ಲವೆಂಬುದರ ಅಪೂರ್ವವಿವೇಚನವು ಈ ಗ್ರಂಥದಲ್ಲಿರುವುದರಿಂದ ಇದಕ್ಕೆ '**ಕರ್ಮಯೋಗಶಾಸ್ತ್ರ**'ವೆಂಬ ಹೆಸರು ಸಾರ್ಥವಾಗಿದೆ.

ಮಹಾತ್ಮಾ ಮೋಹನದಾಸ ಗಾಂಧಿಯವರು ಶ್ರೀಮದ್ಭಗವದ್ಗೀತೆಯನ್ನು ಗುಜರಾತಿಯಲ್ಲಿ ಅನುವಾದಿಸಿದ್ದಾರೆ. ಮತ್ತು ಅದಕ್ಕೆ **ಅನಾಸಕ್ತಿಯೋಗ**ವೆಂದು ಕರೆದಿದ್ದಾರೆ. ಇದನ್ನು ಕುರಿತು ಅವರು ಬರೆಯುವುದೇನೆಂದರೆ :

"ಆತ್ಮಪ್ರಾಪ್ತಿಯನ್ನು ಬಯಸುವವನಿಗೆ ಆತ್ಮದರ್ಶನದ ಅದ್ವಿತೀಯ ಉಪಾಯವನ್ನು ತೋರುವುದೆ ಗೀತೆಯ ಗುರಿಯಾಗಿದೆ. ಹಿಂದೂಧರ್ಮದಲ್ಲಿ ಅಲ್ಲಿ ಇಲ್ಲಿ ಹರಡಿಕೊಂಡಿರುವ ತತ್ತ್ವವಿಚಾರಗಳನ್ನು ಒಂದೆಡೆಗೆ ಸಂಗ್ರಹಿಸಿ, ವಿಶದೀಕರಿಸಿ.... ಗೀತೆಯಲ್ಲಿ ಹೇಳಲಾಗಿದೆ. **ಕರ್ಮದ ಫಲತ್ಯಾಗವೇ ಗೀತೆಯು ಹೇಳುವ ಅದ್ವಿತೀಯ ಉಪಾಯವು.** ಮನುಷ್ಯಮಾತ್ರರಲ್ಲಿ ಯಾರಿಗೂ ಕರ್ಮವು ತಪ್ಪಿದ್ದಲ್ಲ .. .... ಮತ್ತು ದೋಷರಹಿತವಾದ ಕರ್ಮವು ಶಕ್ಯವೇ ಇಲ್ಲ. ಮುಕ್ತಿಯು ನಿಷ್ಕಲಂಕನಿಗೆ ಮಾತ್ರ ದೊರೆಯುವುದು ಆದುದರಿಂದ ನಿಷ್ಕಲಂಕನಾಗುವದು ಎಂದರೆ ಕರ್ಮಬಂಧನದಿಂದ ಮುಕ್ತನಾಗುವುದು ಹೇಗೆ? ಎಂಬುದೆ ಮಹತ್ವದ ಪ್ರಶ್ನೆಯಾಗಿದೆ. ಗೀತೆಯು ನಿಃಸಂದಿಗ್ಧವಾದರೀತಿಯಲ್ಲಿ ಈ ಪ್ರಶ್ನೆಗೆ ಹೀಗೆ ಉತ್ತರವನ್ನಿತ್ತಿದೆ: '**ನಿಷ್ಕಾಮಕರ್ಮಯೋಗಿ**, **ಯಜ್ಞಾರ್ಥಕರ್ಮಮಾಡು; ಕರ್ಮಫಲತ್ಯಾಗಮಾಡು**.... ....' ಶಾರೀರಿಕ ಹಾಗೂ ಮಾನಸಿಕ ಪ್ರತಿಯೊಂದು ಕ್ರಿಯೆಯೂ ಕರ್ಮವೆಂದೆನಿಸುತ್ತದೆ. ಹೀಗೆ ಮನುಷ್ಯನ ಬೆಂಬತ್ತಿದ ಕರ್ಮದ ಬಲೆಯೊಳಗಿಂದ ಬಿಡಿಸಿಕೊಳ್ಳುವ ಬಗೆಯಾವುದು? ಈ ತೊಡಕನ್ನು ಗೀತೆಯಂತೆ ಸಮರ್ಪಕವಾಗಿ ಬೇರಾವ ಧರ್ಮಗ್ರಂಥವೂ ಬಿಡಿಸಲು ಸಮರ್ಥವಾಗಿಲ್ಲ. '**ಫಲಾಸಕ್ತಿಯನ್ನು ಬಿಡು; ಕರ್ಮಮಾಡು;**' '**ನಿಷ್ಕಾಮನಾಗು; ಕರ್ಮಮಾಡು;**' '**ಬ್ರಹ್ಮಾರ್ಪಣಮಾಡಿ ಕೆಲಸಕ್ಕೆ ಕೈಯಿಕ್ಕು;**' ಎಂಬುದೆ ಗೀತೆಯ ಸಂದೇಶ. ಕರ್ಮವನ್ನೇ ಬಿಟ್ಟವನ ಅವನತಿಯಾಗುವುದು. ಕರ್ಮಮಾಡಿ ಅದರ ಫಲತ್ಯಾಗಮಾಡುವವನ ಉನ್ನತಿಯಾಗುವುದು."

ಇದುವೆ ಗೀತೆಯ ಗುಟ್ಟು; ಎಂದು ಮನವರಿಕೆಯಾಗಿ ಮಹಾತ್ಮಾ ಗಾಂಧಿಯವರು ಗೀತೆಯ ತಮ್ಮ ಭಾಷಾಂತರಕ್ಕೆ '**ಅನಾಸಕ್ತಿಯೋಗ**'ವೆಂದು ಹೆಸರಿಟ್ಟರು.

ಪ್ರಾಚೀನ ಟೀಕಾಚಾರ್ಯರಲ್ಲಿ ಯಾರೂ ಗೀತೆಗೆ ತಮ್ಮದೊಂದು ಬೇರೆ ಹೆಸರನ್ನು ಕೊಡುವ ಸಾಹಸವನ್ನು ಮಾಡಲಿಲ್ಲ. ಲೋಕಮಾನ್ಯ ತಿಲಕರು, ಮತ್ತು ಮಹಾತ್ಮಾ ಗಾಂಧಿಯವರೆ ಈ ಹೊಸ ಪದ್ಧತಿಯನ್ನು ಆರಂಭಿಸಿದವರು. ಶ್ರೀಮತ್ ಶಂಕರಾಚಾರ್ಯರು ತಮ್ಮ ಭಾಷ್ಯದ ಮುನ್ನುಡಿಯಲ್ಲಿ ಬರೆಯುವುದೇನೆಂದರೆ :

ದೀರ್ಘಕಾಲೀನ ... ಪ್ರವರ್ಧಮಾನೇ ... ಧರ್ಮೇ ಜಗತಃ ಸ್ಥಿತಿಂ ಪರಿಪಾಲಯಿಷುಃ ಸ ಆದಿಕರ್ತಾ ... ವಿಷ್ಣುಃ ... ಕೃಷ್ಣಃ .... ಕಿಲ ಬಭೂವ। .... ಸ .... ಲೋಕಸಂಗ್ರಹಾನುಗ್ರಹಂ ಕುರ್ವನ್ .... ವೈದಿಕಂ ಧರ್ಮದ್ವಯಮರ್ಜುನಾಯ ... ಉಪದಿದೇಶ। ತಂ ಧರ್ಮಂ ಭಗವತಾ ಯಥೋಪದಿಷ್ಟಂ ವೇದವ್ಯಾಸಃ ಗೀತಾಖ್ಯೈಃ ಸಪ್ತಭಿಃ ಶ್ಲೋಕಶತೈಃ ಉಪನಿಬಬಂಧ। ತದಿದಂ ಗೀತಾಶಾಸ್ತ್ರಂ ಸಮಸ್ತವೇದಾರ್ಥಸಾರಸಂಗ್ರಹಭೂತಂ .. ! ತಸ್ಯಾಸ್ಯ ಗೀತಾಶಾಸ್ತ್ರಸ್ಯ ಸಂಕ್ಷೇಪತಃ ಪ್ರಯೋಜನಂ ಪರಂ ನಿಶ್ರೇಯಸಂ .... !

—ಗೀತಾಭಾಷ್ಯ.

'ಹಲವು ದಿನಗಳಾದಬಳಿಕ.... ಅಧರ್ಮವು ಹೆಚ್ಚಾಗಲು ಲೋಕವನ್ನು ಸುಸ್ಥಿತಿಯಲ್ಲಿ ಕಾಪಾಡುವ ಇಚ್ಛೆಯುಳ್ಳ ಆದಿಕರ್ತನಾದ ವಿಷ್ಣುವು ... ಕೃಷ್ಣನಾಗಿ ಹುಟ್ಟಿದನು. ಅವನು ಜನರಮೇಲಿನ ದಯೆಯಿಂದ.... ವೈದಿಕ ಧರ್ಮವೆರಡನ್ನು ಪ್ರವೃತ್ತಿಪರ ಹಾಗೂ ನಿವೃತ್ತಿಪರ ಎರಡೂ ಧರ್ಮಗಳನ್ನು ಅರ್ಜುನನಿಗೆ ಉಪದೇಶಿಸಿದನು. ಅದನ್ನೆ ವೇದವ್ಯಾಸರು ಏಳನೂರು ಶ್ಲೋಕಗಳಲ್ಲಿ ಸಂಗ್ರಹಿಸಿದರು ಅದುವೆ ಈ **ಗೀತಾಶಾಸ್ತ್ರ**.. ಇದು ಎಲ್ಲ ವೇದಾರ್ಥದ ಸಾರಸಂಗ್ರಹವಾಗಿದೆ.... ಈ ಗೀತಾಶಾಸ್ತ್ರದ ತಾತ್ಪರ್ಯವನ್ನು ಸ್ವಲ್ಪದರಲ್ಲಿ ಹೇಳುವುದಾದರೆ ಅದು ಶ್ರೇಷ್ಠವಾದ ನಿಃಶ್ರೇಯಸ್ಸೇ ಆಗಿದೆ.'

ಶ್ರೀಮತ್ ಶಂಕರಾಚಾರ್ಯರು ಇದಕ್ಕೆ ಗೀತಾಶಾಸ್ತ್ರವೆಂದಿರುವರು. ಶ್ರೀಮಧುಸೂದನ ಸರಸ್ವತಿಯವರೂ ಇದಕ್ಕೆ ಗೀತಾಶಾಸ್ತ್ರವೆಂದೇ ಕರೆದಿರುವರು.

ಪರಂ ನಿಃಶ್ರೇಯಸಂ ಗೀತಾಶಾಸ್ತ್ರಸ್ಯೋಕ್ತಂ
ಪ್ರಯೋಜನಮ್ ॥ ೧ ॥
**ಏತತ್ ಸರ್ವಂ ಭಗವತಾ ಗೀತಾಶಾಸ್ತ್ರೇ**
**ಪ್ರಕಾಶಿತಮ್** ॥ ೨ ॥

—ಮಧುಸೂದನ ಸರಸ್ವತೀ ಟೀಕಾ

ಶ್ರೀಧರ ಸ್ವಾಮಿಯುವರೂ ಇದೇ ಹೆಸರಿನಿಂದ ಸಂಬೋಧಿಸಿದ್ದಾರೆ:

**ಯಥಾಮತಿ ಸಮಾಲೋಚ್ಯ ಗೀತಾವ್ಯಾಖ್ಯಾಂ ಸಮಾರಭೇ ॥ ೩ ॥**

**ಗೀತಾ ವ್ಯಾಖ್ಯಾಯತೇ ಯಸ್ಯಾಃ ಪಾಠಮಾತ್ರ ಪ್ರಯತ್ನತಃ ॥ ೪ ॥**

—ಶ್ರೀಧರ ಸ್ವಾಮಿ ಟೀಕೆ.

ಹೀಗೆ ಹಿಂದಿನವರೆಲ್ಲರೂ ಈ ಗ್ರಂಥಕ್ಕೆ '**ಗೀತಾ**' ಎಂದು '**ಗೀತಾಶಾಸ್ತ್ರ,**' **ಮಾತ್ರ** ಹೇಳುವ ವಾಡಿಕೆ ಯಿದ್ದಿತು. **ಶ್ರೀಮದ್ಭಗವದ್ಗಿತಾ** ಅಥವಾ **ಭಗವದ್ಗೀತಾ** ಎಂದೂ ಕೆಲ ಸಾರೆ ಹೇಳಿದುದುಂಟು. ಆದರೆ ಉಪನಿಷತ್, ಬ್ರಹ್ಮವಿದ್ಯಾ ಯೋಗಶಾಸ್ತ್ರ ಅಥವಾ ಶ್ರೀಕೃಷ್ಣಾರ್ಜುನ ಸಂವಾದವೆಂಬ ಹೆಸರಿನ ರೂಢಿಯು ಮಾತ್ರ ಎಂದೂ ಇದ್ದಿಲ್ಲ. ನಿಜವಾಗಿ ವಿಚಾರಿಸಿದರೆ '**ಶ್ರೀಮದ್ಭಗವದ್ಗೀತೋಪನಿಷದ್**' ಎಂಬ ಹೆಸರೆ ಈ ಗ್ರಂಥಕ್ಕೆ ಯೋಗ್ಯವಾಗಿದೆ. ಆದರೂ ಶ್ರೀಮತ್ ಶಂಕರಾಚಾರ್ಯರಂತಹ ಆದ್ಯ ಭಾಷ್ಯಕಾರರೂ ಕೂಡ ಈ ಉದ್ದವಾದ ಹೆಸರನ್ನು ಸ್ವೀಕರಿಸಲಿಲ್ಲ. ಆದುದರಿಂದ ಅಂದಿನಿಂದಲೂ '**ಗೀತಾ**' ಎಂಬ ಹೆಸರೆ ಲೋಕವಿಶ್ರುತವಾಗಿದ್ದಿತೆಂದು ಸಿದ್ಧವಾಗುತ್ತದೆ.

ಲೋಕಮಾನ್ಯ ತಿಲಕರು ಇದಕ್ಕೆ '**ಕರ್ಮಯೋಗಶಾಸ್ತ್ರ**' ವೆಂದರು; ಮಹಾತ್ಮಾ ಗಾಂಧೀಜಿಯವರು '**ಅನಾಸಕ್ತಿಯೋಗ**' ವೆಂದು ಹೇಳಿದರು. ಗೀತೆಯಲ್ಲಿ ಕರ್ಮಯೋಗದ ವಿವರಣೆಯಿದ್ದು, ಆ ಕರ್ಮವನ್ನು ಅನಾಸಕ್ತಿಯಿಂದ ಮಾಡುವ ಹದವನ್ನು ಈ ಗ್ರಂಥದಲ್ಲಿ ಹೇಳಿದೆ. ಆದುದರಿಂದ ಇವೆರಡು ಹೆಸರುಗಳೂ ಅರ್ಥಪೂರ್ಣವಾಗಿವೆ. ಅಲ್ಲದೆ ಗೀತೆಯೊಳಗಿನ ಉಪದೇಶದ ಸಂದರ್ಭಕ್ಕೆ ಸರಿಹೋಗುವಂತಹವುಗಳೂ ಆಗಿವೆ. ಸಾಧಕನು ಕರ್ಮಮಾಡಬೇಕು; ಆದರೆ ಅದನ್ನು ಆಸಕ್ತಿರಹಿತನಾಗಿ ಮಾಡಬೇಕು; ಎಂದು ಇವು ಜೀವನದಲ್ಲಿ ನಿಜವಾದ ದಾರಿತೋರುವಂತ ಮಾತುಗಳಾಗಿವೆ. ಇಂತು ಸಾಧಕನಿಗೆ ಮಾರ್ಗದರ್ಶಗಳಾದ ಬೇರೆ ಹೆಸರುಗಳು ದೊರೆಯುವುದು ಅಪರೂಪ. ಇದರಂತೆಯೆ ಕೊನೆಯ ಗುರಿಯನ್ನು ಸೂಚಿಸುವ ಬೇರೆ ಹೆಸರುಗಳಲ್ಲಿ '**ಉಪನಿಷತ್**' ಮತ್ತು '**ಬ್ರಹ್ಮವಿದ್ಯಾ**' ಎಂಬ ಎರಡನ್ನು ಸೇರಿಸಬಹುದು.

'**ಯೋಗಶಾಸ್ತ್ರ**' ವೆಂಬುದು '**ಕರ್ಮಯೋಗಶಾಸ್ತ್ರ**' ವೆಂಬರ್ಥವನ್ನು ಸೂಚಿಸುವುದೆಂದು ಎಣಿಸಿದರೆ ಅದೂ ಸಾಧಕನಿಗೆ ಮಾರ್ಗದರ್ಶಕವಾದ ಹೆಸರೆಂದೆ ಹೇಳಬಹುದು. ಆದರೆ, ಯೋಗ ಶಬ್ದಕ್ಕೆ ಕರ್ಮಯೋಗವೆಂದೇ ಅರ್ಥವುಂಟೆಂದು ಹೇಳಲಿಕ್ಕಾಗದು. '**ಸಮತ್ವಂ ಯೋಗ ಉಚ್ಯತೇ**' (ಭ ಗೀ. ೨.೪೮) ಸಮತ್ವ ಅಥವಾ ತೂಕವೆ ಯೋಗವೆಂದು ಗೀತೆಯಲ್ಲಿ ವ್ಯಾಖ್ಯೆಯನ್ನು ಹೇಳಿದ್ದಾಗಿದೆ. **ತೂಕ, ಹದ** ಅಥವಾ ಸಮತ್ವವು ಜೀವನ ಸೂತ್ರವಾಗಿರಬೇಕೆಂದು ಗೀತೆಯ ಸ್ವತಂತ್ರ ಸಿದ್ಧಾಂತವಾಗಿದೆ. ಆದುದರಿಂದ ಗೀತೆಯ ಪ್ರತಿಯೊಂದು ಅಧ್ಯಾಯದ ಕೊನೆಯ ಸಂಕಲ್ಪದಲ್ಲಿ ಬಂದ '**ಯೋಗಶಾಸ್ತ್ರ**' ವೆಂದರೆ ಸಮತ್ವದ ಶಾಸ್ತ್ರ(Science of Equaminity) ಎಂದು ಗ್ರಹಿಸುವುದು ಯೋಗ್ಯವಾಗಿದೆ. ಸಮತ್ವವೆ ಗೀತೆಯ ಗುರಿಯಾಗಿದೆ. ಈಶಪ್ರಾಪ್ತಿ, ಬ್ರಹ್ಮಪದ ಪ್ರಾಪ್ತಿಯೆಂದರೂ ಇದೇ ಅರ್ಥವುಂಟು; ಪರಿಘದಿಂದ ಒಳಸೇರಿ ಮಧ್ಯಕೇಂದ್ರವನ್ನು ಸಾಧಿಸಬೇಕು; ಮತ್ತು ಅಲ್ಲಿಯ ಸಮತ್ವವನ್ನು ಪಡೆಯಬೇಕು. ಪರಿಘವು ಬಹಳ ಗತಿಯುಳ್ಳದು. ಆದುದರಿಂದ ಅಲ್ಲಿ ಚಲನವಲನ ಚಾಂಚಲ್ಯ ಹೆಚ್ಚು. ಕೇಂದ್ರದಲ್ಲಿ ಶಾಂತಿ ಮತ್ತು ಸಮತ್ವವಿರುವುದು. ಈ ಸಮತ್ವವು ಸಾಧಕನ ಚಿತ್ತದಲ್ಲಿ ನೆಲೆಗೊಳ್ಳಬೇಕು. ಈ ಸಮತ್ವವು ಸಮಾಜ ರಾಷ್ಟ್ರ, ಅಖಿಲ ಮಾನವ ಕುಟುಂಬದಲ್ಲಿಯೂ ಸ್ಥಿರವಾಗಬೇಕು. ಲೋಕವೆಲ್ಲವೂ ಈ ಸಮತ್ವವನ್ನು ಪಡೆಯುವುದಕ್ಕಾಗಿಯೆ ಹೆಣಗಾಡುತ್ತಲಿದೆ. ಅದನ್ನು ಪಡೆಯುವ ಯುಕ್ತಿಯನ್ನು ಭಗವದ್ಗೀತೆಯಲ್ಲಿ ಬಹಳ ಚೆನ್ನಾಗಿ ವಿವರಿಸಿದ್ದಾಗಿದೆ. ಆದುದರಿಂದ ಈ ಗ್ರಂಥಕ್ಕೆ **ಸಮತ್ವಶಾಸ್ತ್ರ**ವೆಂಬದೇ ಹೆಚ್ಚು ಅನ್ವರ್ಥಕವಾದ ಹೆಸರೆಂದು ಹೇಳಬಹುದು. ಈ ಕಾರಣದಿಂದಲೆ ಪ್ರತಿಯೊಂದು ಅಧ್ಯಾಯ ಸಮಾಪ್ತಿಯ ಸಂಕಲ್ಪದಲ್ಲಿಯೂ '**ಯೋಗಶಾಸ್ತ್ರ**' ವೆಂಬ ಶಬ್ದವು ಮತ್ತೆ ಮತ್ತೆ ಕಾಣಿಸಿಕೊಳ್ಳುತ್ತದೆ. ಅಲ್ಲಿ ಯೋಗವೆಂದರೆ ಸಮತ್ವ; ಕರ್ಮಯೋಗವೆಂಬರ್ಥವಲ್ಲ; ಸಮತ್ವವೆಯೋಗ, (ಸಮತ್ವಂ ಯೋಗ ಉಚ್ಯತೇ). **ಆಸಕ್ತಿಯಿಲ್ಲದೆ ಕೌಶಲದಿಂದ ಮಾಡಿದ ಕರ್ಮದಿಂದ ಸಮತ್ವವು ಪ್ರಾಪ್ತವಾಗುತ್ತದೆ. ಆಸಕ್ತಿಯಿಲ್ಲದೆ ಕೌಶದಿಂದ ಕರ್ಮಮಾಡುತ್ತಿರುವುದು** ಎಂದರೆ **ಕರ್ಮಯೋಗವು ಮಾನವನ ಸಾಧನ.** ಮತ್ತು **ಸಮತ್ವವು ಸಾಧ್ಯವಾಗಿದೆ.** ಯುಜ್ ಧಾತುವಿನಿಂದ ಯೋಗ ಶಬ್ದವಾಗಿದೆ. ಯುಜ್ ಎಂದರೆ ಕೂಡಿಸು; ಹೊಂದಿಸು; ಸಂಬಂಧವನ್ನು ಜೋಡಿಸು. ಆದುದರಿಂದ ಯೋಗವೆಂದರೆ ಕೂಡಿಸುವುದು, ಹೊಂದಿಸುವುದು; ಜೋಡಿಸುವುದು ಎಂದು ಹೇಳಬಹುದು ಎಂದು ಹೇಳ-

ಬಹುದು. ಅರ್ಜುನನು ಮೊದಲನೆಯ ಅಧ್ಯಾಯದಲ್ಲಿ ವಿಷಾದದಿಂದ ಕೂಡಿದವನಾದುದರಿಂದ ಅದು **ಅರ್ಜುನ ವಿಷಾದ ಯೋಗವು.** ಪುರುಷೋತ್ತಮನೊಡನೆ ಹೊಂದಿಕೆಮಾಡಿಕೊಂಡರೆ ಅದು **'ಪುರುಷೋತ್ತಮ-ಯೋಗ'** ವೆನಿಸುವುದು. **ಮನುಷ್ಯನನ್ನು ವಿಷಾದ-ದಿಂದ ಮೇಲೆತ್ತಿ, ಉತ್ತಮ ಪುರುಷನೊಡನೆ ಹೊಂದಿಕೆಮಾಡಿಕೊಡುವುದೆ ಗೀತೆಯ ಸಾಧ್ಯವಾ-ಗಿದೆ.** ತಗ್ಗಿನಲ್ಲಿ ಬೀಳುವುದು ಮಾನವನಿಗೆ ತಕ್ಕುದಲ್ಲ. ಹಿಗ್ಗಿ, ಹೆಚ್ಚಳಗೊಳ್ಳಲು ಪುರುಷೋತ್ತಮನೊಡನೆ ಕೂಡಿಕೊಳ್ಳಲು ಪ್ರಯತ್ನಿಸುವುದೆ ಆತನ ಗುರಿಯಾಗಿರಬೇಕು. ಸರಿಯಾದ ದಾರಿ ತಿಳಿಯದೆ ಕಂಗೆಟ್ಟು ಕರ್ತವ್ಯಮೂಢ-ನಾಗಿ ದುಃಖಿತನಾದ ಅರ್ಜುನನು ಗೀತೆಯನ್ನು ಕೇಳಿದ ಬಳಿಕ ಉತ್ತಮ ಪುರುಷನ ಜೊತೆಯವನಾಗಿ, ನರ-ನಾಗಿದ್ದವನು **ನಾರಾಯಣನಾಗುವ ಅಧಿಕಾರವನ್ನು ಪಡೆದನು.** ನರನನ್ನು ನಾರಾಯಣನನ್ನಾಗಿಸುವುದು, ಪುರುಷನನ್ನು ಪುರುಷೋತ್ತಮನನ್ನಾಗಿ ಮಾಡುವುದು ಇದುವೆ ಗೀತೆಯ ಧ್ಯೇಯವಾಗಿದೆ. ಆದುದರಿಂದಲೆ ಗೀತೆಗೆ **'ಪುರುಷೋತ್ತಮ ಯೋಗ'** ಇಲ್ಲವೆ 'ನಾರಾಯಣಯೋಗ'ವೆಂದೂ ಹೇಳಬಹುದು. ಇದರ ಹದಿನೈದನೆಯ ಅಧ್ಯಾಯದಲ್ಲಿ ಪುರುಷೋತ್ತಮಯೋಗ ವನ್ನು ಹೇಳಿದೆ. ಇದುವೆ ಎಲ್ಲಕ್ಕೂ ಶ್ರೇಷ್ಠವಾದ ಅಧ್ಯಾಯವು. ಉಳಿದ ಅಧ್ಯಾಯಗಳಲ್ಲಿ ಈ ೧೫ ನೆಯ ಅಧ್ಯಾಯದಲ್ಲಿ ಹೇಳಿದ ಕೊನೆಯ ಗುರಿಯನ್ನು ಸಾಧಿ-ಸಲು ಅವಶ್ಯಕವಾದ ಹಲವು ವಿಧದ ಸಾಧನಗಳನ್ನು ವಿವರಿಸಿದ್ದಾಗಿದೆ.

ಆದುದರಿಂದ **'ಪುರುಷೋತ್ತಮಯೋಗ'**ವೆಂಬುದೇ ಗೀತೆಗೆ ತಕ್ಕುದಾದ ಹೆಸರೆಂದು ನಮ್ಮ ಮತ. ಇನ್ನೊಂದು ಇಷ್ಟೇ ಸಮರ್ಪಕವಾದ ಹೆಸರೆಂದರೆ ಅದು **'ಸಮತ್ವಯೋಗ'** ಅಥವಾ ಸಾಮ್ಯಯೋಗ, ಇದೂ ಗ್ರಂಥೋಕ್ತವಾದದು.

**ಯೋಽಯಂ ಯೋಗಸ್ತ್ವಯಾ ಪ್ರೋಕ್ತಃ**
**ಸಾಮ್ಯೇನ ಮಧುಸೂದನ ।**

—ಭ. ಗೀ. ೬-೩೩.

ಇಲ್ಲಿ **'ಸಾಮ್ಯಯೋಗ'**ವೆಂಬ ಪದಪ್ರಯೋಗವನ್ನು ಕಾಣಬಹುದು. ಇಂತಿದು ಲೋಕದಲ್ಲಿ ಶಾಂತಿ ಮತ್ತು ಸಮತ್ವವನ್ನು ಸ್ಥಾಪಿಸುವುದಕ್ಕಾಗಿಯೆ ಗೀತೆಯ ಅವತಾರವಾಗಿದೆ.

ಯುದ್ಧವನ್ನು ಒಲ್ಲೆನೆಂಬ ಅರ್ಜುನನನ್ನು ಯುದ್ಧಕ್ಕೆ ಪ್ರವೃತ್ತಮಾಡಿದ ಗೀತೆಯ ಉಪದೇಶವು ಲೋಕದಲ್ಲಿ ಶಾಂತಿ ಮತ್ತು ಸಮತ್ವವನ್ನು ಸ್ಥಾಪಿಸಬಲ್ಲುದೆಂಬುದು ವಿಚಿತ್ರವೆನಿಸುವಂತಿಲ್ಲವೆ? ಎಂದು ಕೆಲರು ಸಂದೇಹ-ಗೊಳ್ಳಬಹುದು ನಿಜ ಆದರೆ ಈ ಯುದ್ಧವು ಸ್ವಾರ್ಥ-ಸಾಧನೆಯ ಯುದ್ಧವಲ್ಲ. ಸ್ವರಾಜ್ಯಸಂಪಾದನೆಗಾಗಿ, ಲೋಕದಲ್ಲಿ ಶಾಂತಿ, ಸಮತ್ವಸ್ಥಾಪನೆಗಾಗಿ ಕೈಕೊಂಡ ಕಾಳಗವಿದು. ಕಾಳಗಕ್ಕಾಗಿ ಹೂಡಿದ ಕಾಳಗವಲ್ಲ; ಅನಿವಾರ್ಯವಾಗಿ ಪ್ರಾಪ್ತವಾದ ಕಾಳಗ. ಕೌರವರು ರಾಷ್ಟ್ರದಲ್ಲೆಲ್ಲ ವಿಷಮತೆಯನ್ನು ಉತ್ಪನ್ನಮಾಡಿದ್ದರು. ಈ ವಿಷಮತೆಯನ್ನು ದೂರಮಾಡಲು ಒಗೆಬಗೆಯಾಗಿ ತಿಳಿಸಿಹೇಳಿದರೂ ದುರ್ಯೋಧನನು ಯಾವುದಕ್ಕೂ ಕಿವಿಗೊಡಲಿಲ್ಲ. ಸಾಮ್ರಾಜ್ಯವಾದಿಗಳು ಪಾಶವೀಶಕ್ತಿ-ಯಿಂದ ಉನ್ಮತ್ತರಾದಾಗ ಅವರನ್ನು ದಾರಿಗೆ ತರಲು ಯುದ್ಧವು ಅನಿವಾರ್ಯವಾಗುತ್ತದೆ. ಆದುದರಿಂದ ಈ ಯುದ್ಧವು ಶಾಂತಿಸ್ಥಾಪನೆಯ ಸಾಧನವೆ ಆಗಿದ್ದಿತು. ಶ್ರೀಕೃಷ್ಣನು ಸಮತ್ವದ ಸಂದೇಶವನ್ನು ಸಮರಭೂಮಿ-ಯಲ್ಲಿ ಹೇಳಿದುದರ ರಹಸ್ಯವು ಇದೆ ಆಗಿದೆ. ಅರ್ಜುನನ ನಿಮಿತ್ತದಿಂದ ಲೋಕಕ್ಕೆ ಈ ಸಂದೇಶವನ್ನು ಅರುಹಿ-ದ್ದಾನೆ. ವಿಷಮತೆ, ಅನ್ಯಾಯದ ಒತ್ತಾಯಗಳಿಗೆ ತುತ್ತಾಗಿ ಗೋಳಾಡುವ ಜನಾಂಗಗಳು ಶ್ರೀಕೃಷ್ಣನ ಈ ಸಂದೇಶವನ್ನು ಚೆನ್ನಾಗಿ ಮನನಮಾಡಬೇಕು.

ಗೀತೆಯು ಅತ್ಯಂತ ಉದಾತ್ತವಾದ ಮಹಾಗ್ರಂಥವು. ಇದರಲ್ಲಿ ಪಾಠಾಂತರಗಳಿರುವುದು ಉಚಿತವಲ್ಲ. ಗೀತೆಯ ಅಧ್ಯಾಯದ ಹೆಸರುಗಳಲ್ಲಿ ಈ ಬಗೆಯ ಭಿನ್ನತೆಯು ಕಾಣಿಸಿಕೊಳ್ಳುತ್ತಿರುವುದು ವಿವಾದಾಸ್ಪದವಾದ ಮಾತಾ-ಗಿದೆ. ಕೆಲವು ಟೀಕಾಕಾರರು ಉಲ್ಲೇಖಿಸಿದ ಅಧ್ಯಾಯದ ಹೆಸರುಗಳನ್ನು ಮುಂದಿನ ಪಟ್ಟಿಯಲ್ಲಿ ಕೊಟ್ಟಿದೆ. ಗೀತೆಯ ಅಧ್ಯಾಯದ ಹೆಸರುಗಳು ಇರುವುದು ಒಂದು; ಟೀಕಾಕಾರರು ತಮ್ಮ ಟೀಕೆಯಲ್ಲಿ ಹೇಳುವುದು ಇನ್ನೊಂದು! [ಶ್ರೀಮತ್ ಶಂಕರಾಚಾರ್ಯರ ಟೀಕೆಯಲ್ಲಿ ಉಲ್ಲೇಖಿಸಿದಂತೆಯೆ ಹೆಸರು ಇರುವ ಅಧ್ಯಾಯಗಳ ಮುಂದೆ (—) ಹೀಗೆ ಗೆರೆ ಎಳೆದಿದೆ. ಹಾಗೆ ಇಲ್ಲದಲ್ಲಿ (೦) ಚಿಹ್ನವಿದೆ.]

ಶ್ರೀಮತ್ ಶಂಕರಾಚಾರ್ಯರಡೆಂದು ಆಚಾರ್ಯರ ಗೀತಾ-ಭಾಷ್ಯದಲ್ಲಿ ಗೀತೆಯ ಹದಿಮೂರನೆಯ ಅಧ್ಯಾಯದ ಹೆಸರು **'ಪ್ರಕೃತಿಪುರುಷವಿವೇಕಯೋಗ'** ಎಂದಿದೆ. ಆದರೆ ಅದೇ ಅಧ್ಯಾಯದ ಭಾಷ್ಯದಲ್ಲಿ **'ಕ್ಷೇತ್ರಕ್ಷೇತ್ರಜ್ಞ-ಯೋಗ'** ಎಂದು ಅದನ್ನು ಉಲ್ಲೇಖಿಸಲಾಗಿದೆ!

**(೬೪ ನೆಯ ಪುಟಕ್ಕೆ ಮುಂದೆಸಾಗಿದೆ.)**

| ಶ್ರೀಮಚ್ಛಂಕರಾಚಾರ್ಯ ಮೂಲಗ್ರಂಥ | ಭಾಷ್ಯ | ಪು.ವಿ.ಪ್ರ. ಲಿಮಯ ಆಚಾರ್ಯ | ಮೂಲ | | ಮಧುಸೂದನಸ. | ಶ್ರೀಧರಸ್ವಾಮಿ | ಗೀತಾಸಂಗ್ರಹ. | |
|---|---|---|---|---|---|---|---|---|
| ೧. ಅರ್ಜುನ ವಿಷಾದಯೋಗಃ | ೦ | — | ೧. | — | ೦ | ೦ | ೧. | — |
| ೨. ಸಾಂಖ್ಯಯೋಗಃ | ೦ | — | ೨. | — | ಸರ್ವಗೀತಾರ್ಥಸೂತ್ರಣಂ | ೦ | ೨. | — |
| ೩. ಕರ್ಮಯೋಗ | — | — | ೩. | — | — | — | ೩. | — |
| ೪. ಜ್ಞಾನಕರ್ಮಸನ್ಯಾಸಯೋಗಃ | — | — | ೪. | ಬ್ರಹ್ಮಾರ್ಪಣಯೋಗಃ | ಬ್ರಹ್ಮಾರ್ಪಣಯೋಗಃ | ಜ್ಞಾನಯೋಗಃ | ೪. | ಜ್ಞಾನವಿಭಾಯೋಗಃ |
| ೫. ಸನ್ಯಾಸಯೋಗಃ | — | — | ೫. | — | ಸ್ವಸ್ವರೂಪಪರಿಜ್ಞಾನಂ | — | ೫. | — |
| ೬. ಧ್ಯಾನಯೋಗಃ | — | — | ೬. | ಆತ್ಮಸಂಯಮಯೋಗಃ | ಅಧ್ಯಾತ್ಮಯೋಗಃ | ಅಧ್ಯಾತ್ಮ | ೬. | ಅಧ್ಯಾತ್ಮಯೋಗಃ |
| ಜ್ಞಾನವಿಜ್ಞಾನಯೋಗಃ | — | — | ೭. | ಜ್ಞಾನಯೋಗಃ | ಜ್ಞೇಯಧ್ಯೇಯ ಪ್ರತಿಪಾದ್ಯತತ್ವ ಬ್ರಹ್ಮನಿರೂಪಣಂ ನಾಮ, | — | ೭. | ಜ್ಞಾನಯೋಗಃ |
| ೮. ಬ್ರಹಾ ಕ್ಷರ ನಿರ್ದೇಶಃ | — | — | ೮. | ಅಕ್ಷರಪರಬ್ರಹ್ಮಯೋಗಃ | ಅಕ್ಷರಪರಬ್ರಹ್ಮವಿವರಣಂ | ಮಹಾಪುರುಷಯೋಗಃ | ೮. | ಅಕ್ಷರಯೋಗಃ |
| ೯. ರಾಜವಿದ್ಯಾರಾಜಗುಹ್ಯಯೋಗಃ | — | — | ೯. | — | — | — | ೯. | — |
| ೧೦. ವಿಭೂತಿಯೋಗಃ | — | — | ೧೦. | — | — | — | ೧೦. | — |
| ೧೧. ವಿಶ್ವರೂಪದರ್ಶನಂ ನಾಮ | — | — | ೧೧. | — | — | — | ೧೧. | — |
| ೧೨. ಭಕ್ತಿಯೋಗಃ | — | — | ೧೨. | — | — | — | ೧೨. | — |
| ೧೩. ಪ್ರಕೃತಿಪುರುಷ ವಿವೇಕಯೋಗಃ | ಕ್ಷೇತ್ರಕ್ಷೇತ್ರಜ್ಞ ಯೋಗಃ | — | ೧೩. | ಕ್ಷೇತ್ರಕ್ಷೇತ್ರಜ್ಞ ವಿಭಾಗಯೋಗಃ | ಕ್ಷೇತ್ರಕ್ಷೇತ್ರಜ್ಞವಿವೇಕಃ | — | ೧೩. | ಕ್ಷೇತ್ರಕ್ಷೇತ್ರಜ್ಞವಿಭಾಗಯೋಗಃ |
| ೧೪. ಗುಣತ್ರಯವಿಭಾಗಯೋಗಃ | — | — | ೧೪. | — | — | — | ೧೪. | — |
| ೧೫. ಪುರುಷೋತ್ತಮಯೋಗಃ | — | — | ೧೫. | — | — | — | ೧೫. | ಪುರಾಣಪುರುಷೋತ್ತಮಯೋಗಃ |
| ೧೬. ದೈವಾಸುರಸಂಪದ್ವಿಭಾಗ ಯೋಗಃ | — | — | ೧೬. | — | — | — | ೧೬. | — |
| ೧೭. ಶ್ರದ್ಧಾತ್ರಯವಿಭಾಗಯೋಗಃ | — | — | ೧೭. | — | — (ವಿವರಣಂ) | — (ವಿವರಣಂ) | ೧೭. | — |
| ೧೮. ಮೋಕ್ಷಸಂನ್ಯಾಸಯೋಗಃ | — | — | ೧೮. | ಸಂನ್ಯಾಸಯೋಗಃ | — (ಪ್ರತಿಪಾದನಂ) | ಮೋಕ್ಷಯೋಗಃ | ೧೮. | ಸಂನ್ಯಾಸಯೋಗಃ |

[ ಅಷ್ಟೇಕರರು ಪ್ರಸಿದ್ಧಿಸಿದುದು ]

[ ಆನಂದಾಶ್ರಮದವರು ಪ್ರಸಿದ್ಧಿಸಿದುದು ]

[ ಅಷ್ಟೇಕರರು ಪ್ರಸಿದ್ಧಿಸಿದುದು ]

| | ಲೋ. ಬಾ. ಗಂ. ಟಿಳಕ — ಮೂಲ. | ಲೋ. ಬಾ. ಗಂ. ಟಿಳಕ — ಅರ್ಥ | ದಾಮೋದರ ಸಾವಳರಾಮ ಯಂದೆ. ಗೀತಾಪಂಚರತ್ನ ಸಾರ್ಥ (ಮರಾಠಿ) | ಮ. ಗಾಂಧೀಜಿ (ಗುಜರಾತಿ) | ನಿರ್ಣಯಸಾಗರದವರು ಪ್ರಸಿದ್ಧಿಸಿದುದು. |
|---|---|---|---|---|---|
| ೧. | — | — | — | — | — |
| ೨. | — | — | — | — | — |
| ೩. | — | — | — | — | — |
| ೪. | — | — | ಬ್ರಹ್ಮಾರ್ಪಣಯೋಗಃ | — | ಕರ್ಮಬ್ರಹ್ಮಾರ್ಪಣಯೋಗಃ |
| ೫. | — | | ಸಂನ್ಯಾಸಯೋಗಃ | ಕರ್ಮಸಂನ್ಯಾಸಯೋಗಃ | ಕರ್ಮಸಂನ್ಯಾಸಯೋಗಃ |
| ೬. | ಅಧ್ಯಾತ್ಮಯೋಗಃ | ಧ್ಯಾನಯೋಗಃ | ಆತ್ಮಸಂಯಮಯೋಗಃ | — | ಆತ್ಮಸಂಯಮಯೋಗಃ |
| ೭. | — | — | ಜ್ಞಾನಯೋಗಃ | — | — |
| ೮. | ಅಕ್ಷರಬ್ರಹ್ಮಯೋಗಃ | ಅಕ್ಷರಬ್ರಹ್ಮಯೋಗಃ | ಅಕ್ಷರಬ್ರಹ್ಮಯೋಗ. | ಅಕ್ಷರಬ್ರಹ್ಮಯೋಗ. | ಅಕ್ಷರಬ್ರಹ್ಮಯೋಗಃ |
| ೯. | — | — | — | — | — |
| ೧೦. | — | — | — | — | — |
| ೧೧. | — | ವಿಶ್ವರೂಪದರ್ಶನಯೋಗಃ | — (ನಾಮ) | ವಿಶ್ವರೂಪದರ್ಶನಯೋಗಃ | — |
| | — | — | — (ಯೋಗ) | | |
| ೧೨. | — | — | | — | — |
| ೧೩. | ಕ್ಷೇತ್ರಕ್ಷೇತ್ರಜ್ಞವಿಭಾಗಯೋಗಃ ಯೋಗಃ | ಕ್ಷೇತ್ರಕ್ಷೇತ್ರಜ್ಞಯೋಗಃ | ಕ್ಷೇತ್ರಕ್ಷೇತ್ರಜ್ಞವಿಭಾಗಯೋಗ. ಯೋಗಃ | ಕ್ಷೇತ್ರಕ್ಷೇತ್ರಜ್ಞವಿಭಾಗಯೋಗಃ | ಪ್ರಕೃತಿಪುರುಷನಿರ್ವೇಶಯೋಗಃ |
| ೧೪. | — | — | — | — | — |
| ೧೫. | — | — | — | — | — |
| ೧೬. | — | — | ಸುರಾಸುರಸಂಪತ್ತಿಯೋಗಃ | — | — |
| ೧೭. | — | — | — | — | — |
| ೧೮. | — | — | ಸಂನ್ಯಾಸಯೋಗಃ | ಸಂನ್ಯಾಸಯೋಗಃ | ಸಂನ್ಯಾಸಯೋಗಃ |
| | (ಮೊದಲನೆಯ ಆವೃತ್ತಿ–ಮರಾಠಿ) (ಎರಡನೆಯ ಆವೃತ್ತಿ–ಹಿಂದಿ) | | (ಇಂದ್ರಪ್ರಕಾಶರು ಪ್ರಸಿದ್ಧಿಸಿದುದು) | (ನವಜೀವನದವರು ಪ್ರಸಿದ್ಧಿಸಿದುದು.) | |

ಆನಂದಾಶ್ರಮದವರು ಮಧುಸೂದನ ಸರಸ್ವತಿ ಮತ್ತು ಶ್ರೀಧರಸ್ವಾಮಿಗಳ ಟೀಕೆಗಳನ್ನು ಪ್ರಕಟಿಸಿದ್ದಾರೆ. ಇವೆರಡರ ಮೂಲ ಗೀತೆಯ ಅಧ್ಯಾಯದ ಹೆಸರುಗಳಲ್ಲಿಯೆ ವ್ಯತ್ಯಾಸವು ಕಂಡುಬರುತ್ತದೆ. ಇವರಿರ್ವರೂ ಶಾಂಕರಪಂಥಿಗಳು. ಆದರೂ ಇವರ ಟೀಕೆಯಲ್ಲಿ ಶಾಂಕರಭಾಷ್ಯದಲ್ಲಿ ಬಂದುದಕ್ಕಿಂತ ಭಿನ್ನವಾದ ಹೆಸರುಗಳ ಅಧ್ಯಾಯಗಳಿವೆ! ಟೀಕೆಯಲ್ಲಿ ಇದಕ್ಕಿಂತಲೂ ಹೆಚ್ಚಿನ ಭಿನ್ನತೆಯು ಗೋಚರವಾಗುತ್ತದೆ! ಪೂರಾ ಪಟ್ಟಿಗಳನ್ನು ಸರಿಹೋಲಿಸಿ ನೋಡಿದಲ್ಲಿ ಈ ವ್ಯತ್ಯಾಸವು ಚೆನ್ನಾಗಿ ಗೊತ್ತಾಗುವಂತಿದೆ.

**ಲೋಕಮಾನ್ಯ** ತಿಲಕರ ಗೀತಾರಹಸ್ಯವೂ ಇದಕ್ಕೆ ಅಪವಾದವಾಗಿಲ್ಲ. ಆರನೆಯ ಅಧ್ಯಾಯಕ್ಕೆ '**ಅಧ್ಯಾತ್ಮಯೋಗ**'ವೆಂಬ ಹೆಸರಿರುವುದಾಗಿ ಗೀತೆಯ ಸಂಕಲ್ಪದಲ್ಲಿ ಅಚ್ಚಾಗಿದೆ. ಮುಂದೆ ಅದರ ಅರ್ಥದಲ್ಲಿ **ಧ್ಯಾನಯೋಗ**'ವೆಂಬ ಹೆಸರು ಬಂದಿದೆ! ಹದಿಮೂರನೆಯ ಅಧ್ಯಾಯಕ್ಕೆ ಮೂಲದಲ್ಲಿ '**ಕ್ಷೇತ್ರಕ್ಷೇತ್ರಜ್ಞವಿಭಾಗಯೋಗ**'ವೆಂಬ ಹೆಸರುಂಟೆಂದು ಹೇಳಿ ಮುಂದೆ ಅರ್ಥದಲ್ಲಿ '**ಕ್ಷೇತ್ರ ಕ್ಷೇತ್ರಜ್ಞಯೋಗ**'ವೆಂದಿಷ್ಟೇ ಉಲ್ಲೇಖಿಸಿದೆ.

**ಬೇರೆ** ಅಚ್ಚಾದ ಪ್ರತಿಗಳ ಅಧ್ಯಾಯದ ಹೆಸರುಗಳಲ್ಲಿರುವ ವೈವಿಧ್ಯವನ್ನು ಓದುಗರು ಈ ಪಟ್ಟಿಯಲ್ಲಿ ಕೊಟ್ಟಿರುವ ಹೆಸರುಗಳೊಡನೆ ಹೋಲಿಸಿ ನೋಡಿಕೊಳ್ಳಬೇಕು. ನಿಜವಾಗಿ, ಗೀತೆಯಂತಹ ಸರ್ವಮಾನ್ಯವಾದ ಗ್ರಂಥದಲ್ಲಿ ಈ ಬಗೆಯಾದ ವ್ಯತ್ಯಾಸಗಳಿರುವುದು ಸರಿಯಲ್ಲ. ಆದರೆ ಈ ಬಗೆಯ ಶೈಥಿಲ್ಯವು ಹಿಂದಿನಿಂದಲೂ ನಡೆದು ಬಂದುದು ದುರ್ದೈವದ ಸಂಗತಿಯಾಗಿದೆ. ಮತ್ತು ಅದನ್ನು ತಡೆದು ಹಿಡಿದು ಒಂದು ಕಟ್ಟಿನಲ್ಲಿ ತರಲು ಇನ್ನೂ ಆಗದಿರುವುದು ಇದಕ್ಕೂ ದುಃಖದ ಮಾತಾಗಿದೆ.

ಈ ಹೆಸರುಗಳಲ್ಲಿ **ಕೆಲವು** ಅರ್ಥದ ದೃಷ್ಟಿಯಿಂದ ಒಂದೇ ಆಗಿವೆಯೆಂದು ಗ್ರಹಿಸಬಹುದಾಗಿದೆ. ಆದರೆ **ಕೆಲವು** ಅರ್ಥದ ದೃಷ್ಟಿಯಿಂದಲೂ ತೀರ ಭಿನ್ನವಾಗಿವೆ: **ಲೋಕಮಾನ್ಯ** ತಿಲಕರ ಗೀತಾರಹಸ್ಯದ ಆರನೆಯ ಅಧ್ಯಾಯದ ಹೆಸರಿನ ಉದಾಹರಣವನ್ನೇ ನೋಡಿ. ಗೀತೆಯ ಸಂಕಲ್ಪದಲ್ಲಿ '**ಅಧ್ಯಾತ್ಮಯೋಗ**' ವೆಂದಿದ್ದು ಅರ್ಥದಲ್ಲಿ ಲೋ. ತಿಲಕರು ಅದಕ್ಕೆ '**ಧ್ಯಾನಯೋಗ**' ವೆಂದಿದ್ದಾರೆ. ಇವು ಒಂದೇ ಅರ್ಥದ ಎರಡು ಪದಗಳೆಂದು ಹೇಳಲಿಕ್ಕಾಗದು. ಶಾಂಕರಭಾಷ್ಯದ ಹದಿಮೂರನೆಯ ಅಧ್ಯಾಯದ ಗೀತೆಯ ಸಂಕಲ್ಪದಲ್ಲಿ '**ಪ್ರಕೃತಿಪುರುಷ ವಿವೇಕಯೋಗ**' ವೆಂದಿರುವುದನ್ನು ಶ್ರೀಮದಾಚಾರ್ಯರು ತಮ್ಮ ಭಾಷೆಯಲ್ಲಿ '**ಕ್ಷೇತ್ರ ಕ್ಷೇತ್ರಜ್ಞಯೋಗ**' ವೆಂದು ಹೇಳಿದ್ದಾರೆ! ಇಲ್ಲಿ '**ವಿವೇಕಯೋಗವು**' ಇಷ್ಟವಿದೆಯೊ ಬರಿ ಯೋಗವು ಇಷ್ಟವಿದೆಯೊ? ಎಂಬುದು ಸ್ಪಷ್ಟವಾಗಿ ಗೊತ್ತಾಗುವುದಿಲ್ಲ.

ನಾಲ್ಕನೆಯ ಅಧ್ಯಾಯಕ್ಕಂತೂ ಆರು ಬೇರೆ ಬೇರೆ ಹೆಸರುಗಳು! '**ಜ್ಞಾನಕರ್ಮ ಸಂನ್ಯಾಸಯೋಗ**' '**ಬ್ರಹ್ಮಾರ್ಪಣಯೋಗ**' '**ಜ್ಞಾನಯೋಗ**' '**ಜ್ಞಾನವಿಜ್ಞಾನಯೋಗ**' '**ಕರ್ಮಸನ್ಯಾಸಯೋಗ**' '**ಕರ್ಮಬ್ರಹ್ಮಾರ್ಪಣಯೋಗ**'! ಇವುಗಳಲ್ಲಿ ಕೆಲವು ಅರ್ಥದ ದೃಷ್ಟಿಯಿಂದ ಹೊಂದಿಕೆಯುಳ್ಳವುಗಳಾಗಿವೆ. ಕೆಲವು ಭಿನ್ನವಾಗಿಯೂ ಇವೆ.

ಆದರೆ ಗೀತೆಯ ಅಧ್ಯಾಯಗಳ ತಾತ್ಪರ್ಯವನ್ನು ತಿಳಿದುಕೊಂಡು, ಮತ್ತು ಅಲ್ಲಿ ಬರುವ ಪದಪ್ರಯೋಗಗಳನ್ನು ವಿಚಾರಿಸಿ ಆಯಾ ಅಧ್ಯಾಯದ ಹೆಸರುಗಳನ್ನು ನಿರ್ಧರಿಸಬಹುದಾಗಿದೆ. ಈ ದೃಷ್ಟಿಯಿಂದ ನಾವು ಗೀತೆಯ ಅಧ್ಯಾಯದ ಹೆಸರುಗಳನ್ನು ಕೆಳಗೆ ಕಾಣಿಸಿದಂತೆ ಗೊತ್ತುಪಡಿಸಿದ್ದೇವೆ.

೧. ಮೊದಲನೆಯ ಅಧ್ಯಾಯದ '**ಅರ್ಜುನವಿಷಾದಯೋಗ**' ವೆಂಬುದು ಸರ್ವಸಮ್ಮತವಾದ ಹೆಸರು. ಅರ್ಜನ ಮಾಡತಕ್ಕವನು ಅರ್ಜುನನು. ಧನಾರ್ಜನ, ಜ್ಞಾನಾರ್ಜನ, ಮೋಕ್ಷಾರ್ಜನ ಇತ್ಯಾದಿ ಅರ್ಜಿಸತಕ್ಕ ವಿಷಯಗಳು. ಈ ಯಾವುದೆ ಬಗೆಯ ಅರ್ಜನದ ಮೊದಲು, ಇಂಥದು ತನಗೆ '**ಬೇಕು**' ಎಂಬ ಬೇಗೆಯ ಕಳವಳವು—ವಿಷಾದವು ಮಾನವನಲ್ಲಿ ತಲೆದೋರಲೇಬೇಕು. **ಬೇಡವೆ** ಯಾರು ಪಡೆಯಲಾರರು. ಆದುದರಿಂದ '**ವಿಷಾದಯೋಗ**' ವೆಂಬ ಹೆಸರು ಸಾರ್ಥಕವಾಗಿದೆ. ವಿಷೀದನ್ನಿದಮಬ್ರವೀತ್ ! ( ಭ. ಗೀ. ೧. ೨೮ ) ಈ ಶ್ಲೋಕವು ಈ ಅಧ್ಯಾಯದ ಹೆಸರನ್ನು ಸೂಚಿಸುತ್ತದೆ.

೨. ಎರಡನೆಯ ಅಧ್ಯಾಯದ ಹೆಸರು 'ಸಾಂಖ್ಯಯೋಗ' ವೆಂಬುದು ಬಹುಜನ ಸಮ್ಮತವಾಗಿದೆ. ಮಧುಸೂದನ ಸರಸ್ವತಿಯೊಬ್ಬರು ಮಾತ್ರ ತಮ್ಮ ಟೀಕೆಯಲ್ಲಿ ಇದಕ್ಕೆ '**ಸರ್ವಗೀತಾರ್ಥಸೂತ್ರಣ**' ವೆಂದು ಬೇರೆಯಾಗಿ ಹೆಸರಿಸಿದ್ದಾರೆ. ಈ ಅಧ್ಯಾಯದಲ್ಲಿ ೩೯ನೆಯ ಶ್ಲೋಕದ ವರೆಗೂ ಸಾಂಖ್ಯಮತದ ವಿವರಣೆಯೆ ಇದೆ.

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ-**
**ತ್ವಿಮಾಂ ಶೃಣು.**

**—ಭ. ಗೀ. ೨. ೩೯**

" ಈ ಸಾಂಖ್ಯ ಸಿದ್ಧಾಂತವನ್ನು ನಿನಗೆ ಅರುಹಿದ್ದಾಯ್ತು. ಇನ್ನು ಯೋಗಸಿದ್ಧಾಂತವನ್ನು ತಿಳಿದುಕೊ."

ಎಂದು ಹೇಳಿ ಬಳಿಕ ಯೋಗವಿಚಾರವನ್ನು ಮುಂದುವರಿಸಿದ್ದಾಗಿದೆ. ಅಲ್ಲಿಂದ ಐವತ್ತನಾಲ್ಕನೆಯ ಶ್ಲೋಕದಿಂದ '**ಸ್ಥಿತಪ್ರಜ್ಞನ ಲಕ್ಷಣಗಳು**' ಮತ್ತು '**ಬ್ರಾಹ್ಮೀಸ್ಥಿತಿ**'ಗಳ ವರ್ಣನೆಯಿದೆ. ಈ ಅಧ್ಯಾಯದಲ್ಲಿ ಹೆಚ್ಚಾಗಿ ಸಾಂಖ್ಯಮತದ ವಿವರಣೆಯೆ ಇದೆ. ಆದುದರಿಂದ ಇದಕ್ಕೆ '**ಸಾಂಖ್ಯಯೋಗ**' ವೆಂಬ ಹೆಸರು ಬಂದಿದೆ. ಅಥವಾ ಈ ಅಧ್ಯಾಯದಲ್ಲಿ ಸಾಂಖ್ಯ ಮತ್ತು ಯೋಗ ಇವೆರಡೂ ಮತಗಳ ವರ್ಣನೆಯಿರುವುದರಿಂದ ಇದಕ್ಕೆ **ಸಾಂಖ್ಯ+ಯೋಗ**ವೆಂಬ ಹೆಸರು ಸಾರ್ಥವಾಗಿದೆ.

೩. ಮೂರನೆಯ ಅಧ್ಯಾಯದ ಹೆಸರು '**ಕರ್ಮಯೋಗ**'ವೆಂದಿದ್ದು ಈ ವಿಷಯದಲ್ಲಿ ಯಾರಲ್ಲೂ ಭಿನ್ನಾಭಿಪ್ರಾಯಗಳಿದ್ದುದು ಕಂಡುಬಂದಿಲ್ಲ.

೪. ನಾಲ್ಕನೆಯ ಅಧ್ಯಾಯದ ಹೆಸರು '**ಜ್ಞಾನ ಕರ್ಮ ಸಂನ್ಯಾಸ**'ವೆಂದಿರುವುದಾಗಿ ಶ್ರೀಶಂಕರಾಚಾರ್ಯರು ಗ್ರಹಿಸಿದ್ದಾರೆ ಮತ್ತು ಅವರ ಈ ಗ್ರಹಿಕೆ ಸರಿಯಾಗಿದೆ ಯೆಂದು ಹೇಳಲು ಅಡ್ಡಿಯಿಲ್ಲ. ಏಕೆಂದರೆ ಜ್ಞಾನ ಮತ್ತು ಕರ್ಮಗಳನ್ನು ಬ್ರಹ್ಮಾರ್ಪಣಮಾಡಬೇಕೆಂದು ಈ ಅಧ್ಯಾಯದಲ್ಲಿ ಹೇಳಿದೆ. ಯಜ್ಞದ ಹಲವು ಬಗೆಗಳನ್ನೂ ಈ ಅಧ್ಯಾಯದಲ್ಲಿ ವಿವರಿಸಿದೆ ಈ ಯಜ್ಞಗಳೆಂದರೆ ವಿವಿಧ ಕರ್ಮಗಳೆಂದೆ ಹೇಳಬಹುದು. ಈ ಎಲ್ಲ ಯಜ್ಞಗಳಲ್ಲಿ ಜ್ಞಾನಯಜ್ಞವು ಶ್ರೇಷ್ಠವಾದುದೆಂದು ಹೇಳಿ ಆ ಯಜ್ಞವನ್ನು (ಬ್ರಹ್ಮಾರ್ಪಣಂ ಬ್ರಹ್ಮಹವಿಃ —೪ ೨೪) ಸಮರ್ಪಣ ಬುದ್ಧಿಯಿಂದ ಮಾಡಿದರೆ ಮನುಷ್ಯನು ಕರ್ಮಬಂಧನದಿಂದ ಮುಕ್ತನಾಗಿ ಶ್ರೇಷ್ಠ ಶಾಂತಿಯನ್ನು ಪಡೆಯುವನು; ಎಂದು ಇಲ್ಲಿ ಹೇಳಿದೆ. ಕೆಲವು ವಿದ್ವಾಂಸರು ಈ ಅಧ್ಯಾಯಕ್ಕೆ '**ಬ್ರಹ್ಮಾರ್ಪಣ ಯೋಗ**' ಅಥವಾ '**ಕರ್ಮಬ್ರಹ್ಮಾರ್ಪಣಯೋಗ**' ಎಂದು ಹೇಳುತ್ತಾರೆ. ಈ ಹೆಸರುಗಳು ಅರ್ಥದ ದೃಷ್ಟಿಯಿಂದ ಮೇಲಣ ಹೆಸರಿಗೆ ಸರಿಹೋಗುತ್ತವೆ. ಆದರೆ '**ಜ್ಞಾನವಿಜ್ಞಾನಯೋಗ**'ದಂತಹ ಹೆಸರುಗಳನ್ನು ಮೇಲಣ ಹೆಸರಿನೊಡನೆ ಹೇಗೆ ಹೊಂದುಗೂಡಿಸಬೇಕೆಂಬುದು ಗೊತ್ತಾಗುವಂತಿಲ್ಲ.

೫. ಐದನೆಯ ಅಧ್ಯಾಯಕ್ಕೆ '**ಸಂನ್ಯಾಸಯೋಗ**' ಅಥವಾ '**ಕರ್ಮಸಂನ್ಯಾಸಯೋಗ**' ಎಂದು ಕರೆವ ವಾಡಿಕೆಯಿದೆ. '**ಸರ್ವಕರ್ಮಾಣಿ ಮನಸಾ ಸಂನ್ಯಸ್ಯಾಸ್ತೇ ಸುಖಂ ವಶೀ**' (ಭ. ಗೀ. ೫ ೧೩) 'ಸಂಯಮ ಶೀಲ ಮನುಷ್ಯನು ಮನಸಿನಿಂದ ಎಲ್ಲ ಕರ್ಮಗಳ ಸಂನ್ಯಾಸಮಾಡಿ ಸುಖವನ್ನು ಪಡೆಯುವನು' ಎಂದು ಈ ಅಧ್ಯಾಯದಲ್ಲಿ ಹೇಳಿದೆ. ನಿಜವಾಗಿ ನೋಡಿದರೆ ನಾಲ್ಕು ಮತ್ತು ಐದನೆಯ ಅಧ್ಯಾಯಗಳಲ್ಲಿ ಹೇಳಿದ ವಿಷಯವು ಒಂದೇಯಿದೆ. ಆದರೆ ಬೇರೆ ಬೇರೆ ಎಡೆಗಳಲ್ಲಿ ಬೇರೆ ಬೇರೆ ಹೆಸರುಗಳಿವೆ. ಇದಕ್ಕೆ ಕಾರಣವೇನೆಂಬುದನ್ನು ಕಂಡುಹಿಡಿಯಲಿಕ್ಕೆ ಬೇಕು.

೬. ಆರನೆಯ ಅಧ್ಯಾಯಕ್ಕೆ '**ಧ್ಯಾನಯೋಗ**'ವೆಂಬ ಹೆಸರು ಸರಿಯಿದೆ. ಏಕೆಂದರೆ ಇಲ್ಲಿ ಮನಸ್ಸನ್ನು ಕೇಂದ್ರೀಕರಿಸಿ ಧ್ಯಾನಯೋಗದ ಸಾಧನೆಯ ರೀತಿಯನ್ನು ವಿವರಿಸಲಾಗಿದೆ. ಇದರಿಂದ ಆತ್ಮಸಂಯಮವು ಸಾಧಿಸುವುದೆಂದು ಹಲವು ವಿದ್ವಾಂಸರು ಈ ಅಧ್ಯಾಯಕ್ಕೆ '**ಆತ್ಮಸಂಯಮಯೋಗ**'ವೆಂದೂ ಹೇಳುವರು. ಅದೂ ಯೋಗ್ಯವಾಗಿದೆ.

೭ ಏಳನೆಯ ಅಧ್ಯಾಯಕ್ಕೆ '**ಜ್ಞಾನವಿಜ್ಞಾನಯೋಗ**' ವೆಂಬುದು ಬಹುಜನ ಸಮ್ಮತವಾದ ಹೆಸರು. ಮಧುಸೂದನ ಸರಸ್ವತಿಯೊಬ್ಬರು ಮಾತ್ರ ಬೇರೆ ಹೆಸರನ್ನು ಹೇಳಿದ್ದಾರೆ '**ಜ್ಞಾನಂ ತೇಽಹಂ ಸವಿಜ್ಞಾನ ಮಿದಂ ವಕ್ಷ್ಯಾಮಿ**' (೭. ೨) ಎಂದು ಇದೇ ಅಧ್ಯಾಯದ ಎರಡನೆಯ ಶ್ಲೋಕದಲ್ಲಿ ಬಂದಿದೆ. ಆದುದರಿಂದ 'ಜ್ಞಾನ ವಿಜ್ಞಾನ' ವಿಚಾರವು ಇದರಲ್ಲುಂಟೆಂಬುದು ಸ್ಪಷ್ಟವಾಗಿದೆ.

೮. ಎಂಟನೆಯ ಅಧ್ಯಾಯಕ್ಕೆ '**ಅಕ್ಷರ ಬ್ರಹ್ಮಯೋಗ**' ವೆಂಬುದು ಸಾಮಾನ್ಯವಾಗಿ ಸರ್ವಸಮ್ಮತವಾದ ಹೆಸರು. 'ಅಕ್ಷರಬ್ರಹ್ಮ' 'ಬ್ರಹ್ಮಾಕ್ಷರ' ಈ ಎಲ್ಲ ಪದಗಳ ತಾತ್ಪರ್ಯವೂ ಒಂದೇ ಆಗಿದೆ ಈ ಅಧ್ಯಾಯದ ಮೂರನೆಯ ಶ್ಲೋಕದಲ್ಲಿ '**ಅಕ್ಷರಂ ಬ್ರಹ್ಮ ಪರಮಂ**' ಎಂಬ ಮಾತು ಬಂದಿದೆ. ಅದು ಈ ಅಧ್ಯಾಯದೊಳಗಿನ ವಿಷಯದ ಸೂಚಕವಾಗಿದೆ.

೯ ಒಂಬತ್ತನೆಯ ಅಧ್ಯಾಯಕ್ಕೆ '**ರಾಜವಿದ್ಯಾ ರಾಜ ಗುಹ್ಯಯೋಗ**' ಎಂಬ ಹೆಸರು ಸರ್ವಸಮ್ಮತವಾಗಿದೆ. 'ರಾಜವಿದ್ಯಾ ರಾಜಗುಹ್ಯಂ ಪವಿತ್ರಮಿದ**ಮುತ್ತಮಂ**' ಎಂಬ ಪದ ಪ್ರಯೋಗವು ಈ **ಅಧ್ಯಾಯದ** ಎರಡನೆಯ ಶ್ಲೋಕದಲ್ಲಿಯೆ ಬಂದಿದೆ.

೧೦. ಹತ್ತನೆಯ ಅಧ್ಯಾಯಕ್ಕೆ '**ವಿಭೂತಿಯೋಗ**' ವೆಂಬ ಹೆಸರು. ಇದನ್ನು ವಿರೋಧಿಸುವವರು ಯಾರೂ ಇಲ್ಲ. 'ಹಂತ ತೇ ಕಥಯಿಷ್ಯಾಮಿ ದಿವ್ಯಾಹ್ಯಾತ್ಮವಿಭೂತಯಃ' ಎಂಬ ಈ ಪದಪ್ರಯೋಗವು ಈ ಅಧ್ಯಾಯದ ೧೯ನೆಯ ಶ್ಲೋಕದಲ್ಲಿ ಬಂದಿದೆ. ಈ ಅಧ್ಯಾಯದಲ್ಲಿ ವಿಭೂತಿ ವಿಚಾರವೇ ಮುಖ್ಯವಾಗಿದೆ.

೧೧. ಹನ್ನೊಂದನೆಯ ಅಧ್ಯಾಯಕ್ಕೆ '**ವಿಶ್ವರೂಪ**.

'ದರ್ಶನ'ವೆಂಬುದು ಸರ್ವಸಾಮಾನ್ಯವಾದ ಹೆಸರಾಗಿದೆ. ಈ ಹೆಸರಿನಲ್ಲಿ 'ಯೋಗ' ಎಂಬ ಕೊನೆಯ ಶಬ್ದವು ಉಳಿದ ಅಧ್ಯಾಯಗಳಲ್ಲಿ ಕಾಣಿಸಿಕೊಳ್ಳುವಂತೆ ಇಲ್ಲಿ ಕಾಣಿಸಿ-ಕೊಳ್ಳುವುದಿಲ್ಲ. ಏಕೆಂದರೆ ಈ ವಿಷಯದಲ್ಲಿ ಕೆಲವರ ಭಿನ್ನಾಭಿಪ್ರಾಯವಿದೆ. ೧೬ ನೆಯ ಶ್ಲೋಕದಲ್ಲಿ ಬಂದ 'ವಿಶ್ವೇಶ್ವರ, ವಿಶ್ವರೂಪ' ಈ ಶಬ್ದಗಳು ಈ ಅಧ್ಯಾಯದ ಹೆಸರಿನ ಸೂಚಕವಾಗಿವೆ. ಅದಲ್ಲ 'ಐಶ್ವರಂ ರೂಪಂ' (ಶ್ಲೋಕ ೩; ೯); ಐಶ್ವರಂ ಯೋಗಂ (ಶ್ಲೋಕ ೮); ಅನಂತ ರೂಪ (ಶ್ಲೋಕ ೩೮) ಈ ಶಬ್ದಗಳು ಈ ಅಧ್ಯಾಯದ ಸೂಚಕಗಳೇ ಆಗಿವೆ.

೧೨. ಹನ್ನೆರಡನೆಯ ಅಧ್ಯಾಯಕ್ಕೆ 'ಭಕ್ತಿಯೋಗ-'ವೆಂದು ಎಲ್ಲರೂ ಒಕ್ಕೊರಲಿನಿಂದ ಹೇಳುವರು. 'ಯೋಮದ್ಭಕ್ತಃ ಸಮೇಪ್ರಿಯಃ' ಎಂದು ಈ ಅಧ್ಯಾ-ಯದ ೧೫ ನೆಯ ಶ್ಲೋಕದಲ್ಲಿ ಬಂದಿದೆ. ಯಾವನು ನನ್ನ ಭಕ್ತನೋ ಅವನು ನನಗೆ ಪ್ರಿಯನು ಎಂದು ಹಲವು ಬಾರಿ ಬಂದಿದೆ. ಆದುದರಿಂದ ಈ ಅಧ್ಯಾಯಕ್ಕೆ 'ಭಕ್ತಿ-ಯೋಗ' ವೆಂಬ ಹೆಸರು ನಿಃಸಂದಿಗ್ಧವಾದದು.

೧೩. ಹದಿಮೂರನೆಯ ಅಧ್ಯಾಯಕ್ಕೆ 'ಕ್ಷೇತ್ರ-ಕ್ಷೇತ್ರಜ್ಞಯೋಗ'ವೆಂದು ಹೆಸರು. ಏಕೆಂದರೆ ಇದೇ ಅಧ್ಯಾಯದ ಎರಡನೆಯ ಶ್ಲೋಕದಲ್ಲಿ 'ಕ್ಷೇತ್ರಕ್ಷೇತ್ರಜ್ಞ-ಯೋರ್ಜ್ಞಾನಂ' ಎಂಬ ಪದಪ್ರಯೋಗವುಂಟು. ಶ್ರೀ. ಶಂಕರಾಚಾರ್ಯರು ಕೊನೆಯ ಸಂಕಲ್ಪದಲ್ಲಿ ಈ ಅಧ್ಯಾಯಕ್ಕೆ 'ಪ್ರಕೃತಿಪುರುಷ ವಿವೇಕಯೋಗ' ವೆಂಬ ಹೆಸರಿರುವುದಾಗಿ ಹೇಳಿದ್ದು, ಭಾಷ್ಯದಲ್ಲಿ ಇದಕ್ಕೆ ಕ್ಷೇತ್ರ-ಕ್ಷೇತ್ರಜ್ಞಯೋಗವೆಂದಿರುವರು. ಎರಡರ ಅರ್ಥವೂ ಒಂದೇ.

೧೪. ಹದಿನಾಲ್ಕನೆಯ ಅಧ್ಯಾಯಕ್ಕೆ 'ಗುಣತ್ರಯ-ವಿಭಾಗಯೋಗ' ಎಂಬ ಹೆಸರಿರುವುದಾಗಿ ಎಲ್ಲರೂ ಒಪ್ಪುವರು. ಈ ಅಧ್ಯಾಯದಲ್ಲಿ ಸತ್ವ, ರಜ, ತಮವೆಂಬ ತ್ರಿಗುಣಗಳ ವಿಚಾರವು ಬಂದಿದೆ. ಆದುದರಿಂದ ಈ ಹೆಸರು ಈ ಅಧ್ಯಾಯಕ್ಕೆ ಸಾರ್ಥಕವಾಗಿದೆ.

೧೫. ಹದಿನೈದನೆಯ ಅಧ್ಯಾಯಕ್ಕೆ 'ಪುರುಷೋ-ತ್ತಮಯೋಗ'ವೆಂಬ ಹೆಸರು. ಗೀತಾಸಂಗ್ರಹಕಾರರು ಒಬ್ಬರೇ ಇದಕ್ಕೆ 'ಪುರಾಣಪುರುಷೋತ್ತಮಯೋಗ'-ವೆಂದು ಕರೆದಿರುವರು. ಆದರೆ ಇದು ಅನವಶ್ಯಕ.

೧೬. ಹದಿನಾರನೆಯ ಅಧ್ಯಾಯಕ್ಕೆ 'ದೈವಾಸುರ-ಸಂಪದ್ವಿಭಾಗಯೋಗ' ಎಂದು ಹೆಸರುಂಟು. ಆದರೆ ಮುಂಬೈ ದಾಮೋದರ ಸಾವಳಾರಾಮ ಇವರು ಪ್ರಸಿದ್ಧಿಸಿದ 'ಪಂಚರತ್ನ' ಗೀತೆಯಲ್ಲಿ 'ಸುರಾಸುರ-ಸಂಪತ್ತಿಯೋಗ' ಎಂಬ ಹೆಸರು ಉಂಟು. ಇದು ನಿಷ್ಕಾರಣವಾಗಿ ಬಂದ ಹೆಸರು. 'ದೈವೀ' (ಸಂಪತ್) ಮತ್ತು 'ಅಸುರ' (ಸಂಪತ್) ಈ ಶಬ್ದಗಳು ಇದೇ ಅಧ್ಯಾಯದ ೩, ೫ ಮತ್ತು ೬ ಈ ಶ್ಲೋಕಗಳಲ್ಲಿ ಬಂದಿವೆ.

೧೭. ಹದಿನೇಳನೆಯ ಅಧ್ಯಾಯಕ್ಕೆ 'ಶ್ರದ್ಧಾತ್ರಯ-ವಿಭಾಗಯೋಗ'ವೆಂಬ ಹೆಸರು ಮಧುಸೂದನಸರಸ್ವತಿ ಮತ್ತು ಶ್ರೀಧರಸ್ವಾಮಿಯವರು ಮಾತ್ರ ಕೊನೆಯ 'ಯೋಗ' ಶಬ್ದದ ಸ್ಥಳದಲ್ಲಿ 'ವಿವರಣ' ಎಂಬ ಪದ-ವನ್ನು ಹಾಕಿದ್ದಾರೆ. ಆದರೆ ಯೋಗ ಶಬ್ದವೇ ಗೀತೆಯ ಪರಿಪಾಠಕ್ಕೆ ಸರಿಯಾಗಿದೆ.

೧೮. ಹದಿನೆಂಟನೆಯ ಅಧ್ಯಾಯಕ್ಕೆ 'ಮೋಕ್ಷ-ಸಂನ್ಯಾಸಯೋಗ' ಅಥವಾ 'ಮೋಕ್ಷಯೋಗ' ಇಲ್ಲವೆ 'ಸಂನ್ಯಾಸಯೋಗ' ಎಂಬ ಹೆಸರುಗಳಿವೆ. ಬಂಧನ-ದೊಳಗಿಂದ ಬಿಡಿಸಿಕೊಳ್ಳುವುದಕ್ಕಾಗಿ ಯಾವ ಬಗೆ-ಯಾಗಿ ಸಂನ್ಯಾಸ ಮತ್ತು ತ್ಯಾಗಮಾಡಬೇಕೆಂಬುದರ ವಿವೇಚನವು ಈ ಅಧ್ಯಾಯದಲ್ಲಿದೆ. ಆದುದರಿಂದ ಇದಕ್ಕೆ ಮೊದಲನೆಯ ಹೆಸರೇ ಹೆಚ್ಚು ಯೋಗ್ಯ.

ಇಂತಿವು ಅಧ್ಯಾಯದ ಹೆಸರುಗಳು. ಆಯಾ ಅಧ್ಯಾ-ಯಗಳಲ್ಲಿ ಬಂದ ವಿಷಯ ಮತ್ತು ಪದಪ್ರಯೋಗಗಳಿಗೆ ಸರಿಹೋಗುವಂಥವೇ ಗ್ರಾಹ್ಯವಾದ ಹೆಸರುಗಳು. ಉಳಿ-ದುವು ಗೌಣ ಹೆಸರುಗಳೆಂದು ತಿಳಿಯಬೇಕು. ಇನ್ನು ಮೊದಲನೆಯ ಅಧ್ಯಾಯದ ಹೆಸರನ್ನು ಕುರಿತು ಹೆಚ್ಚು ಆಳವಾಗಿ ವಿಚಾರಿಸುವಾ.

ಮೊದಲನೆಯ ಅಧ್ಯಾಯದ ಹೆಸರು 'ವಿಷಾದ-ಯೋಗ'ವೆಂದಿದೆ. ಮತ್ತು ಎರಡನೆಯ ಅಧ್ಯಾಯದ ಎಂಟನೆಯ ಅಥವಾ ಒಂಬತ್ತನೆಯ ಶ್ಲೋಕದ ವರೆಗೂ ವಿಷಾದಯೋಗದ ವಿಚಾರವೆ ಇದೆ. ಇನ್ನು ಇಲ್ಲಿ 'ಯೋಗ' ವೆಂದು ಯೋಜಿಸಿದ ಶಬ್ದದ ಅರ್ಥವೇನು? ಜ್ಞಾನ-ಯೋಗ, ರಾಜಯೋಗ, ಹಠಯೋಗಾದಿಗಳಂತೆ 'ವಿಷಾದ-ಯೋಗ' ಎಂಬುದೇನಾದರೂ ಒಂದು ಸ್ವತಂತ್ರ ಪದ್ಧತಿ-ಯಿದೆಯೆ? ಆದರೆ ಜ್ಞಾನಾದಿಗಳಂತೆ ವಿಷಾದ ಅಥವಾ ದುಃಖವನ್ನು ಬಯಸುವವರಾರು? ಆದುದರಿಂದ ಇಲ್ಲಿ (ವಿಷಾದ) ಯೋಗವೆಂಬುದು ರಾಜಯೋಗಾದಿಗಳಿ-ಗಿಂತ ತೀರ ಭಿನ್ನವಾದುದಾಗಿದೆ. ಇದರ ಅರ್ಥದ ಸ್ಪಷ್ಟೀ-ಕರಣಕ್ಕಾಗಿ ಮುಂದೆ ಒಂದು ಪಟ್ಟಿಯನ್ನು ಕೊಟ್ಟಿದೆ. ಅದರಲ್ಲಿ ಗೀತೆಯ ಅಧ್ಯಾಯಗಳ ಹೆಸರಿನ ಎದುರು ವಿರುದ್ಧಾರ್ಥಕವಾದ ಕಾಲ್ಪನಿಕ ಪದಗಳ ಪಟ್ಟಿಯನ್ನು ಕೊಟ್ಟಿದೆ. ಈ ಹೆಸರುಗಳ ಸಾಮ್ಯವೈಷಮ್ಯಗಳ ವಿಮರ್ಶೆ-

ಯಿಂದ ವಿಷಾದಯೋಗದ ಸಂಬಂಧವು ಉಳಿದ ಯಾವ ಯೋಗಗಳೊಡನೆ ಉಂಟೆಂಬುದು ಸ್ಪಷ್ಟವಾಗುವುದು.

| | |
|---|---|
| (ಆನಂದಯೋಗ) | ವಿಷಾದಯೋಗ (ಅ. ೧) |
| ಪುರುಷೋತ್ತಮಯೋಗ (೧೫) | (ಹೀನಪುರುಷಯೋಗ) |
| ದೈವೀಸಂಪದ್ಯೋಗ (೧೬) | ಅಸುರಸಂಪದ್ಯೋಗ (೧೬) |
| (ಸತ್ವ) ಗುಣಯೋಗ (೧೪) | (ರಜತಮ) ಗುಣಯೋಗ (೧೪) |
| (ಸತ್ವ) ಶ್ರದ್ಧಾಯೋಗ (೧೭) | (ರಜತಮ) ಶ್ರದ್ಧಾಯೋಗ (೧೭) |
| ಮೋಕ್ಷಯೋಗ (೧೮) | (ಬಂಧಯೋಗ) |
| ಸಂನ್ಯಾಸಯೋಗ (೫) | (ಭೋಗಯೋಗ) |
| ಕರ್ಮಯೋಗ (೩) | (ಆಲಸ್ಯಯೋಗ) |
| ಜ್ಞಾನವಿಜ್ಞಾನಯೋಗ (೭) | (ಅಜ್ಞಾನ ಕುಜ್ಞಾನಯೋಗ) |
| ಸಾಂಖ್ಯಯೋಗ ಜ್ಞಾನಯೋಗ (೨) | (ಅವಿವೇಕಯೋಗ, ಮೋಹಯೋಗ) |
| ಬ್ರಹ್ಮಾರ್ಪಣಯೋಗ (೪) | (ಅಹಂಕಾರಯೋಗ) |
| (ಈಶ್ವರಾರ್ಪಣಯೋಗ) | (ಅಸುರಭಾವಯೋಗ) |
| ಧ್ಯಾನಯೋಗ (೬) | (ಚಾಂಚಲ್ಯಯೋಗ) |
| ಆತ್ಮಸಂಯಮಯೋಗ (೬) | (ಅಸಂಯಮಯೋಗ) |
| ಅಕ್ಷರಬ್ರಹ್ಮಯೋಗ (೮) | (ಕರವಿಷಯಯೋಗ) |
| ವಿಭೂತಿಯೋಗ (೧೦) | (ಅಭೂತಿಯೋಗ) |
| ವಿಶ್ವರೂಪದರ್ಶನಯೋಗ (೧೧) | (ವ್ಯಕ್ತಿರೂಪಮೋಹಯೋಗ) |
| ರಾಜವಿದ್ಯಾಯೋಗ (೯) | (ಕುವಿದ್ಯಾಯೋಗ) |
| ರಾಜಗುಹ್ಯಯೋಗ (೯) | (ಗುಹ್ಯಹಾನಿಯೋಗ) |
| ಭಕ್ತಿಯೋಗ (೧೨) | (ಭಕ್ತಿಹೀನತ್ವಯೋಗ) |
| ಪ್ರಕೃತಿಪುರುಷ ವಿವೇಕಯೋಗ (೧೩) | (ವಿವೇಕ ಹೀನತಾಯೋಗ) |
| ಕ್ಷೇತ್ರಯೋಗ (೧೩) | (ಕ್ಷೇತ್ರವಿಯೋಗ) |
| ಕ್ಷೇತ್ರಜ್ಞಯೋಗ (೧೩) | (ಕ್ಷೇತ್ರಜ್ಞವಿಯೋಗ) |

ಈ ಪಟ್ಟಿಯನ್ನು ಪರಾಮರ್ಶಿಸಿದರೆ ಆನಂದಯೋಗ ಅಥವಾ ಪುರುಷೋತ್ತಮಯೋಗದೊಡನೆ ಕೂಡಿ ಕೂಡುವ ಯೋಗಗಳೇ ಬೇರೆ, ವಿಷಾದಯೋಗದೊಡನೆ ಸರಿಹೋಗುವ ಯೋಗಗಳೇ ಬೇರೆ, ಎಂಬುದರ ಮನವರಿಕೆಯಾಗದೆ ಇರದು. ಮೊದಲನೆಯದು ಸುಯೋಗಗಳ ಪಟ್ಟಿ; ಎರಡನೆಯದು ಕುಯೋಗಗಳ ಪಟ್ಟಿ. ಒಂದು ವಿಷಾದಯೋಗವು ಬಂದು ಅಂಟಿಕೊಂಡೊಡನೆ ಅದರ ಹಿಂದೆ ಅದರ ಬಳಗದ ಉಳಿದ ಕುಯೋಗಗಳೂ ಬಂದು ಸುತ್ತಿ ಮುತ್ತುವುವು. ಅರ್ಜುನನು ಇದೇ ಬಗೆಯಾಗಿ ಕುಯೋಗಗಳ ಚಕ್ರದಲ್ಲಿ ಸಿಲುಕಿ ಬಳಲಿದನು. ಸುಯೋಗಗಳ ಬಲದಿಂದ ಕುಯೋಗಗಳನ್ನು ನಾಶಮಾಡಲು ಬರುತ್ತದೆ. ಈ ಉದ್ದೇಶದಿಂದಲೆ ಗೀತೆಯ ಪ್ರತಿಯೊಂದು ಅಧ್ಯಾಯದಲ್ಲಿಯೂ ಉನ್ನತಿಕಾರಕವಾದ ಒಂದೊಂದು ಯೋಗದ ವಿವರಣೆಯು ಸಹೇತುಕವಾಗಿಯೆ ಬಂದಿದೆ.

ಬೀಳುವುದು ಸುಲಭ; ಏಳುವುದು ಕಠಿನ. ಜಾರುವುದು ಹಗುರು; ನಿಲ್ಲುವುದು ಬಿಗಿ. ಜೇನೆ ಬೇಗ ಜರುವುದು; ಕಸುವು ಬರಲು ದುಡಿಯಬೇಕು. ಅಸಂಯಮಕ್ಕೆ ಪ್ರಯತ್ನ ಬೇಡ; ಸಂಯಮಕ್ಕೆ ಸಾಧನ ಬೇಕು ಅದರಂತೆ ಕುಯೋಗವು ತನ್ನ ತಾನೆ ಬರುವುದು. ಸುಯೋಗ ಸಾಧನೆಗೆ ಎಡೆಬಿಡದೆ ದುಡಿಯಬೇಕಾಗುವುದು.

ಆದರೆ ಈ ಲೋಕದಲ್ಲಿ ಪ್ರತಿಯೊಂದು ಸಂಗತಿಯೂ ಸಾಪೇಕ್ಷವಾಗಿದೆ. ಹಸಿವು ಇಲ್ಲದೆ ಹೊಟ್ಟೆತುಂಬಿದ ಸುಖವು ದೊರೆಯದು. ಬಂಧನವೆ ಇಲ್ಲದಿದ್ದರೆ ಬಿಡುಗಡೆಯ ಮಹತ್ವವೆ ಇದ್ದಿಲ್ಲ. ಅದರಂತೆ ವಿಷಾದವೆ ಇಲ್ಲವಾದರೆ ಆನಂದದ ಸೌಖ್ಯವಾದರೂ ಎಲ್ಲಿ? ಅರ್ಜುನನಂತಹ ಲೋಕೈಕ ವೀರನಿಗೆ, ಕಾಳಗದಲ್ಲಿ ಕೈಗೆಕ್ಕೆ ಹತ್ತುವ ಹೊತ್ತಿನಲ್ಲಿ, ವಿಷಾದ ಮತ್ತು ಮೋಹವುಂಟಾಗದೆ ಇದ್ದರೆ (ಕರ್ಮ) ಬಂಧನದಿಂದ ಮುಕ್ತಮಾಡಿ ಅಖಂಡ ಆನಂದವನ್ನೀಯಬಲ್ಲ ಅದ್ಭುತವಾದ ಈ ಭಗವದ್ಗೀತೆಯು ಅವತಾರವಾಗುತ್ತಿದ್ದಿತೆ?

ಬಿಸಿಲಿನಿಂದ ಕಾಯ್ದ ನೆಲಕ್ಕೇ ಮಳೆಯ ಉಪಯೋಗ. ಜಿಜ್ಞಾಸೆ, ಕುತೂಹಲದಿಂದ ಕಳವಳಗೊಂಡವನಿಗೆ ತಿಳಿಹೇಳಿದ ಜ್ಞಾನದ ಲಾಭ ಇಲ್ಲವಾದರೆ ಎಲ್ಲವೂ ನಿರುಪಯುಕ್ತ. ಅರ್ಜುನನಿಗೆ ಒಬ್ಬನಿಗೇ ವಿಷಾದವಾಯ್ತು, ಎಂಬಹಾಗಿಲ್ಲ. ಜೀವನರಂಗದಲ್ಲಿ ತನ್ನ ಏಳ್ಗೆಗಾಗಿ ಹೋರಾಡುವ ಪ್ರತಿಯೊಬ್ಬನಿಗೂ ಒಂದಿಲ್ಲೊಂದು ಬಗೆಯ ವಿಷಾದಕ್ಕೆ ಎದೆಗೊಡಲೆ ಬೇಕಾಗುತ್ತದೆ. ಆದುದರಿಂದಲೆ ಇಂತಹ ವಿಷಾದಯೋಗದಿಂದ ಬಿಡುಗಡೆ ಹೊಂದಲು ಗೀತೆಯ ಉಪದೇಶವು ಮನುಷ್ಯಮಾತ್ರರಿಗೆಲ್ಲ ಅತ್ಯಂತ ಉಪಯುಕ್ತವಾಗಿದೆಯೆಂದು ಹೇಳಬಹುದು. ಗೀತೆಯು ಜೀವನದೊಳಗಿನ ದುಃಖವನ್ನು ದೂರಪಡಿಸಿ ಆತ್ಮಾನಂದದ ದಾರಿಯನ್ನು ತೋರುವ ಅನುಪಮೇಯವಾದ ಶ್ರೇಷ್ಠ ಗ್ರಂಥವಾಗಿದೆ.

**ಸಂಜಯನ ಉಪದೇಶದ ಪರಿಣಾಮವೆ ಅರ್ಜುನನ ಮೋಹ** ಸಂಜಯನ ಮುಖಾಂತರವಾಗಿ ಸಾಮ್ರಾಜ್ಯವಾದಿಯೂ ಮೋಸಗಾರನೂ ಆದ ಧೃತರಾಷ್ಟ್ರನು ಮಾಡಿಸಿದ ಉಪದೇಶವೆ ಫಲಿಸಿ ಅರ್ಜುನನಲ್ಲಿ ಮೋಹರೂಪದಿಂದ ಕಾಣಿಸಿಕೊಂಡಿತೆಂದು ಹಿಂದೆಯೆ ಹೇಳಿದ್ದಾಗಿದೆ. ಇದಕ್ಕೆ ನಿದರ್ಶನವೆಂದು ಇಲ್ಲಿ ಸಂಜಯನ ಉಪದೇಶದೊಳಗಿನ ಕೆಲವೊಂದು ಭಾಗವನ್ನು ಕೊಟ್ಟಿದೆ,

ಮತ್ತು ಸಂಜಯನ ಆ ಮಾತುಗಳಲ್ಲಿ ಗೀತೆಯೊಳಗಿನ ಅರ್ಜುನನ ಮಾತುಗಳಲ್ಲಿರುವ ಸಾಮ್ಯವನ್ನೂ ತೋರಿಸಲಾಗಿದೆ.

**ತೇ ವೈ ಧನ್ಯಾಃ ಯೈಃ ಕೃತಂ ಜಾತಿಕಾರ್ಯಂ**
**ತೇ ವೈ ಪುತ್ರಾಃ ಸುಹೃದೋ ಬಾಂಧವಾಶ್ಚ ।**
**ಉಪಕ್ರುಷ್ಟಂ ಜೀವಿತಂ ಸಂತ್ಯಜೇಯುಃ**
**ಯತಃ ಕುರೂಣಾಂ ನಿಯತೋ ವೈ ಭವಃ**
**ಸ್ಯಾತ್ ॥ ೮ ॥**
**ತೇ ಚೇತ್ಕುರೂನನುಶಿಷ್ಯಾಥ ಪಾರ್ಥಾ**
**ನಿರ್ಣೀಯ ಸರ್ವಾನ್ದ್ವಿಷತೋ ನಿಗೃಹ್ಯ ।**
**ಸಮಂ ವಸ್ತಜ್ಜೀವಿತಂ ಮೃತ್ಯುನಾ ಸ್ಯಾತ್**
**ಯೊಾವ ಜ್ಜೀವಥ್ವಂ ಜಾತಿವಧೇನ ಸಾಧು ॥ ೯ ॥**

—ಮಹಾಭಾ. ಉದ್ಯೋ ಅ. ೨೫.

'ತಮ್ಮ ಜಾತಿಯ ಹಿತವನ್ನು ಮಾಡುವವರೆ ಧನ್ಯರು; ಮತ್ತು ಅವರೆ ನಿಜವಾದ ಮಕ್ಕಳು, ಗೆಳೆಯರು ಹಾಗೂ ಬಳಗದವರು ನಿಂದ್ಯಜೀವನವನ್ನು ತ್ಯಜಿಸಬೇಕು. ಅದರಿಂದಲೆ ಕುರುವಂಶದ ವೈಭವವು ಉಚ್ಚಾಗುವುದು. ಹಾಗೆ ಮಾತಾಡದೆ ನೀವು ಪಾಂಡವರು, ಕೌರವರ ಹಗೆತನ ನಡಿಸಿ ಅವರನ್ನು ಕೊಂದರೆ ನೀವು ಬದುಕಿಯೂ ಸತ್ತಂತೆಯೆ ಸರಿ. ಏಕೆಂದರೆ ಜ್ಞಾತಿಭಾಂಧವರ ಕೊಲೆಯಿಂದ ನಿಮ್ಮ ಬಾಳುವೆಗೆ ಕುಂದು ತಟ್ಟುವುದು.'

ಹೇಗಿದೆ, ಈ ಮೊಸದ ಮಾತು! ಧರ್ಮರಾಜನೆ ಮೊದಲಾದ ಪಾಂಡವರಿಗೇ ಧರ್ಮವನ್ನು ಕಲಿಸ ಹೂರಟಿದ್ದಾನೆ, ಈ ಸಂಜಯನು! ಅನ್ಯಾಯ ಅನೀತಿಗಳನ್ನು ನಡಿಸಿದವರನ್ನು ತಡೆದರೆ, ಹೊಡೆದರೆ ಪಾಪವಂತೆ! ಅರ್ಜುನನು ಮೋಹವಶನಾಗಿ ಆಡಿದ ಮಾತಿನಲ್ಲಿಯೂ ಇದರ ಪ್ರತಿಬಿಂಬವನ್ನ ಕಾಣಬಹುದು :

**ನಿಹತ್ಯ ಧಾರ್ತರಾಷ್ಟ್ರಾನ್ನಃ ಕಾಪ್ರೀತಿಃ ಸ್ಯಾತ್**
**ಜನಾರ್ದನ ।**
**ಪಾಪಮೇವಾಶ್ರಯೇದಸ್ಮಾನ್ ಹತ್ವೈತಾನಾತತಾಯಿನಃ ॥ ೩೬ ॥**

'ಧೃತರಾಷ್ಟ್ರ ಪುತ್ರರನ್ನು ಕೊಂದು ನಮ್ಮ ಕಲ್ಯಾಣವೇನಾಗಬೇಕಾಗಿದೆ ? ಈ ಆತತಾಯಿಗಳನ್ನು ಕೊಂದರೆ ನಮಗೆ ಪಾಪವು ತಗಲುವುದು !'

ಅದರಂತೆ ಸಂಜಯನ ಈ ಮಾತುಗಳನ್ನೂ ನೋಡಿ :

**ಸೋಽಹಂ ಜಯೇ ಚೈವ ಪರಾಜಯೇ ಚ**
**ನಿಃಶ್ರೇಯಸಂ ನಾಽಧಿಗಚ್ಛಾಮಿ ಕಿಂಚಿತ್ ॥೧೨॥**

—ಮಹಾಭಾ. ಉದ್ಯೋ ಅ. ೨೫

'ಸೋಲು ಅಥವಾ ಗೆಲುವು ಇದರಲ್ಲಿಯೂ ನನಗೆ ಸ್ವಲ್ಪವೂ ಶ್ರೇಯಸ್ಸು ಇದ್ದಂತೆ ತೋರುವುದಿಲ್ಲ' ಇದರೊಡನೆ ಅರ್ಜುನನ ಈ ಮಾತನ್ನು ಹೋಲಿಸಿ ನೋಡಿ :

**ನ ಚೈತದ್ವಿದ್ಮಃ ಕತರನ್ನೋ ಗರೀಯೋ**
**ಯದ್ವಾ ಜಯೇಮ ಯದಿ ವಾ ನೋ ಜಯೇಯುಃ ॥**

—ಗೀತಾ ೨. ೬

'ನಾವು ಕೌರವರನ್ನು ಗೆಲ್ಲಬಹುದು; ಇಲ್ಲವೆ ಅವರು ನಮ್ಮನ್ನು ಗೆಲ್ಲಬಹುದು; ಇದರಲ್ಲಿ ಏನಾಗಬಹುದು. ಮತ್ತು ಇದರಲ್ಲಿ ನಮಗೆ ಒಳಿತು ಯಾವುದು, ಎಂದು ನನಗೆ ಏನೂ ತಿಳಿಯದಾಗಿದೆ.

ಮತ್ತೆ ಸಂಜಯನ ಮಾತಿದು :

**ಕಥಂ ಹಿ ನೀಚಾ ಇವ ದೌಷ್ಕುಲೇಯಾಃ**
**ನಿರ್ಧರ್ಮಾರ್ಥಂ ಕರ್ಮ ಕುರ್ಯುಶ್ಚ**
**ಪಾರ್ಥಾಃ ॥ ೧೩ ॥**

'ಪಾಂಡವರು ಧರ್ಮವಂತರು. ಅವರು ದುಷ್ಕುಲದಲ್ಲಿ ಹುಟ್ಟಿದ ನೀಚರಂತೆ (ಯುದ್ಧದಂತಹ) ಕರ್ಮವನ್ನು ಎಂದೂ ಮಾಡರು.' ಪಾಂಡವರನ್ನು ಹೊಗಳಿದಂತೆ ಮಾಡಿ ಅವರನ್ನು ಯುದ್ಧದಿಂದ ದೂರವಿರಿಸಬೇಕೆಂಬ ಸಂಜಯನ ಮಾತಿನೊಳಗಿನ ಕಪಟವು ತಿಳಿಯದೆ ಅರ್ಜುನನು ಮೋಸಹೋಗಿ, ಗಿಳಿಯಂತೆ ಇವೆ ಮಾತುಗಳನ್ನೇ ಆತನು ಒದರುದಿದಿರುವನು :

**ತಸ್ಮಾನ್ನಾರ್ಹಾ ವಯಂ ಹಂತುಂ ಧಾರ್ತರಾಷ್ಟ್ರಾನ್ ಸ್ವಬಾಂಧವಾನ್ ॥ ೩೭ ॥**

'ಆದುದರಿಂದ ನಾವು ನಮ್ಮ ಬಂಧುಗಳಾದ ಧೃತರಾಷ್ಟ್ರ ಪುತ್ರರನ್ನು ಕೊಲ್ಲುವುದು ತಕ್ಕದ್ದಲ್ಲ.' ಯುದ್ಧ ಮಾಡಿದರೆ ಕೌರವರ ನಾಶವಾಗಿ ನೀಚತನವು ನಮ್ಮ ಪಾಲಿಗೆ ಬಂದೀತು! ಎಂಬ ಅಂಜಿಕೆ, ಅರ್ಜುನನಿಗೆ!

ಮುಂದೆ ಸಂಜಯನು ಹೀಗೆ ಉಪದೇಶಿಸಿದ್ದಾನೆ.

**ಧರ್ಮನಿಹತ್ಯಾ ಪಾಂಡವ ತೇ ವಿಶೇಷಾತ್**
**ಲೋಕೇ ಶ್ರುತಾ ದೃಶ್ಯತೇ ಚಾಪಿ ಪಾರ್ಥ ।**
**ಮಹಾಸ್ರವಂ ಜೀವಿತಂ ಚಾಪ್ಯನಿತ್ಯಂ**
**ಸಪಶ್ಯ ತ್ವಂ ಪಾಂಡವ ಮಾ ವ್ಯನೀನಶಃ ॥ ೧ ॥**
**ನಚೇದ್ಭಾಗಂ ಕುರವೋಽನ್ಯತ್ರ ಯುದ್ಧಾತ್**
**ಪ್ರಯಚ್ಛೇರಂಸ್ತುಭ್ಯಮಜಾತಶತ್ರೋ ।**
**ಭೈಕ್ಷ್ಯಚರ್ಯಾಮಂಧಕವೃಷ್ಣಿ ರಾಜ್ಯೇ**
**ಶ್ರೇಯೋ ಮನ್ಯೇನತು ಯುದ್ಧೇನ**
**ರಾಜ್ಯಮ್ ॥ ೨ ॥**

—ಮಹಾಭಾ. ಉದ್ಯೋ ೨೭

'ಎಲೈ ಪಾಂಡವರೆ, ನೀವು ಯಾವಾಗಲೂ ಧರ್ಮದ ಮರ್ಯಾದೆಯಲ್ಲಿ ವರ್ತಿಸತಕ್ಕವರು ಧರ್ಮದ ಬಗ್ಗೆ ನಿಮ್ಮ ಕೀರ್ತಿಯು ಲೋಕದಲ್ಲೆಲ್ಲ ಹಬ್ಬಿದೆ. ಮನುಷ್ಯನ ಬಾಳು ಕ್ಷಣಿಕವೆಂಬುದನ್ನು ನೀವು ಬಲ್ಲಿರಿ! ಆದುದರಿಂದ ಇದನ್ನು ನೆನೆದು ಯುದ್ಧ ಹೂಡಿ ಎಲ್ಲರ ನಾಶಮಾಡಬೇಡಿರಿ. ಎಲೈ ಅಜಾತಶತ್ರುವೆ, ಕೌರವರು ನಿಮ್ಮ ರಾಜ್ಯವನ್ನು ಮರಳಿಕೊಡದಿದ್ದರೆ, ನೀವು ಅಂಧಕವೃಷ್ಟಿಗಳ ನಾಡಿನಲ್ಲಿ ತಿರಿದುಂಡು ಬಾಳಿರಿ. ಯುದ್ಧ ಮಾಡಿ ರಾಜ್ಯವನ್ನು ಗಳಿಸುವುದಕ್ಕಿಂತ ಬಿಕ್ಕೆ ಬೇಡಿ ಬದುಕುವುದು ಲೇಸು.' ಇಲ್ಲಿ ಬಂದ ಬಿಕ್ಕೆ ಬೇಡುವ ಮಾತುಗಳೇ ಗುಹಾಧ್ವನಿಯಂತೆ ಅರ್ಜುನನ ಬಾಯಿಂದ ಬಂದಿವೆ!

ಗುರೂನಹತ್ವಾ ಹಿ ಮಹಾನುಭಾವಾನ್
ಶ್ರೇಯೋ ಭೋಕ್ತುಂ ಭೈಕ್ಷ್ಯಮಪೀಹ ಲೋಕೇ ॥
— ಗೀ. ೨ ೫.

'ಗುರುಗಳನ್ನು ಕೊಂದು ರಾಜ್ಯವನ್ನು ದೊರಕಿಸುವುದಕ್ಕಿಂತ ಈ ಲೋಕದಲ್ಲಿ ಬಿಕ್ಕೆ ಬೇಡಿ ಬಾಳುವುದು ಹೆಚ್ಚು ಶ್ರೇಯಸ್ಕರವಾದುದು.'

ಅದರಂತೆ ಇನ್ನು ಮುಂದೆ ನೋಡಿ:

ನಿಬಂಧನೀ ಹ್ಯರ್ಥತೃಷ್ಣೇಹ ಪಾರ್ಥ
ತಾಮಿಚ್ಛತಾಂ ಬಾಧ್ಯತೇ ಧರ್ಮ ಏವ ।
ಧರ್ಮಂ ತು ಯಃ ಪ್ರವೃಣೀತೇ ಸ ಬುದ್ಧಃ
ಕಾಮೇ ಗೃಧ್ನೋ ಹೀಯತೇಽರ್ಥಾನು
ರೋಧಾತ್ ॥ ೫ ॥
ಧರ್ಮಂ ಕೃತ್ವಾ ಕರ್ಮಣಾಂ ತಾತ ಮುಖಂ
ಮಹಾಪ್ರತಾಪಃ ಸವಿತೇವ ಭಾತಿ ।
ಹೀನೋ ಹಿ ಧರ್ಮೇಣ ಮಹೀಮಪೀಮಾಂ
ಲಬ್ಧ್ವಾ ನರಃ ಸೀದತಿ ಪಾಪಬುದ್ಧಿಃ ॥ ೬ ॥
—ಮಹಾಭಾ. ಉದ್ಯೋ. ೨೭

'ಎಲೈ ಧರ್ಮರಾಜನೆ, ಲೋಭವು ಬಂಧನಕ್ಕೆ ಕಾರಣವಾಗುವುದು; ಧರ್ಮವನ್ನು ಹಾಳುಮಾಡುವುದು. ಆದುದರಿಂದ ಯಾರು ಧರ್ಮವನ್ನು ಅನುಸರಿಸುವರೊ ಅವರಿಗೇ ತಿಳಿದವರೆಂಬ ಹೆಸರು. ಧರ್ಮವನ್ನು ಅನುಸರಿಸುವನು, ಸತ್ಕರ್ಮಗಳನ್ನು ಗೆಯ್ಯುವವನು ಸೂರ್ಯನಂತೆ ಮಹಾಪ್ರತಾಪಿಯಾಗಿ ಹೊಳೆಯುವನು. ಧರ್ಮಹೀನನಾಗಿ ಪೃಥಿವೀವಲ್ಲಭನಾದರೂ ಆ ಪಾಪಿಯು ಪತಿತನಾಗುವನು.'

ಸಾಮ್ರಾಜ್ಯವಾದಿಯಾದ ಕೌರವರಾಯನ ಮೋಸಗಾರಿಕೆಯು ಇಲ್ಲಿ ಚೆನ್ನಾಗಿ ಬಯಲಿಗೆ ಬಂದಿದೆ. ಅನ್ಯಾಯ ಅನೀತಿಗಳಿಂದ ಪಾಂಡವರನ್ನು ಗೋಳಾಡಿಸಿ, ಅವರನ್ನು ರಾಜ್ಯಭ್ರಷ್ಟರನ್ನಾಗಿ ಮಾಡಿದವರು ಕೌರವರು! ತಮ್ಮ ಕಳೆದುಕೊಂಡ ಸ್ವರಾಜ್ಯವನ್ನು ಮರಳಿ ಪಡೆಯಲು ಪಾಂಡವರು ಪ್ರಯತ್ನ ನಡಸುವುದೂ ದೋಷಾಸ್ಪದವೆಂದು, ಮೇಲೆ ಸಂಜಯನ ಉಪದೇಶ! ಅರ್ಜುನನಿಗೆ ಈ ಹೊಂಚಿನ ಮಾತುಗಳು ಗೊತ್ತಾಗದೆ ಮೋಸಹೋಗಿದ್ದುದನ್ನು ಆತನ ಕೆಳಗಿನ ನುಡಿಗಳಿಂದ ಕಂಡುಕೊಳ್ಳಬಹುದು:

ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ
ಮಧುಸೂದನ ।
ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ ನು
ಮಹೀಕೃತೇ ॥
— ಗೀ. ೧-೩೫

'ನಾನು ಸತ್ತರೂ ಸರಿ; ಆದರೆ ಇವರನ್ನು ಕೊಲ್ಲಲಾರೆ. ಎಲೈ ಕೃಷ್ಣನೇ, ಮೂಲೋಕದ ಒಡೆತನವು ದೊರೆತರೂ ನಾನು ಈ ಅಪಕೃತ್ಯವನ್ನು ಎಸಗಲಾರೆ. ಒಳಿಕ ಈ ಒಂದು ನೆಲದ ಒಡೆತನದ ಬೆಲೆಯೇನು ನನಗೆ?' ಹಿತಚಿಂತಕರೆಂಬ ಸೋಗಿನಿಂದ ಸವಿನುಡಿಗಳನ್ನಾಡಿ ತತ್ವೋಪದೇಶವನ್ನು ಮಾಡುವ ಠಗೆಗಳ ಮಾತಿಗೆ ದೇಶದೊಳಗಿನ ನವಯುವಕರು ಹೇಗೆ ಮೋಸಹೋಗುವರೆಂಬುದಕ್ಕೆ ಇದು ಒಳ್ಳೆಯ ನಿದರ್ಶನವಾಗಿದೆ!

ಮತ್ತೆ ಮುಂದೆ ನೋಡಿ:

ಅಂತಂ ಗತ್ವಾ ಕರ್ಮಣಾಂ ಮಾ ಪ್ರಜಹ್ಯಾಃ
ಸತ್ಯಂ ದಮಂ ಚಾರ್ಜವಮಾನೃಶಂಸ್ಯಮ್ ।
ಅಶ್ವಮೇಧಂ ರಾಜಸೂಯಂ ತಥೇಜ್ಯಾಃ
ಪಾಪಸ್ಯಾಂತಂ ಕರ್ಮಣೋ ಮಾ
ಪುನರ್ಗಾಃ ॥ ೧೫ ॥
ತಚ್ಚೇದೇವಂ ದ್ವೇಷರೂಪೇಣ ಪಾರ್ಥಾಃ
ಕರಿಷ್ಯಧ್ವಂ ವರ್ಷಪೂಗಾನ್ವನೇಷು
ದುಃಖಂ ವಾಸಂ ಪಾಂಡವಾ ಧರ್ಮ ಏವ ॥ ೧೬ ॥
ಮಹಾಭಾ. ಉದ್ಯೋ. ೨೭

'ಎಲೈ ಪಾಂಡವರೆ! ಸತ್ಯ, ಆತ್ಮಸಂಯಮ, ಮೃದುಭಾವಗಳನ್ನು ಬಿಡಬೇಡಿ. ರಾಜಸೂಯ, ಅಶ್ವಮೇಧಾದಿ ಯಜ್ಞವನ್ನು ಮಾಡಿ ಮತ್ತೆ ಈ ಯುದ್ಧದ ಪಾಪಮಾರ್ಗವನ್ನು ಅನುಸರಿಸುವರೆ? ಧರ್ಮವನ್ನು ಬಿಟ್ಟು ಈ ಪಾಪಮಾರ್ಗದಿಂದ ಹೋಗುವ ಇಚ್ಛೆಯಾಗಿದ್ದರೆ ಅದಕ್ಕಿಂತಲೂ ನೀವು ಹಲವು ವರುಷ ವನದಲ್ಲಿ ಕಳೆದರೂ ಕೇಡಲ್ಲ. ಏಕೆಂದರೆ ಪಾಪಕ್ಕಿಂತಲೂ ವನವಾಸವು ಲೇಸು.' ನ್ಯಾಯ್ಯವಾದ ತಮ್ಮ ಹಕ್ಕಿನ ಸಲುವಾಗಿ

ಹೋರಾಡುವುದೂ ಸ್ವರಾಜ್ಯವನ್ನು ಪಡೆಯುವುದೂ ಅನ್ಯಾಯವಂತೆ! ಪಾಪದ ಕೆಲಸವಂತೆ! ದುರಾಚಾರಿಗಳೂ ಅನ್ಯಾಯಿಗಳೂ ಆದ ಕೌರವರು ರಾಜ್ಯವನ್ನು ಉಪಭೋಗಿಸಬೇಕಂತೆ! ಪಾಂಡವರು ಧರ್ಮಾಚರಣೆ ಮಾಡುತ್ತ ವನವಾಸದಲ್ಲಿರಬೇಕಂತೆ!

ಸಂಜಯನ ಈ ಮಾತುಗಳೇ ಅರ್ಜುನನ ಬಾಯಿಂದ ಹೊರಬರಬೇಕೆ! ನೋಡಿ:

**ಅಹೋ ಬತ ಮಹತ್ಪಾಪಂ ಕರ್ತುಂ**
**ವ್ಯವಸಿತಾ ವಯಮ್ ।**
**ಯದ್ರಾಜ್ಯಸುಖಲೋಭೇನ ಹಂತುಂ**
**ಸ್ವಜನಮುದ್ಯತಾಃ ॥**
— ಗೀ. ೧-೪೫

'ಅಯ್ಯೋ! ರಾಜ್ಯಲೋಭದಿಂದ ನಾವು ನಮ್ಮ ಬಂಧುಬಳಗದವರನ್ನು ಕೊಲ್ಲಲೆಳಸಿದುದು ಮಹಾ ಪಾಪದ ಕೆಲಸವಾಗಿದೆ!'

ಸಂಜಯನ ಬಣ್ಣದ ಮಾತಿಗೆ ಅರ್ಜುನನು ಹೇಗೆ ಮರುಳಾದನೆಂಬುದನ್ನು ಮತ್ತೆ ಇಲ್ಲಿ ನೋಡಿ:

**ಪಾಪಾನುಬಂಧಂ ಕೋನು ತಂ ಕಾಮಯೇತ ।**
**ಕ್ಷಮೈವ ತೇ ಜ್ಯಾಯಸಿ ನೋತ ಭೋಗಾಃ ॥**
**ಯತ್ರ ಭೀಷ್ಮಃ ಶಾಂತನವೋ ಹತಃ ಸ್ಯಾತ್**
**ಯತ್ರ ದ್ರೋಣಃ ಸಹಪುತ್ರೋ ಹತಃ ಸ್ಯಾತ್**
**॥ ೨೪ ॥**

**ಕೃಪಃ ಶಲ್ಯಃ ಸೋಮದತ್ತಿರ್ವಿಕರ್ಣಃ**
**ವಿವಿಂಶತಿಃ ಕರ್ಣದುರ್ಯೋಧನೌ ಚ ।**
**ಏತಾನ್ ಹತ್ವಾ ಕೀದೃಶಂ ತತ್ಸುಖಂ ಸ್ಯಾತ್**
**ಯದ್ವಿಂದೇಥಾಸ್ತತ್ಪ್ರಬ್ರೂಹಿ ಪಾರ್ಥ ॥೨೫॥**
**ಲಬ್ಧ್ವಾಪೀಮಾಂ ಪೃಥಿವೀಂ ಸಾಗರಾಂತಾಂ**
**ಜರಾಮೃತ್ಯೂ ನೈವ ಹಿ ತ್ವಂ ಪ್ರಜಹ್ಯಾಃ ।**
**ಪ್ರಿಯಾಪ್ರಿಯೇ ಸುಖದುಃಖೇ ಚ ರಾಜನ್**
**ಏವಂ ವಿದ್ವಾನ್ನೈವ ಯುದ್ಧಂ**
**ಕುರುತ್ವನತ್ ॥ ೨೬ ॥**
**ಅಮಾತ್ಯಾನಾಂ ಯದಿ ಕಾಮಸ್ಯ ಹೇತೋಃ**
**ಏವಂ ಯುಕ್ತಂ ಕರ್ಮ ಚರೇರ್ವರಿಷ್ಠಂ ।**
**ಅಪಕ್ರಮೇಃ ಸ್ವಂ ಪ್ರದಾಯೈವ ತೇಷಾಂ**
**ಮಾಗಸ್ತ್ವಂ ವೈ ದೇವಯಾನಾತ್ಪಥೋಽದ್ಯ**
**॥ ೨೭ ॥**
ಮ. ಭಾ. ಉ. ಪ. ೨೬

ಎಲೈ ಧರ್ಮರಾಜನೇ ಈ ಯುದ್ಧರೂಪಿಯಾದ ಪಾಪವನ್ನಾಚರಿಸಲು ಯಾವ ಧೀಮಂತನು ತಾನೆ ಸಿದ್ಧನಾದಾನು? ಕ್ಷಮೆಯೆ

ನಿನಗೆ ಭೂಷಣ. ಭೋಗಗಳನ್ನು ಉಪಭೋಗಿಸುವಲ್ಲಿ ಏನೂ ಲಾಭವಿಲ್ಲ. ಶಂತನುವಿನ ಮಗನಾದ ಭೀಷ್ಮನೂ, ದ್ರೋಣನೂ ಆತನ ಮಗನಾದ ಅಶ್ವತ್ಥಾಮನೂ ಎಲ್ಲಿ ಕೊಲ್ಲಲ್ಪಡುವರೊ; ಕೃಪ, ಶಲ್ಯ, ಸೋಮದತ್ತಿ, ವಿಕರ್ಣ, ವಿವಿಶಂತಿ, ಕರ್ಣ, ದುರ್ಯೋಧನಾದಿಗಳನ್ನು ಎಲ್ಲಿ ಕೊಲ್ಲಬೇಕಾಗುವದೊ ಆ ಕಾಳಗದಿಂದ ನಿನಗೆ ದೊರೆಯುವಂತಹ ಸುಖವಾದರೂ ಎಂತಹದು! ಎಲೈ ಧರ್ಮನೆ, ಈ ಎಲ್ಲ ಜಗತ್ತಿನ ರಾಜ್ಯವನ್ನು ನೀನು ಪಡೆದರೂ, ಮುಪ್ಪು ಸಾವುಗಳನ್ನು ನೀನು ತಪ್ಪಿಸಿಕೊಳ್ಳಲಾರೆ! ಹೀಗಿದ್ದ ಬಳಿಕ ಯುದ್ಧದಿಂದೇನು ನೀವು ಪಡೆವುದೇನು? ನಿನ್ನ ಮಂತ್ರಿಗಳ ಹೇಳಿಕೆಯಿಂದ ನೀನು ಯುದ್ಧಕ್ಕೆ ಸಿದ್ಧನಾಗಿದ್ದರೆ, ಶ್ರೇಷ್ಠನಾದ ನೀನು ದೇವಯಾನ ಮಾರ್ಗದಿಂದ ಭ್ರಷ್ಟನಾಗುವುದು ಯುಕ್ತವಲ್ಲ. ನಿನ್ನ ಮಂತ್ರಿಗಳು ಅವರ ಮನಸಿಗೆ ಬಂದಂತೆ ಮಾತಲಿ.'

ಪಾಂಡವರಿಗೆ ದೇವಯಾನಮಾರ್ಗದಿಂದ ಭ್ರಷ್ಟರಾಗಬೇಡಿರಿ, ಎಂದು ಸಂಜಯನು ಉಪದೇಶಿಸುತ್ತಿದ್ದಾನೆ! ಕೊಟ್ಟ ವಚನ ಪಾಲಿಸಲು ವನವಾಸ ಅಜ್ಞಾತವಾಸಗಳನ್ನು ಅನುಭವಿಸಿದ ಪಾಂಡವರು ದೇವಯಾನಮಾರ್ಗಿಗಳೊ? ಅನ್ಯಾಯ ಮೋಸಗಾರಿಕೆಗಳಿಂದ ಪಾಂಡವರನ್ನು ಸ್ವರಾಜ್ಯಭ್ರಷ್ಟರನ್ನಾಗಿ ಮಾಡಿದ ಕೌರವರು ದೇವಯಾನಮಾರ್ಗಿಗಳೊ? ಧರ್ಮೋಪದೇಶದ ಅವಶ್ಯಕತೆಯು ಸ್ವರಾಜ್ಯವಾದಿಗಳಾದ ಪಾಂಡವರಿಗಿಂತ ಸಾಮ್ರಾಜ್ಯವಾದಿಗಳಾದ ಧೃತರಾಷ್ಟ್ರಪುತ್ರರಿಗೇ ಹೆಚ್ಚಾಗಿದೆ. ಆದುದರಿಂದ ನಿಜವಾಗಿ ಸಂಜಯನು ಕೌರವರಿಗೇ ಈ ಉಪದೇಶವನ್ನು ಮಾಡಬೇಕಾಗಿತ್ತು. ಆದರೆ ಈ ಮೋಸವನ್ನು ಅರಿಯದ ಅರ್ಜುನನು ಸಂಜಯನ ಮಾಟದ ಮಾತಿಗೆ ಬಲಿಯಾದನು. ಯುದ್ಧದ ಚೂಣಿಯಲ್ಲಿಯೆ ಹಿಂದೆಗೆದನು! ಹೀಗೆ ಗಳುಹಿದನು:

**ಯೇಷಾಮರ್ಥೇ ಕಾಂಕ್ಷಿತಂ ನೋ ರಾಜ್ಯಂ**
**ಭೋಗಾಃ ಸುಖಾನಿ ಚ ।**
**ತ ಇಮೇಽವಸ್ಥಿತಾ ಯುದ್ಧೇ ಪ್ರಾಣಾಂಸ್ತ್ಯಕ್ತ್ವಾ**
**ಧನಾನಿ ಚ ॥ ೩೩ ॥**
**ಆಚಾರ್ಯಾಃ ಪಿತರಃ, ಪುತ್ರಾಸ್ತಥೈವ ಚ**
**ಪಿತಾಮಹಾಃ ।**
**ಮಾತುಲಾಃ ಶ್ವಶುರಾಃ ಪೌತ್ರಾಃ ಶ್ಯಾಲಾಃ**
**ಸಂಬಂಧಿನಸ್ತಥಾ ॥ ೩೪ ॥**

**ಏತಾನ್ನ ಹಂತುಮಿಚ್ಛಾಮಿ ಘ್ನತೋಽಪಿ**
**ಮಧುಸೂದನ ।**
**ಅಪಿ ತ್ರೈಲೋಕ್ಯರಾಜ್ಯಸ್ಯ ಹೇತೋಃ**
**ಕಿಂನು ಮಹೀಕೃತೇ ॥ ೩೫ ॥**
—ಗೀ. ಅ. ೧.

**ಅದರಂತೆ**

**ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ**
**ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ**
**ಪೂಜಾರ್ಹಾವರಿಸೂದನ ॥ ೪ ॥**

'ನಾವು ಯಾರ ಸಲುವಾಗಿ ರಾಜವೈಭವಾದಿ ಸುಖಗಳನ್ನು ಬಯಸುವುದೊ ಅವರೆ ಇಲ್ಲಿ ಎಲ್ಲವನ್ನೂ ತೊರೆದು ಸಾಯಲು ಸಿದ್ಧರಾಗಿ ನಿಂತಿದ್ದಾರೆ. ಪೂಜೆಗೊಳ್ಳಲು ಯೋಗ್ಯರಾದ ಭೀಷ್ಮ-ದ್ರೋಣಾದಿ ಹಿರಿಯರ ಮೇಲೂ ಒಲವಿನ ಮಕ್ಕಳು ಭಾವಮೈದುನಾದಿ ಬಳಗದವರ ಮೇಲೂ ನಾನು ಹೇಗೆ ಕೈಯೆತ್ತಲಿ ?' ಎಂದು ಉಸುರಿ ಅರ್ಜುನನು ತಾನು ಸಂಜಯನ ಮಾತಿಗೆ ಮೋಸಹೋದುದನ್ನೇ ಸಿದ್ಧಪಡಿಸಿದ್ದಾನೆ !

ಇಂತು, ಸ್ವರಾಜ್ಯಪ್ರಾಪ್ತಿಗೆ ಹೋರಾಡಲು ಸಿದ್ಧರಾದವರ ಬುದ್ಧಿಭೇದ ಮಾಡಿ ಅವರನ್ನು ಅಡ್ಡ ವಿಚಾರಕ್ಕೆ ಹಚ್ಚುವುದು ಸಾಮ್ರಾಜ್ಯವಾದಿಗಳ ಕುತಂತ್ರಗಳಲ್ಲಿ ಒಂದು ಮಹತ್ವದ ಅಂಗವಾಗಿದೆ. ಆದುದರಿಂದ ಸ್ವರಾಜ್ಯಪ್ರಾಪ್ತಿಗಾಗಿ ಹಂಬಲಿಸುವವರು ಪರರ ಸವಿಮಾತುಗಳ ತತ್ತ್ವೋಪದೇಶಕ್ಕೆ ಕಿವಿಗೊಡಲಾಗದು ತಮ್ಮೊಳಗಿನ ವಿಚಾರಸ್ವಾತಂತ್ರ್ಯವನ್ನು ಕಾಪಾಡಿಕೊಳ್ಳದವರು ಜಗತ್ತಿನ ಹೊರಗಿನ ವ್ಯವಹಾರಗಳಲ್ಲಿಯೂ ಸ್ವತಂತ್ರರಾಗಿರುವುದು ಶಕ್ಯವಿಲ್ಲ. ಮನಸಿನಿಂದಲೆ ದುರ್ಬಲರಾದವರು ಪರಾವಲಂಬನ ಪರದಾಸ್ಯದಿಂದ ಹೊರಬೀಳುವುದೆ ಸಾಧ್ಯವಿಲ್ಲ.

ಸಂಜಯನ ಹೊಂಚುಗಾರಿಕೆಯ ತತ್ತ್ವೋಪದೇಶವೇ ಅರ್ಜುನನ ವಿಷಾದಯೋಗಕ್ಕೆ ಕಾರಣವೆಂಬುದನ್ನು ಮೇಲಣ ಇಬ್ಬರ ಮಾತುಗಳ ಸಾಮ್ಯದಿಂದ ಕಂಡುಕೊಳ್ಳಬಹುದಾಗಿದೆ. ಎದುರಾಳಿಗಳು ಆಡುವ ಸವಿನುಡಿ, ಮಾಡುವ ತತ್ತ್ವೋಪದೇಶಗಳಲ್ಲಿಯೂ ಒಂದು ರಾಜಕೀಯ ಧೂರ್ತತನವಿರುತ್ತದೆಂಬುದನ್ನು ಯಾರೂ ಮರೆಯಕೂಡದು. ಆದುದರಿಂದ ಸ್ವರಾಜ್ಯಕ್ಕಾಗಿ ಹೋರಾಡಶಕ್ಕವರು ಇಂತಹ ಉಪದೇಶದ ಪ್ರಚಾರಕ್ಕೆ ಕಿವಿಗೊಡುವಾಗ ತುಂಬ ಎಚ್ಚರಾಗಿರಬೇಕು. ಸ್ವಲ್ಪ ಅರವುಮರವಾದರೆ ಮೈ ತಿನ್ನುವುದು. ಅರ್ಜುನನಂತೆ ವಿಷಾದ, ಮೋಹಗಳು ಆವರಿಸುವುವು. ಆದರೆ ಶ್ರೀಕೃಷ್ಣನು ಎಲ್ಲರಿಗೂ ನೆರವಿಗೆ ಎಲ್ಲಿ ದೊರೆಯಬೇಕು ? ಆದುದರಿಂದ ಸಂಜಯನಂತಹ ಹಿತ-ಶತ್ರುಗಳ ಒಣ್ಣದ ಮಾತುಗಳ ಒಲೆಯಲ್ಲಿ ಸಿಕ್ಕಿಬೀಳದಂತೆ ಪ್ರತಿಯೊಬ್ಬರೂ ತಮ್ಮನ್ನು ಕಾಪಾಡಿಕೊಂಬುದು ಯಾವಾಗಲೂ ಉತ್ತಮ.

ಇನ್ನು, ಭ್ರಾಂತನಾದ ಅರ್ಜುನನ ತಲೆಯಲ್ಲಿ ಸೇರಿದ ಹುಚ್ಚನ್ನು ತನ್ನ ತತ್ತ್ವೋಪದೇಶದಿಂದ ಹೇಗೆ ಬಿಡಿಸಿದನೆಂಬುದನ್ನು ಅರಿಯುವ ಮೊದಲು ಅರ್ಜುನನ ಸಂದೇಹಗಳಾದರೂ ಯಾವವು. ಎಂಬುದನ್ನು ತಿಳಿದುಕೊಂಬುದು ಅಗತ್ಯವು.

**ಅರ್ಜುನನ ಸಂದೇಹಗಳು**

ಯುದ್ಧಾರಂಭಕ್ಕೆ ಅರ್ಜುನನ ಮನಸಿನಲ್ಲಿ ಹಲವು ಸಂದೇಹಗಳ ಕೋಲಾಹಲವೆದ್ದಿತು. ಆ ಮನಸ್ಸಿನ-ಹೊಯ್ದಾಟದ ಪರಿಣಾಮವಾಗಿಯೆ ಆತನಿಗೆ ಯುದ್ಧವು ಬೇಡವಾಯ್ತು. ಮುಂದೆ ಶ್ರೀಕೃಷ್ಣನು ತಿಳಿಹೇಳಿ ಆತನ ಸಂದೇಹಗಳನ್ನು ಹೋಗಲಾಡಿಸಿದನು ಶ್ರೀಕೃಷ್ಣನ ಮುಂದಿನ ಉಪದೇಶದ ದಿಕ್ಕು ತಿಳಿಯಲು (ಮೊದಲನೆಯ ಅಧ್ಯಾಯದಲ್ಲಿ ಬಂದ) ಅರ್ಜುನನ ಸಂದೇಹಗಳಾವುವು ಎಂಬುದನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ:

೧. ನಮ್ಮ ಎದುರಾಳಿಗಳೆಲ್ಲ ನಮ್ಮ ಒಳಗದವರು—ಸ್ವಜನರು. ಇವರನ್ನು ಕೊಲ್ಲುವುದು ಸರಿಯೆ ?

(೧. ೨೬–೩೪.)

೨. ಪೂಜ್ಯರಾದ ಗುರುಹಿರಿಯರನ್ನೂ, ಮಕ್ಕಳು ಮೊಮ್ಮಕ್ಕಳು, ಭಾವಮೈದುನಾದಿ ರಕ್ತ ಸಂಬಂಧಿಗಳನ್ನು ರಾಜ್ಯಲೋಭದಿಂದ ಸಂಹರಿಸುವುದು ನ್ಯಾಯುವೆ ?

(೧. ೩೬–೩೯)

೩. ಸ್ವಜನರ ನಾಶಮಾಡುವುದು ಶ್ರೇಯಸ್ಕರವೊ ?

(೧. ೩೧)

೪. ಆಪ್ತಬಾಂಧವರನ್ನೂ ಗುರುಹಿರಿಯರನ್ನೂ ಕೊಂದು ಗಳಿಸಿದ ಗೆಲುವು ಕಲ್ಯಾಣಪ್ರದವಾದೀತೆ ?

(೧. ೩೨.)

೫. ಬಂಧುಬಳಗದವರ ಕೊಲೆಮಾಡಿ ಪಡೆದ ರಾಜ್ಯ, ಸುಖಗಳನ್ನು ನಿಷ್ಕಲ್ಮಷ ಮನದಿಂದ ಅನುಭವಿಸುವುದು ಸಾಧ್ಯವೆ ? ಮಾಡಿದ ಹತ್ಯಾಕಾಂಡದ ನೆನಪಾಗಿ ಜೀವವು ತಳಮಳಿಸದೆ ಇರದು.

(೧. ೩೩)

೬. ಯಾರ ಸಲುವಾಗಿ ನಾವು ರಾಜ್ಯ, ಭೋಗ, ಸುಖಗಳನ್ನು ಪಡೆಯುವುದೊ ಆ ನಮ್ಮವರೆ ಜೀವಿತವಿತ್ತಗಳ ಆಸೆತೊರೆದು ಸಾಯಲು ಸಿದ್ಧರಾಗಿದ್ದಾರೆ.

ಇಂತಹ ಪರಿಸ್ಥಿತಿಯಲ್ಲಿ ನಾವು ಅವರನ್ನು ಸಂಹರಿಸುವುದು ತಕ್ಕುದೆ? (೧. ೩೨)

೭. ನನ್ನ ಹತ್ತಿಹೊಂದಿದವರನ್ನು ಕೊಂದು ತ್ರೈಲೋಕ್ಯದ ರಾಜ್ಯವು ದೊರೆತರೂ ನನಗದು ಬೇಡ. ಹಾಗಾದರೆ ಕೇವಲ ಈ ಒಂದು ನೆಲದ ಒಡೆತನಕ್ಕಾಗಿ ನಾನು ಇವರನ್ನು ಹೊಡೆಯಲೆ? (೧. ೩೩–೩೫.)

೮. ಸ್ವಜನರ ಕೊಲೆಯಿಂದ ಮನಸಿನ ಶಾಂತಿಯು ಉಳಿಯದು. ಅಲ್ಲದೆ ಈ ಆತತಾಯಿಗಳನ್ನು ಕೊಂದರೆ ನಮಗೆ ಪಾಪವು ತಟ್ಟಲಾರದೆ?

(೧. ೩೬)

೯. ಸ್ವಜನರನ್ನು ಕೊಂದು ಸುಖಿಯಾದವರುಂಟೆ?

(೧. ೩೭)

೧೦. ಎದುರಾಳಿಗಳು ಲೋಭಾಂಧರಾಗಿದ್ದಾರೆ. ಅವರಿಗೆ ಮಿತ್ರದ್ರೋಹದ ಪಾತಕವು, ಕುಲಕ್ಷಯದ ಕಲಂಕವು ಕಾಣದೆ ಇರಬಹುದು. ಆದರೆ ಅದನ್ನು ತಿಳಿದವರಾದ ನಾವೂ ಅವರಂತೆಯೆ ನಡೆದುಕೊಳ್ಳಬೇಕೆ?

(೧. ೩೮–೩೯)

೧೧. ಕುಲಕ್ಷಯವಾದರೆ ಮನೆತನದ ಹಿರಿಯರು ನಾಶಹೊಂದುವರು. ಹಿರಿಯರು ಇಲ್ಲವಾದರೆ ಕುಲಾಚಾರಗಳೂ ಕುಲಧರ್ಮಗಳೂ ಲೋಪವಾಗುವುವು. ಕುಲಪರಂಪರೆಯು ವಿಚ್ಛೇದವಾದರೆ ಆ ಕುಟುಂಬವು ಅಧರ್ಮಕ್ಕೆ ಈಡಾಗಿ ಅದಕ್ಕೆ ಇಳಿಗಾಲವು—ಅಳಿಗಾಲವು ಬೇಗನೆ ಬರುವುದು. ಹೀಗಿರುವಾಗ ನಮ್ಮ ಕುಲದ ಹಿರಿಯಾಳುಗಳನ್ನು ಮಾರಿಗೆ ಬಲಿಗೊಡುವುದು ಲೇಸಾದೀತೆ? (೧–೪೦.)

೧೨. ಲೋಕದಲ್ಲಿ ಅಧರ್ಮವು ಹೆಚ್ಚಾಗಲು ಸ್ತ್ರೀಯರು ಕೆಡುವರು. ಹೆಂಗಸರು ಕೆಟ್ಟರೆ ಕುಲಗಳ ಕಲಬೆರಿಕೆಯಾಗುವುದು. ಶುದ್ಧ ಕುಲೀನತೆಯ ನಾಶವಾಗುವುದರಿಂದ ನರಕವು (ಹೀನ ಸ್ಥಿತಿಯು) ಪ್ರಾಪ್ತವಾಗುವುದು. ಇಂತಹ ಅನರ್ಥ ಪರಂಪರೆಗೆ ಕಾರಣವಾದ ಈ ಕಾಳಗವಾದರೂ ಏತಕ್ಕೆ?

(೧. ೪೧–೪೨)

೧೩. ಯುದ್ಧದಿಂದ ಮನೆತನಗಳು ಹಾಳಾಗುವುವು. ಮಡಿದವರಿಗೆ ಎಳ್ಳು ನೀರು ಬಿಡಲು ಸಹ ಯಾರೂ ಉಳಿಯದೆ ಆ ಮನೆತನದ ಹಿರಿಯರ ಅಧಃಪಾತವಾಗುವುದು. ಇದು ಯೋಗ್ಯವೋ? ೧.೪೨

೧೪. ಕುಲಗಳ ಕಲಬೆರಿಕೆಯಿಂದ ಜಾತಿಧರ್ಮಗಳು ಹಾಳಾಗುವವು. ಧರ್ಮವು ನಾಶವಾಗುವುದರಿಂದ ನರಕವು ಬರುವುದು. ಆದುದರಿಂದ ಯುದ್ಧವು ನರಕದ ಹೆದ್ದಾರಿ. ಹಾಗಾದರೆ ನಾವು ಈ ದಾರಿಯನ್ನು ಏಕೆ ಹಿಡಿಯಬೇಕು. (೧. ೪೩–೪೪).

೧೫. ಸ್ವಜನ ಘಾತವನ್ನು ಮಾಡುವುದು! ಅದೂ ಏಕೆ? ರಾಜ್ಯಲೋಭದಿಂದ! ಇದಕ್ಕಿಂತ ಹೆಚ್ಚಿನ ದುಷ್ಕೃತ್ಯವುಂಟೆ? (೧. ೪೫)

೧೬. ಆದುದರಿಂದ ಈ ಯುದ್ಧವು ನನ್ನಿಂದ ಆಗದು. ಹಗೆಗಳು ನನ್ನನ್ನು ಕೊಂದರೂ ಸರಿ. ನಾನು ಅವರ ಮೇಲೆ ಕೈಮಾಡಲಾರೆ. (೧. ೪೬)

ಈ ಬಗೆಯ ಹಲವು ಸಂದೇಹಗಳ ಗೊಂದಲದಲ್ಲಿ ಅರ್ಜುನನ ಮನಸು ನಿರ್ವಿಣ್ಣವಾಯಿತು. ಮನಸು ದುರ್ಬಲವಾದುದರಿಂದ ಹುಮ್ಮಸವು ಅಡಗಿತು. ಹಸಬಲನಾದನು. ಕೈಯೊಳಗಿನ ಬಿಲ್ಲು ಬಾಣಗಳೂ ಕೆಳಗೆ ಕಳಚಿದುವು. ಇಂತಹ ನಿರ್ವೀರ್ಯನೂ, ನಿರುತ್ಸಾಹಿಯೂ ಆದ ಅರ್ಜುನನನ್ನು ತನ್ನ ದಿವ್ಯೋಪದೇಶದಿಂದ ಶ್ರೀಕೃಷ್ಣನು ಹುರಿದುಂಬಿಸಿ ಸ್ವರಾಜ್ಯಪ್ರಾಪ್ತಿಯ ಯುದ್ಧಕ್ಕೆ ಅಣಿಮಾಡಿದನು. ಆ ದಿವ್ಯೋಪದೇಶದ ವಿವರಣೆಯು ಮುಂದಿನ ಅಧ್ಯಾಯಗಳಲ್ಲಿ ಬರಲಿದೆ.



# ಮೊದಲನೆಯ ಅಧ್ಯಾಯದೊಳಗಿನ

# ಸುಭಾಷಿತಗಳು

(೧)

## ಯುದ್ಧದ ಸುದ್ದಿ.

**ಯುಯುತ್ಸವಃ ಮಾಮಕಾಃ ಪಾಂಡವಾಶ್ಚೈವ**
**ಕಿಮಕುರ್ವತ ।**

'ಹೋರಟೆಯ ಹುಮ್ಮಸದ ನನ್ನವರು ಮತ್ತು ಪಾಂಡವರು ಒಬ್ಬರನ್ನೊಬ್ಬರು ಎದುರಿಸಿದ ಬಳಿಕ ಮುಂದೆ ನಡೆದುದೇನು ?'

ಜೀವನವು ಒಂದು ಕಾಳಗದ ಕಣ. ರಾಜಕೀಯ, ಧಾರ್ಮಿಕ, ಔದ್ಯೋಗಿಕ ಮುಂತಾದ ರಂಗದಲ್ಲಿ ಅವ್ಯಾಹತವಾದ ಹೋರಾಟವು ನಡದೇ ಇರುತ್ತದೆ. ಮತ್ತು ಪ್ರತಿಯೊಬ್ಬ ಮನುಷ್ಯನು ಇಂತಹ ಒಂದು ಅಥವಾ ಪಲವು ರಂಗಗಳಲ್ಲಿ ಮುಂದುವರಿಯಲು—ಗೆಲುವು ಪಡೆಯಲು ಹವಣಿಸುತ್ತಿರುತ್ತಾನೆ. ಹೀಗೆ ಗೆಲುವಿನ ಇಚ್ಛೆ ಇದ್ದವರು ಪ್ರತಿಕ್ಷಣದಲ್ಲಿಯೂ ತಮ್ಮ ಯುದ್ಧದ ಹೊಸತು ( News ಸುದ್ದಿ )ಗಳನ್ನು ತಿಳಿದುಕೊಳ್ಳಲು ಕುತೂಹಲಿಗಳಾಗಿರಲಿಕ್ಕೆ ಬೇಕು. ಕುರುಕ್ಷೇತ್ರದಲ್ಲಿ ( ಕರ್ಮಭೂಮಿಯಲ್ಲಿ ಏನು ನಡೆದಿದೆಯೊ ನಡೆಯಲಿ; ಅದರ ಗೊಡವೆ ನನಗೇಕೆ ? ಎಂದು ಕಿವಿಮುಚ್ಚಿಕೊಂಡು ಕುಳಿತವರು ಶ್ರೋತ್ರಿಯರು ( ತಿಳಿದವರು ) ಆಗರು. ಅದರಿಂದ ತಿಳಿಗೇಡಿತನವು ಹೆಚ್ಚಾಗಿ ಹಾನಿಗೆ ಗುರಿಯಾಗಬೇಕಾಗುವುದು ನಿಶ್ಚಿತ.

(೨)

## ಸ್ವ—ಪರ ಸೈನ್ಯ.

**ಅಪರ್ಯಾಪ್ತಂ ತದಸ್ಮಾಕಂ ಬಲಮ್**
**ಪರ್ಯಾಪ್ತಂ ತ್ವಿದಮೇತೇಷಾಂ ಬಲಮ್ ॥೧೦॥**

'ನಮ್ಮ ದಂಡು ಪರಿಮಿತ ; ಹಗೆಗಳ ದಂಡು ಅಪರಿಮಿತ.' ಬೇಕು, ಎಂಬುವವನೆ ಬೆಳೆಯುವನು. ಸಾಕು ಎಂಬುದು ಸಾವಿಗೆ ಔತಣ. ತನ್ನಲ್ಲಿ ಪರಿಪೂರ್ಣವಿದೆ. ಅಪರಮಿತವಾಗಿದೆಯೆಂಬ ಹೆಮ್ಮೆಯುಂಟಾದರೆ ಗೆಲುವು ದೊರೆಯದು. ತಾನು ಇನ್ನೂ ಹಿರಿದಾಗಬೇಕು, ಎಂಬುವವನು ತನ್ನ ಕೊರತೆಗಳನ್ನು ಕಂಡುಕೊಂಡು ಅವನ್ನು ಹೋಗಲಾಡಿಸಲು ಹೆಣಗಬೇಕು ಇದುವೆ ಗೆಲುವಿನ ಹೆದ್ದಾರಿ.

(೩)

## ಬಾಗಿಲ ಕಾವು.

**ಅಯನೇಷು ಚ ಸರ್ವೇಷು ಯಥಾಭಾಗ-**
**ಮವಸ್ಥಿತಾಃ ।**
**....ಅಭಿರಕ್ಷಂತು ಭವಂತಃ ಸರ್ವ ಏವ ಹಿ ॥೧೧॥**

'ಪ್ರವೇಶದ್ವಾರಗಳಲ್ಲಿ ಪ್ರತಿಯೊಬ್ಬರೂ ತಮ್ಮ ನಿಯತ ಸ್ಥಾನದಲ್ಲಿ ನಿಂತು ಎಲ್ಲ ಬದಿಯಿಂದಲೂ ಕಾಯುತ್ತಿರಬೇಕು.' ದೇಹದ್ವಾರ, ಗೃಹದ್ವಾರ, ನಗರದ್ವಾರ, ರಾಷ್ಟ್ರದ್ವಾರ ಇವು ಶತ್ರುಗಳ ಪ್ರವೇಶದ ಸ್ಥಾನಗಳು. ಈ ಬಾಗಿಲುಗಳನ್ನು ಚೆನ್ನಾಗಿ ಕಾಯ್ದರೆ ಹಗೆಗಳು ಒಳಹೋಗುವ ಸಂಭವವೇ ಇಲ್ಲ. ಇದುವೆ ಕಾಪಿನ ಗುಟ್ಟು. ವ್ಯಕ್ತಿ, ಗ್ರಾಮ, ರಾಷ್ಟ್ರಗಳ ಸಂರಕ್ಷಣೆಯು ಸರಿಯಾಗಿ ಆಗಲು ಇದೇ ಉತ್ತಮವಾದ ಉಪಾಯವು.

(೪)

## ಸಂಯಮಿಯನ್ನು ಕೇಳು.

**ಪ್ರವೃತ್ತೇ ಶಸ್ತ್ರಸಂಪಾತೇ.... ಹೃಷೀಕೇಶಂ....ಆಹ ।**
**( ೨೦–೨೧ )**

'ಯುದ್ಧಕಾಲದಲ್ಲಿ ........ ಸಂಯಮಿಯಾದವನನ್ನೆ ಕೇಳು.' ಅಸಂಯಮಿಯು, ಸ್ವಾರ್ಥಿಯು, ಲೋಭಿಯು ಆದವನ ಸಲಹೆಯನ್ನು ಪಡೆದರೆ ಎಂದೂ ಹಿತವಾಗಲಾರದು.

(೫)

## ಹಗೆಯ ಒಳಹೊರಗನ್ನು ಅರಿ.

**ಯಾವದೇತಾನ್ನಿರೀಕ್ಷೇಽಹಂ ಯೋದ್ಧುಕಾಮಾನವ**
**ಸ್ಥಿತಾನ್ ।**
**ಕೈರ್ಮಯಾ ಸಹ ಯೋದ್ಧವ್ಯಮ್.... ॥ ( ೨೨ )**
**ಯೋತ್ಸ್ಯಮಾನಾನವೇಕ್ಷೇಽಹಂ ಯ ಏತೇಽತ್ರ**
**ಸಮಾಗತಾಃ । ( ೨೩ )**

'ನಾನು ಯಾರೊಡನೆ ಕಾದಬೇಕಾಗಿದೆಯೋ ಅವರನ್ನು ನಿರೀಕ್ಷಿಸುವೆನು.' 'ಕಾದುವ ಹುಮ್ಮಸದಿಂದ ಇಲ್ಲಿ ಒಟ್ಟುಗೂಡಿದವರನ್ನು ನಿರೀಕ್ಷಿಸುವೆನು.' ಎದುರಿಸ

ಬೇಕಾದವರ ಒಳ-ಹೊರಗುಗಳನ್ನು ಚೆನ್ನಾಗಿ ಅರಿತು-ಕೊಳ್ಳದೆ ಒಮ್ಮೆಲೇ ಹೋರಟಿಗೆ ಆರಂಭಿಸಿದರೆ, ಆಟವು ಮೈತಿನ್ನದೆ ಬಿಡದು. ಆದುದರಿಂದ ಗೆಲುವನ್ನು ಹಾರೈಸುವವನು, ಹೋರಟಿಯ ಮೊದಲು ಹಗೆಗಳ ನಿರೀಕ್ಷಣೆ-ಯನ್ನು ಮಾಡಿರಬೇಕು.

( ೬ )

ಬಳಗದವರೊಡನೆ ಬಡಿದಾಟ ಬೇಡ.

**ನ ಚ ಶ್ರೇಯೋಽನುಪಶ್ಯಾಮಿ ಹತ್ವಾ**
**ಸ್ವಜನಮಾಹವೇ । ( ೩೧ )**

ತಮ್ಮವರ ಮೇಲೆ ಕತ್ತಿಯನ್ನೆತ್ತುವುದು ಹಿತಕರವಲ್ಲ.

**...ನಾರ್ಹಾ ವಯಂ ಹಂತುಂ**
**ಸ್ವಬಾಂಧವಾನ್ । ( ೩೭ )**

'ನಮ್ಮ ಬಳಗದವರನ್ನು ನಾವೇ ಕೊಲ್ಲುವುದು ತಕ್ಕುದಲ್ಲ.'

**ಸ್ವಜನಂ ಹಿ ಕಥಂ ಹತ್ವಾ ಸುಖಿನಃ ಸ್ಯಾಮ । ( ೩೭ )**

'ನಮ್ಮವರನ್ನು ಕೊಂದು ನಾವು ಸುಖಿಗಳಾಗುವುದು ಎಂತು?'

ನಮ್ಮ ನಮ್ಮಲ್ಲಿ ಒಡಕು ಇರಕೂಡದು. ಭಿನ್ನಾ-ಭಿಪ್ರಾಯಗಳಿದ್ದರೂ ಹಗೆತನವು ಸಲ್ಲದು. ಇಬ್ಬರಿಗೂ ಸಮಾನ ಶತ್ರುವು ಒಬ್ಬನಿರುವಾಗ ನಾವು ನಮ್ಮೊಳಗಿನ ಭೇದಭಾವನೆಗಳಿಂದ ಹೊಡೆದಾಡಿ ಒಬ್ಬರೊಬ್ಬರ ನಾಶವನ್ನಾರಂಭಿಸಿದರೆ ಆ ಶತ್ರುವಿಗೆ ಸಹಾಯಮಾಡಿದಂತೆಯೆ ಸರಿ. ಆದುದರಿಂದ ನಮ್ಮೊಳಗಿನ ಭೇದಗಳೇನೆ ಇದ್ದರೂ ನಮ್ಮವರ ಶಕ್ತಿಯನ್ನೇ ಕುಗ್ಗಿಸಲಾಗದು. ಶತ್ರುವಿನ ಶಕ್ತಿಯನ್ನು ಹೆಚ್ಚಿಸಲು ನೆರವಾಗಲಾಗದು.

**.... ಮಹತ್ಪಾಪಂ ಕರ್ತುಂ ವ್ಯವಸಿತಾಃ ....**
**ಯದ್ರಾಜ್ಯಸುಖಲೋಭೇನ ಹಂತುಂ**
**ಸ್ವಜನಮುದ್ಯತಾಃ ॥ ( ೪೫ )**

ರಾಜ್ಯಸುಖದ ಆಸೆಯಿಂದ ಯಾರು ತಮ್ಮವರ ಕೊಲೆಗೆ ಎಳಸುವರೊ ಅವರು ಮಹಾಪಾತಕವನ್ನು ಮಾಡುತ್ತಾರೆ. ನೌಕರಿ, ಸಂಬಳ, ಉಂಬಳಿ, ಪದವಿಗಳ ಆಸೆಯಿಂದ ಯಾರು ತಮ್ಮವರ ಘಾತಮಾಡಲು ಸಿದ್ಧರಾಗುತ್ತಾರೊ ಅವರಂತಹ ಪಾಪಿಗಳು ಅವರೇ.

( ೭ )

ಪಾಪದಿಂದ ದೂರವಿರು.

**ಯದ್ಯಪ್ಯೇತೇ ನ ಪಶ್ಯಂತಿ...ದೋಷಂ ಪಾತಕಮ್ ।**
**ಕಥಂ ನ ಜ್ಞೇಯಮಸ್ಮಾಭಿಃ ಪಾಪಾದಸ್ಮಾನ್ನಿ-**
**ವರ್ತಿತುಮ್ । ( ೩೮–೩೯ )**

'ಇವರಿಗೆ ಇದರಲ್ಲಿ ದೋಷವಾಗಲಿ ಪಾತಕವಾಗಲಿ ಕಾಣದೆ ಇದ್ದರೆ, ನಾವೇಕೆ ಅದರಿಂದ ದೂರವಿರುವ ವಿಚಾರ ಮಾಡಬಾರದು?' ತಿಳಿಗೇಡಿಗಳು ಮಾಡುವಂತೆ ತಿಳಿದವರೂ ನಡೆಯುವುದು ಜಾಣತನವಲ್ಲ.

( ೮ )

ಕುಲಕ್ಷಯದಿಂದ ಧರ್ಮನಾಶವಾಗುವುದು.

**ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ**
**ಸನಾತನಾಃ । ( ೪೦ )**

'ಕುಲಗಳು ಹಾಳಾದರೆ ಆ ಕುಲದಲ್ಲಿ ತಲೆತಲಾಂತರ-ದಿಂದ ನಡೆದುಬಂದ ಕುಲಧರ್ಮವು ನಾಶವಾಗು-ವುದು.' ಮನೆತನದಲ್ಲಿ ವಂಶಾನುವಂಶದಿಂದ ಸಾಗಿ ಬಂದ ವಿದ್ಯ, ಕಲೆ, ಸಂಸ್ಕೃತಿಯೆಲ್ಲವೂ ಕುಟುಂಬ ಘಾತಕವಾದೊಡನೆ ನಷ್ಟವಾಗುವುವು. ಆದುದರಿಂದ ವಂಶದ ಅಂಕುರವನ್ನು—ಪೀಳಿಗೆಯನ್ನು ಎಲ್ಲ ಬಗೆಯಿಂದಲೂ ಕಾಪಾಡಿ ಬೆಳೆಯಿಸಬೇಕು. ಮನೆತನವನ್ನು ಮುಂದೆ ಸಾಗಿಸಬೇಕು.

( ೯ )

ಕುಲೀನೆಯರ ಕೀರ್ತಿ.

**ಅಧರ್ಮಾಭಿಭವಾತ್... ಪ್ರದುಷ್ಯಂತಿ**
**ಕುಲಸ್ತ್ರಿಯಃ ( ೪೧ )**

'ಅಧರ್ಮಪ್ರವೃತ್ತಿಯು ಹೆಚ್ಚುವುದರಿಂದ ಕುಲೀನೆ-ಯರು ಕೆಡುವರು.' ಹೆಣ್ಣುಮಕ್ಕಳು ಪರಿಶುದ್ಧರಾಗಿ ಉಳಿದರೆ ಒಳ್ಳೆಯ ಪೀಳಿಗೆಯ ಆಸೆ; ಕುಲವು ಬೆಳೆವ ಆಸೆ. ಆದುದರಿಂದ ಕುಲವನ್ನು ಅಳಿಸುವುದು ಅಥವಾ ಉಳಿಸುವುದು ಹೆಣ್ಣಿನ ಕೈಯಲ್ಲಿದೆ. ಆದುದರಿಂದ ಹೆಣ್ಣಿನ ಯೋಗ್ಯತೆಯು ಅತ್ಯಂತ ಶ್ರೇಷ್ಠವಾಗಿದೆ. ರಾಷ್ಟ್ರದ ಏಳ್ಗೆಗೆ ಸ್ತ್ರೀಯರು ಶೀಲವಂತರಾಗಿರುವುದು ಅವಶ್ಯಕವಾಗಿದೆ.

( ೧೦ )

ಹೆಣ್ಣು ಕೆಟ್ಟರೆ ಕುಲವು ಕೆಡುವುದು.

**ಸ್ತ್ರೀಷು ದುಷ್ಟಾಸು.... ಜಾಯತೇ**
**ವರ್ಣಸಂಕರಃ ( ೪೧ )**

'ಸ್ತ್ರೀಯರು ಕೆಟ್ಟರೆ ವರ್ಣಸಂಕರವಾಗುವುದು.' ಸಮಾಜದ ಕಟ್ಟು ಸಡಿಲಾಗುವುದು. ದೇಶಕ್ಕೆ ಹಾನಿ ತಟ್ಟುವುದು' ಆದುದರಿಂದ ಹೆಣ್ಣುಮಕ್ಕಳು ಅಡ್ಡದಾರಿಗೆ ಬೀಳದಂತೆ ಅವರನ್ನು ಕಾಪಾಡುವುದು ಕರ್ತವ್ಯವಾಗಿದೆ.

## (೧೧)

### ವರ್ಣಸಂಕರವು ನರಕಕ್ಕೆ ಕಾರಣವು.

**ಸಂಕರೋ ನರಕಾಯೈವ....। (೪೩)**

'ವರ್ಣಸಂಕರದಿಂದ ನರಕವು ಎಂದರೆ ಕೀಳು ಬಾಳು ಬರುವುದು' ನರ—ಕ ಎಂದು ಕಿರುಕುಳ ಮಾನವನು; ಹೀನಸ್ಥಿತಿಯಲ್ಲಿರುವ ಮನುಷ್ಯನು. ಕುಲವಂತನಾಗಿ-ದ್ದರೆ—ಸದಾಚಾರಿಯಾಗಿದ್ದರೆ ಮಾನವನ ಏಳ್ಗೆಯಾಗು-ವುದು. ಆದುದರಿಂದ ನಾಡಿನ ಏಳ್ಗೆಯನ್ನು ಬಯಸುವ-ವರು ಕುಲವಂತರಾಗಿರಲು, ಕುಲಗಳು ಶುದ್ಧವಾಗಿರಲು ಯತ್ನಿಸತಕ್ಕದ್ದು.

## (೧೨)

### ನರಕವಾಸವು.

**ಉತ್ಸನ್ನಕುಲಧರ್ಮಾಣಾಂ ಮನುಷ್ಯಾಣಾಂ**
**ನರಕೇ ವಾಸಃ ಭವತಿ । (೪೪)**

'ಕುಲಧರ್ಮಗಳು ನಾಶವಾದ ಮನುಷ್ಯರಿಗೆ ನರಕ-ವಾಸವು ತಪ್ಪಿದ್ದಲ್ಲ.' ಆದುದರಿಂದ ಕುಲೀನತೆಗೆ (ಸುಸಂಸ್ಕೃತಿಗೆ) ಪೋಷಕವಾದ ಪರಂಪರಾಗತವಾದ ಧರ್ಮಗಳನ್ನು ಕಾಪಾಡಬೇಕು.

## (೧೩)

### ನಿಃಶಸ್ತ್ರನ ಕೊಲೆ.

**ಯದಿ ಮಾಮಪ್ರತೀಕಾರಮಶಸ್ತ್ರಂ**
**ಶಸ್ತ್ರಪಾಣಯಃ ।**
**ಹನ್ಯುಸ್ತನ್ಮೇ ಕ್ಷೇಮತರಂ ಭವೇತ್ ॥ (೪೫)**

'ನಿಃಶಸ್ತ್ರನಾಗಿ ಪ್ರತೀಕಾರಮಾಡದೆ ಸುಮ್ಮನಿರುವ ನನ್ನನ್ನು ಶಸ್ತ್ರಧಾರಿಗಳಾದ ಹಗೆಗಳು ಕೊಂದರೂ ಸರಿಯೆ. ಅದರಿಂದ ನನ್ನ ಹೆಚ್ಚು ಕ್ಷೇಮವೆ ಆದೀತು.' ಅಹಿಂಸಾವೃತ್ತಿಯುಳ್ಳವನೂ, ನಿರ್ವೈರನೂ ಸಿಟ್ಟಿಲ್ಲದವನೂ ಶಾಂತನೂ ಆದವನನ್ನು ಕೊಂದರೆ ಆ ಶಸ್ತ್ರಧಾರಿಗಳು ಲೋಕನಿಂದೆಗೆ ಗುರಿಯಾಗಬೇಕಾಗುವುದು. ನಿಃಶಸ್ತ್ರ-ನಾದ ಅಹಿಂಸಾವ್ರತಿಗೆ ಜಗಜ್ಜನದ ಸಹಾನುಭೂತಿಯ ಬೆಂಬಲವು ದೊರೆಯುವುದು. ಮತ್ತು ಲೋಕಕಲ್ಯಾಣ-ಕ್ಕಾಗಿ ಅಹಿಂಸಾವ್ರತವನ್ನು ಧಾರಣಮಾಡಿದ ಅಸತ್ಯಾ-ಚಾರಿಗೆ ನೈತಿಕ ವಿಜಯವು ಪ್ರಾಪ್ತವಾಗುವುದು. ಕ್ರೂರವಾದ ಪಾಶವೀಶಕ್ತಿಯಿಂದ ಉನ್ಮತ್ತರಾದ ಹಿಂಸಕರ ಪರಾಜಯವು ಆಗುವುದು. '**ಸತ್ಯಮೇವ-ಜಯತೇ ನಾನೃತಂ**' ಎಂಬುದರ ಅನುಭವವು ಬರುವುದು ಇಲ್ಲಿಯೆ.



# ಶ್ರೀಮದ್ಭಗವದ್ಗೀತಾ-ಪುರುಷಾರ್ಥಬೋಧಿನೀ ಟೀಕೆ

## ಮೊದಲನೆಯ ಅಧ್ಯಾಯದ ವಿಷಯಸೂಚಿ



— ಮೊದಲ ಅಧ್ಯಾಯವು ಮುಗಿಯಿತು —

# ಎರಡನೆಯ ಅಧ್ಯಾಯವು

## ಸಾಂಖ್ಯಯೋಗ

**ಸಂಜಯ ಉವಾಚ— ತಂ ತಥಾ ಕೃಪಯಾವಿಷ್ಟಮಶ್ರುಪೂರ್ಣಾಕುಲೇಕ್ಷಣಮ್ ।**
**ವಿಷೀದಂತಮಿದಂವಾಕ್ಯಮುವಾಚ ಮಧುಸೂದನಃ ॥ ೧ ॥**

### (೧) ಅನಾರ್ಯಕರ್ಮದ ನಿಷೇಧ.

**ಶ್ರೀ ಭಗವಾನುವಾಚ— ಕುತಸ್ತ್ವಾ ಕಶ್ಮಲಮಿದಂ ವಿಷಮೇ ಸಮುಪಸ್ಥಿತಮ್ ।**
**ಅನಾರ್ಯಜುಷ್ಟಮಸ್ವರ್ಗ್ಯಮಕೀರ್ತಿಕರಮರ್ಜುನ ॥ ೨ ॥**
**ಕ್ಲೈಬ್ಯಂ ಮಾ ಸ್ಮ ಗಮಃ ಪಾರ್ಥ ನೈತತ್ತ್ವಯ್ಯುಪಪದ್ಯತೇ ।**
**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ ಪರಂತಪ ॥ ೩ ॥**

---

ಅನ್ವಯ:— ಸಂಜಯ ಉವಾಚ— ತಥಾ ಕೃಪಯಾ ಆವಿಷ್ಟಂ ಅಶ್ರುಪೂರ್ಣಾಕುಲೇಕ್ಷಣಂ ವಿಷೀದಂತಂ ತಂ ಮಧುಸೂದನಃ ಇದಂ ವಾಕ್ಯಂ ಉವಾಚ ॥ ೧ ॥ ಶ್ರೀ ಭಗವಾನ್ ಉವಾಚ— ಹೇ ಅರ್ಜುನ! ಅನಾರ್ಯಜುಷ್ಟಂ ಅಸ್ವರ್ಗ್ಯಂ ಅಕೀರ್ತಿಕರಂ ಇದಂ ಕಶ್ಮಲಂ, ವಿಷಮೇ ತ್ವಾ ಕುತಃ ಸಮುಪಸ್ಥಿತಮ್ ? ॥ ೨ ॥ ಹೇ ಪಾರ್ಥ! ಕ್ಲೈಬ್ಯಂ ಮಾ ಸ್ಮ ಗಮಃ। ತ್ವಯಿ ಏತತ್ ನ ಉಪಪದ್ಯತೇ। ಹೇ ಪರಂತಪ! ಇದಂ ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವಾ ಉತ್ತಿಷ್ಠ ॥ ೩ ॥

**ಸಂಜಯನೆಂದನು—ಇಂತು ಎದೆಕರಗಿದವನಾಗಿ ಕಣ್ಣೀರು ತಂದು ಖಿನ್ನಮನಸ್ಕನಾದ ಆ ಅರ್ಜುನನನ್ನು ಕುರಿತು ಮಧುಸೂದನ (ಶ್ರೀಕೃಷ್ಣ)ನು ಹೀಗೆ ನುಡಿದನು ॥ ೧ ॥**

**ಶ್ರೀಕೃಷ್ಣನು ಒರೆದನು: ಎಲೈ ಅರ್ಜುನನೆ! ಹೀನರಿಗೆ (ಅನಾರ್ಯರಿಗೆ) ಒಪ್ಪುವ, ಸ್ವರ್ಗಕ್ಕೆ ಬಾಧಕವಾದ, ಅಪಕೀರ್ತಿಗೆ ಕಾರಣವಾದ ಈ ಮನಸಿನ ಔದಾಸೀನ್ಯವು ಈ ವಿಪರೀತ ಹೊತ್ತಿನಲ್ಲಿ ಎಲ್ಲಿಂದ ತಲೆದೋರಿತು? ॥ ೨ ॥ ಎಲೈ ಅರ್ಜುನನೆ! ನೀನು ನಪುಂಸಕನಾಗಬೇಡ. ನಿನಗಿದು ತರವಲ್ಲ. ವೈರಿರಾಯರ ಎದೆತಲ್ಲಣನಲಾ ನೀನು! ನೀನು ಈ ಕೀಳು ಹೇಡಿತನವನ್ನು ಬಿಟ್ಟು ಕಾಳಗಕ್ಕೆ ನಿಲ್ಲು ॥ ೩ ॥**

**ಭಾವಾರ್ಥ:—** ಹೀನ ದೀನನಂತೆ ನಡೆದುಕೊಂಬುದು ಯಾವ ಗಂಡುಗಲಿಗೂ ಭೂಷಣವಲ್ಲ. ಶ್ರೇಷ್ಠರಾದ ಸಜ್ಜನರು ಯಾವುದನ್ನು ಎಂದೂ ಮಾಡರೊ ಅದನ್ನು ಯಾರೂ ಎಂದೂ ಆಚರಿಸಲಾಗದು. ಮೇಲಣ ಮಟ್ಟಕ್ಕೆ—ಶ್ರೇಷ್ಠ ಲೋಕಕ್ಕೆ ಹೋಗಲು ಅಡ್ಡಿಯನ್ನುಂಟುಮಾಡುವ, ತನ್ನ ಒಳ್ಳೆಯ ಹೆಸರನ್ನು ಹಸಗೆಡಿಸುವ ಹೇಸಿ ಕೆಲಸಕ್ಕೆ ಎಂದೂ ಮನಸುಮಾಡಲಾಗದು. ಮೈತುಂಬ ಎಚ್ಚರುಳ್ಳವರಾಗಿ ಅಡಿತಪ್ಪಿ ಕೆಳಗೆ ಬಾರದಂತೆ ಮುಂದುವರಿಯುವುದು ಪ್ರತಿಯೊಬ್ಬರ ಕರ್ತವ್ಯವಾಗಿದೆ. ಪ್ರತಿಕೂಲ ಪರಿಸ್ಥಿತಿಯಲ್ಲಂತೂ ಮನಸಿನ ಉದಾಸೀನತೆಗೆ ಹತ್ತರ ಸುಳಿಯಗೊಡಬಾರದು. ಹೇಡಿಯಾಗಬಾರದು. ಎಂಟೆದೆಯ ಬಂಟನಾಗಿ ಗಂಡುಗಲಿಯಾಗಿ ಬಂದ ಪ್ರಸಂಗವನ್ನು ಎದುರಿಸಬೇಕು. ಮನಸಿನ ಪುಕ್ಕತನವನ್ನು ಹೊಡೆದೋಡಿಸಬೇಕು. ॥ ೨-೩ ॥

---

**೨ ನೆಯ ಅಧ್ಯಾಯವು.**

**ಸಾಂಖ್ಯಯೋಗ.**

ಹಿಂದಿನ ಅಧ್ಯಾಯದಲ್ಲಿ ವರ್ಣಿಸಿದಂತೆ ಅರ್ಜುನನಿಗೆ ಕೌರವರ ವಿಷಯಕ್ಕೆ ಕರುಣೆಯುಂಟಾಗಿ ಎದೆ ಕರಗಿತು. ಮೋಹವಶನಾದನು. ಆತನು ಮೋಹವಶನಾಗಿ ಕರ್ತವ್ಯಚ್ಯುತನಾಗುತ್ತಿರುವುದನ್ನು ಕಂಡು ಶ್ರೀಕೃಷ್ಣನು ಆತನಿಗೆ ತನ್ನ ಪ್ರಾಪ್ತಕರ್ತವ್ಯವನ್ನು ಮಾಡಲು ಬೆಸಗೊಂಡನು. ಆ ಪ್ರಸಂಗವನ್ನು ಸಂಜಯನು ಧೃತರಾಷ್ಟ್ರನಿಗೆ ವರ್ಣಿಸಿ ಹೇಳುತ್ತಿದ್ದಾನೆ.

(೧) "ಎಲೈ ಧೃತರಾಷ್ಟ್ರನೆ! ಅರ್ಜುನನಿಗೆ ಕೌರವ

ರಲ್ಲಿ ದಯೆಯುಂಟಾಯ್ತು. ಏಕೆಂದರೆ, ತಾನು ಕಾಳಗಕ್ಕೆ ನಿಂತರೆ ಕೌರವರ ಒಂದು ಪಿಳ್ಳೆಯೂ ಬದುಕಿ ಉಳಿಯಲಾರದೆಂಬ ಭೀಕರ ಚಿತ್ರವು ಆತನ ಕಣ್ಣಮುಂದೆ ಕಟ್ಟಿದಂತಾಯ್ತು. ಆದರಿಂದ ಆತನ ಎದೆಗರಗಿ ಕಣ್ಣಲ್ಲಿ ನೀರು ತುಂಬಿತು. ಮನಸು ಖಿನ್ನವಾಯ್ತು. 'ತಾನು ಯುದ್ಧಕ್ಕೆ ಸನ್ನದ್ಧನಾದುದು ತಪ್ಪಾಯ್ತು' ಎಂದೂ ಆತನು ಮಿಡುಕಲಾರಂಭಿಸಿದನು!"

ಶ್ರೀಕೃಷ್ಣನು ಅರ್ಜುನನ ಈ ಅವಸ್ಥೆಯನ್ನು ಕಂಡು ಸೋಜಿಗಗೊಂಡನು. ಮತ್ತು ಅರ್ಜುನನ ಮನೋದೌರ್ಬಲ್ಯವನ್ನು ಹೋಗಲಾಡಿಸಲು ತಿಳಿಸಿ ಹೇಳಲಾರಂಭಿಸಿದನು.

### ಆರ್ಯನಾಗು.

(೨-೩) **'ಆರ್ಯ'ನು ಯಾರು?** ಯೋಗ್ಯನು, ಶ್ರೇಷ್ಠನು, ಸದಾಚಾರಿಯು, ಸನ್ಮಾನ್ಯನು, ಮಿಗಿಲಾದವನು ಕುಲವಂತನು, ಒಡೆಯನು, ಆರ್ಯನೆಂದು ಅರ್ಥವುಂಟು. ಹೊತ್ತನ್ನು ಅರಿಯದೆ ಮನಬಂದಂತೆ ಕೀಳು ರೀತಿಯಿಂದ ನಡೆಯುವವನು ಅನಾರ್ಯನು. ಆರ್ಯನಾದವನು ಹೀಗೆ ವಿಪರೀತವಾಗಿ ವರ್ತಿಸಲಾರನು, ಎಂದು ಅರ್ಜುನನಿಗೆ ಶ್ರೀಕೃಷ್ಣನು ಹೇಳುತ್ತಾನೆ. ಮಾಂಧಾತ, ಶ್ರೀರಾಮಚಂದ್ರ, ಜನಕಾದಿ ಶ್ರೇಷ್ಠರ ಉದಾಹರಣವನ್ನು ನೆನೆ. ಈ ಹೊತ್ತನ್ನು ತಿಳಿದುಕೊ. ಅದಕ್ಕೆ ತಕ್ಕಂತೆ ನಡೆ. ಆರ್ಯನಾಗು ಎಂದು, ಅರ್ಜುನನಿಗೆ ಶ್ರೀಕೃಷ್ಣನು ಬೆಸಗೊಳ್ಳುತ್ತಾನೆ.

### ವಿಷಮಕಾಲ.

"**(ವಿಷಮೇ)** ಹಗೆಗಳು ನಿಮ್ಮನ್ನು ಹೇಳಹೆಸರಿಲ್ಲದಂತೆ ಮಾಡಲು ಬಗೆಬಗೆಯಾಗಿ ಹವಣಿಸಿದರು. ಈ ಮೊದಲು ಸಾವಿರಾರು ಬಾರಿ ಮೋಸಮಾಡಿದರು. ಈಗ ನಿಮ್ಮ ನಿರ್ಮೂಲನ ಮಾಡಲು ಎದುರಿಗೆ ಅಣಿಯಾಗಿ ನಿಂತಿದ್ದಾರೆ. ನಿಮ್ಮ ರಾಜ್ಯವನ್ನೆಲ್ಲ ಅವರು ಅಪಹರಿಸಿದ್ದಾರೆ. ನಿಮ್ಮ ವೈರಿಗಳ ಸೇನಾಬಲ, ದ್ರವ್ಯಬಲ, ಅಧಿಕಾರಬಲ ನಿಮಗಿಂತಲೂ ಎಷ್ಟೋ ಪಟ್ಟು ಹೆಚ್ಚಾಗಿದೆ. ಅವರೆಲ್ಲ ಸುಘಟಿತರಾಗಿದ್ದಾರೆ. ನೀವು ಈ ವರೆಗೆ ಅನುಭವಿಸಿದ ಕಷ್ಟನಷ್ಟಗಳಿಗೆ ಎಣಿಕೆಯಿಲ್ಲ. ಇಷ್ಟಾದರೂ ನೀವು ಸತ್ಯ, ಅಹಿಂಸೆಯಿಂದಲೇ ಇರುವ ನಿಶ್ಚಯ ಮಾಡಿದಿರಿ. ಅಧರ್ಮಕ್ಕೆ ಮನಸು ಮಾಡಲಿಲ್ಲ. ಅವರು ನಿಮ್ಮನ್ನು ಕಾಡಿಸಿದರೂ ಪೀಡಿಸಿದರೂ ನೀವು ಅವರನ್ನು ಉದಾರವಾದ ಶಾಂತಿ, ದಯೆಯಿಂದಲೆ ಕಾಣುತ್ತ ಬಂದಿರಿ ಶಠರೊಂದಿಗೆ ಶಾಂತಿಯಿಂದ ಆಚರಿಸಿಯೆ ಅವರನ್ನು ದಾರಿಗೆ ತರಬೇಕೆಂದು ನೀವು ತುಂಬ ಪ್ರಯತ್ನಿಸಿದಿರಿ. ಆದರೆ ನಿಮಗೆ ಬಂದ ಅನುಭವವೇನು? ನಿಮ್ಮ ಶಾಂತಿಸತ್ಯದ ನಡೆನುಡಿಗಳಿಂದ ಹಗೆಗಳ ಅತ್ಯಾಚಾರಗಳು ಸ್ವಲ್ಪವೂ ಕಡಿಮೆಯಾಗಲಿಲ್ಲ.

"ಕೊನೆಯ ಸಾಮೋಪಚಾರದ ಒಪ್ಪಂದದ ಮಾತುಗಳು ನಡೆದಾಗ ದುರ್ಯೋಧನನು ಹೇಳಿದ್ದೇನು, ಬಲ್ಲೆಯಾ? 'ಉಗುರ ಕಣ್ಣೊಳಗಿನ ಮಣ್ಣನ್ನು ಪಡೆಯಬೇಕಾದರೂ ನೀವು ಯುದ್ಧ ಮಾಡದೆ ಅದೂ ದೊರೆಯಲಾರದು.' ಇಂತಹ ದುರಾಗ್ರಹಿಯು ಆ ದುರ್ಯೋಧನನು! ನಿಮ್ಮ ಸ್ವರಾಜ್ಯವು ನಿಮಗೆ ಯಾಚನೆಯಿಂದ ಎಂದೂ ದೊರೆಯದು. ಶಾಂತಿಸಂಧಾನದ ಎಲ್ಲ ಬಗೆಯ ಪ್ರಯತ್ನಗಳು ಮುಗಿದ ಮೇಲೆಯೆ ಈ ಯುದ್ಧಕ್ಕೆ ಕೈಯಿಕ್ಕಿದ್ದಾಯ್ತು. ಧರ್ಮ, ಭೀಮ, ನಕುಲ, ಸಹದೇವ, ದ್ರೌಪದಿ ಮತ್ತು ನಿಮ್ಮ ಹಿತಚಿಂತಕರಾದ ಬೇರೆ ರಾಜಾಧಿರಾಜರು ಇವರೆಲ್ಲರ ಅಭಿಪ್ರಾಯಗಳ ಮೇರೆಗೆ ಯುದ್ಧವನ್ನು ಆರಂಭಿಸಲಾಗಿದೆ. ಇದೆಲ್ಲವನ್ನೂ ಅರಿತ ನೀನು ಇದೀಗ ಹೀಗೆ ಹುಚ್ಚನಂತೆ ನಡೆದುಕೊಳ್ಳುವುದು ಸರಿಯೆ? ನಿನ್ನಂತಹ ಭಾರತದ ನೇತಾರನು ಹೊತ್ತು ಬಂದಾಗ ಕಾಲ್ದೆಗೆದರೆ ಯೋಗ್ಯವೆ?

### ಯುದ್ಧದ ಸಿದ್ಧತೆ.

"ಈ ಕಾಳಗದ ಪೂರ್ವ ಸಿದ್ಧತೆಯೆಂದು ನೀನು ಇಂದ್ರಕೀಲ ಪರ್ವತದಲ್ಲಿ ತಪಸ್ಸು ಮಾಡಿ, ಪರಶಿವನಿಂದ ಪಾಶುಪತಾಸ್ತ್ರವನ್ನು ಪಡೆದೆ. ದೇವೇಂದ್ರನಿಂದ ದಿವ್ಯಾಸ್ತ್ರಗಳನ್ನು ದೊರಕಿಸಿದೆ. ಇದೀಗ ಅವೆಲ್ಲವುಗಳ ಉಪಯೋಗವೇನು? ಹನ್ನೆರಡು ವರುಷ ವನವಾಸ ಮತ್ತು ಒಂದು ವರುಷದ ಅಜ್ಞಾತವಾಸದಲ್ಲಿ ಅನಂತ ಸಂಕಷ್ಟಗಳನ್ನು ಅನುಭವಿಸಿದಿರಿ. ಅವೆಲ್ಲವುಗಳ ನೆನಪಿಲ್ಲವೆ? ಕಳೆದುಕೊಂಡ ನಿಮ್ಮ ಸ್ವರಾಜ್ಯವನ್ನು ಮರಳಿ ಪಡೆಯಬೇಕೆಂಬ ಹೇವವು ಇಲ್ಲದ ವೀರನು ನೀನೆಂತಹನು? ನಿಮ್ಮ ಪೂರ್ವ ವೈಭವವನ್ನಾದರೂ ಒಮ್ಮೆ ನೆನೆ. ಆಗ ಸ್ವಕರ್ತವ್ಯದ ಎಚ್ಚರವು ನಿನಗಾದೀತು.

### ಪಾಶವೀ ಶಕ್ತಿಗೆ ಕಡೆ.

"ಇನ್ನೂ ಒಂದು ಶ್ರೇಷ್ಠವಾದ ಕರ್ತವ್ಯವು ನಿನ್ನ ಮೇಲೆ ಇದೆ. ಈ ಲೋಕದಲ್ಲಿ ನೀಚರು ಸುಸಂಘಟಿತರಾಗಿ ಅನ್ಯಾಯ ಅನೀತಿಗಳ ಬಲದಿಂದ ಪಾಶವೀ ಶಕ್ತಿಯ ಹೆಮ್ಮೆಯಿಂದ ನಿರ್ಬಲರನ್ನು ಸುಲಿಯುತ್ತಿದ್ದರೆ, ವೀರರಾದವರು ಅವರ ಪುಂಡಾಟಿಕೆಯನ್ನು ಹಾಗೆಯೆ ನಡೆಯಗೊಡುವುದು ಸರಿಯೆ? ಅಲ್ಲದೆ ನಾವು ಈ ಯುದ್ಧವನ್ನು ಲೋಕದಲ್ಲಿ ಶಾಂತಿ ಸಮತ್ವವನ್ನು ಸ್ಥಾಪಿಸುವುದಕ್ಕಾಗಿ ಕೈಕೊಂಡಿದ್ದೇವೆ. ಆದುದರಿಂದ ಇದು ಧರ್ಮ

ಯುದ್ಧವು. ಇಂತಹ ಧರ್ಮಯುದ್ಧದಲ್ಲಿ ಬಲಿಷ್ಠರಾದವರು ಆನಂದದಿಂದ ಸೇರಬೇಕಾದುದು ಕರ್ತವ್ಯವಾಗಿದೆ. ಇದರಲ್ಲಿ ಭಾಗವಹಿಸದಿದ್ದರೆ ನೀನು ಕ್ಷತ್ರಿಯ ಕುಲದಲ್ಲಿ ಹುಟ್ಟಿದುದಾದರೂ ಏತಕ್ಕೆ? ನಿನ್ನ ಬಾಳಿನ ಗುರಿಯಾದರೂ ಯಾವುದು?

ನಿನ್ನ ಕೃತಿಯಿಂದ ನೀನು ಆರ್ಯನೆಂದು ಸಿದ್ಧಪಡಿಸು. ನಿನ್ನ ನಡತೆಯಿಂದ ಪೂರ್ವಜರ ಹಿರಿಮೆಗೆ ಕಲಂಕವನ್ನು ಹಚ್ಚುತ್ತಿರುವೆಯಲಾ! ಅಕಟಕಟಾ! ಎಂತಹ ಹೇಡಿತನವು ನಿನಗೆ ಅಂಟಿಕೊಂಡಿತು. ಈ ಅನಾರ್ಯತ್ವವನ್ನು ತಡೆದು ಹಾಕು. ಸ್ವರಾಜ್ಯಪ್ರಾಪ್ತಿಯ ಪ್ರಯತ್ನಗಳಿಂದ ಹಿಂದೆಗೆಯಬೇಡ! ಎದ್ದೇಳು!

### ಸ್ವರ್ಗ ಸುಖದ ದಾರಿ.

"ಈ ಯುದ್ಧವೆಂದರೆ ಕ್ಷತ್ರಿಯರಿಗೆ ಸ್ವರ್ಗಸುಖವನ್ನು ದೊರಕಿಸಿಕೊಡುವ ಸುಲಭ ಸಾಧನವು. ಇದರಿಂದ ಓಂಜರಿದರೆ ನಿನಗೆ ಸ್ವರ್ಗಪ್ರಾಪ್ತಿಯಾಗದು. ಕಾಳಗದಿಂದ ಓಡಿದವರಿಗೆ ನರಕವೆ ಗತಿ. ಆದುದರಿಂದ ಕ್ಷತ್ರಿಯನು ಅನಾಯಾಸವಾಗಿ ಬಂದ ಧರ್ಮಯುದ್ಧದ ಸಂಧಿಯನ್ನು ಎಂದೂ ವ್ಯರ್ಥ ಹೋಗಗೊಡಬಾರದು.

### ಅಪಕೀರ್ತಿ.

"ನೀನು ರಣಾಂಗಣದಿಂದ ಹಿಂದೆಗೆದರೆ ನಿನ್ನ ಕೀರ್ತಿಗೆ ಕಲಂಕವು ತಟ್ಟುವುದು. ಕ್ಷತ್ರಿಯನಿಗೆ ಇದಕ್ಕಿಂತ ಅಪಮಾನಾಸ್ಪದವು ಬೇರೊಂದಿಲ್ಲ. ಸಂಭಾವಿತರು ಮಾನಭಂಗಕ್ಕಿಂತ ಮರಣವೇ ಲೇಸೆಂದು ಬಗೆಯುತ್ತಾರೆ. ಆದುದರಿಂದ ನೀನು ಅಪಕೀರ್ತಿಗಾದರೂ ಅಂಜು. ದುಷ್ಕೀರ್ತಿಯಿಂದ ದೂರವಿರು. ಶ್ರೇಯಸ್ಕರವಾದ ಯಶಸ್ಸಿನ ದಾರಿಯಲ್ಲಿ ನಡೆ.

### ಮನೋ ದೌರ್ಬಲ್ಯ.

"ಮನಸಿನ ಕೊಳೆಯು (ಕಶ್ಮಲವು) ಅನಾರ್ಯತ್ವದ ಲಕ್ಷಣ. ದುರ್ಬಲವಾದ ಮನಸ್ಸೆ ಹೇಡಿತನಕ್ಕೆ ಕಾರಣ. ಹೇಡಿಯೆ ಗಂಡುಗೇಡಿ. ಗಂಡುಗೇಡಿಯಿಂದ ಯಾವ ಪೌರುಷದ ಕಾರ್ಯವೂ ಜರುಗದು. ಅವನ ಉನ್ನತಿಯೂ ಆಗದು.

"ನಿಮ್ಮ ಹಗೆಗಳು ನಿಮ್ಮ ಸ್ವರಾಜ್ಯವನ್ನು ಕಸಿದುಕೊಂಡಿದ್ದಾರೆ. ಅದನ್ನು ಅರ್ಜಿಸುವುದು ನಿನ್ನ ಕರ್ತವ್ಯವಲ್ಲವೆ ಅರ್ಜುನಾ? ನಿಮಗೆ ಇದು ವಿಪರೀತ ಕಾಲವು. ಇಂತಹ ಹೊತ್ತಿನಲ್ಲಿ ನೀನು ಹೇಡಿಮನಸಿನವನಾಗಬೇಡ. ಶತ್ರುಗಳು ಅನ್ಯಾಯ ಅನೀತಿಯಿಂದ ನಡೆದರೂ ಯಶಸ್ವಿಗಳೆಂದೆನಿಸುತ್ತಾರೆ! ನ್ಯಾಯ ನೀತಿಯ ದಾರಿಯಲ್ಲಿ ನಡೆವ ನೀವು ಹಾನಿಗೆ ಈಡಾಗುತ್ತಿರುವಿರಿ! ಇಂತಹ ವಿಷಮಕಾಲದಲ್ಲಂತೂ ಧೈರ್ಯವೊಂದೇ ಊರುಗೋಲು. ಆದುದರಿಂದ ಮನಸಿನ ಹೊಲಸನ್ನು ತೊಳೆದು ತೇಜಸ್ವಿಯಾಗು. ಧೀರನಾಗು. ಕೀಳು ಹೇಡಿತನವನ್ನು (ಕ್ಷುದ್ರಂ ಹೃದಯ ದೌರ್ಬಲ್ಯಂ) ಬಿಟ್ಟು ವೀರನಾಗು. ಎದ್ದೇಳು, ಕಾಳಗಕ್ಕೆ ಅಣಿಯಾಗು.

### ಗಂಡುಗಲಿಯಾಗು.

'ನಪುಂಸಕನಾಗಬೇಡ, (ಕ್ಲೈಬ್ಯಂ ಮಾ ಸ್ಮಗಮಃ). ಎಲೈ ಅರ್ಜುನನೆ, ನೀನು ಹಿಂದಕ್ಕೆ ದೇವೇಂದ್ರನ ಯುದ್ಧಕಲಾ ಮಹಾವಿದ್ಯಾಲಯದಲ್ಲಿ ಅಸ್ತ್ರವಿದ್ಯಾಭ್ಯಾಸಕ್ಕಾಗಿ ಅಮರಾವತಿಗೆ ಹೋಗಿದ್ದೆಯಲ್ಲವೆ? ಆಗ ಅಲ್ಲಿ ಊರ್ವಶಿಯೆಂಬ ಸ್ವೇಚ್ಛಾಚಾರಿಯಾದ ಶ್ವೇತಕುಮಾರಿಯೊಬ್ಬಳು ನಿನ್ನನ್ನು ತನ್ನ ಅಂಗೈ ಅರಗಿಳಿಯನ್ನಾಗಿ ಮಾಡಿಕೊಳ್ಳಬೇಕೆಂದಿದ್ದಳೆಂದು ಕೇಳಿದ್ದೇನೆ. ಆದರೆ ನೀನು ಅವಳ ಪ್ರೇಮಪಾಶದಲ್ಲಿ ಸಿಲುಕದೆ, ಅವಳಿಗೇ ಚೆನ್ನಾಗಿ ಬುದ್ಧಿ ಗಲಿಸಿದೆಯಂತೆ. ನಿಜವಾಗಿ ಇದು ನಿನಗೆ ಭೂಷಣಾಸ್ಪದವೆ ಸರಿ. ಆದರೆ ಆ ತಿರಸ್ಕೃತ ಗೌರಾಂಗಿಯು ಸೇಡುತೀರಿಸಿಕೊಳ್ಳಲು ನಿನ್ನನ್ನು ನಪುಂಸಕನಾಗೆಂದು ಶಪಿಸಿದಳಂತೆ. ಅವಳ ಮಾತಿನ ಪರಿಣಾಮವಾಗಿ ನೀನು ಇನ್ನೂ ಗಂಡುಗೇಡಿಯಂತೆಯೆ ನಡೆದುಕೊಳ್ಳಬೇಕೆ? ದುರ್ದೈವವೆ! ಹೆಣ್ಣಿನ ಮಾತಿಗೆ, ಮಂತ್ರಮುಗ್ಧನಂತೆ ನೀನು ವರ್ತಿಸಬೇಕೆ? ಇದು ನಿನಗೆ ಒಪ್ಪುವುದಿಲ್ಲ, (ಏತತ್ ತ್ವಯಿ ನ ಉಪಪದ್ಯತೇ). ಭಾರತದ ಅಗ್ರಣಿಯು ನೀನು. ಆರ್ಯನಂತೆ ವರ್ತಿಸು. ಗಂಡುಗಲಿಯಾಗಿ ಸ್ವರಾಜ್ಯಸಂಪಾದನೆಗಾಗಿ ಹೋರಲು ಏಳು.

"ಎಲೈ ಅರ್ಜುನನೆ ನಿನಗೆ ಪರಂತಪನೆಂಬ ಬಿರುದುಂಟು. ಈ ನಿನ್ನ ನಡೆಯಿಂದ ಆ ಬಿರುದಿನ ಅಪಮಾನ ಮಾಡಬೇಡ. ಪರಬಲಕ್ಕೆ ತಾಪದಾಯಕನಾದ ನೀನು, ಅವರಿಗೆ ಸಂತೋಷವಾಗುವ ತೆರನಾಗಿ ನಡೆಯುವುದು ಉಚಿತವೆ? ನಿನ್ನ ಶಸ್ತ್ರಾಸ್ತ್ರಗಳ ಪ್ರಚಂಡವಾದ ಆಘಾತಕ್ಕೆ ಎದೆಗೊಟ್ಟು ನಿಲ್ಲುವ ವೀರಾರು? ಇಂತಹ ಅದ್ವಿತೀಯ ವೀರನಾದ ನೀನು ಈ ಹೊತ್ತಿನಲ್ಲಿ ಸಲ್ಲದ ಹೇಡಿತನಕ್ಕೆ ಎಲ್ಲಿಂದ ಇಂಬುಗೊಟ್ಟೆ? ಆ ಮನೋದೌರ್ಬಲ್ಯವನ್ನು ಹೊಡೆದೋಡಿಸಿ ಯುದ್ಧಕ್ಕೆ ಸನ್ನದ್ಧನಾಗು. ಏಳು, (ಉತ್ತಿಷ್ಠ)."

ಶ್ರೀಕೃಷ್ಣನ ಈ ಬಗೆಯ ಹುರಿದುಂಬಿಸುವ ಮಾತುಗಳನ್ನು ಕೇಳಿ ಅರ್ಜುನನು ಮತ್ತೆ ತನ್ನ ಮೊದಲಿನ ಸಂದೇಹಗಳನ್ನೆ ಇನ್ನೊಂದು ಬಗೆಯಿಂದ ಹೇಳುತ್ತಲಿದ್ದಾನೆ:

## (೨) ನೆತ್ತರದಿಂದ ಹೊಲಸಾದ ಭೋಗಗಳು.

**ಅರ್ಜುನ ಉವಾಚ— ಕಥಂ ಭೀಷ್ಮಮಹಂ ಸಂಖ್ಯೇ ದ್ರೋಣಂ ಚ ಮಧುಸೂದನ ।**
**ಇಷುಭಿಃ ಪ್ರತಿಯೋತ್ಸ್ಯಾಮಿ ಪೂಜಾರ್ಹಾವರಿಸೂದನ ॥ ೪ ॥**
**ಗುರೂನಹತ್ವಾ ಹಿ ಮಹಾನುಭಾವಾನ್ ಶ್ರೇಯೋ ಭೋಕ್ತುಂ**
**ಭೈಕ್ಷ್ಯಮಪೀಹಲೋಕೇ ।**
**ಹತ್ವಾರ್ಥಕಾಮಾಂಸ್ತು ಗುರೂನಿಹೈವ ಭುಂಜೀಯ ಭೋಗಾನ್**
**ರುಧಿರಪ್ರದಿಗ್ಧಾನ್ ॥ ೫ ॥**

---

**ಅನ್ವಯಃ**— ಅರ್ಜುನಃ ಉವಾಚ— ಹೇ ಮಧುಸೂದನ! ಅಹಂ ಭೀಷ್ಮಂ ದ್ರೋಣಂ ಚ ಸಂಖ್ಯೇ ಇಷುಭಿಃ ಕಥಂ ಪ್ರತಿಯೋತ್ಸ್ಯಾಮಿ? ಹೇ ಅರಿಸೂದನ! (ಏತೌ ಪೂಜಾರ್ಹೌ) ॥ ೪ ॥ ಹಿ ಮಹಾನುಭಾವಾನ್ ಗುರೂನ್ ಅಹತ್ವಾ, ಇಹಲೋಕೇ ಭೈಕ್ಷ್ಯಂ ಭೋಕ್ತುಂ ಅಪಿ ಶ್ರೇಯಃ। ಗುರೂನ್ ಹತ್ವಾತು, ಇಹ ಏವ ರುಧಿರ ಪ್ರದಿಗ್ಧಾನ್ ಅರ್ಥಕಾಮಾನ್ ಭೋಗಾನ್ ಭುಂಜೀಯ ॥ ೫ ॥

**ಅರ್ಜುನನೆಂದನು—ಎಲೈ ಮಧುಸೂದನನೆ! ನಾನು, ಭೀಷ್ಮ ಮತ್ತು ದ್ರೋಣರನ್ನು ಯುದ್ಧದಲ್ಲಿ ಬಾಣಗಳಿಂದ ಹೇಗೆ ಹೊಡೆಯಲಿ? ಎಲೈ ಹಗೆಗಳನ್ನು ಹಾಳುಮಾಡುವ ಶ್ರೀಕೃಷ್ಣನೆ! ಇವರು (ನನಗೆ) ಪೂಜ್ಯರು. ॥ ೪ ॥ ಮಹಾನುಭಾವರಾದ ಈ ಗುರುಹಿರಿಯರನ್ನು ಕೊಲ್ಲದೆ ಈ ಲೋಕದಲ್ಲಿ ತಿರಿದುಣ್ಣು ವುದೂ ಲೇಸು; ಏಕೆಂದರೆ ಈ ಶ್ರೇಷ್ಠರನ್ನು ಕೊಂದು ಇಲ್ಲಿಯೆ ಅವರ ನೆತ್ತರದಿಂದ ಹೊಲಸಾದ ಅರ್ಥ ಮತ್ತು ಕಾಮರೂಪಿಯಾದ ಭೋಗಗಳನ್ನು ಅನುಭವಿಸಬೇಕಾದೀತು. ॥ ೫ ॥**

---

(೪-೫) ಯುದ್ಧದಿಂದ ಹಿಂದೆಗೆವ ಕಾರಣಗಳನ್ನು ಅರ್ಜುನನು ಮತ್ತೆ ಹೇಳುತ್ತಲಿದ್ದಾನೆ— "ಎಲೈ ಮಧುಸೂದನನೆ, ತಂದೆ, ತಾಯಿ, ಗುರುಗಳು ಮತ್ತು ಹಿರಿಯರು ಇವರೆಲ್ಲ ನಮಗೆ ಪೂಜ್ಯರಾಗಿರಬೇಕು. ನಾವು ಇವರ ಸೇವೆಗೆಯ್ಯಬೇಕು. ಅಂತಹರ ಕೊಲೆಗೆ ಎಳಸಬೇಕೆ? ಭೀಷ್ಮರು ನಮ್ಮ ಅಜ್ಜ. ದ್ರೋಣರಂತೂ ನಮ್ಮ ಪರಮ ಗುರುಗಳು. ಅವರಿಂದಲೆ ಈ ಧನುರ್ವಿದ್ಯೆಯನ್ನು ಕಲಿತುದು. ಇಂದು ಮರಳಿ ಅವರ ಮೇಲೆಯೆ ಬಾಣಗಳನ್ನೆಸೆಯಲೆ? ಉಪಕಾರಮಾಡಿದವರಿಗೆ ಅಪಕಾರ ಮಾಡಬೇಕೆ? ಇದಾವನ್ಯಾಯ? ಇದೆಲ್ಲಿಯ ನೀತಿ? ಸತ್ಕರಿಸಬೇಕಾದವರನ್ನು ಸಂಹರಿಸುವುದೆ? ಇದು ನನ್ನಿಂದಾಗದು. ಕಾಪಾಡಿದವರನ್ನು ಕೊಲ್ಲುವುದಕ್ಕೆ ಕೈಯೇಳದು. ಭೀಷ್ಮದ್ರೋಣರು ಮಹಾನುಭಾವರು. ತಮ್ಮ ವಿದ್ಯೆ, ಗುಣ, ಶೀಲಗಳಿಂದ ಲೋಕಕ್ಕೆಲ್ಲ ಆದರ್ಶರಾದವರು. ಧರ್ಮಾತ್ಮರು. ಅಂತಹರನ್ನು ಕೊಂದು ನಾನಾವ ನರಕಕ್ಕೆ ಹೋಗಲಿ? ಅಂತಹರನ್ನು ಕೊಂದು ಅನುಭವಿಸುವ ಸುಖವು ಸುಖಕಾರಕವಾದೀತೆ? ಅವರ ಕೊಲೆಯ ನೆನಪಿನಿಂದ ನಮ್ಮ ರಾಜ್ಯಭೋಗಗಳೆಲ್ಲವೂ ನಮ್ಮ ದುಃಖಕ್ಕೆ ಕಾರಣವಾಗಬಹುದಲ್ಲದೆ ಸುಖದಾಯಕವಾಗಲಾರವು. ಆದುದರಿಂದ ಮರಳಿ ನಾವು ವನವಾಸಕ್ಕೆ ತೆರಳಬೇಕಾದರೂ ಅಡ್ಡಿಯಿಲ್ಲ. ಭಿಕ್ಷೆ ಬೇಡಿ ಬಾಳುವುದೂ ಕಾಡಲ್ಲ. ಆದರೆ ಈ ಪುಣ್ಯಾತ್ಮರ ಮೇಲೆ ಬಾಣಗಳನ್ನು ಎಸೆಯುವುದು ನನ್ನಿಂದಾಗದು.

"ಎಲೈ ಶ್ರೀಕೃಷ್ಣನೇ! ನೀನು ಮಧುರಾಕ್ಷಸನನ್ನು ಕೊಂದೆ. ಬೇರೆ ಹಲವು ದುಷ್ಟರನ್ನು ಸಂಹರಿಸಿದೆ. ಆದರೆ ಆ ಪರಿಸ್ಥಿತಿಯೆ ಬೇರೆಯಿದ್ದಿತು. ಭೀಷ್ಮದ್ರೋಣರಂತಹ ಸಜ್ಜನರಾದ ಸ್ವಕೀಯರನ್ನು ಕೊಲ್ಲುವ ಪ್ರಸಂಗವು ನಿನಗೆ ಎಂದೂ ಒದಗಿಲ್ಲ. ಯಾರೊಡನೆ ಹಗೆತನ ಮಾಡುವುದಕ್ಕಿಂತ ಕಾಡುಸೇರುವುದು ಮಿಗಿಲೊ ಅಂತಹ ಪೂಜ್ಯರು ಇವರು. ಆದುದರಿಂದ ಈ ಹೊತ್ತಿನಲ್ಲಿ ನಾನು ಏನು ಮಾಡಬೇಕೆಂಬುದೆ ತಿಳಿಯದಾಗಿದೆ. "ನಾನು ಕಾದಲೆ? ಕಾಡಿಗೆ ಹೋಗಲೆ? ಇದರಲ್ಲಿ ಯಾವುದು ಲೇಸು, ಎಂಬುದನ್ನು ನನಗೆ ತಿಳಿಸಿ ಹೇಳು.

"ಈ ಕಾಳಗದಲ್ಲಿ ನಾವೇ ಗೆಲ್ಲುವೆವೆಂದು ಹೇಗೆ ಹೇಳುವುದು? ನಾವು ಗೆಲ್ಲಬಹುದೊ ಅಥವಾ ಅವರು ಗೆಲ್ಲಬಹುದೋ ಎಂಬುದು ಸಂಶಯಾಸ್ಪದವೆ ಆಗಿದೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ನಾವು ನಮ್ಮ ಗುರು–

**ನ ಚೈತದ್ವಿದ್ಮಃ ಕತರನ್ನೋ ಗರೀಯೋ ಯದ್ವಾ ಜಯೇಮ ಯದಿ ವಾ ನೋ ಜಯೇಯುಃ |**
**ಯಾನೇವ ಹತ್ವಾ ನ ಜಿಜೀವಿಷಾಮಸ್ತೇಽವಸ್ಥಿತಾಃ ಪ್ರಮುಖೇ ಧಾರ್ತರಾಷ್ಟ್ರಾಃ ||೬||**

**ಕಾರ್ಪಣ್ಯದೋಷೋಪಹತಸ್ವಭಾವಃ ಪೃಚ್ಛಾಮಿ ತ್ವಾಂ ಧರ್ಮಸಂಮೂಢಚೇತಾಃ |**
**ಯಚ್ಛ್ರೇಯಃ ಸ್ಯಾನ್ನಿಶ್ಚಿತಂ ಬ್ರೂಹಿ ತನ್ಮೇ ಶಿಷ್ಯಸ್ತೇಽಹಂ ಶಾಧಿ ಮಾಂ ತ್ವಾಂ ಪ್ರಪನ್ನಮ್ ||೭||**

**ನಹಿ ಪ್ರಪಶ್ಯಾಮಿ ಮಮಾಪನುದ್ಯಾದ್ಯಚ್ಛೋಕಮುಚ್ಛೋಷಣಮಿಂದ್ರಿಯಾಣಾಮ್ |**
**ಅವಾಪ್ಯ ಭೂಮಾವಸಪತ್ನಮೃದ್ಧಂ ರಾಜ್ಯಂ ಸುರಾಣಾಮಪಿ ಚಾಧಿಪತ್ಯಮ್ ||೮||**

---

ಅನ್ವಯ:— ನಃ ಕತರತ್ ಗರೀಯಃ? ಯತ್ ವಾ (ವಯಂ) ಜಯೇಮ, ಯದಿ ವಾ (ತೇ) ನಃ ಜಯೇಯುಃ ಏತತ್ ಅಪಿ ಚ ನ ವಿದ್ಮಃ| ಯಾನ್ ಹತ್ವಾ ನ ಜಿಜೀವಿಷಾಮಃ, ತೇ ಏವ ಧಾರ್ತರಾಷ್ಟ್ರಾಃ ಪ್ರಮುಖೇ ಅವಸ್ಥಿತಾಃ ||೬|| ಕಾರ್ಪಣ್ಯದೋಷೋಪಹತಸ್ವಭಾವಃ ಧರ್ಮಸಂಮೂಢಚೇತಾಃ (ಅಹಂ) ತ್ವಾಂ ಪ್ರಚ್ಛಾಮಿ| ಯತ್ ನಿಶ್ಚಿತಂ ಶ್ರೇಯಃ ಸ್ಯಾತ್, ತತ್ ಮೇ ಬ್ರೂಹಿ| ಅಹಂ ತೇ ಶಿಷ್ಯಃ| ತ್ವಾಂ ಪ್ರಪನ್ನಂ ಮಾಂ ಶಾಧಿ ||೭|| ಹಿ ಭೂಮೌ ಅಸಪತ್ನಂ ಋದ್ಧಂ ರಾಜ್ಯಂ, ಸುರಾಣಾಂ ಚ ಅಪಿ ಆಧಿಪತ್ಯಂ ಅವಾಪ್ಯ, ಯತ್ ಮಮ ಇಂದ್ರಿಯಾಣಾಂ ಉಚ್ಛೋಷಣಂ ಶೋಕಂ ಅಪನುದ್ಯಾತ್ ತತ್ ನ ಪಶ್ಯಾಮಿ ||೮||

**ಇವೆರಡರಲ್ಲಿ ಆವುದು ನಮಗೆ ಹೆಚ್ಚು ಹಿತಕರ? ನಾವು ಗೆಲ್ಲಬಹುದೆ, ಅಥವಾ ಅವರು ನಮ್ಮನ್ನೇ ಗೆಲ್ಲುವರೆ? ಇದು ತಿಳಿಯದಾಗಿದೆ. ಯಾರನ್ನು ಕೊಂದು ನಾವು ಬದುಕಬೇಕೆಂದಿರುವೆವೊ ಆ ಧೃತ-ರಾಷ್ಟ್ರನ ಬಳಗವೆಲ್ಲವೂ ನಮ್ಮೆದುರು (ಕಾಳಗಕ್ಕಾಗಿ) ನಿಂತಿದ್ದಾರೆ. ||೬|| ದೈನ್ಯದೋಷದಿಂದ ನನ್ನ ಸ್ವಾಭಾವಿಕವಾದ ವೀರವೃತ್ತಿಯು ನಷ್ಟವಾಗಿದೆ. ಆದುದರಿಂದ ಯಾವುದು ಯುಕ್ತವಾದುದು ಎಂಬುದನ್ನು ತಿಳಿಯದವನಾಗಿ ಕಂಗೆಟ್ಟಿದ್ದೇನೆ. ಆದಕಾರಣ ನಾನು ನಿನ್ನನ್ನು ಕೇಳುತ್ತಿದ್ದೇನೆ ಯಾವುದು ನಿಶ್ಚಿತವಾಗಿ ನಮಗೆ ಶ್ರೇಯಸ್ಕರವೊ ಅದನ್ನೆ ನನಗೆ ಹೇಳು. ನಾನು ನಿನ್ನ ಶಿಷ್ಯನು. ನಿನಗೆ ಮೊರೆಹೊಕ್ಕ ನನ್ನನ್ನು ಕಾಪಾಡು ||೭|| ಏಕೆಂದರೆ ಈ ಲೋಕದ ನಿಷ್ಕಂಟಕವಾದ ರಾಜವೈಭವವು ದೊರೆತರೂ ಮತ್ತು ದೇವತೆ-ಗಳ ಅರಸುತನವು ಬಂದರೂ ನನ್ನ ಇಂದ್ರಿಯಗಳನ್ನು ಬೆಂದು ಬೇಗುದಿಗೊಳಿಸುತ್ತಿರುವ ಈ ಶೋಕವನ್ನು ದೂರಮಾಡುವ ಹಂಚಿಕೆಯು ನನಗೆ ಕಾಣದಾಗಿದೆ. ||೮||**

---

ಹಿರಿಯರನ್ನು ಕೊಲ್ಲಲು ಸಿದ್ಧರಾಗುವುದು ತೀರ ಅನುಚಿತ ವಾಗಿದೆ.

"ಗುರುಹಿರಿಯರನ್ನು ಸಂಹರಿಸಿ, ಒಂದು ವೇಳೆ ಗೆದ್ದರೂ, ಆ ಗೆಲುವು ಸೋಲು ಒದಗಿದುದಕ್ಕಿಂತಲೂ ಹೆಚ್ಚು ದುಃಖಕಾರಕವಾಗಿದೆ. ಏಕೆಂದರೆ ಆ ಮಹಾನುಭಾವರ ನೆತ್ತರದಿಂದ ನೆನೆದ ಆ ರಾಜ್ಯಭೋಗಾದಿಗಳನ್ನು ಅನು-ಭವಿಸಬೇಕಾದಾಗ ಆ ಪೂಜ್ಯರ ನೆನಪು ಆಗದಿರುವುದು ಸಾಧ್ಯವಿಲ್ಲ. ಮತ್ತು ಆ ನೆನಪುಗಳಿಂದ ನಮ್ಮ ಅಂತಃಕರಣ ದಲ್ಲಿ ಉಂಟಾಗುವ ದುಃಖದ ವೇದನೆಗಳು ಸೋಲಿನ ದುಃಖಕ್ಕಿಂತ ಎಷ್ಟೋಪಟ್ಟು ಹೆಚ್ಚು ಅಸಹ್ಯವಾಗುವುವು.

" ಈ ಬಗೆಯಾದ ಮನಸಿನ ಹೊಯ್ದಾಟದಿಂದ ನನ್ನ-ಲ್ಲಿಯ ಸ್ವಾಭಾವಿಕವಾದ ವೀರವೃತ್ತಿಯು ನಷ್ಟವಾಗಿದೆ. ದೈನ್ಯವು ನನ್ನನ್ನು ಆವರಿಸಿದೆ. ಮುಂದೇನು ಮಾಡ-ಬೇಕೆಂಬುದು ತಿಳಿಯದಾಗಿದೆ. ಯಾವುದು ತಕ್ಕುದು, ಯಾವುದು ತಗದು ಎಂಬುದನ್ನು ನಿರ್ಧರಿಸುವ ಶಕ್ತಿಯೂ ನನ್ನಲ್ಲಿ ಈಗ ಉಳಿದಿಲ್ಲ. ಈಗ ಯಾವುದು ನನ್ನ ಧರ್ಮವೆಂಬುದನ್ನು ಅರಿತುಕೊಳ್ಳುವ ತುಂಬ ಹಂಬಲವು ನನಗಿದೆ. ಎಲೈ ಶ್ರೀಕೃಷ್ಣನೆ ನಾನು ನಿನಗೆ ಶರಣು ಬಂದಿದ್ದೇನೆ. ನೀನೆ ನನಗೆ ಸರಿಯಾಗಿ ತಿಳಿಹೇಳಿ ಒಳ್ದಾ-ರಿಗೆ ಹಚ್ಚು. ನನ್ನ ಮೈಯ ನರನರಗಳೆಲ್ಲ ಧಗದ್ಧಗೆನೆ ಉರಿಯುತ್ತಲಿವೆ. ನಿಷ್ಕಂಟಕ ಪೃಥಿವೀವಲ್ಲಭನನ್ನಾಗಿ ಮಾಡಿದರೆ ಅಥವಾ ದೇವೇಂದ್ರನ ಪದವಿಯನ್ನು ದಯ-ಪಾಲಿಸಿದರೂ ಕೂಡ ನನ್ನ ಮನಸಿನ ಈ ಬೇಗುದಿಯು ದೂರವಾಗುವಂತೆ ಇಲ್ಲ. ಆದುದರಿಂದ ನಾನು ನಿನ್ನನ್ನು ಬೇಡಿಕೊಳ್ಳುತ್ತಲಿದ್ದೇನೆ. ನನಗೆ ತಿಳಿಬೆಳಕನ್ನಿತ್ತು ಈ ಕಗ್ಗತ್ತಲೆಯೊಳಗಿಂದ ಪಾರುಮಾಡು."

## (೩) ಕಾಳಗದಿಂದ ಹಿಂದೆಗೆವ ಅರ್ಜುನನ ನಿಶ್ಚಯ.

**ಸಂಜಯ ಉವಾಚ— ಏವಮುಕ್ತ್ವಾ ಹೃಷೀಕೇಶಂ ಗುಡಾಕೇಶಃ ಪರಂತಪಃ ।**
**ನ ಯೋತ್ಸ್ಯ ಇತಿ ಗೋವಿಂದಮುಕ್ತ್ವಾ ತೂಷ್ಣೀಂ ಬಭೂವ ಹ ॥ ೯ ॥**
**ತಮುವಾಚ ಹೃಷೀಕೇಶಃ ಪ್ರಹಸನ್ನಿವ ಭಾರತ ।**
**ಸೇನಯೋರುಭಯೋರ್ಮಧ್ಯೇ ವಿಷೀದಂತಮಿದಂ ವಚಃ ॥ ೧೦ ॥**

---

**ಅನ್ವಯ :—** ಸಂಜಯಃ ಉವಾಚ— ಪರಂತಪಃ ಗುಡಾಕೇಶಃ ಹೃಷೀಕೇಶಂ ಏವಂ ಉಕ್ತ್ವಾ 'ನ ಯೋತ್ಸ್ಯೇ' ಇತಿ ಉಕ್ತ್ವಾ ತೂಷ್ಣೀಂ ಬಭೂವ ಹ ॥ ೯ ॥ ಹೇ ಭಾರತ! ಉಭಯೋಃ ಸೇನಯೋಃ ಮಧ್ಯೇ ವಿಷೀದಂತಂ( ಅರ್ಜುನಂ ) ಹೃಷೀಕೇಶಃ ಪ್ರಹಸನ್ ಇವ ಇದಂ ವಚಃ ಉವಾಚ ॥ ೧೦ ॥

**ಸಂಜಯನೆಂದನು:— ಶತ್ರುಗಳಿಗೆ ತಾಪದಾಯಕನಾದ ಮತ್ತು ನಿದ್ರೆಯನ್ನು ಗೆದ್ದ (ಅರ್ಜುನನು) ಸಂಯಮಿಯಾದ ಶ್ರೀಕೃಷ್ಣನನ್ನು ಕುರಿತು ಇಂತು ನುಡಿದು, ಬಳಿಕ 'ನಾನು ಕಾದಲಾರೆನು' ಎಂದು ಸುಮ್ಮನೆ ಕುಳಿತನು. ॥ ೯ ॥ ಎಲೈ ಧೃತರಾಷ್ಟ್ರನೇ! ಎರಡೂ ದಂಡುಗಳ ನಡುವೆ ಖಿನ್ನನಾಗಿ ಕುಳಿತ (ಅರ್ಜುನನಿಗೆ) ಸಂಯಮಿಯಾದ ಶ್ರೀಕೃಷ್ಣನು ಮುಗುಳುನಗೆ ನಕ್ಕು ಇಂತು ಒರೆದನು. ॥ ೧೦ ॥**

---

(೯–೧೦) [ 'ಗುಡಾಕೇಶ' ಮತ್ತು 'ಹೃಷೀಕೇಶ' ಈ ಶಬ್ದಗಳ ಮೇಲಣ ಟಿಪ್ಪಣಿಗಳನ್ನು ಗೀತೆಯ ಮೊದಲನೆಯ ಅಧ್ಯಾಯದ ೨೪ ನೆಯ ಶ್ಲೋಕದ ಟೀಕೆಯಲ್ಲಿ ನೋಡಬೇಕು. ] ಅರ್ಜುನನು ಹೀಗೆ 'ಕಾದಲಾರೆನು,' ಎಂದು ಕೈಕಟ್ಟಿಕೊಂಡು ಕುಳಿತುದು ಆತನ ಜೀವನದಲ್ಲಿ ಇದೇ ಮೊದಲು! ಹಿಂದೆ ಎಂದೂ ಒದಗದ ಸಂಗತಿಯು ಇದೀಗ ಸಂಭವಿಸಿದುದನ್ನು ಕಂಡು ಶ್ರೀಕೃಷ್ಣನೂ ಸೋಜಿಗಗೊಂಡನು. ಏಕೆಂದರೆ ಅರ್ಜುನನಂತಹ ಲೋಕೈಕವೀರನಿಗೆ ಈ ಬಗೆಯಾದ ದೈನ್ಯಸ್ಥಿತಿಯು ಪ್ರಾಪ್ತವಾಗುವುದೆಂದು ಹೇಳಿದ್ದರೆ ಯಾರಾದರೂ ನಂಬಬಹುದಾಗಿದ್ದಿತೆ? ಸೂರ್ಯನು ಕತ್ತಲೆಯನ್ನು ಹರಡುವನು, ಮೇರುಗಿರಿಯು ಮಳೆಯಲ್ಲಿ ಅಡಗುವುದು; ಮಹಾಸಾಗರವು ಬರಿದಾಗುವುದು, ಎಂದು ಮುಂತಾಗಿ ಗಳುಹಿದರೆ ಯಾರಾಗಲಿ, ಅದು ನೀಲಿ ಕೆಟ್ಟಸುದ್ದಿಯಂದೇ ಹೇಳಬಹುದು. ಆದರೆ ಅಸಂಭವವೆನಿಸಿದುದೆ ಇಂದು ಸಂಭವಿಸಿತು. ಇದನ್ನು ನೋಡಿ ಶ್ರೀಕೃಷ್ಣನು ಮುಗುಳುನಗೆ ಬೀರಿ, ಅರ್ಜುನನ ಅವಸ್ಥೆಯ ಮೂಲಕಾರಣವನ್ನು ತನ್ನಲ್ಲಿಯೆ ಸ್ವಲ್ಪ ವಿಚಾರಿಸಿದನು. ಅರ್ಜುನನಿಗೆ ಬಂದ ಈ ಸಂದೇಹದ ಬೇರುಗಳು ಎಷ್ಟು ಆಳವಾಗಿ ಆತನ ಎದೆಯಲ್ಲಿ ಊರಿಕೊಂಡಿವೆಯೆಂಬುದನ್ನು ಅರಿತುಕೊಂಡನು. ಸಾಮ್ರಾಜ್ಯವಾದಿಗಳಾದ ಶತ್ರುಗಳು, ಸ್ವರಾಜ್ಯಕ್ಕಾಗಿ ಹೋರಾಡಲು ಅಣಿಯಾದ ಈ ನರವೀರನನ್ನು ನರಗುಂದಿದವನನ್ನಾಗಿ ಮಾಡಲು ಹೇಗೆಹೊಂಚು ಹಾಕಿರುವರೆಂಬುದನ್ನು ಊಹಿಸಿದನು. ಸಂಜಯನ ಮುಖಾಂತರವಾಗಿ ಮಾಡಿದ ಮೇಲ್ತೋರಿಕೆಯ ಸವಿಮಾತಿನ ತತ್ತ್ವೋಪದೇಶದ ದುಷ್ಪರಿಣಾಮವಿದು, ಎಂದು ತಿಳಿದುಕೊಂಡನು. ಹಗೆಗಳು ಬುದ್ಧಿಭೇದ ಮಾಡಲು ನಡೆಸುವ ತತ್ವಪ್ರಚಾರಕ್ಕೆ ಈತನು ಮೋಸಹೋದುದನ್ನು ಅರಿತುಕೊಂಡನು. ಅರ್ಜುನನು ಶತ್ರುಗಳ ಅಪಪ್ರಚಾರದ ಸೆಳವಿನಲ್ಲಿ ಸಿಕ್ಕು ಸಲ್ಲದ ವಿಚಾರಗಳ ತಿರುಗಣಿಯಲ್ಲಿ ಬಿದ್ದು ಭ್ರಮಿಷ್ಟನಾಗಿರುನೆಂದು ನಿರ್ಧರಿಸಿದನು. ಈತನನ್ನು ಈ ಅವಿಚಾರದ ಚಕ್ರದಿಂದ ಹೊರೆದೆಗೆಯಬೇಕಾದರೆ ತತ್ವಜ್ಞಾನದ ಉಪದೇಶವೊಂದೇ ಮಿಗಿಲಾದ ಉಪಾಯವೆಂದು ಗೊತ್ತುಮಾಡಿ ಶ್ರೀಕೃಷ್ಣನು ಲೋಕೋದ್ಧಾರಕವಾದ ಈ ವಿಚಾರಗಳನ್ನು ತಿಳಿಸಿ ಹೇಳುವುದಕ್ಕಾರಂಭಿಸಿದನು.

### ಅಧ್ಯಾಯದ ಹೆಸರು "ಸಾಂಖ್ಯಯೋಗ"

(೧೧) ಈ ಅಧ್ಯಾಯದ ಹೆಸರು 'ಸಾಂಖ್ಯಯೋಗ' ವೆಂದಿದ್ದರೂ ಇದರ ಮೊದಲಿನ ಹತ್ತು ಶ್ಲೋಕಗಳಲ್ಲಿ ತತ್ವಜ್ಞಾನವು ಏನೂ ಇಲ್ಲ. ಮತ್ತು ಸಾಂಖ್ಯಯೋಗದ ವಿವೇಚನವು ಕೂಡ ಮುಂದೆ ೩೯ ನೆಯ ಶ್ಲೋಕದ ವರೆಗೇ ಇದೆ.

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ**
**-೨ । ( ೨. ೩೯. )**

# ಸಾಂಖ್ಯಯೋಗ.

## (೪) ಪಂಡಿತರ ಸಮುಸ್ಥಿತಿ.

**ಶ್ರೀಭಗವಾನುವಾಚ— ಅಶೋಚ್ಯಾನನ್ವಶೋಚಸ್ತ್ವಂ ಪ್ರಜ್ಞಾವಾದಾಂಶ್ಚ ಭಾಷಸೇ |**
**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ || ೧೧ ||**

---

**ಅನ್ವಯ :—** ಶ್ರೀಭಗವಾನ್ ಉವಾಚ— ತ್ವಂ ಅಶೋಚ್ಯಾನ್ ಅನ್ವಶೋಚಃ| ಪ್ರಜ್ಞಾವಾದಾನ್ ಚ ಭಾಷಸೇ| ಪಂಡಿತಾಃ ಗತಾಸೂನ್ ಅಗತಾಸೂನ್ ಚ ನ ಅನುಶೋಚಂತಿ. || ೧೧ ||

**ಶ್ರೀಕೃಷ್ಣ ಎಂದನು— ಯಾರ ಶೋಕಮಾಡಬಾರದೊ ಅವರ ಬಗೆಗೆ ನೀನು ಶೋಕಮಾಡುವೆ. ಮತ್ತು ಬಲ್ಲಿದರಂತೆ ಬಢಾಯಿ ಕೊಚ್ಚುತ್ತಿರುವೆ. ಆದರೆ ತಿಳಿದವರು ಸತ್ತವರ ಸಲುವಾಗಿಯಾಗಲಿ ಬದುಕಿದವರ ಸಲುವಾಗಿಯಾಗಲಿ ಎಂದೂ ದುಃಖಿಸುವುದಿಲ್ಲ. || ೧೧ ||**

**ಭಾವಾರ್ಥ—** ಯಾರ ಸಲುವಾಗಿ ಮಿಡುಕುವ ಕಾರಣವೆ ಇಲ್ಲವೊ ಅವರ ಬಗೆಗೆ ದುಃಖಿಸುತ್ತ ಕೂಡುವುದು ಯಾರಿಗೂ ತಕ್ಕದ್ದಲ್ಲ. ಹಿಂದುಮುಂದಿನ ಸಂಬಂಧವನ್ನು ಅರಿಯದೆ ಬರಿ ವೇದಾಂತದ ಗೊಡ್ಡು ಹರಟೆ ಕುಟ್ಟುವುದು, ಮೇಲ್ತೋರಿಕೆಯ ಪಾಂಡಿತ್ಯ ಪ್ರದರ್ಶನ ಮಾಡುವುದು ಸರಿಯಲ್ಲ. ತಿಳಿದವರು ಅಳಿದ ಬಗೆಗೆ ಅಥವಾ ಉಳಿದ ಬಗೆಗೆ ಎಂದೂ ಅಳಲುವುದಿಲ್ಲ.

---

'ಇಲ್ಲಿಯ ವರೆಗೆ ನಿನಗೆ ಸಾಂಖ್ಯಜ್ಞಾನವನ್ನು ಹೇಳಿದೆನು. ಇನ್ನು ಯೋಗದ ತತ್ವಜ್ಞಾನವನ್ನು ಕೇಳು.' ಎಂದು ಹೇಳಿದ್ದಾಗಿದೆ. ಆದರೆ ಸಾಂಖ್ಯ ಮತ್ತು ಯೋಗಗಳ ತತ್ವಜ್ಞಾನದಲ್ಲಿ ವಿಶೇಷ ವ್ಯತ್ಯಾಸವಿಲ್ಲ. ಎರಡರಲ್ಲಿಯೂ ತುಂಬ ಸಾಮ್ಯವಿದೆ. ಆದುದರಿಂದ 'ಸಾಂಖ್ಯ'ವು 'ನಿರೀಶ್ವರ ಯೋಗ'ವೆಂದೂ, 'ಯೋಗ'ವು 'ಸೇಶ್ವರ ಸಾಂಖ್ಯ'ವೆಂದೂ ಹೇಳುವ ವಾಡಿಕೆಯಿದೆ. ಭಗವದ್ಗೀತೆಯಲ್ಲಿಯೂ ಈ ಮಾತಿಗೆ ಪುಷ್ಟಿ ದೊರೆಯುತ್ತದೆ.

**ಸಾಂಖ್ಯ ಮತ್ತು ಯೋಗ**

**ಸಾಂಖ್ಯಯೋಗೌ ಪೃಥಗ್ಬಾಲಾಃ ಪ್ರವದಂತಿ ನ ಪಂಡಿತಾಃ |**
**ಏಕಮಪ್ಯಾಸ್ಥಿತಃ ಸಮ್ಯಗುಭಯೋರ್ವಿಂದತೇ ಫಲಮ್ || ೪ ||**
**ಯತ್ಸಾಂಖ್ಯೈಃ ಪ್ರಾಪ್ಯತೇ ಸ್ಥಾನಂ ತದ್ಯೋಗೈರಪಿ ಗಮ್ಯತೇ |**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ ಪಶ್ಯತಿ || ೫ ||**

ಗೀತಾ ಅಧ್ಯಾಯ ೫.

"ಸಾಂಖ್ಯ ಮತ್ತು ಯೋಗಗಳು ಬೇರೆ ಬೇರೆಯೆಂದು ತಿಳಿಗೇಡಿಗಳು ನಂಬುತ್ತಾರೆ. ಇವುಗಳಲ್ಲಿ ಯಾವುದೊಂದನ್ನು ಅನುಸರಿಸಿದರೆ, ಇನ್ನೊಂದನ್ನು ಅನುಷ್ಠಿಸಿದ ಫಲವು ದೊರೆಯುವುದು. ಸಾಂಖ್ಯರು ಹೊಂದುವ ಸ್ಥಿತಿಯನ್ನೇ ಯೋಗಿಗಳೂ ಪಡೆಯುವರು. ಆದುದರಿಂದ ಸಾಂಖ್ಯ ಮತ್ತು ಯೋಗಗಳು ಒಂದೇಯೆಂದು ಮನಗಂಡವರೇ ನಿಜವಾದ ತಿಳಿದವರು."

ಈ ದೃಷ್ಟಿಯಿಂದ ಈ ಅಧ್ಯಾಯದಲ್ಲಿ ಸಾಂಖ್ಯ ಮತ್ತು ಯೋಗಗಳು ಒಂದೆಡೆಗೇ ವಿವರಿಸಲ್ಪಟ್ಟುದರಲ್ಲಿ ತಪ್ಪಿಲ್ಲ. ಅಲ್ಲದೆ 'ಸಾಂಖ್ಯಯೋಗ'ವೆಂದು ಈ ಅಧ್ಯಾಯಕ್ಕೆ ಇಟ್ಟ ಹೆಸರೂ ಉಚಿತವಾಗಿದ್ದು ಅವೆರಡೂ ತಾತ್ವಿಕ ದೃಷ್ಟಿಯಿಂದ ಒಂದೇಯಾಗಿವೆಯೆಂದು ವ್ಯಕ್ತವಾಗುತ್ತದೆ.

**'ಸಾಂಖ್ಯ' ಶಬ್ದದ ಅರ್ಥ.**

'ಸಂಖ್ಯಾ' ಶಬ್ದದಿಂದ ಸಾಂಖ್ಯವಾಗಿದೆ. 'ಸಾಂಖ್ಯ' ಶಬ್ದಕ್ಕೆ ಇರುವ ಅರ್ಥಗಳಿವು :

**ಚರ್ಚಾ ಸಂಖ್ಯಾ ವಿಚಾರಣಾ |** —ಅಮರಕೋಶಃ
**ಸಂಖ್ಯೈಕಾದೌ ವಿಚಾರೇ ಚ |** —ಹೇಮಕೋಶಃ
**ಸಂಖ್ಯಾ ಸಮ್ಯಗಾತ್ಮ ಬುದ್ಧಿಃ |** —ಮಧುಸೂದನ ಸರಸ್ವತೀ. ಗೀ. ಟೀಕಾ ೨,೩೯,೪.
**ಸಮ್ಯಖ್ಯಾನಂ ಸಂಖ್ಯಾಕ್ರಮವೈಶಿಷ್ಟ್ಯೇನ ಜ್ಞಾನಮ್ |** —ಶಬ್ದೇಂದು ಶೇಖರಃ, ೧೪೫.
**ಪದಾರ್ಥಾಃ ಸಂಖ್ಯಾಯಂತೇ ವ್ಯುತ್ಪಾದ್ಯಂತೇ ಅಸ್ಮಿನ್ ಇತಿ ಸಾಂಖ್ಯಂ |** —ಮಧುಸೂದನ. ಟೀ. ಗೀ. ೧೪,೧೯.

'ಸಂಖ್ಯಾ'ಎಂದರೆ ವಿಚಾರಿಸು, ವಿವೇಚಿಸು, ಚರ್ಚಿಸು; ಆತ್ಮವಿಷಯಕ ನಿಶ್ಚಿತ ಜ್ಞಾನ; ಸಾಧಾರವಾಗಿ ತರ್ಕಶುದ್ಧವಾಗಿ ಮಾಡಿದ ಪ್ರತಿಪಾದನಕ್ಕೆ ಸಾಂಖ್ಯವೆಂದು ಹೇಳುವುದುಂಟು. ಈ ಲೋಕದಲ್ಲಿರುವ ಮೂಲ ವಸ್ತು (ತತ್ವ)ಗಳ ಸಂಖ್ಯೆಯನ್ನು ನಿರ್ಧರಿಸಿ ಅವುಗಳ ಕೂಲಂಕಷವಾದ ವಿಚಾರಮಾಡುವ ಶಾಸ್ತ್ರಕ್ಕೆ ಸಾಂಖ್ಯವೆಂಬ ಹೆಸರು. ಇದನ್ನು ಕುರಿತು ಮಹಾಭಾರತದಲ್ಲಿ ಹೀಗೆ ಹೇಳಿದೆ :

**ದೋಷಾಣಾಂ ಚ ಗುಣಾನಾಂ ಚ ಪ್ರಮಾಣಂ ಪ್ರವಿಭಾಗತಃ ।**
**ಕಂಚಿದರ್ಥಮಭಿಪ್ರೇತ್ಯ ಸಾ ಸಂಖ್ಯೇತ್ಯುಪಧಾರ್ಯತಾಮ್ ॥** ಶಾಂತಿ ಪ. ೪೨-೮೨

"ಯಾವುದೇ ಸಿದ್ಧಾಂತದೊಳಗಿನ ಗುಣದೋಷಗಳ ಪ್ರಮಾಣವನ್ನು ನಿರ್ಧರಿಸುವ ಶಾಸ್ತ್ರಕ್ಕೆ ಸಂಖ್ಯೆಯೆಂಬರು" ಹೀಗೆ ಸಂಖ್ಯಾ ನಿಶ್ಚಯಮಾಡುವ ಶಾಸ್ತ್ರಕ್ಕೆ 'ಸಾಂಖ್ಯ-ಶಾಸ್ತ್ರ'ವೆಂದು ಹೆಸರು. ಸಾಂಖ್ಯಶಾಸ್ತ್ರದಲ್ಲಿ ಈ ಪ್ರಪಂಚದೊಳಗಿನ ಜಡ ಮತ್ತು ಚೈತನ್ಯಗಳ (ಪದಾರ್ಥಗಳ) ಸಂಖ್ಯೆಯನ್ನು ಗೊತ್ತುಪಡಿಸಿದ್ದಾಗಿದೆ. ಮತ್ತು ಜಡ ವಸ್ತುವಿನ ಗುಣಧರ್ಮಗಳಾವುವು, ಚೇತನದ ಲಕ್ಷಣಗಳೇನು ಎಂಬುದನ್ನು ನಿಶ್ಚಯಿಸಿದ್ದಾಗಿದೆ. ಹೀಗೆ ಸಂಖ್ಯಾನಿಶ್ಚಯಮಾಡುವ ಈ ಶಾಸ್ತ್ರವು ಸಾಂಖ್ಯವೆಂದು ಹೆಸರಾಗಿದೆ.

ಶ್ರೀಕೃಷ್ಣನು ಅರ್ಜುನನ ಮೋಹವನ್ನು ಹೋಗಲಾಡಿಸಲು ಮಾಡಿದ ಉಪದೇಶದಲ್ಲಿ ಮೊತ್ತಮೊದಲು ಸಾಂಖ್ಯ ಶಾಸ್ತ್ರವನ್ನೇ ಉಪಯೋಗಿಸಿಕೊಂಡಿದ್ದಾನೆ. ಇದರಿಂದ ಈ ಶಾಸ್ತ್ರದ ಮಹತ್ವ ಮತ್ತು ಪ್ರಾಚೀನತೆಯು ವ್ಯಕ್ತವಾಗುತ್ತದೆ. ತಾನು ಯಾರು, ಪರಕೀಯರೆಂದು ಯಾರಿಗೆ ಹೇಳಬೇಕು, ಈ ವಿಷಯಕ್ಕಿರುವ ಅಜ್ಞಾನವನ್ನು ದೂರಪಡಿಸಲು ಸಾಂಖ್ಯಶಾಸ್ತ್ರದಷ್ಟು ಬೇರೆ ಯಾವುದೂ ಉಪಯುಕ್ತವಾಗಿಲ್ಲ. ಇದರಲ್ಲಿ ಎಲ್ಲ ಮೂಲ ತತ್ವಗಳ ಯಥಾರ್ಥವಾದ ವಿಮರ್ಶೆಯು ಬಂದಿದೆ. ಈ ಶಾಸ್ತ್ರವನ್ನು ತಿಳಿದ ಮಾನವನು ಮೋಹಕ್ಕೆ ಎಳ್ಳಷ್ಟೂ ಎಡೆಗೊಡಲಾರನು. ಆದುದರಿಂದಲೇ ಶ್ರೀಕೃಷ್ಣನು ಮೊದಲು ಸಾಂಖ್ಯಜ್ಞಾನವನ್ನು ಅರ್ಜುನನಿಗೆ ವಿವರಿಸಿ ಹೇಳಿದ್ದಾನೆ.

## ಎರಡು ಬಗೆಯ ಜನಗಳು

| | ಅಗತಾಸು ( ಜೀವಂತ ) | | ಗತಾಸು ( ಮೃತ ) |
|---|---|---|---|
| ಅರಸು | ಆತ್ಮಾ | ಮೊದಲ ತೊಟ್ಟಿ | ಆತ್ಮಾ |
| ಅರಸಿ | ಬುದ್ಧಿ | ಎರಡನೆಯ ತೊಟ್ಟಿ | ಬುದ್ಧಿ |
| ಮುಖ್ಯ ಮಂತ್ರಿ | ಸುಷುಪ್ತ ಮನಸು | | ಸುಷುಪ್ತ ಮನಸು |
| | | ಮೂರನೆಯ ತೊಟ್ಟಿ | |
| ಉಪಮಂತ್ರಿ | ಜಾಗೃತ ಮನಸು | ನಾಲ್ಕನೆಯ ತೊಟ್ಟಿ | ಜಾಗೃತ ಮನಸು |
| ರಕ್ಷಕ | ಪ್ರಾಣ | | ಪ್ರಾಣ |
| ಕಾರ್ಯವಾಹಕ | ಇಂದ್ರಿಯಗಳು | ಐದನೆಯ ತೊಟ್ಟಿ | ಇಂದ್ರಿಯಗಳು |
| ಕರ್ಮಸಾಧಕ | ಶರೀರ | ಆರನೆಯ ತೊಟ್ಟಿ | ಶರೀರ |
| ಕರ್ಮಸಾಧಕ | ಜಗತ್ | ಏಳನೆಯ ತೊಟ್ಟಿ | ಜಗತ್ತು |

## ಎರಡು ಬಗೆಯ ಜನಗಳು.

(೧) 'ಅ—ಗತಾಸು ;' ಮತ್ತು (೨) 'ಗತಾಸು' ಜೀವವು ಹೋಗದವರು, ಅ-ಗತಾಸುಗಳು ; ಜೀವ ಹೋದವರು, ಗತಾಸುಗಳು. ಇವರಿಗೆ ಒದುಕಿದವರು ಮತ್ತು ಬತ್ತಿದವರೆಂದು ಹೇಳುವುದುಂಟು. 'ಪಂಡಿತರು, ಬದುಕಿದವರ ಅಥವಾ ಸತ್ತವರ ಯಾರ ಬಗೆಗೂ ಶೋಕಿಸುವುದಿಲ್ಲ.' ಎಂದು ತಿಳಿದವರ ಲಕ್ಷಣವನ್ನು ಹೇಳಲಾಗಿದೆ. ಸಾಂಖ್ಯತತ್ವವಿದರು ಈ ಶೋಕಮೋಹದಿಂದ ಪಾರಾಗುವರು.

ಆತ್ಮವಿದರಿಗೆ ಪಂಡಿತರೆಂದು ಹೆಸರು. ಗೀತೆಯಲ್ಲಿ 'ಮೃತ' ಮತ್ತು 'ಜೀವಂತ' ಎಂಬೀ ಒಗೆಯ ಪದಪ್ರಯೋಗವನ್ನು ಮಾಡದೆ 'ಗತಾಸು' ಮತ್ತು 'ಅಗತಾಸು' ಎಂಬ ವಿಶಿಷ್ಟ ಪದಗಳನ್ನು ಉಪಯೋಗಿಸಿದ್ದಾಗಿದೆ. ಇವು ಇಲ್ಲಿ ಪಾರಿಭಾಷಿಕ ಪದಗಳಾಗಿವೆ. ಈ ಶಬ್ದಗಳಿಂದ ವ್ಯಕ್ತವಾಗುವ ಅರ್ಥವು ಬೇರೆ ಪದಗಳಿಂದ ಹೊರಬರದು. ಇದನ್ನು ಮೇಲಿನ ಕೋಷ್ಟಕದಿಂದ ಮನಗಾಣಬಹುದು.

ಒಂದು ಅರಮನೆಯನ್ನು ಕಲ್ಪಿಸಿಕೊಳ್ಳಿರಿ. ಅದರಲ್ಲಿ ಮೊದಲ ಪಟ್ಟಶಾಲೆಯಲ್ಲಿ ಅರಸು ಅರಸಿಯರು ಕುಳಿತಿರುವರು. ಹಗಲು ಮತ್ತು ಇರುಳಿನಲ್ಲಿ ಕೆಲಸ ನಡಸುವ ಇಬ್ಬರು ಮುಖ್ಯ ಮಂತ್ರಿಗಳ ಕಾರ್ಯಾಲಯಗಳು ಎರಡನೆಯ ಮತ್ತು ಮೂರನೆಯ ತೊಟ್ಟಿಯಲ್ಲಿವೆ. ನಾಲ್ಕನೆಯದರಲ್ಲಿ ಮಹಾರಾಜರ ಮೈಗಾವಲಿನ ಪ್ರಾಣಗಳ ಸ್ಥಾನವಿದೆ. ಇಲ್ಲಿ ಹತ್ತು ಒಗೆಯ ಪ್ರಾಣಗಳಿವೆ. ಅವು ಮುಖ್ಯಪ್ರಾಣನ ಆಜ್ಞೆಯಂತೆ ನಡೆದುಕೊಳ್ಳುತ್ತವೆ ಒಡಲ್ಲೆಲ್ಲ ಸುತ್ತಾಡಿ ಒಗೆಬಗೆಯ ಕೆಲಸಗಳನ್ನು ಮಾಡುತ್ತವೆ. ಮೇಲೆ ಸೂಚಿಸಿದ ನಾಲ್ಕಲ್ಲದೆ ಇನ್ನೂ ಮೂರು ಒಳಮನೆಗಳಿವೆ. ಈ ಎಲ್ಲವುಗಳ ಮೇಲೂ ಆತ್ಮಾನೇ ಸರ್ವಾಧಿಕಾರಿ. ಆದರೆ ಆತನು ತನ್ನ ಕೆಲಸಗಳನ್ನು ತನ್ನ ಕೈಕೆಳಗಿನವರ ಮೂಲಕವಾಗಿಯೆ ಮಾಡಿಸಿಕೊಳ್ಳುವನು.

'ಅಸು' ಎಂದರೆ ಪ್ರಾಣ. ಈ ಅಡಕಿತದಲ್ಲಿ ಪ್ರಾಣವು ಬಾಗಿಲ ಕಾಪಿನ ಕೆಲಸಮಾಡುತ್ತದೆ. ಅಸುವು ಕೆಲಕಾಲ ದೇಹದಲ್ಲಿ ಇದ್ದು ಬಳಿಕ ಹೊರಗೆ ಹೋಗುತ್ತದೆ. ಅಸುವು ಮರಳಿ ಬಾರದಾಗುತ್ತಲೆ ದೇಹ ಮತ್ತು ಇಂದ್ರಿಯಗಳು ನಿಷ್ಕ್ರಿಯವಾಗುವುವು. ಏಕೆಂದರೆ ಪ್ರಾಣವೆ ಅವುಗಳಿಂದ ಕೆಲಸಗಳನ್ನು ಮಾಡಿಸಿಕೊಳ್ಳುತ್ತಿರುತ್ತದೆ. ಅಸುವು ಇರಲಿ ಅಥವಾ ಹೋಗಲಿ ಮೊದಲಿನ ಎರಡು ಚೌಕಿನೊಳಗಿನವರ ಮೇಲೆ ಅದರ ಪರಿಣಾಮವು ಏನೂ ಆಗುವುದಿಲ್ಲ. ಆದರೆ ಮೂರರಿಂದ ಏಳರವರೆಗಿನ ಚೌಕಿನೊಳಗಿನ ಕೆಲಸಗಾರರ ಮೇಲೆ ಅನಿಷ್ಟ ಪರಿಣಾಮವಾಗುತ್ತದೆ. ಪ್ರಾಣವು ಇರಲಿ ಅಥವಾ ಹೋಗಲಿ ಮೊದಲಿನವರಿಬ್ಬರ ಸ್ಥಿತಿಯಲ್ಲಿ ಏನೂ ವ್ಯತ್ಯಾಸಗಳಾಗುವುದಿಲ್ಲ.

( ಇದನ್ನು ೮೬ ನೆಯ ಪುಟದ ಆಕೃತಿಯಲ್ಲಿ ನೋಡಿಕೊಳ್ಳಿರಿ. )

ಅರಮನೆಯ ಕಾವಲುಗಾರರು ಒಂದು ದಿನ ಪೂರಟು ಹೋದರೆ ಅರಸು ಅರಸಿಯರು ಮುಖ್ಯಮಂತ್ರಿಯನ್ನು ಕರೆದುಕೊಂಡು ತಮ್ಮ ಇನ್ನೊಂದು ಒಗೆಯ ಏರ್ಪಾಟವನ್ನು ಮಾಡಿಕೊಳ್ಳಬಹುದು. ಆದರೆ ಅವರ ಅರಸುತನಕ್ಕೆ ಬಾಧೆ ಒರುವುದಿಲ್ಲ. ಅದೇ ಮೇರೆಗೆ ದೇಹದಲ್ಲೂ ಉಂಟು ಪ್ರಾಣಗಳು ಹೊರಟು ಹೋದ ಮೇಲೂ ಆತ್ಮಾ, ಬುದ್ಧಿ ಮತ್ತು ಮನಸುಗಳು ತಮ್ಮ ಪಾಡಿಗೆ ಅಚ್ಚಳಿಯದೆ ಉಳಿಯುವುವು. ಇದನ್ನು ಪಂಡಿತರಾದವರು ಮನಗಂಡಿರುತ್ತಾರೆ. ಆದುದರಿಂದ ಇದನ್ನು ತಿಳಿದವರು, **ಗತಾಸು** ( ಮೃತ ) ಅಥವಾ **ಅಗತಾಸು** ( ಜೀವಂತ ) ಸ್ಥಿತಿಗಳ ಒಗ್ಗೆ ಎಂದೂ ದುಃಖ ಅಥವಾ ವ್ಯಾಮೋಹವುಳ್ಳವರಾಗಿರುವುದಿಲ್ಲ ಏಕೆಂದರೆ ನಿತ್ಯವು ಯಾವುದು ನೈಮಿತ್ತಿಕವು ಯಾವುದು ಎಂಬುದನ್ನು ಅವರು ಚೆನ್ನಾಗಿ ಅರಿತಿರುತ್ತಾರೆ ಮತ್ತು ನೈಮಿತ್ತಿಕ( ಕ್ಷಣಿಕ)ವಾದುದು ಹೋದ ಬಗ್ಗೆ ಅವರು ಎಂದೂ ದುಃಖಿಸುವುದಿಲ್ಲ.

ಶರೀರ ಮತ್ತು ಇಂದ್ರಿಯಗಳು ನಾಶವಾದುದಕ್ಕೆ ಜ್ಞಾನಿಗಳು ಚಿಂತಿಸದಿರಲು ಕೆಲವು ಕಾರಣಗಳುಂಟು :

೧. ತಾವು ಇದಕ್ಕೂ ಮೊದಲು ಇಂತಹ ಶರೀರ ಧಾರಯಾಗಿದ್ದುದನ್ನೂ ಅದರ ಕೆಲಸವು ತೀರುತ್ತಲೆ ಅದನ್ನು ಬಿಟ್ಟುದನ್ನೂ ಜ್ಞಾನಿಗಳು ಅರಿತಿರುತ್ತಾರೆ. ಈ ಶರೀರವು ಹೋದರೆ ಇನ್ನೂ ಒಂದು ಶರೀರವು ದೊರೆಯುವುದೆಂಬುದನ್ನೂ ಅವರು ತಿಳಿದಿರುತ್ತಾರೆ.

೨ ಶೀರ್ಯತೇ ಎಂದರೆ ನಷ್ಟವಾಗುವುದೆಂದು ಯಾವುದಕ್ಕೆ ಶರೀರವೆಂಬ ಹೆಸರು ಒಂದಿದೆಯೊ ಅದು ನಾಶವಾದುದಕ್ಕಾಗಿ ಮಿಡುಕುವುದು ಮೂರ್ಖತನವಲ್ಲವೆ? ಹಾಗಾಗುವುದು ಹಾಗಾಯಿತು. ಅದಕ್ಕಾಗಿ ಶೋಕವೇಕೆ?

ಯೋ ಧ್ರುವಾಣಿ ಪರಿತ್ಯಜ್ಯ ಅಧ್ರುವಂ ಪರಿಷೇವತೇ,
ತಸ್ಯ ಧ್ರುವಾಣಿ ನಶ್ಯಂತಿ, ಅಧ್ರುವಂ ನಷ್ಟಮೇವ ಚ |

'ಯಾರು ನಿತ್ಯವಾದುದನ್ನು ಬಿಟ್ಟು. ಅನಿತ್ಯವಾದುದರ ಬೆಂಬತ್ತುವರೊ ಅವರು ನಿತ್ಯವಾದುದನ್ನೂ ಕಳೆದುಕೊಳ್ಳುವರು ; ಮತ್ತು ಅನಿತ್ಯವಂತೂ ಎಂದೊ ಅವರ ಕೈಬಿಡುವುದು.' ಅಸುವು ಅಮರ. ಸಾವಿಲ್ಲದ್ದು ಅದನ್ನು ಮರೆತು ನೈಮಿತ್ತಿಕ ಪ್ರಾಣಗಳನ್ನೆ ನೆರೆನಂಬಿ **ಕುಳಿತವರು,**

## (೫) ನಾವೆಲ್ಲರೂ ನಿತ್ಯರು.

**ನ ತ್ವೇವಾಹಂ ಜಾತು ನಾಽಽಸಂ ನ ತ್ವಂ ನೇಮೇ ಜನಾಧಿಪಾಃ ।**
**ನ ಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥ ೧೨ ॥**

---

**ಅನ್ವಯ:—** ಅಹಂ ಜಾತು ನ ಆಸಂ (ಇತಿ) ನ ತು ಏವ, ತ್ವಂ (ಜಾತು ನ ಆಸೀಃ ಇತಿ) ನ, ಇಮೇ ಜನಾಧಿಪಾಃ (ಜಾತು ನ ಆಸನ್ ಇತಿ) ನ, ಅತಃ ಪರಂ ಚ ಸರ್ವೇ ನ ಭವಿಷ್ಯಾಮಃ (ಇತಿ) ನ ಏವ ॥ ೧೨ ॥

ನಾನು (ಹಿಂದೆ) ಎಂದೂ ಇದ್ದಿಲ್ಲ (ಎಂತ) ಅಲ್ಲ; ನೀನು (ಎಂದೂ ಇದ್ದಿಲ್ಲ ಎಂತ) ಅಲ್ಲ; ಈ ಅರಸರು (ಎಂದೂ ಇದ್ದಿಲ್ಲ, ಎಂತ) ಅಲ್ಲ; ಮತ್ತು ಇನ್ನು ಮುಂದೆಯೂ ನಾವೆಲ್ಲ ಇರುವುದಿಲ್ಲ (ಎಂತ) ಅಲ್ಲ. **(ಅದುದರಿಂದ ನಾವು ಮೊದಲೂ ಇದ್ದೆವು; ಈಗಲೂ ಇದ್ದೇವೆ; ಮುಂದೆಯೂ ಇರತಕ್ಕವರೇ.) ॥ ೧೨ ॥**

**ಭಾವಾರ್ಥ:—** ಆತ್ಮಗಳು ನಿತ್ಯವಾಗಿವೆ. ಅವು ದೇಹಧಾರಣೆಗಿಂತ ಮೊದಲೂ ಇದ್ದುವು. ದೇಹಧರಿಸಿದಾಗಲೂ ಇರುವುವು. ದೇಹನಾಶದ ನಂತರವೂ ಇರುವುವು.

---

ಅವು ಹೋಗುತ್ತಲೆ ಅಳಲುವರು. ಎಲ್ಲವೂ ಹಾಳಾಯ್ತೆಂಬಂತೆ ಬಳಲುವರು! ಆದರಿಂದ ನಿತ್ಯವಾದ ಆತ್ಮಸ್ಥಿತಿಯ ಆನಂದಕ್ಕೂ ಎರವಾಗುವರು!

ಆದುದರಿಂದ ತಿಳಿದವರು ಪ್ರಾಣವು ಅಳಿಯಲಿ ಅಥವಾ ಉಳಿಯಲಿ ಇದಾವುದಕ್ಕೂ ಚಿಂತಿಸುವುದಿಲ್ಲ. ಎಂದು ಶ್ಲೋಕಾರ್ಧದಲ್ಲಿ ಶ್ರೀಕೃಷ್ಣನು ಅರ್ಜುನನ ಮೋಹವನ್ನು ಚೆದರಿಸುವ ಜ್ಞಾನವನ್ನು ಹೇಳಿಬಿಟ್ಟನು. ಆದರೆ ಇಷ್ಟು ಸೂತ್ರರೂಪದಿಂದ ಸಂಕ್ಷಿಪ್ತವಾಗಿ ಹೇಳಿದ ಮಾತು ಸಾಮಾನ್ಯರ ತಲೆಯಲ್ಲಿ ಒಮ್ಮೆಲೆ ಬೆಳಕನ್ನೀಯುವುದು ಸಾಧ್ಯವಿಲ್ಲ. ಆದುದರಿಂದಲೆ ಇದೇ ವಿಚಾರವನ್ನು ಇನ್ನೂ ವಿಸ್ತಾರದಿಂದ ಮುಂದೆ ಮತ್ತೆ ವಿವರಿಸಲಾಗಿದೆ.

ಅರ್ಜುನನು ತಿಳಿದವರಂತೆ ವೇದಾಂತದ ಮಾತುಗಳನ್ನು ಆಡುತ್ತಿದ್ದನಾದರೂ ಅದರ ಅರ್ಥವು ಆತನಿಗೆ ತಿಳಿದಿದ್ದಿಲ್ಲ, ಆದುದರಿಂದ ಶ್ರೀಕೃಷ್ಣನು ನಸುನಕ್ಕು ಆತನಿಗೆ ಎಂದನು:

"ಎಲಾ ಅರ್ಜುನನೆ, ಯುದ್ಧಕ್ಕೆ ಆರಂಭವಾಗುವ ಈ ಹೊತ್ತಿನಲ್ಲಿ ನೀನು ಹೀಗೇಕೆ ಅವಿಚಾರಿಯಾಗಿರುವೆ. ನೀನು ಆಡುವ ಮಾತುಗಳೊ ಬಹಳ ಉದಾತ್ತವಾದುವು. ಆದರೆ ಅದರ ಮರ್ಮವಾದರೊ ನಿನಗೆ ಎಳ್ಳನಿತೂ ತಿಳಿದಂತಿಲ್ಲ! ಕೌರವರ ಅವಸ್ಥೆಯ ಬಗ್ಗೆ ಶೋಕಿಸುವೆ. ಆದರೆ ನಿನ್ನ ನಿಜಸ್ವರೂಪದ ಬಗ್ಗೆ ಮಾತ್ರ ನೀನಿನ್ನೂ ಅಜ್ಞನಾಗಿರುವೆ! 'ಈ ಕೌರವರನ್ನು ನಾನು ಹೇಗೆ ಕೊಲ್ಲಲಿ?' ಎಂಬೀ ಬಗೆಯ ನಿನ್ನ ಮಾತುಗಳನ್ನು ಕೇಳಿದರೆ 'ಈ ಲೋಕದ ಸಂಚಾಲಕನು ನಾನೇ' ಎಂದು ನೀನು ಗ್ರಹಿಸಿರುವಂತೆ ತೋರುತ್ತದೆ! ಏಕೆಂದರೆ ಈ ಕೌರವರನ್ನು ನೀನು ಕೊಲ್ಲದೆ ಹೋದರೆ ಅವರಿಗೇನು ಸಾವು ತಪ್ಪಿತೆ? ಅವರೇನು ಅಮರರೆ? ಈ ಜಗಚ್ಚಕ್ರವು ಅನಾದಿಕಾಲದಿಂದ ಅವ್ಯಾಹತವಾಗಿ ನಡೆದಿದೆ. ನಿನ್ನಂತಹರು ನಿಮಿತ್ತಮಾತ್ರರು. ಜಗಚ್ಚಾಲಕ ಶಕ್ತಿಯೆ ಇದು ಎಲ್ಲವನ್ನೂ ಜಾಚೂ ತಪ್ಪದಂತೆ ನಡಿಸಿಕೊಂಡು ಸಾಗಿದೆ. ಮನುಷ್ಯಮಾತ್ರರೆಲ್ಲ ಆ ಅನಂತಶಕ್ತಿಯ ಕೈಗೊಂಬೆಗಳು. ಇದನ್ನು ತಿಳಿದವರು ಆ ಪ್ರಭು ಶಕ್ತಿಯ ಉದ್ದೇಶಗಳು ಈಡೇರುವಂತೆ ತಮ್ಮ ಜೀವನಗಳನ್ನು ರೂಪಿಸಿಕೊಂಡು ಸುಖಿಗಳಾಗುತ್ತಾರೆ. ಇದಕ್ಕೆ ವಿಪರೀತವಾಗಿ ವರ್ತಿಸುವವರು ಅದಕ್ಕೆ ತಕ್ಕಂತಹ ಫಲಗಳನ್ನು ಅನುಭವಿಸುತ್ತಾರೆ. ಆದುದರಿಂದ ಮನುಷ್ಯನಿಗೆ ಅವನ ಕರ್ತವ್ಯಧರ್ಮವೊಂದೇ ಹೆಗ್ಗುರಿ. ಯಾರ ಉಳಿವು ಅಥವಾ ಅಳಿವಿನಿಂದ ಅವನು ಹಿಗ್ಗುವ ಅಥವಾ ತಗ್ಗುವ ಕಾರಣವಿಲ್ಲ. ನಾವು ಈಗಲೆ ಈ ಶರೀರಧಾರಿಗಳಾಗಿ ಬಂದಿಲ್ಲ. ಹಿಂದೆ ಎಂದೂ ಇದ್ದಿಲ್ಲ, ಅಥವಾ ಮುಂದೆ ಶರೀರಧಾರಿಗಳಾಗಲಿಕ್ಕಿಲ್ಲವೆಂದೂ ಬಗೆವ ಕಾರಣವಿಲ್ಲ. ನೀನು ಹಾಗೆ ತಿಳಿದಿದ್ದರೆ ಅದು ನಿನ್ನ ಭ್ರಮೆ."

(೧೨) ದೇಹ ಮತ್ತು ಆತ್ಮ ಅಥವಾ ಜೀವಾತ್ಮವೆಂದು ಈ ಲೋಕದಲ್ಲಿ ಎರಡು ಬಗೆಯ ವಸ್ತುಗಳಿವೆ. ಶರೀರವು ವಿನಾಶಿ. ಆತ್ಮವು ಅನಾದಿಯಾಗಿದೆ. ಅವಿನಾಶಿಯಾಗಿದೆ. ಅದಕ್ಕೆ ಹುಟ್ಟು ಸಾವುಗಳಿಲ್ಲ. ಸಾಮಾನ್ಯ ಜನರು ದೇಹಕ್ಕೆ ಮನುಷ್ಯನೆಂಬುವರು ಈ ಮನುಷ್ಯನು ಕಿರಿಯನು, ಹಿರಿಯನು, ಮುದುಕನು, ಆಗ ಕೊನೆಗೆ ಸಾಯುವನು ಮುಕ್ಕಳಾದ ಹಿಗ್ಗು, ಮಡಿದ ದುಃಖವು ಜನಸಾಮಾನ್ಯರಿಗುಂಟು, ಆದರೆ ತಿಳಿದವರು ಮನುಷ್ಯ-




ನನ್ನು ಸ್ಥೂಲಶರೀರದ ದೃಷ್ಟಿಯಿಂದ ಕಾಣುವುದಿಲ್ಲ. ಆತ್ಮದ ದೃಷ್ಟಿಯಿಂದ ನೋಡುತ್ತಾರೆ. ಆತ್ಮವು ಅಮರವೆಂಬುದು ಅವರಿಗೆ ಮನವರಿಕೆಯಾಗಿರುವುದರಿಂದ ದೇಹವಿನಾಶಕ್ಕಾಗಿ ಅವರು ಎಂದೂ ಶೋಕಿಸುವುದಿಲ್ಲ. 'ಆತ್ಮಾ, ಬುದ್ಧಿ ಮತ್ತು ಮನಸು' ಇವು ನಿತ್ಯ; 'ಶರೀರ ಮತ್ತು ಇಂದ್ರಿಯಗಳು' ಅನಿತ್ಯ; ಪ್ರಾಣವು ಇವೆರಡ ಮಧ್ಯಸ್ಥವಾಗಿದ್ದು ಪರಸ್ಪರ ಸಂಬಂಧವನ್ನು ಜೋಡಿಸುತ್ತದೆ. ಮನುಷ್ಯನ ಇವೆರಡು ಭಾಗಗಳಲ್ಲಿ ಮೊದಲನೆಯದು ಅವಿನಾಶಿ ಎರಡನೆಯದು ಅವಿನಾಶಿಯಾಗಿದೆ. ಎಂಬ ಸಂಗತಿಯನ್ನು ಈ ಮೊದಲು ಕೊಟ್ಟ ಪಟ್ಟಿಯಲ್ಲಿ ತೋರಿಸಿದ್ದಾಗಿದೆ.

ಜನಸಾಮಾನ್ಯರು ತಮ್ಮೊಳಗಿನ ಸತ್ಯನಿತ್ಯವಾದ ಅಂಶವನ್ನು ಕಡೆಗಣಿಸಿ, ಅಸ್ಥಿರವಾದ, ವಿನಾಶಿಯಾದ ಭಾಗವನ್ನೆ ಗಮನಿಸುವವರಾದುದರಿಂದ ಅವರು ಸುಖದುಃಖಗಳ ದ್ವಂದ್ವದಲ್ಲಿ ಸಿಲುಕುವರು. ಹುಟ್ಟಿದನು; ಸತ್ತನು ಎಂದೀಬಗೆಯ ಮಾತನಾಡುವರು. ಆದರೆ ಮಾನವರೊಳಗಿನ ನಿತ್ಯವೂ ಶಾಶ್ವತವೂ ಆದ, ಹಿರಿಕಿರಿಯ ಎಲ್ಲ ಅವಸ್ಥೆಗಳಲ್ಲಿಯೂ ಒಂದೇ ಬಗೆಯಾಗಿ ಇರುವ ಚೈತನ್ಯವನ್ನು ಕಂಡು ಹಿಡಿದವರು ಯಾರ ಜನ್ಮವಾಯ್ತೆಂದು ಹಿಗ್ಗುವುದಿಲ್ಲ; ಅಥವಾ ಯಾರ ಮೃತ್ಯುವಾಯ್ತೆಂದು ಕುಗ್ಗುವುದೂ ಇಲ್ಲ. ಅಮರವಾದ ಆತ್ಮಶಕ್ತಿಯು ಈ ಎಲ್ಲ ಸ್ಥಿತಿಗಳಲ್ಲಿಯೂ ಒಂದೇ ಬಗೆಯಾಗಿರುತ್ತದೆ. ಅದನ್ನೆ ಮುಂದಿನ ಚಿತ್ರದಲ್ಲಿ ತೋರಿಸಲಾಗಿದೆ.

**ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ।**
**ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ ॥** — ಕಠ ೫೫

"ಪ್ರಾಣದಿಂದಾಗಲಿ, ಅಪಾನದಿಂದಾಗಲಿ ಮಾನವನು ಬದುಕಿಲ್ಲ. ಆದರೆ ಯಾವುದು ಈ ಪ್ರಾಣಾಪಾನಗಳಿಗೂ ಮೂಲಾಧಾರವಾಗಿದೆಯೊ ಆ ಶಕ್ತಿಯಿಂದಲೆ ಮಾನವನು ಜೀವಂತನಾಗಿದ್ದಾನೆ." ಇದುವೆ ಆತ್ಮಶಕ್ತಿ ಗೀತೆಯಲ್ಲಿಯೂ ಈ ಶಕ್ತಿಯ ಮಹಿಮೆಯನ್ನೆ ವರ್ಣಿಸಿದ್ದಾಗಿದೆ ಪ್ರಾಣ, ಇಂದ್ರಿಯಗಳು ಮತ್ತು ಶರೀರವು ಈ ಶಕ್ತಿಯ ಆಶ್ರಯದಿಂದಲೆ ತಾಳಿವೆ; ಬಾಳಿವೆ

**ದ್ವೇ ವಾವ ಬ್ರಹ್ಮಣೋ ರೂಪೇ ಮೂರ್ತಂ ಚೈವಾಮೂರ್ತಂ ಚ; ಮರ್ತ್ಯಂ ಚಾಮೃತಂ ಚ ॥೧॥**
**.... ಇದಮೇವ ಮೂರ್ತಂ ಯದನ್ಯತ್ .... ಪ್ರಾಣಾತ್ ॥೪॥ ಅಥಾ ಮೂರ್ತಂ ಪ್ರಾಣಶ್ಚ ಯಶ್ಚಾಯಮಂತರಾತ್ಮನ್ನಾಕಾಶ ಏತದಮೃತಂ... ॥೫॥**

— ಛಾಂದೋಗ್ಯ ೨. ೩ ೧.

"ಬ್ರಹ್ಮನ ರೂಪಗಳು ಎರಡು: (೧) ಮೂರ್ತ; ಅಥವಾ ಮರ್ತ್ಯ (೨) ಅಮೂರ್ತ ಅಥವಾ ಅಮರ. ಪ್ರಾಣದಿಂದ ಭಿನ್ನವಾದುದು (ಎಂದರೆ ಇಂದ್ರಿಯ ಮತ್ತು ದೇಹ) ಮೂರ್ತ ಎಂದರೆ ಸಾಕಾರ. ಇದು ಸಾವಿಗೆ ಈಡಾಗುವುದು. ಪ್ರಾಣಾದಿಯಾದುದು (ಪ್ರಾಣ, ಮನಸು, ಬುದ್ಧಿ ಮತ್ತು ಆತ್ಮ) ಅಮೂರ್ತ ಎಂದರೆ ನಿರಾಕಾರ. ಅದು ಸಾವನ್ನು ಮೀರಿದುದು."

ಈ ಶ್ರುತಿವಚನದಲ್ಲಿ ಮನುಷ್ಯನಲ್ಲಿರುವ ನಿತ್ಯ ಮತ್ತು ಅನಿತ್ಯಭಾಗಗಳನ್ನು ಸ್ಪಷ್ಟವಾಗಿ ವಿಂಗಡಿಸಿ ಹೇಳಿದೆ. ಒಂದು ಭಾಗವು ಸಾಕಾರ; ಸ್ಥೂಲ, ಆದರೆ ನಾಶವುಳ್ಳದು,

## (೬) ಪುನರ್ಜನ್ಮ.

**ದೇಹಿನೋಽಸ್ಮಿನ್ ಯಥಾ ದೇಹೇ ಕೌಮಾರಂ ಯೌವನಂ ಜರಾ ।**
**ತಥಾ ದೇಹಾಂತರಪ್ರಾಪ್ತಿರ್ಧೀರಸ್ತತ್ರ ನ ಮುಹ್ಯತಿ ॥೧೩॥**

---

**ಅನ್ವಯ:—** ದೇಹಿನಃ ಅಸ್ಮಿನ್ ದೇಹೇ ಯಥಾ ಕೌಮಾರಂ ಯೌವನಂ ಜರಾ, ತಥಾ ದೇಹಾಂತರಪ್ರಾಪ್ತಿಃ। ತತ್ರ ಧೀರಃ ನ ಮುಹ್ಯತಿ ॥೧೩॥

**ದೇಹಧಾರಿ (ಆತ್ಮ)ಗೆ ಈ ದೇಹದಲ್ಲಿ ಹುಡುಗತನ, ಹರೆಯ ಮತ್ತು ಮುಪ್ಪು ಹೇಗೆ ಬರುವುದೊ ಹಾಗೆ ಆ ಆತ್ಮನಿಗೆ (ಮುಂದೆ) ಇನ್ನೊಂದು ದೇಹವೂ ಪ್ರಾಪ್ತವಾಗುವುದು. (ಆದುದರಿಂದ) ತಿಳಿದವರು ಈ ವಿಷಯದಲ್ಲಿ ಎಂದೂ ಮೋಹಿತರಾಗುವುದಿಲ್ಲ. ॥೧೩॥**

**ಭಾವಾರ್ಥ:—** ಬಾಲ್ಯ, ತಾರುಣ್ಯ ಮತ್ತು ವಾರ್ಧಕ್ಯಗಳೆಂಬ ಮೂರು ಅವಸ್ಥೆಗಳು ಇರುವಂತೆ ಇನ್ನೊಂದು ದೇಹವೂ ಬರುವುದು. ಇದು ನಾಲ್ಕನೆಯ ಅವಸ್ಥೆಯು. ಮೊದಲಿನ ಮೂರು ಬದಲಾವಣೆಗಳಂತೆ ನಾಲ್ಕನೆಯದೂ ಒಂದು ಅನಿವಾರ್ಯ.

---

ಇನ್ನೊಂದು ಭಾಗವು ನಿರಾಕಾರ. ಸೂಕ್ಷ್ಮ, ಆದರೆ ಅವಿನಾಶಿ, ಅಮರವಾದುದು. ಆತ್ಮವೆಂದು ಹೇಳುವ ಅಂಶವು ಸತ್ತಮೇಲೂ ಅಚ್ಚಳಿಯದೆ ಉಳಿಯುವಂತಹದು ಅದು ಶರೀರವು ಹುಟ್ಟುವ ಮೊದಲೂ ಇದ್ದಿತು; ಸತ್ತ ಮೇಲೂ ಇರುವುದು; ಎಂದು ಉಪನಿಷತ್ತುಗಳು ಸಾರುತ್ತವೆ.

ಆದುದರಿಂದಲೆ ಶ್ರೀಕೃಷ್ಣನು ಅರ್ಜುನನಿಗೆ "ನೀನು ನಾನು ಮತ್ತು ಈ ಕೌರವಾದಿಗಳೆಲ್ಲರೂ ಹಿಂದೆಯೂ ಇದ್ದರು; ಮುಂದೆಯೂ ಇರುವರು" ಎಂದು ಹೇಳಿದನು. ಏಕೆಂದರೆ ಆ ರಣರಂಗದಲ್ಲಿ ನೆರೆದ ಸೈನಿಕರಲೆಲ್ಲ ನೋವು ಸಾವುಗಳಿಗೆ ಗುರಿಯಾಗುವ ಶರೀರದೊಂದಿಗೆ ನಿತ್ಯವಾಗಿರುವ ತತ್ವವೂ ಒಂದೊಂಟು. ಇವರೆಲ್ಲ ಆಗಲೆ ಇದ್ದವರಲ್ಲ. ಎಲ್ಲರೂ ಆತ್ಮರೂಪದಿಂದ ನಿತ್ಯರು. ನಿತ್ಯವು ನಾಶಹೊಂದುವುದುಂಟೆ? ಆದುದರಿಂದ ಕೌರವರು ಸಾಯುವರೆಂದು ಮಿಡುಕುವುದು ಮರುಳತನವಲ್ಲವೆ? ಎಂದು ಶ್ರೀಕೃಷ್ಣನು ಅರ್ಜುನನಿಗೆ ಕೇಳಿದ್ದಾನೆ.

ಸಮುದ್ರದಲ್ಲಿ ಗಾಳಿಯೊಡನೆ ಅಲೆಗಳು ಏಳುವುವು. ಗಾಳಿಯು ನಿಂತೊಡನೆ ಇವೆಲ್ಲವೂ ಕಾಣದಾಗುವುವು. ಆದರೂ ಸಮುದ್ರದ ನೀರಿಗೇನೂ ನ್ಯೂನತೆಯಿಲ್ಲ. ಅದರಂತೆ ಪ್ರಕೃತಿರೂಪವಾದ ಸಾಗರದಲ್ಲಿ ಪ್ರಾಣವಾಯುವಿನ ಸಂಚಲನದಿಂದ ಶರೀರರೂಪಿಯಾದ ತರಂಗಗಳು ರೂಪಗೊಳ್ಳುವುವು. ಗಾಳಿಯು ಇಲ್ಲವಾದೊಡನೆ ಕಣ್ಮರೆಯಾಗುವುವು. ಆದರೂ ಪ್ರಾಣ ಮತ್ತು ಪ್ರಕೃತಿಗಳು ನಿಃಶೇಷವಾಗುವುದಿಲ್ಲ. ಈ ಉಪಮೆಯಿಂದ ಆತ್ಮನ ಅಮರತ್ವದ ಸ್ವಲ್ಪವಾದರೂ ಕಲ್ಪನೆಯುಂಟಾಗಬಹುದು.

ಆತ್ಮವು ಅಮರವಾಗಿದೆ. ಹುಟ್ಟಲಿ, ಬೆಳೆಯಲಿ ಅಥವಾ ಸಾಯಲಿ. ಆತ್ಮನ ಸ್ವರೂಪದಲ್ಲಿ ಯಾವ ಹೆಚ್ಚು ಕಡಿಮೆಗಳೂ ಆಗುವುದಿಲ್ಲ. ಹೆಚ್ಚು ಕಡಿಮೆಯಾಗುವುದು ಕೇವಲ ದೇಹದಲ್ಲಿ ಎಂಬುದು ನಿಶ್ಚಿತವಾದರೂ ಶ್ರೀಕೃಷ್ಣನ ಈ ಮಾತಿನಿಂದ ಅರ್ಜುನನಿಗೆ ಇನ್ನೊಂದು ಬಗೆಯ ಸಂದೇಹವು ಉಂಟಾಯಿತು. "ದೇಹದಿಂದಲೆ ನಮಗೆ ಆತ್ಮಾನುಭವವು ಬರುವುದು ದೇಹವು ಬಿದ್ದ ಒಳಿಕ ಆತ್ಮನ ಗತಿ ಏನಾಗುವುದೆಂಬುದು ಗೊತ್ತಾಗುವುದಿಲ್ಲ. ಆದುದರಿಂದ ಈ ದೇಹಕ್ಕೆ ಮಹತ್ವವಿದ್ದು ಅದರ ನಾಶಕ್ಕಾಗಿ ದುಃಖಿಸುವುದೂ ಸ್ವಾಭಾವಿಕವಾಗಿಲ್ಲವೆ?" ಅರ್ಜುನನ ಈ ಪ್ರಶ್ನೆಗೆ ಶ್ರೀಕೃಷ್ಣನ ಉತ್ತರವೇನಂದರೆ:

(೧೩) ಇಲ್ಲಿ ಮೂರೆ ಅವಸ್ಥೆಗಳನ್ನು ಹೇಳಿದ್ದರೂ ನಿಜವಾಗಿ ಅವು ಆರು ಇವೆ: (**ಜಾಯತೇ**) ಹುಟ್ಟು; (**ಅಸ್ತಿ**) ಇರವು; (**ವರ್ಧತೇ**) ಬೆಳೆಗೇ; (**ವಿಪರಿಣಮತೇ**) ಪರಿಣತಿ, ಗೊನೆ; (**ಅಪಕ್ಷೀಯತೇ**) ಇಳಿಗೆ; (**ನಶ್ಯತಿ**) ಕೊನೆ. ಈ ಆರು ಅವಸ್ಥೆಗಳಲ್ಲಿಯೆ ಕಿರಿತನ, ಹರೆಯ ಮತ್ತು ಮುಪ್ಪುಗಳೆಂಬ ಮೂರು ಸ್ಥಿತಿಗಳು ಅಡಕವಾಗಿವೆ, ಇವು ಕಾಲಕ್ರಮದಲ್ಲಿ ಒಂದರ ಮುಂದೆ ಒಂದು ಬರತಕ್ಕುವೇ. ಆದರೆ ದೇಹಕ್ಕೆ ಒದಗುವ ಈ ಸ್ಥಿತ್ಯಂತರಗಳಿಂದ ದೇಹಧಾರಿಯಾದ ಆತ್ಮನ ಯಾವ ಹೆಚ್ಚು ಕಡಿಮೆಗಳೂ ಆಗುವುದಿಲ್ಲ. ಬಾಲ ಆತ್ಮ, ತರುಣ ಆತ್ಮ ಅಥವಾ ವೃದ್ಧ ಆತ್ಮನೆಂಬುದು ಸುಳ್ಳು. ಆತ್ಮನಲ್ಲಿ

| ಹಿಂದಿನ ದೇಹ | | | ಇಂದಿನ ದೇಹ | | | | ಮುಂದಿನ ದೇಹ | | |
|---|---|---|---|---|---|---|---|---|---|
| ಮುಪ್ಪು | ಸಾವು ಹುಟ್ಟು | ಕಿರಿತನ | ಹರೆಯ | ಮುಪ್ಪು | ಸಾವು ಹುಟ್ಟು | ಕಿರಿತನ | ಹರೆಯ | ಮುಪ್ಪು | ಸಾವು ಹುಟ್ಟು |

ಆ ತ್ಮ ವು — ಆ ತ್ಮ ವು — ಆ ತ್ಮ ವು

ಬದಲಾವಣೆಗಳಿಲ್ಲ. ಕಿರಿತನ, ಹರೆಯ ಮತ್ತು ಮುಪ್ಪು-ಗಳಂತೆ, ಈ ದೇಹವು ನಾಶವಾದ ಬಳಿಕ ಇನ್ನೊಂದು ದೇಹವು ಬರುವುದು ; ಇದು ನಾಲ್ಕನೆಯ ಅವಸ್ಥೆಯು. ಹುಟ್ಟುವೊದಲಿನ ಸ್ಥಿತಿ, ಹುಟ್ಟಿನ ನಂತರ ಮೂರು ಸ್ಥಿತಿಗಳು, ಮತ್ತು ಸತ್ತ ಬಳಿಕ ಬರುವ ಪುನರ್ಜನ್ಮದ ಸ್ಥಿತಿ ಹೀಗೆ ಐದು ಅವಸ್ಥೆಗಳನ್ನು ನೆನೆದುಕೊಂಡರೆ ಇವೆಲ್ಲವು-ಗಳೊಳಗಿಂದ ಎಡೆಬಿಡದೆ ಮುಂದೆ ಸಾಗುತ್ತಿರುವ ಆತ್ಮನು ನಿತ್ಯನು, ದೇಹವು ಅನಿತ್ಯವು ಎಂಬುದರ ಮನವರಿಕೆಯಾಗದೆ ಇರದು.

ಕಿರಿತನವು ಹೋಗಿ ಹರೆಯವು ಬರುವುದು ಎಷ್ಟು ನಿಶ್ಚಿತವೊ, ಅಷ್ಟೇ ನಿಶ್ಚಿತವಾಗಿ, ಹರೆಯವು ಹೋಗಿ ಮುಪ್ಪು ಬರುವುದು; ಮುಪ್ಪಿನ ನಂತರ ಸಾವು ಆಡಸುವುದು ; ಸತ್ತ ಬಳಿಕ ಹೊಸ ದೇಹವು ಪ್ರಾಪ್ತವಾಗುವುದು. ಹುಡುಗನು ಹರೆಯದವನಾದನೆಂದು ಯಾರಾದರೂ ಮಿಡುಕಿದ್ದುಂಟೆ? ಅದರಂತೆ ಒಂದು ದೇಹ ನೀಗಿ ಇನ್ನೊಂದನ್ನು ಧರಿಸುವುದಕ್ಕಾದರೂ ದುಃಖಿಸುವ ಕಾರಣ ವಿಲ್ಲ. ಏಕೆಂದರೆ ಮನುಷ್ಯನಿಗೆ ಹುಡುಗತನ, ಹರೆಯ, ಮುಪ್ಪುಗಳೆಂಬ ಮೂರು ಅವಸ್ಥೆಗಳಂತೆ ನಾಲ್ಕನೆಯದಾದ ಪುನರ್ಜನ್ಮವೂ ಒಂದು ಅವಸ್ಥೆಯೇ. ಅವು ಯಥಾಕ್ರಮದಲ್ಲಿ ಬರತಕ್ಕುವೇ. ಅದನ್ನೇ ವೇದದಲ್ಲಿ ಇನ್ನೊಂದು ಬಗೆಯಿಂದ ವರ್ಣಿಸಿದ್ದಾಗಿದೆ:

**ಸನಾತನಮೇನಮಾಹುರುತಾದ್ಯ ಸ್ಯಾತ್ಪುನರ್ಣವಃ ॥ ೨೩ ॥ ತ್ವಂ ಸ್ತ್ರೀ ತ್ವಂ ಪುಮಾನಸಿ ತ್ವಂ ಕುಮಾರ ಉತ ಕುಮಾರೀ। ತ್ವಂ ಜೀರ್ಣೋ ದಂಡೇನ ವಂಚಸಿ ತ್ವಂ ಜಾತೋ ಭವಸಿ ವಿಶ್ವತೋ ಮುಖಃ ॥ ೨೭ ॥ ಉತೈಷಾಂ ಪಿತೋತ ವಾ ಪುತ್ರ ಏಷಾ ಮುತೈಷಾಂ ಜ್ಯೇಷ್ಠ ಉತ ವಾ ಕನಿಷ್ಠಃ। ಏಕೋ ಹ ದೇವೋ ಮನಸಿ ಪ್ರವಿಷ್ಟಃ ಪ್ರಥಮೋ ಜಾತಃ ಸ ಉ ಗರ್ಭೇ ಅಂತಃ ॥ ೨೮ ॥** ಅಥರ್ವವೇದ ೧೦-೮

"ಇದನ್ನು ಸನಾತನವೆಂದು ಹೇಳುವರು. ಮತ್ತೆ ಮತ್ತೆ ಹೊಚ್ಚ ಹೊಸತು (ಪುನಃಪುನಃ) ಆಗುತ್ತದೆ. ॥೨೩॥ ನೀನು ಹೆಣ್ಣು ಆಹುದು; ಗಂಡು ಆಹುದು. ಕುವರನು ಆಹುದು ; ಕುವರಿಯು ಆಹುದು. ಮುದುಪನಾದಾಗ ಕೋಲುಹಿಡಿದು ನಡೆವೆ. ಮತ್ತು ಹೊಸತಾಗಿ ಹುಟ್ಟು-ತ್ತಲೆ ನೀನು ಎಲ್ಲೆಡೆಗೆ ನೋಡುವೆ. ॥ ೨೭ ॥ ನೀನು ಇವರ ತಂದೆ ; ಇವರ ಮಗನು. ಇವರಲ್ಲಿ ಹಿರಿಯನು ; ಇವರಲ್ಲಿ ಕಿರಿಯನೂ ಆಗಿರುವೆ. . ಮನಸಿನಲ್ಲಿ ಹೊಕ್ಕುಕೊಂಡಿರುವ ದೇವನು ನೀನು ಒಬ್ಬನೇ. ಮೊದಲು ಮೊದಲು ಹುಟ್ಟಿದವನು, ಅವನೇ ಈಗ ಮರಳಿ ಬಸಿರಲ್ಲಿ ಬಂದಿರುವನು. ॥ ೨೮ ॥

ಆತ್ಮನ ಈ ವರ್ಣನೆಯಲ್ಲಿ ಎಲ್ಲವೂ ವಿಶದವಾಗಿ ವರ್ಣಿಸಲ್ಪಟ್ಟಿದೆ. ಆತ್ಮವು ಸನಾತನ. ಹೆಣ್ಣಿನ ದೇಹದಲ್ಲಿ ಹೆಣ್ಣಿನಂತೆ, ಗಂಡಿನ ದೇಹದಲ್ಲಿ ಗಂಡಸಂತೆ ಕಾಣುತ್ತದ. ಹುಡುಗ, ಹುಡುಗೆ, ಹರೆಯದವ, ಮುಪ್ಪಿನವ ಎಂಬ ಹಾಗೂ ದೇಹಧರ್ಮದಿಂದ ತೋರುವುದು. ಒಂದೆಡೆಗೆ ತಂದೆಯಂತೆ, ಇನ್ನೊಂದೆಡೆಯಲ್ಲಿ ಮಗನಂತೆ, ಮತ್ತೊಂದೆಡೆಯಲ್ಲಿ ಅಣ್ಣನಂತೆ, ಮಗುದೊಂದೆಡೆಗೆ ತಮ್ಮನಂತೆ ನಟಿಸುವುದು. ಮನಸಿನಲ್ಲಿ ಪ್ರವಿಷ್ಟನಾದ ಒಬ್ಬನೇ ದೇವನಿವನು. ಆಗಾಗ ಮತ್ತೆ ಮತ್ತೆ ಜನ್ಮತಾಳುವನು, ಎಂದು ಕಂಡುಬರುವುದು.

ಆದುದರಿಂದ ಆ ಲಿಂಗಭೇದವಾಗಲಿ, ವಯೋಮರ್ಯಾದೆಯಾಗಲಿ ಆತ್ಮಕ್ಕೆ ಸಂಬಂಧಿಸಿಲ್ಲ. ಅದೆಲ್ಲವೂ ದೇಹಧರ್ಮ. ಆತ್ಮವು ಅವಿಕಾರಿ. ಅದಕ್ಕೆ ಲಿಂಗವಿಲ್ಲ. ವಯಸ್ಸಿಲ್ಲ. ಯಾರ ತಂದೆಯಲ್ಲ ; ತಾಯಿಯಲ್ಲ. ಮಗನಲ್ಲ. ಹಿರಿ ಕಿರಿಯನಲ್ಲ. ಇದು ಯಾವಾಗಲೂ ಒಂದೇ ಬಗೆ. ಜೀವಾತ್ಮನ ಸ್ಥಿತಿಗತಿಯನ್ನು ಸರಿಯಾಗಿ ತಿಳಿಸಿ-ಕೊಡಲು, ವೇದದಲ್ಲಿ ಇದನ್ನು ಒಂದೆಡೆಗೆ ಚಂದ್ರನಿಗೆ ಹೋಲಿಸಿದ್ದಾಗಿದೆ. ಚಂದ್ರನಿಗೆ ಕ್ಷಯವೃದ್ಧಿಗಳು ಹೇಗೆ ಕಾಣಿಸಿಕೊಳ್ಳುವುವೊ ಹಾಗೆಯೆ ಈ ಜೀವಾತ್ಮನೂ ಹುಟ್ಟು ಸಾವುಗಳ ಚಕ್ರದಲ್ಲಿ ಸುತ್ತುತಿರುವನು. ಜೀವಾತ್ಮನೂ ( ಪುನಃ ನವಃ= ಪುನರ್ಣವಃ ) ಜನ್ಮತಾಳಿ ಮತ್ತೆ ಹೊಚ್ಚ ಹೊಸತಾಗುವನು. ಉಪನಿಷತ್ತಿನಲ್ಲಿ ಇದನ್ನೆ ಇನ್ನೊಂದು ತೆರನಾಗಿ ಹೇಳಿದ್ದಾಗಿದೆ.

## (೬) ಅಮರತ್ವವನ್ನು ಪಡೆವ ಹದ.

**ಮಾತ್ರಾಸ್ಪರ್ಶಾಸ್ತು ಕೌಂತೇಯ ಶೀತೋಷ್ಣಸುಖದುಃಖದಾಃ ।**
**ಆಗಮಾಪಾಯಿನೋಽನಿತ್ಯಾಸ್ತಾಂಸ್ತಿತಿಕ್ಷಸ್ವ ಭಾರತ ॥ ೧೪ ॥**

**ಯಂ ಹಿ ನ ವ್ಯಥಯಂತ್ಯೇತೇ ಪುರುಷಂ ಪುರುಷರ್ಷಭ ।**
**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ ॥ ೧೫ ॥**

---

**ಅನ್ವಯ:—** ಹೇ ಕೌಂತೇಯ! ಮಾತ್ರಾಸ್ಪರ್ಶಾಃ ತು ಶೀತೋಷ್ಣ ಸುಖದುಃಖದಾಃ, ಆಗಮಾಪಾಯಿನಃ ಅನಿತ್ಯಾಃ। ಹೇ ಭಾರತ! ತಾನ್ ತಿತಿಕ್ಷಸ್ವ ॥೧೪॥ ಹೇ ಪುರುಷರ್ಷಭ! ಹಿ ಯಂ ಸುಖ ದುಃಖ ಸುಖಂ ಧೀರಂ ಪುರುಷಂ ಏತೇ ನ ವ್ಯಥಯಂತಿ, ಸಃ ಅಮೃತತ್ವಾಯ ಕಲ್ಪತೇ ॥೧೫॥

**ಎಲೈ ಕುಂತಿಯ ಮಗನಾದ ಅರ್ಜುನನೆ! ಬಾಹ್ಯಸೃಷ್ಟಿಯೊಡನೆ (ಇಂದ್ರಿಯಗಳಿಗೆ) ಆಗುವ ಸೋಂಕು, ಶೀತ, ಉಷ್ಣ, ಸುಖ, ದುಃಖಗಳಿಗೆ ಕಾರಣವು. ಅದೂ ಆಗಂತುಕ. ಆದುದರಿಂದ ಅವು ಅನಿತ್ಯ. ಆದಕಾರಣ ಎಲೈ ಭರತಕುಲೋತ್ಪನ್ನನಾದ ಅರ್ಜುನನೆ! ಅದನ್ನು ನೀನು ಸಹಿಸು. ॥೧೪॥ ಎಲೈ ಗಂಡುಗಲಿಯೆ! ಸುಖದುಃಖಗಳನ್ನು ಸಮವಾಗಿ ಭಾವಿಸುವ ಧೀರರಿಗೆ ಅವು ತೊಂದರೆ ಕೊಡ-ಲಾರವು. ಅಂಥ ಆ ಧೀರನು ಅಮರತ್ವವನ್ನು ಪಡೆಯಲು ಅರ್ಹನಾಗುವನು. ॥೧೫॥**

**ಭಾವಾರ್ಥ:—** ಶೀತ-ಉಷ್ಣ, ಸುಖ-ದುಃಖಾದಿ ದ್ವಂದ್ವಗಳನ್ನು ಸಹಿಸಿಕೊಳ್ಳುವ ಸಾಮರ್ಥ್ಯವನ್ನು ಪ್ರತಿಯೊಬ್ಬರೂ ಹೆಚ್ಚಿಸಿಕೊಳ್ಳಬೇಕು. ಏಕೆಂದರೆ ಇವುಗಳ ಎಳದಾಟದಲ್ಲಿ ಸಿಕ್ಕು ನುಗ್ಗಾಗುವುದನ್ನು ತಪ್ಪಿಸಿ-ಕೊಂಡವನು ಅಮರನಾಗುವುದಕ್ಕೆ ತಕ್ಕವನಾಗುತ್ತಾನೆ. ॥ ೧೪-೧೫ ॥

---

**ವಯೋಗತಃ ಪ್ರೈತಿ ಸ ಇತಃ ಪ್ರಯನ್ನೇವ**
**ಪುನರ್ಜಾಯತೇ ।** —ಐತರೇಯ ಉ. ೪·೪
**ಪುನಃ ಪುನರ್ವಶಮಾಪದ್ಯತೇ ಮೇ ।** ಕಠ ಉ. ೨·೬

“ವಯಸ್ಸು ಆದ ಮೇಲೆ ಆತನು ಈ ಲೋಕದಿಂದ ತೆರಳುವನು. ಬಳಿಕ ಮತ್ತೆ ಹುಟ್ಟುವನು. ಮತ್ತೆ ಮತ್ತೆ ನನ್ನ (ಮೃತ್ಯುವಿನ) ವಶವಾಗುವನು”

‘ತ್ವಂ ಸ್ತ್ರೀ ತ್ವಂ ಪುಮಾನಸಿ....’ ಇತ್ಯಾದಿ ಮಂತ್ರವು ಶ್ವೇತಾಶ್ವತರ ಉಪನಿಷತ್ತಿನಲ್ಲಿ (೪·೩) ಬಂದಿದೆ. ಈ ಶ್ವೇತಾಶ್ವತರ ಉಪನಿಷತ್ತಿನ ಒಂದು ಮಂತ್ರದಲ್ಲಿರುವ ಅರ್ಥವಿಶೇಷವನ್ನು ಮನನ ಮಾಡುವಂತಿದೆ.

**ಏಷೋ ಹ ದೇವಃ ಪ್ರದಿಶೋಽನುಸರ್ವಾಃ**
**ಪೂರ್ವೋ ಹ ಜಾತಃ ಸ ಉ ಗರ್ಭೇ ಅಂತಃ ॥**
**ಸ ಏವ ಜಾತಃ ಸ ಜನಿಷ್ಯಮಾಣಃ**
**ಪ್ರತ್ಯಙ್ಜನಾಸ್ತಿಷ್ಠತಿ ಸರ್ವತೋಮುಖಃ ॥**
—ಶ್ವೇ. ೨·೧೬; ವಾ. ಯ. ೩೨.೪

“ಇದೇ ದಿವ್ಯವಾದ ಆತ್ಮವು ಎಲ್ಲ ದಿಕ್ಕುಗಳಲ್ಲಿಯೂ ಇದೆ ಅದು ಹಿಂದೆ ಇತ್ತು. ಇಂದೆ ಗರ್ಭದಲ್ಲಿ ಇದೆ. ನಾಳೆ ಮತ್ತೆ ಹುಟ್ಟುವುದು. ಪ್ರತಿಯೊಬ್ಬರಲ್ಲೂ ಇದುಂಟು. ಅದು ಎಲ್ಲ ಬದಿಗೂ ಮುಖವುಳ್ಳುದಾಗಿದೆ. ಎಂದರೆ ಪ್ರಾಣಿಮಾತ್ರಗಳೆಲ್ಲವೂ ಇದರ ಮುಖಗಳೇ.”

ಇದಕ್ಕೆ ‘**ಮಾತರಿಶ್ವ**’ನೆಂದು ಹೆಸರಿದೆ. ಏಕೆಂದರೆ ಮರಳಿ ಮರಳಿ ತಾಯಬಸಿರನ್ನು ಸೇರಿ, ಹೊಸ ಜನ್ಮಗಳನ್ನು ತಾಳುವುದು. ಒಂದು ದೇಹವು ನಷ್ಟವಾದೊಡನೆ ಮತ್ತೆ ತಾಯಬಸಿರಲ್ಲಿ ಸೇರಿ ಹೊಸ ದೇಹಧಾರಣಮಾಡುವುದು. ಈ ಕ್ರಮವು ಎಡೆಬಿಡದೆ ಅನಾದಿಕಾಲದಿಂದ ನಡೆದಿದೆ. ಈ ಪುನರ್ಜನ್ಮವಿಚಾರಕ್ಕೆ ವೇದ ಮತ್ತು ಉಪನಿಷತ್ತುಗಳ ಬೆಂಬಲವಿದೆ.

ಶ್ರೀಕೃಷ್ಣನು ಅರ್ಜುನನಿಗೆ ಆತ್ಮದ ಈ ನಿಜಸ್ವರೂಪವನ್ನು ತಿಳಿಸಿ, ಇವರು ಗುರುಗಳು, ಇವರು ಹಿರಿಯರು, ಇವರು ನನ್ನ ಮಕ್ಕಳು, ಇವರು ನನ್ನ ಬಳಗದವರು, ಎಂಬೀ ಬಗೆಯ ವ್ಯಾಮೋಹವು ವ್ಯರ್ಥವಾದುದೆಂದು ಬೋಧಿಸಿದನು. ಈ ಆಪ್ತಬಾಂಧವ್ಯವೆಲ್ಲವೂ ಈ ಕ್ಷಣಿಕ ದೇಹದ ಮೂಲಕವಾಗಿ ಉಂಟಾದ ತಾತ್ಕಾಲಿಕ ಸಂಬಂಧವು. ದೈಹಿಕ ದೃಷ್ಟಿಯ ಸಂಕುಚಿತ ವಿಚಾರವು. ನಿತ್ಯ ಆತ್ಮದ ದೃಷ್ಟಿಯಿಂದ ವಿಚಾರಿಸಿದರೆ ವ್ಯಾವಹಾರಿಕ ಸಂಬಂಧಗಳೆಲ್ಲ ಅನಿತ್ಯವಾದುವೆಂದು ಮನವರಿಕೆಯಾಗು

ವುದು. ಹಾಗೊಮ್ಮೆ ಮನಗಂಡವರು ಬಂಧುಬಳಗದ ಶೋಕಮೋಹಗಳಲ್ಲಿ ಸಿಲುಕಿ ಬೀಳುವುದಿಲ್ಲ.

ಆದರೂ ಇಲ್ಲಿ ಇನ್ನೂ ಒಂದು ಪ್ರಶ್ನೆ ತಲೆದೋರು- ವುದು: ಗುರುಹಿರಿಯರು, ಅಣ್ಣತಮ್ಮಂದಿರು, ಮಕ್ಕಳು ಮೊಮ್ಮಕ್ಕಳು ಎಂದು ಮುಂತಾದ ಈ ಸಂಬಂಧಗಳು ಹಿಂದಿನ ಜನ್ಮದಲ್ಲಿ ಇಲ್ಲದೆ ಇರಬಹುದು; ಮುಂದಿನ ಜನ್ಮದಲ್ಲೂ ಉಳಿಯಲಿಕ್ಕಿಲ್ಲ. ಆದರೂ ಈ ಗಳಿಗೆ ಯಲ್ಲಂತೂ ಇವರು ಆಪ್ತಬಾಂಧವರೆಂಬುದು ನಿಜವಷ್ಟೆ? ಹಾಗಾದರೆ ಆ ಹಿತಸಂಬಂಧಗಳು ಈ ಯುದ್ಧದಿಂದ ಹಾಳಾಗುವುದನ್ನು ಕಂಡು ಯಾರು ತಾನೆ ಶೋಕಿಸ- ಲಿಕ್ಕಿಲ್ಲ? ಅರ್ಜುನನಾದರೂ ಮಿಡುಕುತ್ತಿರುವುದು ಇದಕ್ಕಾಗಿಯೇ. ಆದರೆ ಈ ಬಗೆಯ ಮಿಡುಕೂ ಹುಸಿ ಯೆಂದು ಶ್ರೀಕೃಷ್ಣನು ವಿವರಿಸುತ್ತಲಿದ್ದಾನೆ:

(೧೪-೧೫) ಇಂದ್ರಿಯಗಳಿಗೆ ಬಾಹ್ಯಸ್ಪರ್ಶವುಂಟಾ- ಗಲು ಸುಖದುಃಖ, ಶೀತೋಷ್ಣಗಳ ಭಾಸವಾಗುವುದು. ಆದರೆ ಅದೂ ಕೂಡ ನಿತ್ಯವಾಗಿಯಲ್ಲ. ಒಂದು ವಿಶಿಷ್ಟ ಪರಿಸ್ಥಿತಿಯಲ್ಲಿ ಸುಖಕಾರಕವೆನಿಸಿದ ಸ್ಪರ್ಶವೆ ಇನ್ನೊಮ್ಮೆ ದುಃಖಕಾರಕವಾಗಲೂ ಬಹುದು. ಆದುದರಿಂದ ಇದು ಅನಿತ್ಯವಾದುದು. ಈ ಕಾರಣದಿಂದಲೇ ಈ ದ್ವಂದ್ವ ಗಳಿಗೆ ಒಳಗಾಗದಿರುವಲ್ಲಿಯೆ ಜಾಣ್ಮೆಯಿದೆ.

### 'ಮಾತ್ರಾ' ಶಬ್ದದ ಅರ್ಥ.

'ಮಾತ್ರಾ' ಎಂದರೆ ಪ್ರಕೃತಿ, ಪ್ರಾಕೃತಿಕ ಜಗತ್ತು, ಅಥವಾ ಪ್ರಕೃತಿ ತತ್ವವು. [ಈ ಮಾತ್ರಾ ಶಬ್ದದಿಂದ ಇಂಗ್ಲಿಷಿನ Matter; ಮತ್ತು ಉರ್ದುದೊಳಗಿನ 'ಮಾದ್ದಾ' ಶಬ್ದಗಳೂ ತಲೆದೋರಿವೆ] ಗೀತೆಯಲ್ಲಿ ಇನ್ನೊಂದೆಡೆಗೆ ಹೀಗೆ ಉಲ್ಲೇಖವಿದೆ:

**ಬಾಹ್ಯಸ್ಪರ್ಶೇಷ್ವಸಕ್ತಾತ್ಮಾ ವಿಂದತ್ಯಾತ್ಮನಿ ಯತ್ಸುಖಂ ।** —೫.೨೧

"ಹೊರಗಿನ ಸೊಂಕಿಗೆ ಮನಸೋಲದವನಿಗೆ ಆತ್ಮ- ಸುಖವು ದೊರೆಯುತ್ತದೆ." ಇಲ್ಲಿಯ 'ಬಾಹ್ಯಸ್ಪರ್ಶ' ಮತ್ತು ಮೇಲಣ 'ಮಾತ್ರಾಸ್ಪರ್ಶ' ಇವೆರಡೂ ಸಾಮಾನ್ಯವಾಗಿ ಒಂದೇ ಅರ್ಥದ ಎರಡು ಪದಗಳು, 'ಬಾಹ್ಯಸ್ಪರ್ಶ'ವೆಂದರೆ 'ಹೊರಜಗತ್ತಿನ ವಿಷಯ ಸಂಬಂಧ' 'ಮಾತ್ರಸ್ಪರ್ಶನ'ವೆಂದರೂ ಇದೇ ಅರ್ಥ- ವುಂಟು ಸುಖೋಪಭೋಗಗಳಲ್ಲಿಯೂ ಅನಾಶಕ್ತಿ- ಯಿಂದಿರುವುದು ಆತ್ಮಸುಖಕ್ಕೆ ಸಾಧಕವಾಗಿದೆ. ಇದನ್ನು ಕುರಿತು ಮನುಸ್ಮೃತಿಯಲ್ಲಿ ಹೀಗೆ ಹೇಳಿದೆ:

**ಅಲಾಭೇ ನ ವಿಷಾದೀ ಸ್ಯಾಲ್ಲಾಭೇ ಚೈವ ನ ಹರ್ಷಯೇತ್ ।**
**ಪ್ರಾಣಯಾತ್ರಿಕಮಾತ್ರಃ ಸ್ಯಾನ್ಮಾತ್ರಾಸಂಗ ವಿವರ್ಜಿತಃ ॥** (೬. ೫೭.)

"ಲಾಭವಾಗದೆ ಇದ್ದರೆ ಕುಗ್ಗಬಾರದು. ಲಾಭವಾದರೆ ಹಿಗ್ಗಬಾರದು. ಈ ಬಗೆಯಾಗಿ (ಮಾತ್ರಾಸಂಗ- ವಿವರ್ಜಿತಂ) ಪ್ರಾಕೃತಿಕ ಭೋಗಗಳ ಸೋಂಕು- ಸಂಬಂಧವನ್ನು ಶಕ್ಯವಿದ್ದಷ್ಟು ಹಚ್ಚಿಕೊಳ್ಳದೆ ಜೀವನ- ಯಾತ್ರೆಯನ್ನು ಸಾಗಿಸಬೇಕು." ಈ ಮನುವಚನವೂ ಗೀತೆಯ 'ಸಮದುಃಖಸುಖಿ' ಆಗು, ಎಂಬ ಉಪದೇಶ ದಂತೆಯೆ ಇದೆ. ಇಲ್ಲಿ ಕಾಣಿಸಿಕೊಳ್ಳುವ 'ಮಾತ್ರ' ಶಬ್ದಕ್ಕೆ ಮೇಲಿನಂತೆಯೆ 'ಪ್ರಾಕೃತಿಕ ಭೋಗ ಸಾಧನ' ವೆಂದು ಅರ್ಥವಿದೆ. ಕೆಲವರು 'ಮಾತ್ರ' ಎಂದರೆ ಇಂದ್ರಿಯಗಳು ಎಂದು ಅರ್ಥಮಾಡುತ್ತಾರೆ ಹಾಗಾದರೆ 'ಮಾತ್ರಾಸ್ಪರ್ಶ'ವೆಂದರೆ ಪ್ರಾಕೃತಿಕ ಭೋಗಗಳೊಡನೆ ಬರುವ ಇಂದ್ರಿಯಗಳ ಸಂಬಂಧ' ಎಂದು ಅರ್ಥ- ಮಾಡಬೇಕಾಗುವುದು. ಈ ಅರ್ಥವು ಅಯೋಗ್ಯವಲ್ಲ- ದಿದ್ದರೂ ನಮ್ಮ ಅಭಿಪ್ರಾಯದಂತೆ ಇದು ಅಷ್ಟು ಉಚಿತ- ವಾಗಿಲ್ಲ.

### ಮಾತ್ರಾ-ಸ್ಪರ್ಶವು

ಪೃಥ್ವಿ, ಆಪ್. ತೇಜ, ವಾಯು ಮತ್ತು ಆಕಾಶಗಳೆಂಬ ಪಂಚಮಹಾಭೂತಗಳು. ಗಂಧ, ರಸ, ರೂಪ, ಸ್ಪರ್ಶ ಮತ್ತು ಶಬ್ದಗಳೆಂಬುವು ಅವುಗಳ ಅನುಕ್ರಮವಾದ ಗುಣಗಳು. ಈ ಗುಣಗಳು ಅನುಕ್ರಮವಾಗಿ ಮೂಗು, ನಾಲಗೆ, ಕಣ್ಣು, ತೊಗಲು ಮತ್ತು ಕಿವಿಗೆ ಗೊತ್ತಾಗು- ವುವು. ಮತ್ತು ಇಂದ್ರಿಯಗಳಿಗೆ ಪಂಚಮಹಾಭೂತಗಳ ಗುಣಗಳ ಹೊರಗಿನ ಸೋಂಕು ಉಂಟಾದೊಡನೆ (ಮಾತ್ರಾಸ್ಪರ್ಶಃ) ಸುಖದುಃಖ ಅಥವಾ ಲಾಭಹಾನಿ- ಗಳಾದ ಭಾಸವಾಗುವುದು.

ಮೂಗಿಗೆ ವಾಸನೆಯು ತಿಳಿಯುತ್ತದೆ. ಅದಕ್ಕೆ ಸುಗಂಧ- ದಿಂದ ಸುಖವೂ ದುರ್ಗಂಧದಿಂದ ದುಃಖವೂ ಎನಿಸು- ವುದು. ನಾಲಗೆಯು ರುಚಿ ನೋಡುವುದು ಸಿಹಿಯಿಂದ ಸುಖಪಡುವುದು; ಕಹಿಯಿಂದ ದುಃಖಗೊಳ್ಳುವುದು. ಕೆಲರಿಗೆ ಹುಳಿ, ಕೆಲರಿಗೆ ಒಗರು ಸೇರುವುದು. ಯಾರಿಗೆ ಯಾವ ರಸವು ಸೇರುವುದೊ ಅದರಿಂದ ಅವರಿಗೆ ಸುಖ- ವೆನಿಸುವುದು. ಕಣ್ಣು ರೂಪನೋಡುವುದು ಸುರೂಪದಿಂದ ಸುಖ, ಕುರೂಪದಿಂದ ದುಃಖಗೊಳ್ಳುವುದು. ತೊಗಲಿಗೆ ಸೋಂಕಿನ ಸುಖವು. ಅದರಲ್ಲಿ ಮಿದುವಿದ್ದರೆ ಸೊಗಸು- ವುದು. ಬಿರುಸಿದ್ದರೆ ಸೊಗಸದು, ಕಿವಿಗೆ ಸ್ವರಜ್ಞಾನವಿದೆ. ಮಂಜುಲಸ್ವರದಿಂದ ಸುಖವೂ ಕರ್ಕಶದಿಂದ ದುಃಖವೂ ಉಂಟಾಗುವುದು.

ಪ್ರಕೃತಿ ತತ್ವಗಳೊಡನೆ (ಮಾತ್ರಾಸ್ಪರ್ಶಾಃ) ಇಂದ್ರಿಯಗಳ ಸಂಬಂಧವುಂಟಾದೊಡನೆ ಶೀತೋಷ್ಣ, ಸುಖದುಃಖಾದಿ ಅನುಭವವು ಉಂಟಾಗುವುದು. ಈ ಸಂಬಂಧವನ್ನು ತಪ್ಪಿಸಿಕೊಂಡಲ್ಲಿ ಈ ಸುಖದುಃಖಗಳ ಕೋಟಲೆಗೆ ಒಳಗಾಗಬೇಕಾಗುವ ಕಾರಣವೇ ಇಲ್ಲ. ಕುರಡನಿಗೆ ಸೌಂದರ್ಯದ ಸುಖವೂ ಇಲ್ಲ. ಕುರೂಪದ ದುಃಖವೂ ಇಲ್ಲ. ಕಿವುಡನಿಗೆ ಕೋಮಲ ಸ್ವರಗಳ ಹಿಗ್ಗೂ ಆಗದು; ಕರ್ಕಶ ನಾದದ ಕೂಗ್ಗೂ ಆಗದು ಆದುದ-ರಿಂದ ಈ ಲೋಕದೊಳಗಿನ ಎಲ್ಲ ಸುಖದುಃಖಗಳ ಮೂಲ ಕಾರಣವು ಇಂದ್ರಿಯಗಳೊಡನೆ ಬಾಹ್ಯಸೃಷ್ಟಿಯ ಸಂಬಂಧದಲ್ಲಿಯೆ ಉಂಟು. ಆದುದರಿಂದ ಸುಖ-ದುಃಖಾದಿ ಪೀಕಲಾಟದಿಂದ (ದ್ವಂದ್ವದೊಳಗಿಂದ) ಹೊರಬೀಳಲು ಈ ಸಂಬಂಧವನ್ನು ತಪ್ಪಿಸಿಕೊಂಬುವು-ದೊಂದೇ ಉಪಾಯವು.

### ದ್ವಂದ್ವವು ಅನಿತ್ಯ.

ಸುಖವು ಸೋಂಕಿನಲ್ಲಿರುವುದೆಂಬುದು ನಿಜ. ಆದರೆ ಆ ಸೋಂಕುಗೂ ಮಿತಿಯುಂಟು. ಅದು ಮೀರಿದರೆ ಮೊದಲು ಸುಖವೆನಿಸುತ್ತಿದ್ದರೂ ಮುಂದೆ ದುಃಖದಾ-ಯಕವಾಗುವುದು. ಮಂಡಿಗೆಯ ಸೋಂಕಿನಿಂದ ಮೊದಲು ನಲಿವ ನಾಲಗೆಯೆ, ಕೆಲ ಹೊತ್ತಿನ ಮೇಲೆ ಅದೇ ಮಂಡಿಗೆಯನ್ನು ಕಂಡು ಮುರುಟಿಕೊಳ್ಳುತ್ತದೆ! ಹಂಸತೂಲದ ಹಾಸಿಗೆಯ ಮೇಲೆ ಹಲವುದಿನ ಮಲಗುವ ರೂಢಿಯಾದ ಬಳಿಕ ಆ ಹಾಸಿಗೆಯೆ ಬಿರುಸೆನಿಸುವುದು; ಅದಕ್ಕೂ ಮಿದುವಾದ ಇನ್ನೊಂದು ಹಾಸಿಗೆಯಿದ್ದರೆ....! ಎಂದು ಜೀವವು ತಳಮಳಿಸುವುದು! ಇದೂ ಅಲ್ಲದೆ ಬರಿ ಸೋಂಕಿನಿಂದ ಎಂದೂ ಸುಖವಾಗದು. ಒಳಗ ಣಿಂದ ಸುಖವನ್ನು ಅನುಭವಿಸುವ ಸಿದ್ಧತೆಯಿರಬೇಕು. ಹಸಿವು ಬೇಕು. ಇಲ್ಲದೆ ಪಕ್ವಾನ್ನಕ್ಕೆ ರುಚಿಯಿಲ್ಲ! ಇನ್ನೊಂದು ಮಹತ್ವದ ಸಂಗತಿಯೆಂದರೆ ಎಲ್ಲರಿಗೂ ಯಾವಾಗಲೂ ಒಂದೇ ಬಗೆಯ ಪದಾರ್ಥವು ಸುಖ-ದಾಯಕವಾಗಲಾರದು. ಒಬ್ಬರಿಗೆ ಸಿಹಿ ಸೇರಿದರೆ, ಇನ್ನೊಬ್ಬರಿಗೆ ಕಾರ ರುಚಿಕರವೆನಿಸುವುದು. ಒಬ್ಬರಿಗೆ ಬೇಡವಾದುದು ಇನ್ನೊಬ್ಬರಿಗೆ ಬೇಕಾಗಬಹುದು. ಆದುದರಿಂದ ಸುಖವೆಂಬುದು ಬಾಹ್ಯ ಪದಾರ್ಥಗಳಲ್ಲಿಯೆ ಇದೆಯೆಂದು ಗ್ರಹಿಸಲಿಕ್ಕಾಗದು.

ಯಾವುದೇ ಸುಖವು ಸುಖಕರವಾಗಿ ಭಾಸವಾಗ-ಬೇಕಾದರೆ ಒಳಗಿನ ಹಸಿವು (ಬೇಡಿಕೆ), ಇಂದ್ರಿಯಗಳ ಆರೋಗ್ಯಕರ ಸ್ಥಿತಿ, ಮತ್ತು ಅನುಕೂಲವಾದ ಬಾಹ್ಯ-ಪರಿಸ್ಥಿತಿ ಇವು ಮೂರೂ ಕೂಡಿ ಬರಬೇಕು. ಇವುಗಳಲ್ಲಿ ಯಾವುದೊಂದು ಕಡಿಮೆಯಿದ್ದರೂ, ಎಂತಹ ಶ್ರೇಷ್ಠ-ಸುಖವಾದರೂ ಸೊಗಸದು. ಆಗ ಸುಖದ ಬದಲು ದುಃಖವೆ ಆಗುವುದು.

$$\left.\frac{\text{ಹಸಿವು ಅಥವಾ ಬೇಡಿಕೆ} + \text{ಇಂದ್ರಿಯಗಳ ಆರೋಗ್ಯ}}{\text{ಮಾತ್ರಾ ಸ್ಪರ್ಶ}}\right\} = \text{ಸುಖ ಅಥವಾ ದುಃಖ}$$

ಈ ಸುಖದುಃಖಗಳು (ಆಗಮಾ—ಅಪಾಯಿನಃ) ಬರುವುವು ಮತ್ತು ಹೋಗುವುವು. ಅವು ಸ್ಥಿರವಾದುವು ಗಳಲ್ಲ. ಚಳಿಗಾಲದಲ್ಲಿ ಸುಖಕರವಾದ ಉಷ್ಣತೆಯು ಬೇಸಗೆಯಲ್ಲಿ ದುಃಖಕ್ಕೆ ಕಾರಣವಾಗುತ್ತದೆ; ಆಗ ತಂಪು ಸುಖಕರ! ಇದರಿಂದ ಸುಖದುಃಖಗಳು ಅನಿತ್ಯವೆಂಬುದು ಸಿದ್ಧವಾಗುತ್ತದೆ. ಯಾವಾಗಲೂ ಸುಖಕರವಾದ ಅಥವಾ ದುಃಖಕರವಾದ ವಸ್ತುವೇ ಭೂಲೋಕದಲ್ಲಿಲ್ಲ.

ಈ ಲೋಕವು ದ್ವಂದ್ವಮಯವಾಗಿದೆ. ಶೀತ-ಉಷ್ಣ, ಸುಖ-ದುಃಖ, ಲಾಭ-ಹಾನಿ, ಜಯ-ಪರಾಜಯ, ಎಂಬಿವೇ ಮೊದಲಾದ ಎರಡರ ತೊಡಕಿನಲ್ಲಿ ಹೆಣೆದು ಕೊಂಡ ಲೋಕವಿದು. ಇದರಲ್ಲಿ ಕೇವಲ ಒಂದನ್ನೆ ಆಯ್ದುಕೊಂಡು ಇನ್ನೊಂದನ್ನು ಬಿಟ್ಟುಬಿಡುವುದು ಶಕ್ಯವಿಲ್ಲ. ಒಂದರೊಡನೆ ಇನ್ನೊಂದು ನೆಳಲು ಬೆಳಕಿ-ನಂತೆ ಹೊಂದಿಕೊಂಡಿದೆ. ನೆಳಲಿಲ್ಲದ ಬೆಳಕಿಲ್ಲ. ತನಗೆ ಬೇಕಾದುದನ್ನಷ್ಟೇ ಇಟ್ಟುಕೊಂಡು ಬೇಡವಾದುದನ್ನು ಸಂಪೂರ್ಣ ನಷ್ಟಪಡಿಸುವುದೂ ಸಾಧ್ಯವಿಲ್ಲ. ಏಕೆಂದರೆ ಒಬ್ಬನಿಗೆ ಒಂದು ಅನುಕೂಲವಾಗಿದ್ದರೆ ಇನ್ನೊಬ್ಬನಿಗೆ ಅದು ಪ್ರತಿಕೂಲವಾಗಿರಬಹುದು. ಅಥವಾ ಒಬ್ಬನಿಗೆ ಇಂದು ಅನುಕೂಲವಾಗಿದ್ದುದೇ ನಾಳೆ ಪ್ರತಿಕೂಲ-ವೆನಿಸುವುದು. ಆದುದರಿಂದ ಈ ಲೋಕವು ದ್ವಂದ್ವ ಮಯವಾಗಿರುವುದು ಅಪರಿಹಾರ್ಯ. ಸುಖಕ್ಕಾಗಿ ಕೆಲವೊಂದು ದುಃಖವನ್ನು ಸಹಿಸಲಿಕ್ಕೂ ಮನಸು ಸಿದ್ಧ-ವಾಗಿರಬೇಕು. ಪ್ರತಿಕೂಲ ಸಂಗತಿಗಳು ಈ ಲೋಕ-ದಲ್ಲಿ ತಪ್ಪಿದುವಲ್ಲವೆಂಬುದನ್ನು ನೆನಪಿನಲ್ಲಿ ಇಟ್ಟು-ಕೊಂಡೇ ಮನುಷ್ಯನು ತನ್ನ ಕಾರ್ಯಕ್ರಮಗಳನ್ನು ಯೋಜಿಸುತ್ತಿರಬೇಕು.

### ತಾಳ್ಮೆ.

ಸುಖದುಃಖಗಳೊಳಗಿಂದ ಪಾರಾಗಲು, ಪ್ರತಿಕೂಲ ಪರಿಸ್ಥಿತಿಯನ್ನು ಎದುರಿಸಲು ಒಂದು ಸೊಗಸಾದ ಉಪಾಯವಿದೆ. ತಡೆ ಮತ್ತು ತಾಳು. ತಾಳ್ಮೆಗೇ ಗೀತೆ ಯಲ್ಲಿ ತಿತಿಕ್ಷೆಯೆಂದು ಹೇಳಿದೆ. ತಾಳಿದವನೇ ಬಾಳುವ ನೆಂಬ ಕನ್ನಡ ಗಾದೆಯಲ್ಲಿ ಗೀತೆಯ ಉಪದೇಶದ ಸಾರ ಎದೆ. 'ತಿತಿಕ್ಷಸ್ವ', ಎಂದು ಅರ್ಜುನನಿಗೆ ಶ್ರೀಕೃಷ್ಣನ

ಉಪದೇಶವಿದೆ. ಏನೊಂದನ್ನು ತಡೆದುಕೊಂಬುವುದಕ್ಕೆ ಆಗದವನು—ತಾಳ್ಮೆಯಿಲ್ಲದವನು ಬಾಳಲು ಆಯೋಗ್ಯನಾಗುವನು. ಸುಖದುಃಖ, ಲಾಭಹಾನಿ ಮೊದಲಾದ ಎರಡರ ಇರುಕಿನಲ್ಲಿ ಸಿಲುಕದೆ ಇವುಗಳನ್ನು ಮೀರಿ, ಮೀರಿದ ಆನಂದಿಯಾಗಿ ಬಾಳಲು ಮಾನವನು ತಾಳ್ಮೆಯ ವಜ್ರಕವಚವನ್ನು ತೊಟ್ಟುಕೊಳ್ಳಬೇಕು. ತನಗೆ ದುಃಖ, ಹಾನಿ ಮೊದಲಾದವುಗಳ ಆಘಾತವಾಗದಂತೆ ತನ್ನ ಸುತ್ತಲೂ 'ತಡೆ'ಯ ಕೋಟೆಯನ್ನು ಕಟ್ಟಿಕೊಳ್ಳಬೇಕು. ತಾಳ್ಮೆಯೆ ತಪಸ್ಸು. ಸುಖದುಃಖಗಳ ಆಘಾತಗಳಲ್ಲಿ ಅವಿಚಲಿತನಾಗಿರಲು ಬರುವುದೆ ಈ ತಪಸ್ಸಿನ ಸಿದ್ಧಿಯು.

### ಧೀರನು

ತಾಳ್ಮೆಯುಳ್ಳವನೇ ಧೀರನೆಂದು ಗೀತೆಯು ಹೇಳುತ್ತದೆ. ತಿಳುವಳಿಕೆಯಿಲ್ಲದವನಿಂದ ತಾಳಿಕೊಳ್ಳುವುದಕ್ಕೆ ಆಗುವುದಿಲ್ಲ. ತಡೆಯಲಿಕ್ಕೂ ಆಗುವದಿಲ್ಲ. ಎರಡರ ಇರುಕಿನಲ್ಲಿ ನೋಯದವನು, ಬೇಯದವನು (**ಏತೇ ಮಾತ್ರಾಸ್ಪರ್ಶಾಃ ಯಂ ನ ವ್ಯಥಯಂತಿ**) ಅವನೇ ಧೀರನು. ಈತನು ಸುಖದುಃಖಗಳನ್ನು ಸಮವೆಂದು ನಂಬುತ್ತಾನೆ; (**ಸಮದುಃಖ ಸುಖಃ ಧೀರಃ**) ಯಾವ ಸ್ಥಿತಿಯಲ್ಲಿಯೂ ಕದಡಿದ ಮನಸಿನವನಾಗುವದಿಲ್ಲ. 'ತಿಳಿ'ದವನಾಗಿರುತ್ತಾನೆ. ಸಮಬುದ್ಧಿಯಿಂದ ಕರ್ತವ್ಯತತ್ಪರನಾಗುತ್ತಾನೆ. ಸುಖದಲ್ಲಿ ಹಿಗ್ಗಿ ಹೆಮ್ಮೆಪಡುವುದಿಲ್ಲ ದುಃಖದಲ್ಲಿ ಕಂಗೆಡುವುದಿಲ್ಲ ಇದು ಒಮ್ಮೆಲೆ ಎಲ್ಲರಿಗೆ ಸಾಧ್ಯವಿಲ್ಲ. ಒಪ್ಪಿಯ ಎದೆಗಾರಿಕೆಯು ಬೇಕು

ಈ ಬಗೆಯ ಶಕ್ತಿಯನ್ನು ಬೆಳಿಸಿಕೊಂಡವರಿಗೆ ಈ ಲೋಕದಲ್ಲಿ ಕಷ್ಟವೆಂಬುದೆ ಇಲ್ಲ. ಬಡತನವು ಆತನನ್ನು ಹೆದರಿಸದು; ಸಿರಿವಂತಿಕೆಯು ಆತನಿಗೆ ಮೋಹದಲ್ಲಿ ಕೆಡುಹದು ಯಾವ ಸ್ಥಿತಿಯೆ ಬರಲಿ, ಅದನ್ನು ಆತನು ಮುನ್ನಡೆಗೆ ಅನುಕೂಲವಾಗುವಂತೆಯೆ ತಿರುಗಿಸಿಕೊಳ್ಳಬಲ್ಲನು. ಇಂತಹ ತಿಳಿದವರಾದ ಧೀರರೇ ಮುಂದಾಳುಗಳಾಗಲು ಅರ್ಹರು. ತಾವೇ ತಿಳಿಯದವರು ಉಳಿದವರಿಗೇನು ತಿಳಿಸಬಲ್ಲರು? ಕುರುಡನು ಕುರುಡರಿಗೆ ದಾರಿತೋರಕನಾದಂತೆ!

### ಅಮೃತಸಿದ್ಧಿ

ಪರಿಸ್ಥಿತಿಯ ಸೆಳವಿನಲ್ಲಿ ಯಾರ ಮನಸು ಹರಿದು ಹೋಗುವುದಿಲ್ಲವೊ, ಅನುಕೂಲ ಅಥವಾ ಪ್ರತಿಕೂಲ ಪರಿಸ್ಥಿತಿಯುಲ್ಲಿ ಯಾರು ತಮ್ಮ ಮನಸನ್ನು ಚಂಚಲವಾಗಗೊಡದೆ ಅಂಕೆಯುಲ್ಲಿರಿಸಬಲ್ಲರೊ, ಅವರೇ ಶ್ರೇಷ್ಠವಾದ ಮನೋಬಲವುಳ್ಳ ಧೀರರು. ಇಂತು ಮನಸ್ಸನ್ನು ಹೊಯ್ದಾಡಗೊಡದೆ ಸಮತೂಕದಲ್ಲಿರಿಸಬಲ್ಲವರಿಗೆ ಅಮೃತತ್ವವು ಪ್ರಾಪ್ತವಾಗುತ್ತದೆ. (**ಅಮೃತತ್ವಾಯ ಕಲ್ಪತೇ;**) ಇದುವೆ ಅಮೃತಸಿದ್ಧಿ. ದ್ವಂದ್ವಗಳ ಎಳೆದಾಟದಲ್ಲಿ ಮನಸ್ಸನ್ನು ಅಲೆದಾಡಗೊಡದೆ ನಲೆಯಾಗಿ ನಿಲ್ಲಿಸಬಲ್ಲವನು ಅಮರನಾಗುವ ಸಾಮರ್ಥ್ಯವನ್ನು ಪಡೆಯುವನು.

### ಸಾವು ಮತ್ತು ಅಮರತ್ವ.

ಹಣತಿಯೊಳಗಿನ ಸಣ್ಣ ದೀಪವು ಸ್ವಲ್ಪ ಗಾಳಿಯ ಅಲೆತಕ್ಕೂ ಹೊಯ್ದಾಡಿ, ನಂದುವುದು. ಆದರೆ ಕಾಡಿನೊಳಗಿನ ಕಿಚ್ಚು ಗಾಳಿ ಹೆಚ್ಚಿದಂತೆ ದಗದ್ಧಗನೆ ಉರಿಯಹತ್ತಿ ಎಲ್ಲೆಡೆಗೂ ತನ್ನ ಕೆನ್ನಾಲಗೆಗಳನ್ನು ಚಾಚುವುದು. ಶಕ್ತಿಹೀನರಿಗೆ ಪ್ರತಿಕೂಲವಾದ ಸಂಗತಿಯೇ ಬಲವಂತರಿಗೆ ಬೆಂಬಲ ಕೊಡುತ್ತದೆ! ಮನಸ್ಸಿನ ಚಂಚಲತೆಯಿಂದ ನಿಶ್ಯಕ್ತರಾದವರಿಗೆ ಅಲ್ಪ ಕಾರಣವು ಕೇಡನ್ನುಂಟುಮಾಡುವುದು. ಆದರೆ ಸಮತ್ವ ಬುದ್ಧಿಯ ಪ್ರಭಾವದಿಂದ ಮನೋದಾರ್ಢ್ಯವು ಬೆಳೆಯುವುದು. ಇಂತಹರಿಗೆ ವಿಪರೀತ ಪರಿಸ್ಥಿತಿಯೂ ಆವರೊಳಗಿನ

| | | | | | | |
|---|---|---|---|---|---|---|
| [illegible] | ಆತ್ಮ | .... | .... | ಈ ಸ್ಥಿತಿಯೊಳಗಿನ ಸಹಜಾನಂದ | | [illegible] |
| | ಬುದ್ಧಿ | .... | .... | ,, | ,, ಸಹಜ ಜ್ಞಾನ | |
| | ಸುಷುಪ್ತ ಮನಸು (ದಿಕ್ಕಾಲಾತೀತ) | | | ,, | ,, ಕಾಲಾತೀತ ಮತ್ತು ಸ್ಥಲಾತೀತ ಅನುಭವಗಳು | |
| [illegible] | ಜಾಗೃತ ಮನಸು (ದಿಕ್ಕಾಲಾವಚ್ಛಿನ್ನ) | | | ,, | ,, ದೇಶಕಾಲಾದಿ ಭೇದಗಳ ಅನುಭವ | [illegible] |
| | ಪ್ರಾಣ | .... | .... | ,, | ,, ತನ್ನ ನಿಯಾಮಕ ಶಕ್ತಿಗಳ ಅನುಭವ | |
| [illegible] | ಇಂದ್ರಿಯಗಳು | | .... | ,, | ,, ದ್ವಂದ್ವಗಳ ಅನುಭವ | [illegible] |
| | ಶರೀರ | .... | .... | ,, | ಜನ್ಮಮರಣಗಳ ಅನುಭವ | |

ಅಮರ ಶಕ್ತಿಯನ್ನು—ಪ್ರತಿಭೆಯನ್ನು ಕುದುರಿಸಲಿಕ್ಕೆ ಕಾರಣವಾಗುವುದು. ಪರಿಸ್ಥಿತಿಯ ಕೆಳಗೆ ಸಿಕ್ಕು ನವೆವುದೇ ಸಾವು. ಪರಿಸ್ಥಿತಿಯನ್ನು ಹಿಡಿತದಲ್ಲಿ ತಂದುಕೊಂಡು ಅದರ ಬೆಂಬಲದಿಂದ ಕಾರ್ಯಗಳನ್ನು ಜರುಗಿಸುವುದೇ ಅಮರತ್ವ. ನಶ್ವರ ವಸ್ತುಗಳ ಸಂಗತಿಯಲ್ಲಿರುವದರಿಂದ ನಾಶವು ನಿಶ್ಚಿತ. ಶಾಶ್ವತದ ಆಧಾರ ಮೇಲೆ ನಿಂತವರಿಗೆ ಮರಣದ ಹೆದರಿಕೆಯಿಲ್ಲ.

ಮಾನವನಲ್ಲಿ ಶಾಶ್ವತವಾದ ಅಮರಭಾಗವು ಆವುದು, ಅಶಾಶ್ವತವಾದ ಸಾವಿಗೀಡಾಗತಕ್ಕ ಭಾಗವು ಆವುದು ಎಂಬುದು ಮೇಲಣ ಪಟ್ಟಿಯಿಂದ ಗೊತ್ತಾಗಬಹುದು. ಇದರಲ್ಲಿ ಶಾಶ್ವತವಾದುದನ್ನೇ ನೆರೆ ನಂಬಿದವರಿಗೆ ಅಮೃತತ್ವವು ಪ್ರಾಪ್ತವಾಗುವದೆಂದು ಬೇರೆ ಹೇಳಬೇಕಾಗಿಲ್ಲ.

### ವಿಕಾಸಕ್ರಮ

ಸಾಮಾನ್ಯ ಮನುಷ್ಯನು ದೇಹವೆ ತಾನೆಂದು ಬಗೆಯುವನು. ಇದು ದೇಹಸ್ಥಿತಿ, ಇವನಿಗೆ ಇದಕ್ಕೂ ಮೇಲಣ ಮಟ್ಟದ ಎಳ್ಳನಿತೂ ಅನುಭವವು ಇರುವುದಿಲ್ಲ. ದೇಹದೊಡನೆ ಹುಟ್ಟಿದನೆಂದೂ ದೇಹನಾಶದೊಡನೆ ತನ್ನ ಕೊನೆಯೂ ಆಯ್ತೆಂದು ಈತನ ನಂಬುಗೆಯಿರುತ್ತದೆ. ಇದಕ್ಕೂ ಮುಂದಿನ ಮಟ್ಟದಲ್ಲಿರುವವರು ಶರೀರದಿಂದ ಭಿನ್ನವಾದ ಇಂದ್ರಿಯ ಶಕ್ತಿಗಳನ್ನು ಅರಿತಿರುತ್ತಾರೆ. ಇವರು ಸುಖ-ದುಃಖ, ಶೋಕ-ಮೋಹಾದಿ ದ್ವಂದ್ವಗಳಲ್ಲಿ ಓಲಾಡುತ್ತಾರೆ. ಇವರಿಗಿಂತ ಮೇಲಣ ಮಟ್ಟಕ್ಕೆ ಹೋದವರು ಪ್ರಾಣಾಯಾಮಾದಿ ಸಾಧನಗಳಿಂದ ದೇಹವನ್ನು ತಮ್ಮ ಪ್ರಾಣಶಕ್ತಿಯ ಕೈಯೊಳಗಿನ ಉಪಕರಣವನ್ನಾಗಿ ಮಾಡಿಕೊಳ್ಳುತ್ತಾರೆ. ಒಂದೇ ಪ್ರಾಣವು, ದೇಹದ ಎಲ್ಲ ಅಂಗಾಂಗಗಳಲ್ಲಿ ವ್ಯಾಪಿಸಿ, ಇಂದ್ರಿಯ ವ್ಯಾಪಾರಗಳನ್ನು ನಡೆಸುವಾಗ ಅದು ಬೇರೆ ಬೇರೆಯಾಗಿರುವಂತೆ ಭಾಸವಾಗುತ್ತದೆ, ಭಿನ್ನ ಭಿನ್ನ ವಸ್ತುಗಳಲ್ಲಿ ವ್ಯಾಪಿಸಿಕೊಂಡಿರುವ ಅಭಿನ್ನ ವಸ್ತುವಿನ ಅನುಭವವು ಬರುವುದು. ಇದಕ್ಕಿಂತ ಕೆಳಗಣ ಎರಡೂ ಮಟ್ಟದಲ್ಲಿರುವವರಿಗೆ ಶಾರೀರಿಕ ಮತ್ತು ಇಂದ್ರಿಯ ವಿಷಯಕ ಭಿನ್ನತೆಯು ಎಲ್ಲಿಯೆನೂ ಗೋಚರವಾಗುವದು ಆದರೆ ಪ್ರಾಣಶಕ್ತಿಯ ಒಡೆತನವನ್ನು ಸಂಪಾದಿಸಿ ಅದರ ವ್ಯಾಪಾರಗಳನ್ನು ಅಂಕೆಯಲ್ಲಿಟ್ಟುಕೊಂಡವನಿಗೆ ಭಿನ್ನ ಭಿನ್ನ ಪದಾರ್ಥಗಳನ್ನು ವ್ಯಾಪಿಸಿರುವ ಅಭಿನ್ನ ವಸ್ತುವಿನ ಅನುಭವವು ಸ್ವಲ್ಪ ಸ್ವಲ್ಪವಾಗಿ ಬರಲಾರಂಭಿಸುವುದು.

ಈ ಮಟ್ಟದಲ್ಲಿರುವವರಿಗೆ ದೇಹ ಮತ್ತು ಇಂದ್ರಿಯಗಳು ತನ್ನಿಂದ ಭಿನ್ನವಾದುವುಗಳು, ಎಂಬ ಅನುಭವವು ಬರುವುದು. ತನ್ನ ಆತ್ಮಶಕ್ತಿಯ ಪೋಷಣೆಯಿಂದಲೇ ಈ ನಾಶವಂತ ಶರೀರ ಮತ್ತು ಇಂದ್ರಿಯಗಳು ಉಳಿದಿವೆ; ಅದು ತಪ್ಪಿದ ಮರುಕ್ಷಣದಲ್ಲಿ ಅವು ಅಳಿಯುವುವು, ಎಂಬುದನ್ನೂ ಇವರು ಮನಗಂಡಿರುತ್ತಾರೆ. ಆದರೂ ಇದರಲ್ಲಿ ಪ್ರಾಣಾಪಾನಗಳ ಭೇದವು ಇದ್ದೇ ಇರುತ್ತದೆ.

ಪ್ರಾಣಾಯಾಮದ ಬಲದಿಂದ ಇವರ ಮನೋಬಲವು ಹೆಚ್ಚುತ್ತದೆ. ಆದರೂ ಸಂಕಲ್ಪ-ವಿಕಲ್ಪಗಳು ಸಂಪೂರ್ಣವಾಗಿ ನಿಂತಿರುವದಿಲ್ಲ. ಈ ಅವಸ್ಥೆಯಲ್ಲಿ ಇವರ ಇಚ್ಛಾಶಕ್ತಿಯು ಫಲಿಸಹತ್ತುವುದು. ಇಂಪ್ರಿತ್ಸ ಪ್ರಾಪ್ತಿಯ ಲಕ್ಷಣಗಳಿವು. ಬಯಸಿದ್ದು ಕೈಗೆ ಬರಲಾರಂಭಿಸುವುದು. ಕಲ್ಪವೃಕ್ಷದ ಕೆಳಗೆ ಕುಳಿತಿರುವೆವೊ ಏನೊ ಎನ್ನುವಂತೆ ಇಷ್ಟಸಿದ್ಧಿಯು ಕಾಣಿಸಿಕೊಳ್ಳುವುದು. ಆದರೂ ಈ ಸ್ಥಿತಿಯಲ್ಲಿ ಇನ್ನೂ ಸಂಪೂರ್ಣವಾಗಿ ಮನಸ್ಸಿನ ಚಾಂಚಲ್ಯವು ನಷ್ಟವಾಗಿ, ಏಕಾಗ್ರತೆಯು ಸಿದ್ಧಿಸಿರುವುದಿಲ್ಲ.

ಸಾಧಕನು, ಈ ಮಟ್ಟದಿಂದ ಮುಂದಡಿಯಿಡಲು, ಯಾವಾಗಲೂ ತನ್ನನ್ನು ಶುಭಸಂಕಲ್ಪಿಯಾಗಿಸುವನು. ಅಶುಭ ಸಂಕಲ್ಪಗಳನ್ನು ಸೋಂಕಗೊಡನು. ಇದರಿಂದ ಧ್ಯಾನಧಾರಣಗಳಲ್ಲಿ ಆತನ ಪ್ರಗತಿಯಾಗುವುದು. ಆಗ ದಿಕ್ಕಾಲಾದಿ ಬಂಧನಗಳಲ್ಲಿ ಇದ್ದುಕೊಂಡೇ ಸಂಕಲ್ಪ-ವಿಕಲ್ಪಾದಿಗಳನ್ನು ನಡಸುವ ಜಾಗೃತ ಮನಸ್ಸು ಸ್ಥಿರ (ಸ್ತಬ್ಧ)ವಾಗುವುದು. ಇದು ಸ್ತಬ್ಧವಾಗುತ್ತಲೆ ಸುಷುಪ್ತ ಮನಸ್ಸು (ದಿಕ್ಕಾಲಾತೀತವಾದುದು) ತನ್ನ ಕಾರ್ಯವನ್ನು ಆರಂಭಿಸುವುದು. ಗೀತೆಯಲ್ಲೂ ಈ ವಿಚಾರವು ಬಂದಿದೆ.

### ನಿದ್ದೆ ಮತ್ತು ಎಚ್ಚರ

ಯಾ ನಿಶಾ ಸರ್ವಭೂತಾನಾಂ ತಸ್ಯಾಂ
ಜಾಗರ್ತಿ ಸಂಯಮೀ ।
ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ
ಪಶ್ಯತೋ ಮುನೇಃ ॥ —ಭ. ಗೀ. ೨.೬೯

"ಯಾವಾಗ ಎಲ್ಲರಿಗೂ ಇರುಳೊ ಆಗ ಸಂಯಮಿಗೆ ಎಚ್ಚರವು. ಮತ್ತು ಯಾವಾಗ ಎಲ್ಲರಿಗೂ ಎಚ್ಚರವೊ ಆಗ ದ್ರಷ್ಟಾರನಾದ ಮುನಿಗೆ ಇರುಳಾಗಿರುವುದು." ಜನಸಾಮಾನ್ಯರು ಜಾಗೃತ ಸ್ಥಿತಿಯೊಳಗಿನ ತಮ್ಮ ಮನೋವ್ಯಾಪಾರಗಳಲ್ಲಿ ಎಚ್ಚರಾಗಿರುತ್ತಾರೆ ಮತ್ತು ಇವರು ತಮ್ಮ ಉಚ್ಚ ಮನಸ್ಸನ್ನು (ಸುಷುಪ್ತ) ಅರಿಯರು. ಅಲ್ಲಿ ಯಾವಾಗಲೂ ಇವರ ಪಾಲಿಗೆ ಇರುಳೇ. ಆದರೆ ಯೋಗಿಗಳು ಆ ಉಚ್ಚ ಮನಸಿನಿಂದ ಯಾವಾಗಲೂ ಎಚ್ಚತ್ತವರಾಗಿರುತ್ತಾರೆ. ಇವರ ವ್ಯಾವಹಾರಿಕ ಮನಸ್ಸು ಮಲಗಿರುತ್ತದೆ. ಆದುದರಿಂದ ಯೋಗಿಯು ಎಚ್ಚರಿರುವಲ್ಲಿ

ಜನಸಾಮಾನ್ಯರು ಮಲಗಿರುತ್ತಾರೆ. ಜನಸಾಮಾನ್ಯರು ಎಚ್ಚರಿರುವಲ್ಲಿ ಯೋಗಿಗಳು ನಿದ್ರೆಗೆಯ್ಯುತ್ತಾರೆ. ಧ್ಯಾನ, ಅನುಸಂಧಾನದಿಂದ ಯೋಗಿಗಳು ಸಂಕಲ್ಪ ವಿಕಲ್ಪಾತ್ಮಕ ಮನಸ್ಸನ್ನು ದಣಿಸುವರು. ಅದು ದಣಿದು ಸ್ತಬ್ಧವಾಗುತ್ತಲೆ ಸುಷುಮ್ನಾವಸ್ಥೆಯೊಳಗಿನ ಹಿರಿಮನವು ಎಚ್ಚರಿಯುವುದು.

ಈ ಹಿರಿಮನವು ಎಚ್ಚತ್ತಾಗ ಮನುಷ್ಯನು ಸುಖ-ದುಃಖ, ಲಾಭ-ಹಾನಿ, ಶೋಕ-ಮೋಹಾದಿ ಎಲ್ಲ ಬಗೆಯ ದ್ವಂದ್ವಾತೀತನಾಗುತ್ತಾನೆ. ಇವಾವವೂ ಆತನನ್ನು ಗಾಸಿಗೊಳಿಸಲಾರವು. ಈ ಮಟ್ಟದಲ್ಲಿರುವವರಿಗೆ ದೂರದ ದೃಶ್ಯಗಳೂ ಕಣ್ಣೆದುರು ಬಂದು ನಿಲ್ಲಬಲ್ಲವು. ಹಿಂದೆ ಆದ ಅಥವಾ ಮುಂದೆ ಆಗುವ ಘಟನೆಗಳನ್ನೂ ಇವರು ಅರಿಯಬಲ್ಲರು. ಇವರಿಗೆ ನಿತ್ಯ ವರ್ತಮಾನ ಕಾಲವೇ ಇದ್ದಂತೆ ಎನಿಸುವುದು. ಇದಕ್ಕೂ ಮೇಲಣ ಎರಡು ಮಟ್ಟಗಳಿವೆ. ಅವು ಅವರ್ಣನೀಯವಾಗಿವೆ. 'ಸಮ-ದುಃಖ ಸುಖ'ದ ಸಾಮ್ಯಾವಸ್ಥೆಯು ಪೂರ್ಣ ಸಿದ್ಧಿಯು ಅಲ್ಲಿ ದೊರೆಯುವುದು. ಇದರ ಅನುಭವವು, ಅಲ್ಪಾಂಶ-ದಿಂದ ವ್ಯಾವಹಾರಿಕ ಶಾರೀರಿಕ ಅವಸ್ಥೆಯಲ್ಲೂ ಕೆಲಸಾರೆ ಹಲವರಿಗೆ ಆಗೊಮ್ಮೆ ಈಗೊಮ್ಮೆ ಬರುವು-ದುಂಟು.

### ಹಠಯೋಗ ಮತ್ತು ರಾಜಯೋಗ.

ಯಮ, ನಿಯಮ ಆಸನ ಪ್ರಾಣಾಯಾಮಾದಿಗಳ ಸಹಾಯದಿಂದ ಹಠಯೋಗಿಯು ತನ್ನ ಪ್ರಾಣಗಳನ್ನು ಸ್ಥಿರ ಕಟ್ಟಿಕೊಂಡು ಪಡೆಯುವ ಸ್ಥಿತಿಯನ್ನೇ ರಾಜಯೋಗಿಯು ತನ್ನ ತಿಳಿವಿನ ಬಲದಿಂದ ಮನಸ್ಸನ್ನು ಹಿಡಿತದಲ್ಲಿ ತಂದು ಸಂಪಾದಿಸುತ್ತಾನೆ ಇಂತಹರಿಗೆ'ಸಮದುಃಖಸುಖಿಗಳು' 'ಧೀರರು' ಎಂದು ಮುಂತಾಗಿ ಸಾರ್ಥ ಹೆಸರುಗಳಿವೆ. ಪ್ರಾಣಯೋಗಿ (ಹಠಯೋಗಿ)ಗೆ '**ಯೋಗಮಾರ್ಗಿ**' ಯೆಂದೂ ರಾಜಯೋಗಿ ಅಥವಾ ಮನೋಯೋಗಿಗೆ '**ಸಾಂಖ್ಯಮಾರ್ಗಿ**' ಇಲ್ಲವೆ '**ಜ್ಞಾನಮಾರ್ಗಿ**'ಯೆಂದೂ ಕರೆಯುವ ವಾಡಿಕೆಯಿದೆ '**ಸಾಂಖ್ಯ ಮತ್ತು ಯೋಗ-ಗಳು** ಅಭಿನ್ನವಾಗಿವೆ,' ಎಂದು ಮುಂದೆ ಭಗವದ್ಗೀತೆ-ಯಲ್ಲಿಯೆ ಹೇಳಿದೆ. (೫ ೪-೫). ಪ್ರತಿಯೊಬ್ಬ ಮನುಷ್ಯ-ನಿಗೂ ಸುಷುಪ್ತ ಮನಸ್ಸಿನ ಅಲ್ಪಸ್ವಲ್ಪ ಅನುಭವವು ಬಾರದೆ ಇಲ್ಲ. ಆದರೆ ಆ ಸ್ಥಿತಿಯಲ್ಲಿ ತನಗೆ ಬೇಕಾದಾಗ ಈತನು ಇರಲಾರನು. ಯೋಗಿಯ ಮಾತು ಹಾಗಲ್ಲ. ತನ್ನ ಇಷ್ಟವಿದ್ದಾಗ ಆ ಸ್ಥಿತಿಯಲ್ಲಿ ಆತನು ಸೇರಿಕೊಳ್ಳ-ಬಲ್ಲನು. ಇದು ಸಾಧನಾಶಕ್ತಿಯ ಶ್ರೇಷ್ಠತೆಯ ನಿದರ್ಶಕವಾಗಿದೆ.

ಈ ಮೇಲಣ ಮಟ್ಟದ ಅನುಭವವು ಅಲ್ಪಸ್ವಲ್ಪವಾದರೂ ಇದ್ದವನ ನಡೆವಳಿಯ ಬಗೆಯೆ ಬೇರೆಯಾಗುವುದು. ಜನಸಾಮಾನ್ಯರಂತೆ ಇವನು ಕೂಡಲೆ ಸುಖದುಃಖಗಳ ಎಳೆದಾಟದಲ್ಲಿ ನುಗ್ಗುನುಸಿಯಾಗುವುದಿಲ್ಲ. ಮನಸ್ಸಿನ ಹೊಯ್ದಾಟವು ಇವರಲ್ಲಿ ಅಷ್ಟು ಕಾಣಿಸಿಕೊಳ್ಳುವುದಿಲ್ಲ. ದಿಕ್ಕಾಲಾತೀತವಾದ (ಸುಷುಪ್ತ) ಮನಸು ಕೆಲವು ಅಂಶದಿಂದಾದರೂ ಇವರಲ್ಲಿ ಜಾಗೃತವಾಗಿರುವುದೆ ಇದಕ್ಕೆ ಕಾರಣ. ಇಂತಹರನ್ನು ಗುರುತಿಸುವ ಲಕ್ಷಣ-ಗಳು: (೧) ಕಿಂಕರ್ತವ್ಯತಾಮೂಢರಾಗುವುದು ಕಡಿಮೆ; ಇವರಿಗೆ ಉಳಿದವರಿಗಿಂತ ಕೂಡಲೆ ನಿಶ್ಚಿತವಾದ ಸ್ವಕರ್ತವ್ಯಜ್ಞಾನವಾಗುವುದು. (೨) ಉಳಿದವರಿಗಿಂತ ಬೇಗನೆ ಇವರ ನಿರ್ಣಯ ಶಕ್ತಿಯು ಸರಿಯಾದ ನಿರ್ಧಾರಕ್ಕೆ ಬರುವುದು (೩) ಆದುದರಿಂದ ಇವರ ಸೂಕ್ಷ್ಮ ಬುದ್ಧಿಯು ಒಮ್ಮೆಲೆ ಸಿದ್ಧಾಂತಗಳನ್ನು ಒಡ-ನುಡಿಯುವುದು. ಒಳಿಕ ಆ ಸಿದ್ಧಾಂತಗಳನ್ನು ಇವರು ತಮ್ಮ ತರ್ಕ, ಯುಕ್ತಿಗಳ ಸಹಾಯದಿಂದ ವಿಸ್ತರಿಸಿ ಪ್ರತಿಪಾದಿಸುವರು! ಯಾರ ದಿನದ ನಡೆವಳಿಯಲ್ಲಿ ಈ ಕುರುಹುಗಳು ಹೆಚ್ಚಾಗಿ ಸ್ಪಷ್ಟವಾಗಿ ಕಾಣಿಸಿಕೊಳ್ಳು-ವುವೊ ಆ ಪ್ರಮಾಣದಲ್ಲಿ ಅವರ ದಿಕ್ಕಾಲಾತೀತ ಮನಸು ಹೆಚ್ಚು ಜಾಗೃತವಾಗಿದೆಯೆಂದು ತಿಳಿದುಕೊಳ್ಳಬೇಕು.

ಸುಷುಪ್ತ ಮನಸು ದಿಕ್ಕಾಲಾತೀತವಾಗಿರುವಂತೆ ಅವರ ಆತ್ಮನು ಅಕ್ಷಯವೂ ಸ್ಥಲಕಾಲಾದಿ ಬಂಧನಾತೀತ ವಾಗಿದೆ. ಶರೀರವು ಸಾಮಾನ್ಯವಾಗಿ ನೂರುವರುಷ ಬಾಳುವುದು. ಯೋಗಸಾಧನಾದಿಗಳ ಬಲದಿಂದ ಇನ್ನೂ ನೂರಿನ್ನೂರು ವರುಷ ಹೆಚ್ಚು ಹೆಚ್ಚು ತಾಳಬಹುದು. ಆದರೂ ಕೊನೆಗೊಮ್ಮೆ ಅದು ಮಣ್ಣುಗೂಡಲೇ ಬೇಕು. ಹಾಗೆ ಆತ್ಮಕ್ಕೂ ಕೆಲಕಾಲದ ನಂತರ ವಿನಾಶವು ಉಂಟೆ? ಎಂಬ ಸಂದೇಹವು ಉಳಿಯಬಾರದೆಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ್ದೇನೆಂದರೆ:

(೧೬–೧೮) ಉಳ್ಳುದನ್ನು (ಸತ್ಯವನ್ನು) ಅಳಿಸುವುದು ಅಸಂಭವನೀಯವು. ಮತ್ತು ಅಳಿಯುವುದನು (ಅಸತ್ಯವನ್ನು) ಉಳಿಸುವುದೂ ಯಾರಿಂದಲೂ ಆಗದ ಮಾತು. ಕೆಲವರು ಮಾಟಗಾರಿಕೆಯಿಂದ ಅಲ್ಲದ್ದನ್ನು ಅಹುದಿನಂತೆಯೂ ಅಹುದನ್ನು ಅಲ್ಲದೆಂಬಂತೆಯೂ ಮಾಡಿ ತೋರಿಸಲು ಹವಣಿಸುವರು. ಆದರೆ ಅದೆಲ್ಲವೂ ಕ್ಷಣಿಕ; ಕ್ಷಣಬಾಳ್ವಿಕೆ! 'ಇಂತಹ ವ್ಯಾಪಾರದಿಂದ ತಮ್ಮ ಲಾಭವಾಗುವುದೆಂದು ಭ್ರಮೆ ಹಲವರಿಗೆ. ಆದರೆ ಸತ್ಯಕ್ಕೆ ಸಾವಿಲ್ಲವೆಂಬುದನ್ನು ಅವರು ಮರೆಯುತ್ತಾರೆ. '**ಸತ್ಯಮೇವ ಜಯತೇ ನಾನೃತಂ**'; ಸತ್ಯಕ್ಕೆ ಗೆಲುವು. ಆದುವೆ

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ |**
**ಉಭಯೋರಪಿ ದೃಷ್ಟೋಽಂತಸ್ತ್ವನಯೋಸ್ತತ್ತ್ವದರ್ಶಿಭಿಃ || ೧೬ ||**
**ಅವಿನಾಶಿ ತು ತದ್ವಿದ್ಧಿ ಯೇನ ಸರ್ವಮಿದಂ ತತಮ್ |**
**ವಿನಾಶಮವ್ಯಯಸ್ಯಾಸ್ಯ ನ ಕಶ್ಚಿತ್ಕರ್ತುಮರ್ಹತಿ || ೧೭ ||**

---

**ಅನ್ವಯಃ:—** ಅಸತಃ ಭಾವಃ ನ ವಿದ್ಯತೇ. ಸತಃ ಅಭಾವಃ ನ ವಿದ್ಯತೇ | ತತ್ತ್ವದರ್ಶಿಭಿಃ ತು ಉಭಯೋಃ ಅಪಿ ಅನಯೋಃ ಅಂತಃ ದೃಷ್ಟಃ || ೧೬ || ಯೇನ ಇದಂ ಸರ್ವಂ ತತಂ, ತತ್ ತು ಅವಿನಾಶಿ (ಇತಿ) ವಿದ್ಧಿ | ಅಸ್ಯ ಅವ್ಯಯಸ್ಯ ವಿನಾಶಂ ಕರ್ತುಂ, ಕಶ್ಚಿತ್ ನ ಅರ್ಹತಿ || ೧೭ ||

**ಯಾವುದು ಹುಸಿಯೊ ('ಅಸತ್') ಅದು ಇರಲು ಸಾಧ್ಯವಿಲ್ಲ. ಮತ್ತು ಯಾವುದು ಉಂಟೊ ('ಸತ್') ಅದು ಇಲ್ಲವಾಗಲು ಶಕ್ಯವಿಲ್ಲ. ತತ್ತ್ವಜ್ಞಾನಿಗಳು ಈ ಬಗೆಯಾಗಿ ಇವೆರಡರ ಸ್ಥಿತಿಯನ್ನೂ ಕೊನೆಗೆ ಮನಗಂಡು ನಿಶ್ಚಯಿಸಿದ್ದಾರೆ. || ೧೬ || ಯಾವುದು ಇದೆಲ್ಲ (ವಿಶ್ವ)ವನ್ನು ವ್ಯಾಪಿಸಿಕೊಂಡಿದೆಯೊ ಅದು ಅವಿನಾಶಿಯಾಗಿದೆ, ಎಂದು ತಿಳಿ. ಈ ವೆಚ್ಚವಾಗದ (ಅವ್ಯಯ) ವಸ್ತುವನ್ನು ನಾಶಗೊಳಿಸಲು ಯಾರೂ ಸಮರ್ಥರಾಗಿಲ್ಲ. || ೧೭ ||**

**ಭಾವಾರ್ಥ—** ಸತ್ಯವು ಎಂದೂ ಸಟೆಯಾಗಲಾರದು; ಸಟೆಯು ಸತ್ಯವಾಗಲಾರದು ಇದು ತತ್ತ್ವಜ್ಞಾನದ ಅಚಲ ಸಿದ್ಧಾಂತವಾಗಿದೆ.

---

ಕೊನೆಯ ವರೆಗೆ ಬಾಳಬಲ್ಲುದು. ಹುರುಳಿಲ್ಲದ್ದು ಹೆಚ್ಚು ದಿನ ಉಳಿಯಲಾರದು.

### ಸತ್ ಮತ್ತು ಅಸತ್

ಉಳ್ಳುದೇ 'ಸತ್.' ಉಳ್ಳುದು ಎಂದರೆ ಉಂಟು. ಆದುದರಿಂದ ಉಂಟು ಎಂದರೇ ಸತ್. **ಉಂಟು** (ಸತ್) ಇದು **ಅವ್ಯಯವು.** ಯಾವ ಕಾಲದಲ್ಲೂ ಒಂದೇ ತೆರನಾಗಿರುವುದು. ಕೆಲಕಾಲವಿರುವುದು—ವಿಕೃತವಾಗುವುದು ಎಲ್ಲವೂ 'ಅಸತ್.' ಎಂದರೆ ಅಲ್ಲದು. ಸತ್ ಮತ್ತು ಅಸತ್ ಎಂದು ಎರಡೆ ಬಗೆಗಳು ಈ ಲೋಕದಲ್ಲಿ. ಇವೆರಡೂ ಒಂದರಿಂದೊಂದು ತೀರ ಭಿನ್ನವಾಗಿವೆ.

ಇದನ್ನು ತತ್ತ್ವಜ್ಞರು ಮನಗಂಡು ಸಿದ್ಧಾಂತಮಾಡಿದ್ದಾರೆ. (**ಅಂತಃ ತತ್ತ್ವದರ್ಶಿಭಿಃ ದೃಷ್ಟಃ**). '**ಅಂತಃ**' ಶಬ್ದವಿದೆ. **ಕೊನೆಯ ನಿರ್ಣಯವೆಂದು** ಇಲ್ಲಿ ಅರ್ಥವಿದೆ. **ಸಿದ್ಧಾಂತ** (ಸಿದ್ಧ+ಅಂತ) **ರಾದ್ಧಾಂತ** (ರಾದ್ಧ+ಅಂತ) **ಮತ್ತು ಅಂತ ಇವು ಮೂರೂ ಮನಗಂಡು ಮಾಡಿದ ಕೊನೆಯ ನಿರ್ಣಯವೆಂಬರ್ಥಸೂಚಕವಾಗಿವೆ.**

### ಜಗದಾದಿ ತತ್ತ್ವವು

**(ತತ್ ಅವಿನಾಶಿ, ಯೇನ ಸರ್ವಂ ಇದಂ ತತಮ್.)**

ಈ ಲೋಕಕ್ಕೆಲ್ಲ ಮೂಲಾಧಾರವಾಗಿರುವುದು, 'ಯಾವ ಮೂಲ ತತ್ತ್ವದಿಂದ ಈ ಲೋಕವು ಹುಟ್ಟಿ ಹಬ್ಬಿ ನಿಂತಿರುವುದೊ ಅದು, ಅವಿನಾಶಿಯಾಗಿದೆ: ಏಕೆಂದರೆ ಅನಾದಿಕಾಲದಲ್ಲಿ ಅದು ಇದ್ದಿತೆಂದೆ ಈ ಲೋಕವು ತಲೆದೋರಿತು; ಈ ಲೋಕವು ನಾಶಹೊಂದಿದ ಮೇಲೂ ಅದು ಉಳಿಯುವುದು. ಹಿಂದೆ, ಇಂದೆ ಮತ್ತು ಮುಂದೆ ಇದು ಅಚ್ಚಳಿಯದೆ ಉಳಿಯತಕ್ಕುದಾದ್ದರಿಂದ ಇದಕ್ಕೆ **ಸತ್** ಎಂಬ ಹೆಸರಿದೆ. ಜಗತ್ತು ಗಮನಶೀಲವುಳ್ಳುದು. ಒದಲಾಗುವುದು. ಅದು ಹಿಂದೆ ಇದ್ದಿಲ್ಲ. ನಾಳೆ ಇರಲಿಕ್ಕಿಲ್ಲ. ಇದು ಅಸ್ಥಿರ, ವಿಕಾರಿ ಆದುದರಿಂದ **ಅಸತ್**. ಅವಿಕಾರಿಯಾದುದೇ **ಸತ್.**

**ಮೊದಲು** ಏನೂ ಇಲ್ಲವಾಗಿದ್ದರೆ ಏನಾದರೂ (ಎಂದರೆ ಈ ಜಗತ್ತು) ಹೇಗೆ ತಾನೆ ಹುಟ್ಟುವುದು ಸಾಧ್ಯ? ಮಣ್ಣೆ ಇಲ್ಲವಾದರೆ ಮಡಿಕೆ ಎಲ್ಲಿಂದ? ಜಗತ್ತು ಕಾಣಿಸಿಕೊಂಡಿರುವುದೆಂದಮೇಲೆ ಈ ಜಗದ ಆದಿ ಮೂಲತತ್ತ್ವವೊಂದು ಇರಲೇಬೇಕಲ್ಲವೆ? ಆದುದರಿಂದ ಈ ಆದಿಕಾರಣ ಮೂಲತತ್ತ್ವವು ಮೊದಲು ಇದ್ದಿತೆಂದೇ ಸಿದ್ಧವಾಗುತ್ತದೆ.

ಕಣ್ಣಿಗೆ ಕಾಣುವುದೆಲ್ಲವೂ ನಷ್ಟವಾಗುವುದೇ. ಹುಟ್ಟು ಸಾವುಗಳ ಗಸಣೆಗೆ ಒಳಗಾಗದ ವಸ್ತುವೆ ಈ ಲೋಕದಲ್ಲಿ ದೊರೆಯದು. ಅದರಂತೆ ಈ ಜಗತ್ತು ನಾಶವಂತವಾಗಿದೆ. ಆದರೆ ಜಗತ್ತು ಅಳಿದರೂ ಅದರ ನಿರ್ಮಾಣಕ್ಕೆ ಕಾರಣವಾದ ಮೂಲ ಸದ್ವಸ್ತುವು ನಿತ್ಯವಾಗಿದೆ. ಈ ಸದ್ವಸ್ತುವೆ ಜಗದಾದಿ ಕಾರಣ. ಜಗತ್ಕರ್ತೃ. ಜಗತ್ತು ಅಳಿಯುವಾಗ ಅದರ ಕರ್ತೃವೂ ನಾಶವಾಗುವನೆ? ಇಲ್ಲವೆ? ಎಂಬ ಸಂದೇಹವು ಕೆಲವರಿಗೆ **ಉಂಟಾಗ-**

ಬಹುದು. ಆದುದರಿಂದ ಆ ವಿಚಾರವಾಗಿ ಸ್ವಲ್ಪ ವಿವರಣೆಯು ಅವಶ್ಯವೆಂದು ತೋರುತ್ತದೆ

**ಎಂದಿನಂತೆ ಮುಂದೆಯೂ ನಡೆವುದು.**

**ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್ ।**
**ದಿವಂಚ ಪೃಥಿವೀಂ ಚಾಂತರಿಕ್ಷಮಥೋಸ್ವಃ ॥**
— ಋಕ್ ೧೦. ೧೯೦. ೩.

"ಜಗತ್ಕರ್ತನು ಸೂರ್ಯ, ಚಂದ್ರ, ದ್ಯುಲೋಕ, ಪೃಥಿವಿ, ಅಂತರಿಕ್ಷ ಮೊದಲಾದವುಗಳೆಲ್ಲವನ್ನೂ (ಯಥಾಪೂರ್ವಂ) ಮೊದಲಿನಂತೆಯೆ ನಿರ್ಮಿಸಿದನು" ಈ ವಿಶ್ವವು ಎಂದಿನಂತೆ ಮುಂದೆಯೂ ನಡೆಯುತಕ್ಕುದೇ. ಹಿಂದೆ ಹೇಗೆ ನಿರ್ಮಿತವಾಗಿದ್ದಿತೊ, ಹಾಗೆ ಮುಂದೆಯೂ ಆಗುವುದು. ಹಗಲು ಇರುಳುಗಳು ಹಿಂದಿನಂತೆ ಇಂದು, ಇಂದಿನಂತೆ ಮುಂದೆ ನಡೆಯುವುದಿಲ್ಲವೆ? ಹಾಗೆಯೆ ವಿಶ್ವಚಕ್ರದ ಕ್ರಮವೂ ಉಂಟು. ಜಗದ ಹುಟ್ಟು ಒಂದು ಹಗಲಿನಂತೆ: ಸಾವು ಇರುಳಿನಂತೆ. ಇದು ಎಡೆಬಿಡದೆ ನಡೆಯುತಕ್ಕುದೇ. ಏಕೆಂದರೆ ಪರಮಾತ್ಮನಲ್ಲಿ ಅದಲು ಬದಲುಗಳಿಲ್ಲ. ಆತನು ಪರಿಪೂರ್ಣನು

**ಪೂರ್ಣವಿದು ಪೂರ್ಣ.**

**ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ಪೂರ್ಣಮುದಚ್ಯತೇ ।**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥** — ಈಶ.

"ಆತನು ಪೂರ್ಣನು; ಇದು (ಜಗತ್ತು) ಪೂರ್ಣವು. ಏಕೆಂದರೆ ಪೂರ್ಣದಿಂದುಂಟಾದುದು ಪೂರ್ಣವೇ ಇರುವುದು. ಪೂರ್ಣದಿಂದ ಪೂರ್ಣವು ಹೊರಡಲು ಪೂರ್ಣವೆ ಉಳಿಯುವುದು."

**ಪೂರ್ಣಾತ್ ಪೂರ್ಣಮುದಚತಿ ಪೂರ್ಣಂ ಪೂರ್ಣೇನ ಸಿಚ್ಯತೇ ।**
**ಅತೋ ತದಸ್ಯ ವಿದಮ ಯತಸ್ತತ್ಪರಿಷಿಚ್ಯತೇ ॥**
— ಅಥರ್ವ ೧೦. ೮. ೨೯.

"ಪೂರ್ಣದಿಂದಲೆ ಪೂರ್ಣವು ಹುಟ್ಟುವುದು; ಪೂರ್ಣದಿಂದ ಪೂರ್ಣವು ಪೋಷಿಸಲ್ಪಡುತ್ತದೆ. ಆದುದರಿಂದ ಯಾವುದರಿಂದ ಇದು (ಜಗತ್ತು) ಹುಟ್ಟಿ ನೆಲೆಯನ್ನು ಹೊಂದುವುದೊ ಆ ಮೂಲ ಕಾರಣವನ್ನು ನಾವು ತಿಳಿಯುವ.

ಈ ಮಂತ್ರಗಳಲ್ಲಿ ನಿಃಸಂದಿಗ್ಧವಾಗಿ ಹೇಳಿರುವ ಸಂಗತಿಗಳೆಂದರೆ: ಈ ಜಗತ್ಕರ್ತೃವು ಪೂರ್ಣನಾಗಿದ್ದಾನೆ. ಆತನಿಂದ ನಿರ್ಮಿತವಾದ ಈ ಜಗತ್‌ರೂಪಿಯಾದ ಅವನ ಈ ಕೃತಿಯೂ ಪೂರ್ಣವಾಗಿರಲೇ ಬೇಕು. ಜಗತ್ಕರ್ತನು ಪರಿಪೂರ್ಣನಾಗಿರುವುದರಿಂದ ಆತನು ಎಂದಿನಂತೆ ವಿಶ್ವಚಕ್ರವನ್ನು ಮುಂದೆಯೂ ನಡೆಸುವನೆಂಬುದರಲ್ಲಿ ಸಂದೇಹವೆ ಉಳಿದಿಲ. ಇದನ್ನು ಕುರಿತು ಭಗವದ್ಗೀತೆಯಲ್ಲಿಯೂ ಕೆಲವು ಉಲ್ಲೇಖಗಳು ಬಂದಿವೆ:

**ಯಸ್ಯಾಂತಃಸ್ಥಾನಿ ಭೂತಾನಿ ಯೇನ ಸರ್ವಮಿದಂ ತತಮ್ ॥** ೮. ೨೨

**ಮಯಾ ತತಮಿದಂ ಸರ್ವಂ ಜಗದವ್ಯಕ್ತಮೂರ್ತಿನಾ ॥** ೯-೪

**ತ್ವಯಾ ತತಂ ವಿಶ್ವಮನಂತರೂಪ ॥** ೧೧. ೩೮.

**ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ ॥** ೧೮. ೪೬.

"ಯಾರಲ್ಲಿ ಈ ಪ್ರಾಣಿಮಾತ್ರಗಳೆಲ್ಲವೂ ಅಡಕವಾಗಿವೆಯೊ ಮತ್ತು ಯಾರಿಂದ ಇದೆಲ್ಲವೂ ಹುಟ್ಟಿ ಹಬ್ಬಿಕೊಂಡಿವೆಯೊ (ಆ ಮೂಲ ಸದ್ವಸ್ತುವೆಂದರೇ ಪರಮಾತ್ಮನು). ಅವ್ಯಕ್ತ ಮೂರ್ತಿಯಾದ ನನ್ನಿಂದಲೇ ಈ ವಿಶ್ವವೆಲ್ಲವೂ ಉಂಟಾಗಿದೆ. ಅನಂತನಾದ ದೇವನೇ ನಿನ್ನಿಂದಲೆ ಇದೆಲ್ಲ ವಿಶ್ವವೂ ನಿರ್ಮಾಣವಾಗಿದೆ. ಯಾವನಿಂದ ಇದೆಲ್ಲವೂ ಉಂಟಾಗಿದೆಯೊ ಯಾವನಿಂದ ಇದೆಲ್ಲವೂ ತುಂಬಿಕೊಂಡಿದೆಯೊ (ಆತನೆ ಪರಬ್ರಹ್ಮನು). ಈ ವಚನಗಳಲ್ಲಿ ನಾನು, ನೀನು ಮತ್ತು ಅವನು ಈ ಮೂರು ಸರ್ವನಾಮಗಳಿಂದ ಒಂದೇ ಮಾತನ್ನೇ ಹೇಳಲಾಗಿದೆ. ಅದ್ವಿತೀಯವಾದ ಸದ್ವಸ್ತುವು ಒಂದು. ಅದುವೆ ಜಗತ್ಕರ್ತೃ ಅವನೇ ಪರಮಾತ್ಮ.

ಇದನ್ನು ನಾಶಗೊಳಿಸುವುದು ಯಾರಿಂದಲೂ ಸಾಧ್ಯವಿಲ್ಲ. (ಅಸ್ಯ ವಿನಾಶಂ ಕರ್ತುಂ ಕಶ್ಚಿತ್ ನ ಅರ್ಹತಿ) ಆದುದರಿಂದಲೆ ಇದಕ್ಕೆ ಅ-ವ್ಯಯವೆಂದು ಹೆಸರು. ಎಷ್ಟು ಬಾರಿ ಲೋಕಗಳನ್ನು ನಿರ್ಮಿಸಿದರೂ ಇದರ ಶಕ್ತಿಗೆ ಕ್ಷೀಣತೆಯಿಲ್ಲ; ವ್ಯಯವಿಲ್ಲ. ಆದುದರಿಂದಲೆ "ಪೂರ್ಣದಿಂದ ಪೂರ್ಣವು ಹೊರಟ ಮೇಲೂ ಅದು (ಆತ್ಮವು) ಪೂರ್ಣವೇ ಉಳಿಯುವುದು" ಎಂದು ಶ್ರುತಿಯು ಹೇಳುತ್ತದೆ. ಈ ಕಾರಣದಿಂದಲೆ ಇದು ಅ-ವ್ಯಯವು.

ಮತ್ತೆ, ಅರ್ಜುನನ ಪ್ರಶ್ನೆ, 'ಈ ಭೀಷ್ಮದ್ರೋಣರನ್ನು ನಾನೆಂತು ಕೊಲ್ಲಲಿ? ಎಂಬುದು, ಅದಕ್ಕೆ ಶ್ರೀಕೃಷ್ಣನ ಉತ್ತರವೇನು? 'ಎಲೈ ಅರ್ಜುನನೆ! ಈ ವಿಶ್ವವು ಯಾರಿಂದ ಆಯಿತೋ ಆ ಆತ್ಮತತ್ವವು ಅವಿನಾಶಿಯಾಗಿದೆ.

ಆ ಆತ್ಮವನ್ನು ಕೊಲ್ಲುವುದು ಯಾರಿಂದಲೂ ಸಾಧ್ಯವಿಲ್ಲ;' ಎಂದು!

ಆದರೆ ಅರ್ಜುನನು ಕೇಳಿದ್ದೇನು? ಶ್ರೀಕೃಷ್ಣನು ಹೇಳಿದ್ದೇನು? ಒಂದಕ್ಕೊಂದು ಅಸಂಬದ್ಧವಾಗಿರುವಂತೆ ತೋರುವಂತಿದೆ. ಏಕೆಂದರೆ ಜಗತ್ಕರ್ತೃವಾದ ಪರಮಾತ್ಮ ತತ್ವವು ಪರಿಪೂರ್ಣವೂ ಅವಿನಾಶಿಯೂ ಆಗಿರಬಹುದು. ನಿಜ, ಆದರೆ ಈ ಭೀಷ್ಮದ್ರೋಣರು ಜಗತ್ಕರ್ತರಲ್ಲ. ಸಾಮಾನ್ಯ ಜನಗಳು, ಹೆಚ್ಚಾದರೆ ಮಹಾಜನಗಳು. ವಿಶ್ವಕರ್ತನಾದ ಪರಮಾತ್ಮನು ಸಾಯುವನೆಂದು ಅರ್ಜುನನು ಎಂದೂ ಭಾವಿಸಿಲ್ಲ. ಅದಕ್ಕಾಗಿ ಆತನು ದುಃಖಿಸುತ್ತಲೂ ಇಲ್ಲ. ಯುದ್ಧ ಮಾಡಿದರೆ ಭೀಷ್ಮ-ದ್ರೋಣಾದಿಗಳು ಮಡಿಯುವರೆಂಬ ಚಿಂತೆ ಅರ್ಜುನನಿಗೆ.

ಹಾಗಾದರೆ, ಪರಮಾತ್ಮ ತತ್ವವು ಅಮರವಾಗಿದೆ ಯೆಂದು ಹೇಳಿ ಶ್ರೀಕೃಷ್ಣನು ಅರ್ಜುನನ ಸಂದೇಹವನ್ನು ದೂರಮಾಡಲೆಳಸಿದ್ದು ಸರಿಯೆ? ಆದರೆ ಶ್ರೀಕೃಷ್ಣನಂತಹ ವ್ಯವಹಾರ ಚತುರನೂ ತತ್ವಜ್ಞನೂ ಆದ ಪೂರ್ಣ ಪುರುಷನಿಂದ ಇಂತು ಅಸಂಬದ್ಧವಾದ ಉತ್ತರವು ಬರುವುದು ಸಾಧ್ಯವೆ? ಆದಕಾರಣ ಈ ಉಪದೇಶವನ್ನು ಇನ್ನೂ ಒಂದು ಬಗೆಯಿಂದ ವಿಚಾರಿಸಿ ಸರಿಯಾಗಿ ತಿಳಿದುಕೊಳ್ಳುವುದು ಅವಶ್ಯಕವಾಗಿದೆ.

**ಪಿಂಡ ಮತ್ತು ಬ್ರಹ್ಮಾಂಡಗಳಲ್ಲಿರುವ ಏಕಸೂತ್ರತೆ.**

ವಿಶ್ವರಚನೆಯಲ್ಲಿ ಎಲ್ಲೆಲ್ಲಿಯೂ ಏಕಸೂತ್ರತೆಯು ಕಂಡುಬರುತ್ತದೆ. ಪಿಂಡ ಮತ್ತು ಬ್ರಹ್ಮಾಂಡದ ಕಟ್ಟು ಕಟ್ಟಳೆಗಳು ಒಂದೇ ಬಗೆಯವಾಗಿವೆ. ಬ್ರಹ್ಮಾಂಡವನ್ನು ನಿರ್ಮಿಸಿದಾತನು ಬ್ರಹ್ಮಾಂಡದ ಅಳಿವು ಉಳಿವುಗಳ ಗಸಣಿಗೆ ಸಿಲುಕದೆ ನಿತ್ಯನಾಗಿರುವಂತೆ, ಪಿಂಡದ ಚಾಲಕನಾದ ಒಳೆಯನೂ (ಅಂತರಾತ್ಮನು) ಆ ಪಿಂಡದ ಹುಟ್ಟು ಸಾವುಗಳಲ್ಲಿ ಅಬಾಧಿತನಾಗಿಯೆ ಉಳಿಯುವನು. ಜೀವಾತ್ಮನ ದೇಹಕ್ಕೆ ಪಿಂಡವೆಂಬ ಸಂಜ್ಞೆಯಿರುವಂತೆ, ಪರಮಾತ್ಮನ ಶರೀರಕ್ಕೆ ಬ್ರಹ್ಮಾಂಡವೆಂಬ ಹೆಸರುಂಟು. ಜೀವಾತ್ಮ ಮತ್ತು ಪರಮಾತ್ಮರಲ್ಲಿ ಅಂಶ ಅಂಶಿ ಸಂಬಂಧವಿದೆ.

**ಮಮೈವಾಂಶೋ ಜೀವಲೋಕೇ ಜೀವ ಭೂತಃ ಸನಾತನಃ ||**
**ಮನಃ ಷಷ್ಠಾನೀಂದ್ರಿಯಾಣಿ ಪ್ರಕೃತಿಸ್ಥಾನಿ ಕರ್ಷತಿ ||** ಗೀ. ೧೫. ೭.

"ಎಲೈ ಅರ್ಜುನನೆ! ಈ ಜೀವಲೋಕದಲ್ಲಿ ಜೀವವು ನನ್ನದೆ ಸನಾತನವಾದ ಅಂಶವಾಗಿದೆ. ಮತ್ತು ಅದು ಪ್ರಕೃತಿಯೊಳಗಿನ ಪಂಚೇಂದ್ರಿಯಗಳು ಹಾಗೂ ಮನಸು-ಗಳನ್ನು ಆಕರ್ಷಿಸುತ್ತದೆ. ಇಲ್ಲಿ ಜೀವಾತ್ಮನು ಪರಮಾತ್ಮನ ಅಂಶವೆಂದು ಸ್ಪಷ್ಟವಾಗಿ ಹೇಳಿದೆ. ಕಿಡಿಯು ಬೆಂಕಿಯ ಅಂಶವು. ಮಗುವು ತಂದೆಯ ಮರಿಯು. ಆದುದರಿಂದ ಅಂಶ ಅಂಶಿಗಳಲ್ಲಿ ಸಾಮ್ಯವಿರುವುದೂ ಸ್ವಾಭಾವಿಕವಾಗಿದೆ. ಇದನ್ನು ಮನಗಾಣಲು ಕೆಳಗಣ ಪಟ್ಟಿಯನ್ನು ನೋಡಿ:

| | |
|---|---|
| ಜೀವಾತ್ಮ | ಪರಮಾತ್ಮ |
| ಮಗು | ತಂದೆ |
| ಪಿಂಡದೇಹ | ಬ್ರಹ್ಮಾಂಡದೇಹ |
| ದೇಹ (ಅಂಶ) | ಬ್ರಹ್ಮಾಂಡ (ಅಂಶಿ) |
| ಮನಸು | ವಿದ್ಯುತ್ತು |
| ಪಂಚೇಂದ್ರಿಯಗಳು | ಪಂಚಮಹಾಭೂತಗಳು |
| ಮೂಗು | ಪೃಥಿವಿ (ಗಂಧ) |
| ನಾಲಗೆ | ಆಪ್ (ರಸ) |
| ಕಣ್ಣು | ತೇಜ (ರೂಪ) |
| ತೊಗಲು | ವಾಯು (ಸ್ಪರ್ಶ) |
| ಕಿವಿ | ಆಕಾಶ (ಶಬ್ದ) |

ಇವುಗಳಲ್ಲಿರುವ ಹೋಲಿಕೆಯು ಮನಸ್ಸೀಯವಾಗಿದೆ. ಇವುಗಳಲ್ಲಿರುವ ಪರಸ್ಪರ ನಿಕಟಸಂಬಂಧದ ಮನವರಿಕೆಯಾಗದೆ ಇರದು. ಇಷ್ಟೊಂದು ಹೊಂದಿಕೆಯಿರುವುದರಿಂದಲೇ ಶ್ರೀಕೃಷ್ಣನು ಹೀಗೆ ಹೇಳಿದ್ದಾನೆ:

**ಮತ್ಕರ್ಮಕೃನ್ಮತ್ಪರಮೋ.... ಮಾಮೇತಿ ಸೋಽರ್ಜುನ ||** ೧೧. ೫೫
**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ||** ೧೪. ೨.

"ನನ್ನ ಕೆಲಸ ನಡೆಸುವವನೂ ನನ್ನನ್ನು ಪರಮ ಶ್ರೇಷ್ಠನೆಂದು ನಂಬುವವನೂ ನನ್ನಲ್ಲಿ ಒರುತ್ತಾನೆ." "ಈ ಜ್ಞಾನವನ್ನು ಪಡೆದುಕೊಂಡು ನನ್ನ ಸಾಧರ್ಮ್ಯವನ್ನು ಹೊಂದುತ್ತಾರೆ. ಮಗುವು ವೃದ್ಧಿಂಗತವಾಗಿ ತಂದೆಯ ಸಾಧರ್ಮ್ಯವನ್ನು ಪಡೆಯುವಂತೆ ಈ ಜೀವಾತ್ಮವೆ ಮುಂದೆ ಪರಮಾತ್ಮತ್ವವನ್ನು ಹೊಂದುವುದು. ಪುರುಷನು ಪುರುಷೋತ್ತಮನಾಗುವನು. ಆದುದರಿಂದಲೇ ಇವರಿಬ್ಬರ ಹೆಸರು, ಗುಣ, ಧರ್ಮ, ಕರ್ಮಗಳಲ್ಲಿ ಒಂದುತನವಿರುವುದೆಂದು ವೇದ ಮತ್ತು ಶಾಸ್ತ್ರಗಳಲ್ಲಿ ಹೇಳಿದ್ದಾಗಿದೆ. ಈ ಕಾರಣದಿಂದಲೆ ಪರಮಾತ್ಮನ ವರ್ಣನೆಯು ಸಂಕ್ಷೇಪವಾಗಿ ಜೀವಾತ್ಮನ ವರ್ಣನೆಯೂ ಆಗಬಲ್ಲುದು.

ಆದುದರಿಂದ ಶ್ರೀಕೃಷ್ಣನ ಈ ಉತ್ತರದಿಂದ ಅರ್ಜುನನ ಸಂದೇಹವು ದೂರವಾಯಿತು; ಭೀಷ್ಮದ್ರೋಣರ ಆತ್ಮಗಳೂ

## ದೇಹವು ಅನಿತ್ಯ; ಆತ್ಮವು ನಿತ್ಯ.

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**
**ಅನಾಶಿನೋಽಪ್ರಮೇಯಸ್ಯ ತಸ್ಮಾದ್ಯುಧ್ಯಸ್ವ ಭಾರತ ॥ ೧೮ ॥**
**ಯ ಏನಂ ವೇತ್ತಿ ಹಂತಾರಂ ಯಶ್ಚೈನಂ ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥ ೧೯ ॥**

---

**ಅನ್ವಯಃ:—** ಅ-ನಾಶಿನಃ ಅ-ಪ್ರಮೇಯಸ್ಯ ನಿತ್ಯಸ್ಯ ಶರೀರಿಣಃ ಇಮೇದೇಹಾಃ ಅಂತವಂತಃ ಉಕ್ತಾಃ। ಹೇ ಭಾರತ! ತಸ್ಮಾತ್ ಯುಧ್ಯಸ್ವ ॥ ೧೮ ॥ ಯಃ ಏನಂ ಹಂತಾರಂ ವೇತ್ತಿ; ಯಃ ಚ ಏನಂ ಮನ್ಯಂತೇ ತೌ ಉಭೌ ನ ವಿಜಾನೀತಃ ಅಯಂ ನ ಹಂತಿ ನ ಹನ್ಯಂತೇ ॥ ೧೯ ॥

**ಅಳಿವು ಇಲ್ಲದವನೂ ತಿಳಿವಿಗೆ ನಿಲುಕದವನೂ ನಿತ್ಯವಾದ ದೇಹವನ್ನು ಧರಿಸಿದವನೂ ಆದ ಈಶನ ಈ ಶರೀರಗಳು ನಾಶವಾಗುವಂತಹವುಗಳಾಗಿವೆಯೆಂದು ಹೇಳುತ್ತಾರೆ. ಆದುದರಿಂದ ನೀನು ಯುದ್ಧ ಮಾಡು ॥ ೧೮ ॥ ಯಾವನು ಈ ಆತ್ಮವನ್ನು ತಾನು ಕೊಂದೆನೆಂದು ಬಗೆಯುತ್ತಾನೊ ಅಥವಾ ಯಾವನು ಇದು ಕೊಲ್ಲಲ್ಪಟ್ಟಿತೆಂದು ಎಣಿಸುತ್ತಾನೊ ಅವರಿಬ್ಬರಿಗೂ ಏನೂ ತಿಳಿದಿಲ್ಲ. ಈ (ಆತ್ಮವು) ಕೊಲ್ಲುವುದಿಲ್ಲ. ಮತ್ತು ಕೊಲ್ಲಲ್ಪಡುವುದೂ ಇಲ್ಲ. ॥ ೧೯ ॥**

**ಭಾವಾರ್ಥ:—** ಆತ್ಮವು ಎಂದೂ ಅಳಿಯುವುದಿಲ್ಲ. ಅದರ ನೆಲೆ ಹತ್ತುವುದಿಲ್ಲ. ಅಥವಾ ಅದನ್ನು ವರ್ಣಿಸಲಿಕ್ಕೂ ಆಗುವುದಿಲ್ಲ. ಅದು ನಿತ್ಯವಿದೆ. ಈ ಆತ್ಮವು ಅನೇಕಸಾರೆ ದೇಹಗಳನ್ನು ಧಾರಣಮಾಡುತ್ತದೆ. ಆದುದರಿಂದ ಧರ್ಮಯುದ್ಧಮಾಡುವುದರಲ್ಲಿ ಪಾಪವಿಲ್ಲ ॥ ೧೮ ॥ ಆತ್ಮವು ಕೊಲ್ಲುವುದು ಅಥವಾ ಅದು ಸಾಯುವುದು ಎಂದು ಬಗೆವವನಿಗೆ ನಿಜವಾದ ತಿಳುವಳಿಕೆಯಾಗಿರುವುದಿಲ್ಲ. ಈ ಆತ್ಮವು ಯಾರನ್ನು ಕೊಲ್ಲುವುದಿಲ್ಲ. ಅಥವಾ ತಾನು ಕೊಲ್ಲಲ್ಪಡುವುದೂ ಇಲ್ಲ. ॥ ೧೯ ॥

---

ಅಮರವಾಗಿರುವುದರಿಂದ ಅವರ ದೇಹಗಳು ಮಾತ್ರ ನಾಶವಾಗುವುವೆ ಹೊರತು ಆತ್ಮಗಳಲ್ಲ ಎಂದು ಅರ್ಜುನನ ಮನವರಿಕೆಯಾಯ್ತು. ಸರ್ವಗತವಾದ ಒಂದೇ ಆತ್ಮವಿದ್ದು ಅದು ಅಜರಾಮವಾಗಿರುವುದರಿಂದ ದೇಹಗಳು ನಾಶಹೊಂದಿದರೂ ಶುದ್ಧ ಬುದ್ಧಸ್ಥಿಯಲ್ಲಿ ಅದು ಅಚ್ಚಳಿಯದೆ ಉಳಿಯುವುದು ಎಂದೂ ಅರ್ಜುನನಿಗೆ ಹೊಳೆಯಿತು.

ಇದೇ ಮಾತನ್ನೆ ಶ್ರೀಕೃಷ್ಣನು ಇನ್ನೊಂದು ತೆರನಾಗಿ ಮತ್ತೆ ಹೇಳಿದ್ದಾನೆ:

(೧೮-೧೯) ದೇಹ ಮತ್ತು ಆತ್ಮಗಳ ಸ್ವರೂಪವನ್ನು ಶ್ರೀಕೃಷ್ಣನು ವಿವರಿಸಿ ಹೇಳುತ್ತಲಿದ್ದಾನೆ. ಆತ್ಮವು ಅವಿನಾಶಿಯಾಗಿದೆ. ಶರೀರಗಳು ಎಷ್ಟೋ ಬಗಲಿ ಅಥವಾ ಹೋಗಲಿ ಆತ್ಮವು ಇದ್ದುದು ಇದ್ದಂತೆಯೇ ಉಳಿಯುವುದು. ಆದುದರಿಂದ ಅದು 'ನಿತ್ಯ' ಮತ್ತು ಇದು 'ಅ-ಪ್ರಮೇಯ'ವೂ ಆಗಿದೆ ಎಂದರೆ ಇದರ ಅಳತೆ ಸಾಧ್ಯವಿಲ್ಲ. ವರ್ಣಿಸಬಲ್ಲ ಇದು 'ಅ-ವ್ಯಯ'ವು. ಎಂದರೆ ಇದರೊಳಗಿಂದ ಏನೂ ವ್ಯಯ (ವೆಚ್ಚ)ವಾಗುವುದಿಲ್ಲ. ಎಂದಿನಿಂದಲೂ ಒಂದೇತೆರನಾಗಿದೆ.

ಆದರೆ ಇದು ಧಾರಣಮಾಡಲಿವೆ ದೇಹಗಳು ನಾಶವಾಗುತ್ತವೆ. ಆದುದರಿಂದ ಅವು 'ಅ-ನಿತ್ಯ'. ಇವು 'ಪ್ರಮೇಯ' ಎಂದರೆ ಉದ್ದ ಅಗಲ; ಎತ್ತರ, ದಪ್ಪ, ಮೊದಲಾದ ಬಗೆಯಿಂದ ಅಳತೆಮಾಡಲು ಬರುವುದು; ಅರಿಯಲು ಬರುವುದು; ವರ್ಣಿಸಲು ಬರುವುದು. ಇದು 'ವ್ಯಯ' ಎಂದರೆ ಪ್ರತಿದಿನವೂ ಇದರಲ್ಲಿ ಸವಕಳಿಯು ನಡೆದಿರುತ್ತದೆ. ಇದು ಹಿಂದೆ ಇದ್ದಿಲ್ಲ. ಮುಂದೆ ಕೊನೆಯವರೆಗೆ ಇರಲಾರದು. ಈಗ ಮಾತ್ರ ಇದೆ. ಆದುದರಿಂದ ಅನಿತ್ಯವಾಗಿದೆ.

ನಾಶವಾಗತಕ್ಕ ಈ ದೇಹವು ನಷ್ಟವಾದರೆ ಅದನ್ನು ಕುರಿತು ಅಳಲುವ ಕಾರಣವಿಲ್ಲ. ಏಕೆಂದರೆ ಹಾಳಾಗುವುದು ಅದರ ಸ್ವಭಾವವೇ ಆಗಿದೆ. ದೇಹವು ಅಳಿಯಲಿ ಅಥವಾ ಉಳಿಯಲಿ ಆಗ ಆತ್ಮವು ಒಂದೇ ಬಗೆಯಾಗುವುದು. ಅದಕ್ಕೆ ನಾಶವಿಲ್ಲ. ಆದುದರಿಂದ ಎಲಾ, ಅರ್ಜುನನೆ! ಯಾವ ಸ್ವರಾಜ್ಯವನ್ನು ಗಳಿಸುವುದಕ್ಕಾಗಿ

ಇದೆಲ್ಲ ಸಿದ್ಧತೆಯನ್ನು ಮಾಡಿ ನೀನು ಯುದ್ಧಕ್ಕೆ ಅಣಿಯಾಗಿರುವೆಯೊ ಆ ಸ್ವಾತಂತ್ರ್ಯಸಂಗ್ರಾಮವನ್ನು ಕೊನೆಗಾಣಿಸು. ಸ್ವರಾಜ್ಯವನ್ನು ಮರಳಿ ಸಂಪಾದಿಸಿ, ಲೋಕವನ್ನು ದುಷ್ಟರ ದಬ್ಬಾಳಿಕೆಯೊಳಗಿಂದ ಉಳಿಸು. ತಾತ್ವಿಕ ದೃಷ್ಟಿಯಿಂದ ವಿಚಾರಿಸಲು ನೀನು ಶೋಕಿಸುವುದಕ್ಕೆ ಕಾರಣವಿಲ್ಲ.

ಆತ್ಮವು ಯಾರನ್ನು ಕೊಲ್ಲುವುದಿಲ್ಲ. ಅಥವಾ ಯಾರಿಂದ ಕೊಲ್ಲಲ್ಪಡುವುದಿಲ್ಲ. ಇದು ಸ್ವಭಾವತಃ ನಿಷ್ಕ್ರಿಯವಾಗಿದೆ. ಜಡಶರೀರವೂ ಯಾರನ್ನು ಕೊಲ್ಲಲಾರದು. ಆತ್ಮವು ಕೊಲ್ಲುವುದು ಅಥವಾ ಕೊಲ್ಲಲ್ಪಡುವುದೆಂದು ನೀನು ಬಗೆದಿದ್ದರೆ ನಿನಗೆ ಏನೂ ತಿಳುವಳಿಕೆಯೆ ಆಗಿಲ್ಲನೆಂದು ಸಿದ್ಧವಾಗುತ್ತದೆ. ಅರ್ಜುನನೆ, ಆತ್ಮವು ತ್ರಿಕಾಲದಲ್ಲಿಯೂ ಒಂದೇತೆರನಾಗಿ ಉಳಿಯುವುದು. ಅದನ್ನು ನಿನ್ನ ಶಸ್ತ್ರಗಳು ಸಂಹರಿಸಲಾರವು. ಅಥವಾ ಇನ್ನಾರಿಂದಲೂ ಅದನ್ನು ನಾಶಗೊಳಿಸುವುದಕ್ಕೆ ಸಾಧ್ಯವಿಲ್ಲ. ಆದುದರಿಂದ ನೀನು ಸ್ವಕರ್ತವ್ಯತತ್ಪರನಾಗು. ಅನಾಯಾಸವಾಗಿ ಆಗತಕ್ಕ ಲೋಕಕಲ್ಯಾಣವನ್ನು ಮಾಡು.

ಉಪನಿಷತ್ತಿನಲ್ಲಿಯೂ ಇದಕ್ಕೆ ಬೆಂಬಲವು ದೊರೆಯುತ್ತದೆ.

**ನ ಜಾಯತೇ ಮ್ರಿಯತೇ ವಾ ವಿಪಶ್ಚಿನ್ನಾಯಂ ಕುತ**
**ಶ್ಚಿನ್ನ ಬಭೂವ ಕಶ್ಚಿತ್ । ಅಜೋ ನಿತ್ಯಃ ಶಾಶ್ವತೋಽ**
**ಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ ॥ ೧೮ ॥**
**ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇನ್ಮನ್ಯತೇ ಹತಮ್ ।**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥**

—ಕಠ. ೨-೧೮-೧೯

"ಈ ಆತ್ಮವು ಹುಟ್ಟುವುದಿಲ್ಲ; ಅಥವಾ ಸಾಯುವುದಿಲ್ಲ. ಇದು ಇಲ್ಲದ ಎಡೆಯಿಲ್ಲ. ಇದು ಎಂದಿನಿಂದಲೂ ಇದ್ದುದಾಗಿದೆ. ನಿತ್ಯವಾಗಿದೆ. ಶಾಶ್ವತವಾಗಿದೆ. ಪುರಾತನವಾಗಿದೆ. ಶರೀರವು ನಾಶವಾದರೂ ಇದರ ನಾಶವಾಗುವುದಿಲ್ಲ. ಕೊಲೆಗಡಿಕನು ತಾನು ಸಾಯಿಸುವನೆಂದರೆ ಸಾವವನು ತಾನು ಸತ್ತೆನೆಂದು ಭಾವಿಸಿದರೆ ಇವರಿರ್ವರಿಗೂ ನಿಜವಾದ ಜ್ಞಾನವಾಗಿಲ್ಲವೆಂದು ತಿಳಿಯಬೇಕು ಇದು ಕೊಲ್ಲುವುದಿಲ್ಲ. ಅಥವಾ ಕೊಲ್ಲಲ್ಪಡುವುದಿಲ್ಲ."

ಆತ್ಮವು ಅಮರವಾಗಿದೆ. ಸಾವಿಗೆ 'ಕಾಲ'ವೆ ಕಾರಣವಾಗಿದೆ. ಮಹಾಭಾರತದ ಶಾಂತಿಪರ್ವದಲ್ಲಿ ಇದನ್ನು ಕುರಿತು ವಿಸ್ತಾರದಿಂದ ಹೇಳಿದ್ದಾಗಿದೆ.

## ಕಾಲನ ಕೆಲಸ.

**ನಾಕಾಲತೋ ಮ್ರಿಯತೇ ಜಾಯತೇ ವಾ ।**
**ನಾಕಾಲತೋ ವ್ಯಾಹರತೇ ಚ ಬಾಲಃ ॥ ೧೧ ॥**
**ಕಾಲೇನ ಪರಿಪಕ್ವಾ ಹಿ ಮ್ರಿಯಂತೇ ಸರ್ವಪಾರ್ಥಿವಾಃ ॥ ೧೨ ॥**
**ಘ್ನಂತಿ ಚಾನ್ಯಾನ್ನರಾನ್ರಾಜಂಸ್ತಾನಪ್ಯನ್ಯೇ ತಥಾ ನರಾಃ ॥**
**ಸಂಜ್ಞೈಷಾ ಲೌಕಿಕೀ ರಾಜನ್ನ ಹಿನಸ್ತಿ ನ ಹನ್ಯತೇ ॥ ೧೩ ॥**
**ಆತ್ಮಾಪಿ ಚಾಯಂ ನ ಮಮ ಸರ್ವಾಪಿ ಪೃಥಿವೀ ಮಮ ।**
**ಯಥಾ ಮಮ ತಥಾನ್ಯೇಷಾಮಿತಿ ಪಶ್ಯನ್ನ ಮುಹ್ಯತಿ ॥ ೧೪ ॥**

—ಅಧ್ಯಾಯ ೨೫.

"ಕಾಲನಿಂದಲ್ಲದೆ (ಬೇರೆ ಯಾರಿಂದಲೂ) ಸಾವು ಹುಟ್ಟುಗಳಿಲ್ಲ. ಕಾಲನಿಂದಲೆ ಮಗುವು ಮಾತನಾಡುವುದು. ಕಾಲನಿಂದ ಹಣ್ಣಾದ ಎಲ್ಲ ರಾಜರೂ ಮಡಿಯುವರು. ಒಬ್ಬನು ಇನ್ನೊಬ್ಬನನ್ನು ಕೊಲ್ಲುವನು; ಮತ್ತು ಅವನು ಸಾಯುವನು; ಎಂಬ ಭಾಷೆಯು ಲೌಕಿಕ ವ್ಯವಹಾರದೊಳಗಿನದು ನಿಜವಾಗಿ ಆತ್ಮವು ನಾಶವಾಗುವುದಿಲ್ಲ. ಅಥವಾ ನಾಶಮಾಡಲ್ಪಡುವುದಿಲ್ಲ. ಈ ಪೃಥ್ವಿಯು ನನ್ನದಾಗಿರುವಂತೆ ಅದು ಉಳಿದ ಎಲ್ಲರದೂ ಆಗಿದೆ. ಇದೇ ಮೇರೆಗೆ ಈ ಆತ್ಮವು ನನ್ನದು ಹೇಗೊ ಹಾಗೆ ಉಳಿದವರದೂ ಆಗಿದೆ." ಆದುದರಿಂದ ಪಾಂಡವರು ಹಾಗೂ ಕೌರವಾದಿ ಅವರ ಹಗೆಗಳ ಆತ್ಮಗಳು ಬೇರೆ ಬೇರೆ ಇಲ್ಲ. ಒಂದೇ. ಆದಕಾರಣ ಆ ಆತ್ಮವು ಹಗೆಗಳು ಮಡಿಯುತ್ತಲೆ ನಾಶವಾಗದು. ಅಥವಾ ಪಾಂಡವರು ಬದುಕಿದರೆಂದು ಉಳಿದಿದೆಯೆಂತಲ್ಲ. ಅದು ಸ್ವಯಂಭೂವಾಗಿದ್ದು ಆತ್ಮಶಕ್ತಿಯಿಂದಲೇ ಅಚ್ಚಳಿಯದೆ ಉಳಿಯುವುದು.

ಭಗವದ್ಗೀತೆಯಲ್ಲಿಯೂ ಇದೇ ಮಾತನ್ನು ಇನ್ನೊಂದು ವಿಧವಾಗಿ ಹೇಳಿದ್ದುಂಟು:

**ಕಾಲೋಽಸ್ಮಿ ಲೋಕಕ್ಷಯಕೃತ್ಪ್ರವೃದ್ಧೋ**
**ಲೋಕಾನ್ಸಮಾಹರ್ತುಮಿಹ ಪ್ರವೃತ್ತಃ ।**

## (೧೦) ಪುರಾಣ ಪುರುಷನು.

**ನ ಜಾಯತೇ ಮ್ರಿಯತೇ ವಾ ಕದಾಚಿನ್ನಾಯಂ ಭೂತ್ವಾಽಭವಿತಾ ವಾ ನ ಭೂಯಃ ।**
**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣೋ ನ ಹನ್ಯತೇ ಹನ್ಯಮಾನೇ ಶರೀರೇ ॥ ೨೦ ॥**
**ವೇದಾವಿನಾಶಿನಂ ನಿತ್ಯಂ ಯ ಏನಮಜಮವ್ಯಯಮ್ ।**
**ಕಥಂ ಸ ಪುರುಷಃ ಪಾರ್ಥ ಕಂ ಘಾತಯತಿ ಹಂತಿ ಕಮ್ ॥ ೨೧ ॥**

---

**ಅನ್ವಯ :—** ಅಯಂ ಕದಾಚಿತ್ ನ ಜಾಯತೇ, ನ ಮ್ರಿಯತೇ (ಅಯಂ) ಭೂತ್ವಾ ಭೂಯಃ ಅಭವಿತಾ ನ । ಅಯಂ ಅಜಃ ನಿತ್ಯಃ ಶಾಶ್ವತಃ ಪುರಾಣಃ ಶರೀರೇ ಹನ್ಯಮಾನೇ ನ ಹನ್ಯತೇ ॥ ೨೦ ॥ ಹೇ ಪಾರ್ಥ ! ಯಃ ಏನಂ ಅವಿನಾಶಿನಂ ನಿತ್ಯಂ ಅಜಂ ಅವ್ಯಯಂ ವೇದ, ಸಃ ಪುರುಷಃ ಕಥಂ ಕಂ ಘಾತಯತಿ ಕಂ ಹಂತಿ ? ॥೨೧॥

ಈ (ಆತ್ಮವು) ಎಂದೂ ಹುಟ್ಟುವುದಿಲ್ಲ. ಮತ್ತು ಎಂದೂ ಸಾಯುವುದಿಲ್ಲ. ಇದು ಆಗಿ ಮತ್ತೆ ಇಲ್ಲದಂತಾಗುವುದಿಲ್ಲ. ಇದು ಹುಟ್ಟು ಇಲ್ಲದುದು, ನಿತ್ಯವು, ಶಾಶ್ವತವು, ಮತ್ತು ಪುರಾತನವು ಆಗಿದೆ. ಶರೀರವು ಹಾಳಾದ ಮೇಲೂ ಇದು ನಾಶಹೊಂದುವುದಿಲ್ಲ. ॥ ೨೦ ॥ ಎಲೈ ಅರ್ಜುನನೆ ! ಇದು ಅನಾಶಿಯು, ನಿತ್ಯವು, ಹುಟ್ಟು ಇಲ್ಲದುದು, ಮತ್ತು ಅವ್ಯಯವು ಆಗಿದೆಯೆಂದು ಮನಗಂಡವನು ಯಾರನ್ನು ತಾನೆ ಕೊಲ್ಲಿಸುವನು ? ಮತ್ತು ಯಾರನ್ನು ಹೇಗೆ ಕೊಲ್ಲುವನು ? ॥ ೨೧ ॥

**ಭಾವಾರ್ಥ:—** ಹುಟ್ಟು ಇಲ್ಲದ ಈ ಆತ್ಮಕ್ಕೆ ಜನ್ಮವೆಂಬುದೆ ಇಲ್ಲ. ಹುಟ್ಟು ಇಲ್ಲದ್ದು ಸಾವಿಗೆ ಈಡಾಗದು. ಅದು ಅಮರ. ಅವ್ಯಯಕ್ಕೆ ವ್ಯಯವು (ಸವಕಳಿ) ಇಲ್ಲ. ನಿತ್ಯವಾಗಿರುವುದು ಎಂದೂ ಇಲ್ಲದಂತಾಗದು.

---

**ಋತೇಽಪಿ ತ್ವಾಂ ನ ಭವಿಷ್ಯಂತಿ ಸರ್ವೇ**
**ಯೇಽವಸ್ಥಿತಾಃ ಪ್ರತ್ಯನೀಕೇಷು ಯೋಧಾಃ ॥**
(೧೧. ೩೨.)

"ಲೋಕವನ್ನು ನಾಶಗೊಳಿಸುವ ಮಹಾಕಾಲನು ನಾನು; ಲೋಕನಾಶಕ್ಕಾಗಿಯೇ ನಾನಿಲ್ಲಿ ಹೊರಟಿದ್ದೇನೆ. ಇಲ್ಲಿ ಬಂದ ನಿನ್ನ ಹಗೆಗಳು, ನೀನಿಲ್ಲದಿದ್ದರೂ ಉಳಿಯಲಾರರು." ಕಾಲನಿಂದ ಹಣ್ಣಾಗಿ ಅವರು ಸಾಯತಕ್ಕವರೇ. ಆದುದರಿಂದ ಎಲಾ ಅರ್ಜುನನೆ, ನಾನೇ ಇವರನ್ನು ಕೊಲ್ಲತಕ್ಕವನೆಂದು ಗ್ರಹಿಸಬೇಡ.

ಈ ವಿವರಣೆಯಿಂದಲೂ ಅರ್ಜುನನಿಗೆ ಸಮಾಧಾನವಾಗದ್ದರಿಂದ ಶ್ರೀಕೃಷ್ಣನು ಮತ್ತೆ ಹೇಳಿದ್ದೇನೆಂದರೆ:

(೨೦–೨೧) ಇವೆರಡರಲ್ಲಿ ಮೊದಲನೆಯ ಶ್ಲೋಕವು ಸ್ವಲ್ಪ ಪಾಠಭೇದದಿಂದ ಕಠೋಪನಿಷತ್ತಿನಲ್ಲೂ ಕಾಣಿಸಿಕೊಂಡುದನ್ನು ಈ ಮೊದಲೆ ಕೊಟ್ಟಿದ್ದಾಗಿದೆ. ಆಗಿ, ಇಲ್ಲದಾಗುವುದು (ಭೂತ್ವಾ ಅಭವಿತಾ) ದೇಹವು. ಆತ್ಮಕ್ಕೆ ಆಗಿ ಇಲ್ಲದಾಗುವುದೇ ಇಲ್ಲ; (ಭೂತ್ವಾ-ಅಭವಿತಾನ); ಎಂದರೆ ಇದಕ್ಕೆ ಹುಟ್ಟು ಇಲ್ಲ, ಸಾವೂ ಇಲ್ಲ. ಇದು ಅಮರ.

ಅದರಂತೆ ಇದು (ಅ-ಭೂತ್ವಾ ಭವಿತಾನ) ಮೊದಲು ಇಲ್ಲದೆ ಬಳಿಕ ಆದುದು ಎಂಬ ಮಾತೂ ಇಲ್ಲ. ಏಕೆಂದರೆ ಹುಟ್ಟು ಇದ್ದ ವಸ್ತುವಿನ ವಿಷಯಕ್ಕೆ ಮಾತ್ರ ಹೀಗೆ ಹೇಳಬಹುದು. ಶರೀರದೊಡನೆ ಹುಟ್ಟಿ, ಅದರೊಡನೆಯೆ ಇದು ಸತ್ತರೆ (ಭೂತ್ವಾ ಭವಿತಾ) ಎಂದು ಆತ್ಮಕ್ಕೆ ಹೇಳಬಹುದಾಗಿತ್ತು. ಆದರೆ ಆತ್ಮವು ಶರೀರದ ಮೊದಲೂ ಇದ್ದಿತು. ಬಳಿಕವೂ ಇರುವುದು. ಆದುದರಿಂದ ಹಾಗೆ ಹೇಳುವುದು (ಭೂತ್ವಾ ಭವಿತಾ) ತಿಳಿಗೇಡಿತನವಾಗದೆ ಇರದು.

ಆತ್ಮವು (ನ ಭೂತ್ವಾ ನ ಭವಿತಾ) ಆಗದೆ ಮತ್ತೆ ಆಗಬೇಕಾಗಿಲ್ಲ. ಎಂದರೆ ಎಂದಿನಿಂದಲೂ ಇದ್ದೇ ಇದೆ. ಹುಟ್ಟು ಸಾವಿನ ತೊಡಕು ಇದಕ್ಕೆ ಇಲ್ಲ. ಇಪ್ಪತ್ತನೆಯ ಶ್ಲೋಕದ ಎರಡನೆಯ ಪಾದದ ಬಗೆಗೆ ಅನೇಕ ಟೀಕಾಕಾರರಲ್ಲಿ ತುಂಬ ಮತಭೇದಗಳಿವೆ. ಇಲ್ಲಿ ಕೆಲರು 'ಭೂತ್ವಾ ಭವಿತಾ' ಎಂದು ಪದಗಳನ್ನು ಗ್ರಹಿಸುವರು. ಕೆಲವರು 'ಭೂತ್ವಾ ಅಭವಿತಾ' ಎಂದು ಹೇಳುವರು. ಇಲ್ಲಿ ನಾವು ಎರಡೂ ಬಗೆಯ ಪದಗಳನ್ನು ಸರಿಹೊಂದಿಸಿ ತೋರಿಸಿದ್ದೇವೆ. ಇವೆರಡೂ ದೃಷ್ಟಿಯಿಂದಲೂ ಶ್ರೀಕೃಷ್ಣನ ಮಾತಿನ ಸ್ವಾರಸ್ಯವನ್ನು ತಿಳಿದುಕೊಳ್ಳಬಹುದಾಗಿದೆ.

## (೧೧) ಬಟ್ಟೆಗಳ ಹೋಲಿಕೆ.

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾನ್ಯನ್ಯಾನಿ ಸಂಯಾತಿ ನವಾನಿ ದೇಹೀ ॥ ೨೨ ॥**

**ಅನ್ವಯ:—** ಯಥಾ ನರಃ ಜೀರ್ಣಾನಿ ವಾಸಾಂಸಿ ವಿಹಾಯ, ಅಪರಾಣಿ ನವಾನಿ ಗೃಹ್ಣಾತಿ; ತಥಾ ದೇಹೀ ಜೀರ್ಣಾನಿ ಶರೀರಾಣಿ ವಿಹಾಯ ನವಾನಿ ಸಂಯಾತಿ ॥ ೨೨ ॥

**ಮಾನವನು ಹರಕು ಬಟ್ಟೆಗಳನ್ನು ಬಿಟ್ಟು, ಬೇರೆ ಹೊಸ ಬಟ್ಟೆಗಳನ್ನು ಹೇಗೆ ಧರಿಸುವನೊ ಹಾಗೆ ದೇಹಧಾರಿ ಆತ್ಮವು ಜೀರ್ಣಶರೀರವನ್ನು ಬಿಟ್ಟು ಹೊಸ ಶರೀರವನ್ನು ಧಾರಣಮಾಡುತ್ತದೆ. ॥ ೨೨ ॥**

**ಭಾವಾರ್ಥ:—** ಮನುಷ್ಯನು ಉಡುಪು ಬದಲಿಸುವಂತೆ ಆತ್ಮವು ದೇಹಗಳನ್ನು ಬದಲಿಸುತ್ತದೆ.

ಆತ್ಮವು '**ಪುರಾಣ**'ವೆಂದು ಹೇಳಲ್ಪಡುತ್ತದೆ. ಏಕೆಂದರೆ ಅನಾದಿಕಾಲದಿಂದ ಇರುವುದಾದರೂ ಎಂದೆಂದಿಗೂ ಹೊಚ್ಚಹೊಸತಾದುದಾಗಿರುತ್ತದೆ. '**ಪುರಾಣ**' ಎಂದರೆ ಪುರಾ+ನವಃ = ಪುರಾನವ=ಪುರಾಣಃ ಇದು (ಆತ್ಮವು) ತೀರ ಪುರಾತನದ್ದಾದರೂ ಎಂದಿಗೂ ತರುಣವಾಗಿರುವಂತಹದು. ಇದು ಎಂದೆಂದೂ ಜೀರ್ಣ, ಕ್ಷೀಣ ಅಥವಾ ದುರ್ಬಲವಾಗುವುದಿಲ್ಲ. ಯಾವಾಗಲೂ ಸಂಪೂರ್ಣ ಶಕ್ತಿಸಂಪನ್ನವಾಗಿರುತ್ತದೆ.

ಶರೀರವು ಮಾತ್ರ ಕಾಲಕಾಲಕ್ಕೆ ಬದಲಾಗುತ್ತದೆ; ಜನ್ಮ ಮೃತ್ಯುಗಳನ್ನು ಹೊಂದುತ್ತದೆ. ಶರೀರವನ್ನು ತುಂಡರಿಸಿದರೂ ಆತ್ಮವು ಅವಿಚ್ಛಿನ್ನವಾಗಿ ಹಾಗೆಯೆ ಉಳಿಯುವುದು. ಆದಕಾರಣ, ಎಲಾ ಅರ್ಜುನನೇ! ನೀನು ನಿನ್ನ ಆಪ್ತರ ಆತ್ಮಗಳನ್ನು ಹೇಗೆ ತಾನೆ ನಾಶ ಮಾಡಬಲ್ಲೆ? ಮತ್ತು ಅವರ ಆತ್ಮವಾದರೂ ನಾಶವಾಗಬಹುದೆ? ಆದುದರಿಂದ ಆತ್ಮವು ಸಾಯುವುದೆಂಬ ವಿಚಾರವು ತಿಳಿಗೇಡಿತನದ್ದಾಗಿದೆ. ಇನ್ನೂ ಒಂದು ಬಗೆಯಿಂದ ಈ ಮಾತನ್ನು ತಿಳಿದು ನೋಡು:

(೨೨) ಹಳೆಯ ಬಟ್ಟೆಗಳನ್ನು ಬಿಟ್ಟು ಹೊಸ ಬಟ್ಟೆಗಳನ್ನು ಉಟ್ಟರೆ ಅಥವಾ ತೊಟ್ಟರೆ ಯಾರಾದರೂ ಮಿಡುಕಿದ್ದುಂಟೆ? ಮರುಗಿದ್ದುಂಟೆ? ಹಳೆ ಮನೆ ಬಿಟ್ಟು ಹೊಸ ಮನೆಗೆ ಹೋದರೆ ಹಿಗ್ಗಬೇಕೆ? ಕುಗ್ಗಬೇಕೆ? ಅದರಂತೆ ಆತ್ಮವು ತನ್ನ ಸುಗ್ಗಿನುಸಿಯಾದ ಹಳೆಯ ದೇಹವನ್ನು ಬಿಟ್ಟು ತೇಜಸ್ವಿಯಾದ •ಕಾರ್ಯಕ್ಷಮವಾದ ಹೊಸ ದೇಹವನ್ನು ಧಾರಣಮಾಡಿದರೆ ಅದಕ್ಕೆ ದುಃಖಿಸುವುದೇಕೆ? ಇದನ್ನು ಕುರಿತು ಬೃಹದಾರಣ್ಯಕೋಪನಿಷತ್ತಿನಲ್ಲಿ ಹೇಳಿರುವುದೇನೆಂದರೆ:

**ಯಥಾ ತೃಣಜಲಾಯುಕಾ ತೃಣಸ್ಯಾಂತಂ ಗತ್ವಾಽನ್ಯಮಾ ಕ್ರಮಮಾಕ್ರಮ್ಯಾತ್ಮಾನಮುಪಸಂಹರತ್ಯೇವಮೇವಾಯಮಾತ್ಮೇದಂ ಶರೀರಂ ನಿಹತ್ಯಾಽವಿದ್ಯಾಂ ಗಮಯಿತ್ವಾಽನ್ಯ ಮಾಕ್ರಮಮಾಕ್ರಮ್ಯಾತ್ಮಾನ ಮುಪಸಂಹರತಿ ॥ ೩ ॥ ತದ್ಯಥಾ ಪೇಶಸ್ಕಾರೀ ಪೇಶಸೋ ಮಾತ್ರಾ ಮುಪಾದಾಯಾನ್ಯನ್ನವತರಂ ಕಲ್ಯಾಣತರಂ ರೂಪಂ ತನುತ ಏವ ಮೇವಾಯಮಾತ್ಮೇದಂ ಶರೀರಂ ನಿಹತ್ಯಾಽವಿದ್ಯಾಂ ಗಮಯಿತ್ವಾಽನ್ಯನ್ನವತರಂ ಕಲ್ಯಾಣತರಂ ರೂಪಂ ಕುರುತೇ.... ॥ ೪ ॥** (೪.೪.೩–೪)

ಹುಲ್ಲ ಮೇಲಣ ಹುಳುವು ಹೇಗೆ ಹುಲ್ಲಿನ ತುದಿಗೆ ಹೋಗಿ ಇನ್ನೊಂದರ ಮೇಲೆ ಕ್ರಮಕ್ರಮವಾಗಿ ಏರಿ ಹೋಗುವುದೊ ಹಾಗೆ ಆತ್ಮವು ಒಂದು ಗೇಹವನ್ನು ಬಿಡುವಾಗ ಇನ್ನೊಂದರ ಆಶ್ರಯವನ್ನು ಪಡೆದು ಮೊದಲನೆಯದನ್ನು ಬಿಡುತ್ತದೆ. ॥ ೩ ॥ ಚಿತ್ರಕಾರನು ಚಿತ್ರ ಬರೆವ ಸಾಧನಗಳನ್ನು ತಕ್ಕೊಂಡು ಹೇಗೆ ಹೊಸ ಚಿತ್ರವನ್ನು ಸಿದ್ಧಪಡಿಸುವನೊ ಹಾಗೆ ಆತ್ಮವು ಈ ದೇಹವು ನಾಶಹೊಂದುತ್ತಲೆ. ಇನ್ನೊಂದು ಕಲ್ಯಾಣಕರವಾದ ಹೊಸ ಉತ್ತಮ ದೇಹವನ್ನು ಧಾರಣಮಾಡುತ್ತದೆ. ॥ ೪ ॥

ಹಳೆಯದನ್ನು ಬಿಡುವ ಹೊತ್ತಿಗೆ ಹೊಸತನ್ನು ಸಂಪಾದಿಸಲೇಬೇಕಾಗುವುದು. ಹಳೆಯ ಬಟ್ಟೆಬಿಡುವಾಗ ಹೊಸ ಬಟ್ಟೆತರುವರು. ಹಳೆ ಮನೆ ಬಿಡುವಾಗ ಹೊಸ ಅನುಕೂಲು ಮನೆಯನ್ನು ನೋಡುವರು. ಆತ್ಮವು ಹಳೆಯ ದೇಹವನ್ನು ಬಿಡುವಾಗ ಮತ್ತೊಂದು ದೇಹವನ್ನು ಹುಡುಕಿಕೊಂಡು ಅಲ್ಲಿ ತನ್ನ ಕಾಲೂರುವುದು. ಈ ಸಂಧಿಕಾಲದ ಅವಸ್ಥೆಗೆ (ಅವಿದ್ಯಾ) ಅವಿದ್ಯೆಯು ಸಮುಯವೆಂದಿದೆ. ಆಗ ಅದಕ್ಕೆ ಏನೂ ತಿಳಿವು ಇರುವುದಿಲ್ಲ. ಮಹಾಭಾರತದಲ್ಲಿ ಒಂದೆಡೆಗೆ ಬರೆದಿರುವುದೇನೆಂದರೆ:

ಯಥಾ ಹಿ ಪುರುಷಃ ಶಾಲಾಂ ಪುನಃ
ಸಂಪ್ರವಿಶೇನ್ನವಾಮ್ ।
ಏವಂ ಜೀವಃ ಶರೀರಾಣಿ ತಾನಿ ತಾನಿ
ಪ್ರಪದ್ಯತೇ ॥ ೫೭ ॥
ದೇಹಾನ್ಪುರಾಣಾನುತ್ಸೃಜ್ಯ
ನವಾನ್ಸಂಪ್ರತಿಪದ್ಯತೇ ।
ಏವಂ ಮೃತ್ಯುಮುಖಂ ಪ್ರಾಹುರ್ಜನಾ
ಯೇ ತತ್ತ್ವದರ್ಶಿನಃ ॥ ೫೮ ॥
—ಶಾಂತಿ ಪ. ೧೫.

"ಮನುಷ್ಯನು ಹೇಗೆ ಹೊಸ ಮನೆಯನ್ನು ಪ್ರವೇಶಿಸುವನೋ ಹಾಗೆ ಜೀವಾತ್ಮನು ಹೊಸ ಹೊಸ ಶರೀರಗಳಲ್ಲಿ ಸೇರುವನು." ಆತ್ಮವು ಅನಾದಿ, ಅನಂತವಾಗಿದ್ದು ನಿತ್ಯವಾಗಿದೆ. ದೇಹವು ಅನಿತ್ಯ. ದೇಹವು ನಾಶವಾದರೂ ಆತ್ಮವು ಉಳಿಯುವುದು. ಭೀಷ್ಮಾದಿಗಳು ಈ ಯುದ್ಧದಲ್ಲಿ ಮಡಿದರೂ ಅವರಿಗೆ (ನವತರಂ ಕಲ್ಯಾಣತರಂ ರೂಪಂ) ಹೊಚ್ಚ ಹೊಸ ಮತ್ತು ಹೆಚ್ಚು ಸುಖಕಾರಕ ದೇಹವು ದೊರೆಯುವುದು. ದುರ್ಯೋಧನಾದಿಗಳಿಗೂ ವೀರಸ್ವರ್ಗವು ಸಿಕ್ಕುವುದು. ಇದರಲ್ಲಿ ಕೌರವಾದಿಗಳ ಹಾನಿಯೂ ಎಳ್ಳಷ್ಟಿಲ್ಲ. ಆದುದರಿಂದ ಎಲೈ ಅರ್ಜುನನೆ! ನೀನು ಕಾಳಗಕ್ಕೆ ಅಣಿಯಾಗು. ಮಡಿದವರ ಆತ್ಮವು ಹೊಸ ಶರೀರಗಳಲ್ಲಿ ಸೇರುತ್ತವೆ (ನವಾನಿ ಶರೀರಾಣಿ ಸಂಯಾತಿ). ಮತ್ತು ಉತ್ತಮರೀತಿಯಿಂದ ಪ್ರವೇಶಿಸುತ್ತವೆ (ಸಮ್ಯಕ್ ರೀತ್ಯಾ ಯಾತಿ). ಎಂಬ ಮಾತುಗಳು ಈ ಶ್ಲೋಕದಲ್ಲಿ ಈ ಅರ್ಥದಿಂದ ಮಹತ್ವದುವುಗಳಾಗಿವೆ.

ಈ ಶ್ಲೋಕದಲ್ಲಿ **ವಾಸಾಂಸಿ ಜೀರ್ಣಾನಿ** ಮತ್ತು **ನವಾನಿ** ಎಂದು ಬಹುವಚನದ ಪ್ರಯೋಗವಿದೆ. ಇದಕ್ಕೆ ಕಾರಣವುಂಟು. ಮನುಷ್ಯನು ಮೈಯಲ್ಲಿ ಮೂರು ಬಟ್ಟೆಗಳನ್ನು ತೊಟ್ಟುಕೊಳ್ಳುವಂತೆ ಆತ್ಮನು ಮೂರು ದೇಹಗಳನ್ನು ಧಾರಣಮಾಡಿರುತ್ತಾನೆ. ಸ್ಥೂಲಶರೀರ, ಸೂಕ್ಷ್ಮಶರೀರ ಮತ್ತು ಕಾರಣಶರೀರ ಎಂಬಿವೇ ಆ ಮೂರು ಶರೀರಗಳು. ಅವುಗಳ ವಿವರಣೆ ಹೀಗಿದೆ;



## (೧೨) ಆತ್ಮದ ವರ್ಣನೆ.

ನೈನಂ ಛಿಂದಂತಿ ಶಸ್ತ್ರಾಣಿ ನೈನಂ ದಹತಿ ಪಾವಕಃ ।
ನ ಚೈನಂ ಕ್ಲೇದಯಂತ್ಯಾಪೋ ನ ಶೋಷಯತಿ ಮಾರುತಃ ॥ ೨೩ ॥
ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।
ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥ ೨೪ ॥
ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ।
ತಸ್ಮಾದೇವಂ ವಿದಿತ್ವೈನಂ ನಾನುಶೋಚಿತುಮರ್ಹಸಿ ॥ ೨೫ ॥

---

ಅನ್ವಯ:— ಏನಂ ಶಸ್ತ್ರಾಣಿ ನ ಛಿಂದಂತಿ, ಏನಂ ಪಾವಕಃ ನ ದಹತಿ, ಏನಂ ಆಪಃ ನ ಕ್ಲೇದಯಂತಿ, ಏನಂ ಚ ಮಾರುತಃ ನ ಶೋಷಯತಿ ॥೨೩॥ ಅಯಂ ಅಚ್ಛೇದ್ಯಃ ಅಯಂ ಅದಾಹ್ಯಃ, ಅಯಂ ಅಕ್ಲೇದ್ಯಃ, (ಅಯಂ) ಅಶೋಷ್ಯಃ ಏವ । ಅಯಂ ನಿತ್ಯಃ ಸರ್ವಗತಃ ಸ್ಥಾಣುಃ ಅಚಲಃ ಸನಾತನಃ ॥ ೨೪ ॥ ಅಯಂ ಅವ್ಯಕ್ತಃ ಅಯಂ ಅಚಿಂತ್ಯಃ, ಅಯಂ ಅವಿಕಾರ್ಯಃ ಉಚ್ಯತೇ ; ತಸ್ಮಾತ್ ಏನಂ ಏವಂ ವಿದಿತ್ವಾ (ತ್ವಂ) ಅನುಶೋಚಿತುಂ ನ ಅರ್ಹಸಿ ॥ ೨೫ ॥

ಇದನ್ನು (ಆತ್ಮವನ್ನು) ಶಸ್ತ್ರಗಳು ತುಂಡರಿಸಲಾರವು; ಬೆಂಕಿಯು ಸುಡಲಾರದು; ನೀರು ನೆನೆಯಿಸಲಾರದು ; ಗಾಳಿಯು ಒಣಗಿಸಲಾರದು ; ॥ ೨೩ ॥ ಇದು (ಆತ್ಮವು) ತುಂಡಾಗದು ; ಸುಡದು ; ನೆನೆಯದು ಒಣಗದು. ಇದು ನಿತ್ಯವಾಗಿದೆ. ಎಲ್ಲೆಡೆಯಲ್ಲಿದೆ. ನೆಲೆಯಾಗಿದೆ. ಅಲೆಯದೆ ಇದೆ. ಎಂದೆಂದೂ ಇದೆ. ॥ ೨೪ ॥ ಇದು ಕಾಣದು, ಬಗೆಹರಿಯದು, ಮತ್ತು ಬದಲಾಗದು, ಎಂದು ಹೇಳುತ್ತಾರೆ. ಆದ್ದರಿಂದ ಇದನ್ನು ( ಹೀಗಿದೆಯೆಂದು ) ತಿಳಿದು ನೀನು ಅಳಲುವುದು ಸರಿಯಲ್ಲ. ॥ ೨೫ ॥

---

ಗೀತೆಯಲ್ಲಿ ಹೀಗೆ ಹೇಳಿದೆ :

ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ ।
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ ॥ (೩. ೪೨.)

“ ಶರೀರಕ್ಕಿಂತಲೂ ಇಂದ್ರಿಯಗಳು ಮೇಲಣವು. ಇಂದ್ರಿಯಗಳಿಗಿಂತ ಮನಸು ಮೇಲಣದು ; ಮನಸಿಗಿಂತ ಬುದ್ಧಿ ಮೇಲು ; ಮತ್ತು ಬುದ್ಧಿಗಿಂತಲೂ ಆತನು ( ಆತ್ಮನು ) ಮೇಲಿನವನು. ”

ಹೀಗೆ ಇವೆಲ್ಲ ದೇಹಗಳು ಒಂದರೊಳಗೊಂದು ಹುದುಗಿಕೊಂಡಿವೆ. ಸಾವು ಈ ಎಲ್ಲ ದೇಹಗಳಿಗೂ ಒಮ್ಮೆಲೆ ಬರುವುದಿಲ್ಲ. ಮಡಿದವನ ಹೊರಗಿನ ಸ್ಥೂಲದೇಹವು ಮಾತ್ರ ಮೊದಲು ನಷ್ಟವಾಗುವುದು. ಆಗ ಒಳಒಳಗಿನ ದೇಹಗಳು ಹಾಗೆಯೆ ಉಳಿದಿರುತ್ತವೆ. ಕಾಲಾಂತರದಿಂದ ಒಳಗಿನ ಸೂಕ್ಷ್ಮ ದೇಹವು ನಾಶಹೊಂದುವುದು. ಆ ಮೇಲೆ ಅದರ ಒಳಗಿನ ಮನಃಶರೀರವು ಅಥವಾ ಕಾರಣ ಶರೀರವು ಮಾತ್ರ ಉಳಿಯುವುದು. ವ್ಯವಹಾರದಲ್ಲಿ ಮರಣ ಎಂದು ಹೇಳುವ ಮಾತಿಗೆ ಸ್ಥೂಲ ಶರೀರದ ನಾಶವೆಂದು ಮಾತ್ರ ಅರ್ಥವೆ ಹೊರತು ಎಲ್ಲವುಗಳ ಆತ್ಯಂತಿಕ ನಾಶವಲ್ಲ. ಆದುದರಿಂದ ಸಾವಿನ ನಿಜವಾದ ಅರ್ಥವನ್ನು ಅರಿತುಕೊಂಡರೆ ಮರಣಭಯವೆ ದೂರವಾಗುವುದು.

ಕೆಲಸದಲ್ಲಿ ತೊಡಗಿದಾಗ ತೊಟ್ಟೆ ಬಟ್ಟೆ ಹರಿಯುವುದೆಂದು ತನ್ನ ಕರ್ತವ್ಯವನ್ನೇ ಮಾಡದಿರುವುದು ಮೂರ್ಖತನವಲ್ಲವೆ ? ಅತ್ಯಂತ ಅವಶ್ಯಕ ಕರ್ತವ್ಯವನ್ನು ನೆರವೇರಿಸುತ್ತಿರುವಾಗ ಸ್ಥೂಲದೇಹವು ಕಷ್ಟಕ್ಕೆ ಒಳಗಾಗುವುದೆಂದು ಅಥವಾ ನಷ್ಟವಾಗುವುದೆಂದು ಹೆದರಿ ಹಿಂಜರಿಯಲಾದೀತೆ ? ಹಾಗೆ ಮಾಡಿದಲ್ಲಿ ಮರಣಸಂಭವಿಸುವುದರಿಂದ ಆಗಬಹುದಾದ ಹಾನಿಗಿಂತ ಹೆಚ್ಚಿನ ಹಾನಿಯು ಕರ್ತವ್ಯಚ್ಯುತಿಯಿಂದ ಆಗುತ್ತಿರುತ್ತದೆ. ಆದುದರಿಂದ ಎಲಾ ಅರ್ಜುನನೆ ! ಈ ಧರ್ಮಯುದ್ಧದಿಂದ ಪರಾಙ್ಮುಖನಾಗಬೇಡ. ಯುದ್ಧರೂಪಿಯಾದ ನಿನ್ನ ಕರ್ತವ್ಯಕ್ಕೆ ಆನಂದದಿಂದ ಸಿದ್ಧನಾಗು. ಯುದ್ಧದೊಳಗಿನ ಎಂತಹ ಹದನವಾದ ಶಸ್ತ್ರಾಸ್ತ್ರಗಳೂ ಆತ್ಮವನ್ನು ತುಂಡರಿಸಲಾರವು. ಇದನ್ನು ಕುರಿತು ಹೀಗೆ ಹೇಳಿದೆ,

(೨೩-೨೫) ಆತ್ಮವು ಅಖಂಡವಾಗಿದೆ ಆದುದರಿಂದ ಇದನ್ನು ಕತ್ತರಿಸಲು ಯಾರಿಗೂ ಸಾಧ್ಯವಿಲ್ಲ. ಶಸ್ತ್ರವು ಇದನ್ನು ಕೊಯ್ಯದು. ಬೆಂಕೆ ಸುಡದು. ನೀರು ನೆನೆಯಿಸದು. ಗಾಳಿ ಒಣಗಿಸದು. ಇದು ಹೊರಗಣ್ಣಿಗೆ ಕಾಣಿಸದು. ಆದುದರಿಂದ ಇದು **ಅವ್ಯಕ್ತ**ವಾಗಿದೆಯೆಂದು ಹೇಳುವುದು. ಪೃಥ್ವಿಯ ಗುಣವು ಗಂಧ, ಮೂಗಿನಿಂದ ಅದು ತಿಳಿಯುವುದು. ಆದರೆ ಆತ್ಮದಲ್ಲಿ ಬರಿ ಗಂಧವಷ್ಟೆ ಇಲ್ಲ ; ಆದುದರಿಂದ ಬರಿ ಮೂಗಿನಿಂತ ಮೂಸಿ ಇದು ತಿಳಿಯದು. ಆಪ್‌ತತ್ವದ ರಸಗುಣವಷ್ಟೆ ಆತ್ಮದಲ್ಲಿಲ್ಲ. ಆದ್ದರಿಂದ ಬರಿ ನಾಲಗೆಯಿಂದ ನೆಕ್ಕಿ ಇದು ತಿಳಿಯದು. ಅಗ್ನಿತತ್ವದ ರೂಪಗುಣವೊಂದೆ ಆತ್ಮದಲ್ಲಿಲ್ಲ. ಆದರಿಂದ ಕೇವಲ ಕಣ್ಣಿನಿಂದ ನೋಡಿ ಇದು ತಿಳಿಯದು. ವಾಯು ತತ್ವದ ಸ್ಪರ್ಶಗುಣವೊಂದೇ ಆತ್ಮದಲ್ಲಿಲ್ಲ. ಆದರಿಂದ ಬರಿ ಮುಟ್ಟಿ ಇದು ತಿಳಿಯದು. ಇದರಂತೆ ಕಿವಿಯಿಂದ ಕೇಳಿ ಇದು ತಿಳಿಯದು ಆದಕಾರಣ ಇದು ಅವ್ಯಕ್ತವೂ, **ಅಚಿಂತ್ಯವೂ** ಆಗಿದೆ. ಏಕೆಂದರೆ ಬುದ್ಧಿಗೆ ಬಗೆಹರಿಯದು.

ಇದು ತುಂಡಾಗದು ; ಸುಡದು ; ತೊಯ್ಯದು. ಒಣಗದು. ನನೆಯದು. ಹೆಚ್ಚದು. ಆದುದರಿಂದ ಇದು **ಅವಿಕಾರಿ**ಯಾಗಿದೆ ಎಂಬುದುಂಟು. ಇದು ಎಲ್ಲೆಡೆಗೂ ಇದೆ. ಸ್ಥಿರವಾಗಿದೆ. ಅಲೆಯದೆ ಇದೆ. ಸನಾತನವಾಗಿದೆ.

ಆತ್ಮನ ಪ್ರಭಾವದಿಂದಲೆ ಮನಸು, ಚಿತ್ತ ಮೊದಲಾದುವುಗಳು ತಮ್ಮ ಕಾರ್ಯವನ್ನು ಮಾಡಬಲ್ಲವು. ಮನಸು ಮತ್ತು ಚಿತ್ತಗಳು ತಮ್ಮಿಂದ ಸ್ಥೂಲವಾಗಿರುವುದನ್ನು ಅರಿಯುವುವು. ಆದರೆ ತಮಗಿಂತಲೂ ಸೂಕ್ಷ್ಮವಾಗಿರುವುದನ್ನು ಅವು ಅರಿಯಲಾರವು. ಆತ್ಮನ ಸ್ಫೂರ್ತಿಯಿಂದಲೆ ಸಂಕಲ್ಪವಿಕಲ್ಪಾತ್ಮಕ ತರಂಗಗಳು ಮಾನಸಸರೋವರದಲ್ಲಿ ಏಳುತ್ತವೆ. ಆತ್ಮನ ಪ್ರಚೋದನೆಯಿಂದ ಹೊರಟ ಆ ತರಂಗಗಳು ಆತ್ಮದ ಕಡೆಗೇ ಅವು ಬರಲಾರವು. ಆದುದರಿಂದ ಸಂಕಲ್ಪವಿಕಲ್ಪಾತ್ಮಕ ಮನಸು ಆತ್ಮವನ್ನು ಅರಿಯಲು ಅಸಮರ್ಥವಾಗಿದೆ ಕನ್ನಡಕದ ಸಹಾಯದಿಂದ ಕಣ್ಣು ಒಂದು ವಸ್ತುವನ್ನು ನೋಡುವುದು. ಆದರೆ ಕನ್ನಡಕವೆ ಅದನ್ನು ನೋಡಬಲ್ಲುದೆ ? ಅದರಂತೆ ಆತ್ಮನಿಗೆ ಮನಸೆಂಬುದು ಕನ್ನಡಕವಿದ್ದಂತೆ. ಅದರಿಂದ ಬಾಹ್ಯಸೃಷ್ಟಿಯು ಕಾಣಬಲ್ಲುದು. ಆತ್ಮದರ್ಶನವು ಸಾಧ್ಯವಿಲ್ಲ. ಆದುದರಿಂದ ಆತ್ಮವು '**ಅಚಿಂತ್ಯ**'ವಾಗಿದೆ.

ಆತ್ಮವು '**ಸರ್ವಗತ**' ಎಂದರೆ ಎಲ್ಲೆಡೆಗಳಲ್ಲಿಯೂ ವ್ಯಾಪಿಸಿಕೊಂಡಿದೆ. ಆದುದರಿಂದ ಅರ್ಜುನನೆ! ಅದು ನಿನ್ನ ದೇಹದಲ್ಲಿ ವ್ಯಾಪಿಸಿರುವಂತೆ ಭೀಷ್ಮ-ದ್ರೋಣಾದಿಗಳ ದೇಹದಲ್ಲಿಯೂ ಇಡುಗಿದೆ. ಒಂದು ಆತ್ಮವೇ, ಸರ್ವಗತವಾದುದರಿಂದ ಎಲ್ಲರ ದೇಹಗಳಲ್ಲಿಯೂ ಸಂಪೂರ್ಣವಾಗಿ ತುಂಬಿಕೊಂಡಿದೆ. ಆದುದರಿಂದ ಯಾವುದೊಂದು ದೇಹದ ವಿನಾಶದಿಂದ ಆತ್ಮದ ಹಾನಿಯಿಲ್ಲ. ಆದರಿಂದ ಧರ್ಮಯುದ್ಧಕ್ಕೆ ಸಿದ್ಧನಾದವನು ಶೋಕಗ್ರಸ್ತನಾಗುವ ಕಾರಣವಿಲ್ಲ.

ಈ ವರೆಗೆ ಬಂದ ಆತ್ಮನ ಸ್ವರೂಪಸೂಚಕ ಹಲವು ಹೆಸರುಗಳನ್ನು ಒಂದೆಡೆಗೆ ಸಂಗ್ರಹಿಸಿಕೊಟ್ಟಿದೆ. ಇದರೊಡನೆ ದೇಹದ ವಿಚಾರವನ್ನು ಹೋಲಿಸಿ ನೋಡಿದಲ್ಲಿ ಎರಡರ ನಿಶ್ಚಿತಜ್ಞಾನವಮಾಡಿಕೊಳ್ಳಲು ಅನುಕೂಲವಾಗುವುದು.

| ಆತ್ಮವಾಚಕ ಶಬ್ದಗಳು | ದೇಹವಾಚಕ ಶಬ್ದಗಳು |
|---|---|
| ಆತ್ಮ | ಅನಾತ್ಮ, ದೇಹ |
| ಪುರುಷ | ಪ್ರಕೃತಿ |
| ಅಮರ | ಮರಣಾಧೀನ |
| ಸತ್ | ಅಸತ್ |
| ದೇಹೀ | ದೇಹ |
| ಅವಿನಾಶಿ | ವಿನಾಶಿ |
| ಅನಂತ | ಅಂತವುಳ್ಳದು |
| ಅನಾದಿ | ಆದಿಯಿರುವುದು |
| ನಿತ್ಯ | ಅನಿತ್ಯ |
| ಅಜ | ಜನ್ಮವಿದ್ದುದು |
| ನ ಜಾಯತೇ | ಜಾಯತೇ |
| ಶಾಶ್ವತ | ಅಶಾಶ್ವತ |
| ಪುರಾಣಃ(ಪುರಾ ಅಪಿನವಃ) | ಮುಪ್ಪುಳ್ಳದು |
| ನ ಹನ್ಯತೇ | ಹನ್ಯತೇ |
| ನ ಮ್ರಿಯತೇ | ಮ್ರಿಯತೇ |
| ಅಪ್ರಮೇಯ | ಪ್ರಮೇಯ |
| ಅವ್ಯಯ | ವ್ಯಯವುಳ್ಳದು |
| ಅಚ್ಛೇದ್ಯ | ಛೇದ್ಯ |
| (ಏನಂ ಶಸ್ತ್ರಾಣಿ ನ ಛಿಂದಂತಿ) | (ಶಸ್ತ್ರಾಣಿ ಛಿಂದಂತಿ) |
| ಅದಾಹ್ಯ | ದಾಹ್ಯ |
| (ಏನಂ ಪಾವಕಃ ನ ದಹತಿ) | (ಪಾವಕಃ ದಹತಿ) |
| ಅಕ್ಲೇದ್ಯ | ಕ್ಲೇದ್ಯ |
| (ಏನಂ ಆಪಃ ನ ಕ್ಲೇದಯಂತಿ) | (ಆಪಃ ಕ್ಲೇದಯಂತಿ) |

| | |
|---|---|
| ಅಶೋಷ್ಯ | ಶೋಷ್ಯ |
| (ಏನಂ ಮಾರುತಃ ನ ಶೋಷಯತಿ) | (ಮಾರುತಃ ಶೋಷಯತಿ) |
| ಸರ್ವಗತ | ಏಕದೇಶಿ |
| ಸ್ಥಾಣು (ಆಧಾರ) | ಆಧೇಯ |
| ಅಚಲ | ಚಲ |
| ಸನಾತನ | ನಶ್ವರ |
| ಅವ್ಯಕ್ತ | ವ್ಯಕ್ತ |
| ಅಚಿಂತ್ಯ | ಚಿಂತ್ಯ |
| ಅವಿಕಾರ್ಯ | ವಿಕಾರ್ಯ |

೨೪ನೆಯ ಶ್ಲೋಕದೊಳಗಿನ 'ಸರ್ವಗತ' ಎಂಬ ವಿಶೇಷಣವು ಬಹಳ ಮಹತ್ವದ್ದಾಗಿದೆ. ಆತ್ಮವು ಸರ್ವವ್ಯಾಪಕವಾಗಿದೆ, ಎಂದು ಈ ವಿಶೇಷಣದಿಂದ ಗೊತ್ತಾಗುತ್ತದೆ. ಸರ್ವವ್ಯಾಪಕವೆಂದರೆ ಎಲ್ಲೆಡೆಯಲ್ಲಿಯೂ ತುಂಬಿಕೊಂಡುದು. ಎಲ್ಲೆಡೆಯಲ್ಲಿಯೂ ವ್ಯಾಪಿಸಿದುದರಿಂದಲೆ ಆತ್ಮವು ಅಚಲವೂ ಅಹುದು. ಚಲನವಲನಕ್ಕೆ— ಸಂಚಲನಕ್ಕೆ ಎಡೆಯಲ್ಲಿಡೆ? ತುಂಬಿದುದು ತುಳುಕುವುದು ಹೇಗೆ? ಸ್ವಲ್ಪ ಇದ್ದುದು, ಅಪೂರ್ಣವಾಗಿರುವುದು ಅಲ್ಲಾಡಬಲ್ಲುದು. ಪೂರ್ಣವಾಗಿ ಇಡುಗಿದುದು ಅಲ್ಲಾಡಲು ಅನುವೆಲ್ಲಿ? ಆದುದರಿಂದ ಆತ್ಮವು ಸರ್ವಗತವಾಗಿರುವುದರಿಂದಲೆ ಅಚಲವಾಗಿದೆ. ಗೀತೆಯ ಈ ಮೂಲ ಸಿದ್ಧಾಂತದ ಆಧಾರದಿಂದಲೆ ಎಲ್ಲರಲ್ಲೂ ಇಡುಗಿರುವ ಆತ್ಮವು ಒಂದೇ ಎಂದು ಸಿದ್ಧವಾಗುತ್ತದೆ. ಈ ಬಗೆಯಾಗಿ ಆತ್ಮದ ದೃಷ್ಟಿಯಿಂದ ಎಲ್ಲರೂ ಒಂದೇ ಆಗಿದ್ದು ದೈಹಿಕ ದೃಷ್ಟಿಯಿಂದ ಭಿನ್ನರಾಗಿದ್ದಾರೆ. ಎಲ್ಲೆಡೆಗೂ ಪರಿಪೂರ್ಣವಾಗಿ ತುಂಬಿಕೊಂಡಿರುವ ಆತ್ಮನು ಯಾವನೊಬ್ಬನ ಅಥವಾ ಹಲಕೆಲವರ ಸಾವಿನಿಂದ ನಾಶವಾಗುವುದಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಒಂದು ಪಟ್ಟಣದಲ್ಲಿ ಬಣ್ಣಬಣ್ಣದ ಲಕ್ಷಾವಧಿ ಸಣ್ಣದೊಡ್ಡ ವಿದ್ಯುದ್ದೀಪಗಳು ಬೆಳಗುತ್ತಿವೆ. ಅವುಗಳಲ್ಲಿ ಕೆಲವು ದೊಡ್ಡ ದೀಪಗಳು ಒಡೆದರೂ ಅದರಿಂದ ಆ ಊರಲ್ಲಿ ವ್ಯಾಪಿಸಿದ ವಿದ್ಯುತ್ಸಂಚಯದಲ್ಲಿ ಏನೂ ವ್ಯತ್ಯಾಸವಾಗುವುದಿಲ್ಲ. ಅಗಾಧವಾದ ಕಾಲಯಂತ್ರದಿಂದ ಶರೀರರೂಪಿಯಾದ ವಿದ್ಯುದ್ದೀಪಗಳು ಹೊತ್ತಿಕೊಂಡಿವೆ. ಅವುಗಳಲ್ಲಿ ಆತ್ಮಶಕ್ತಿಯ ತೇಜಸ್ಸು ಹೆಚ್ಚುಕಡಿಮೆ ಪ್ರಮಾಣದಿಂದ (ಪ್ರಕೃತಿಭೇದದಿಂದ) ಮಿನುಗುತ್ತಲಿದೆ. ಸಾತ್ವಿಕ, ರಾಜಸಿಕ, ತಾಮಸಿಕ ಪ್ರಕೃತಿಗಳಿಗನುಸರಿಸಿ ಆ ದೀಪದ ಬಣ್ಣ-ಹೊಳಪು ಹೆಚ್ಚು ಕಡಿಮೆಯಾಗಿದೆ. ಇವುಗಳಲ್ಲಿ ಕೆಲವು ದೀಪಗಳು ನಂದಿದರೂ ಆತ್ಮಶಕ್ತಿಗೆ ಅದರಿಂದ ಕೊರತೆಯಿಲ್ಲ. ಕೆಲವು ಹೋದರೆ ಕೆಲವು ಹೊಸವು ಆಗುವುವು. ಈ ದೃಷ್ಟಿಯಿಂದ ವಿಚಾರಿಸಿದರೆ ಗೀತೆಯಲ್ಲಿ ಹೇಳಿದ 'ಸರ್ವಾತ್ಮಭಾವ'ದ ಮನವರಿಕೆಯಾಗುವುದು. ಇದರ ಪುಷ್ಟೀಕರಣಾರ್ಥವಾಗಿ ಗೀತೆಯ ಇನ್ನೂ ಕೆಲವು ವಚನಗಳನ್ನು ಇಲ್ಲಿ ಎತ್ತಿಹೇಳಬಹುದು.

೧. ಸರ್ವಭೂತಸ್ಥಿತಂ ಯೋ ಮಾಂ
ಭಜತ್ಯೇಕತ್ವಮಾಸ್ಥಿತಃ ।

೨. ಅಹಮಾತ್ಮಾ ಗುಡಾಕೇಶ
ಸರ್ವಭೂತಾಶಯಸ್ಥಿತಃ ॥ (೧೦-೨೦)

೩. ಅಹಂ ವೈಶ್ವಾನರೋಭೂತ್ವಾ
ಪ್ರಾಣಿನಾಂ ದೇಹಮಾಶ್ರಿತಃ ॥ (೧೫-೧೪)

(೧) ಎಲ್ಲ ಭೂತಮಾತ್ರಗಳಲ್ಲಿ ಇರುವ ನನ್ನನ್ನು ಯಾವನು ಭಜಿಸುವನೊ. (೨) ಎಲ್ಲ ಭೂತಮಾತ್ರಗಳಲ್ಲಿ ನಾನು ಆತ್ಮನಿದ್ದೇನೆ. (೩) ವೈಶ್ವಾನರ ರೂಪದಿಂದ ನಾನು ಎಲ್ಲ ಪ್ರಾಣಿಗಳ ದೇಹದಲ್ಲಿದ್ದೇನೆ. '**ನಾನೇ ಎಲ್ಲ ಭೂತಗಳಲ್ಲಿರುವ ಒಬ್ಬ ಆತ್ಮನು.**' ಎಂದು ಶ್ರೀಕೃಷ್ಣನು ಸಾರಿದ್ದಾನೆ.

ಯೋಗಯುಕ್ತೋ ವಿಶುದ್ಧಾತ್ಮಾ ವಿಜಿತಾತ್ಮಾ
ಜಿತೇಂದ್ರಿಯಃ। ಸರ್ವಭೂತಾತ್ಮಭೂತಾತ್ಮಾ
ಕುರ್ವನ್ನಪಿ ನ ಲಿಪ್ಯತೇ ॥ (೫-೭)

"ಯೋಗಯುಕ್ತನಾದ ಪವಿತ್ರಾತ್ಮನು, ತನ್ನ ಆತ್ಮ ಮತ್ತು ಇಂದ್ರಿಯಗಳನ್ನು ಗೆದ್ದು ಎಲ್ಲ ಭೂತಮಾತ್ರಗಳ ಆತ್ಮವು ತನ್ನ ಆತ್ಮನಾದವನು (ಸರ್ವ-ಭೂತ-ಆತ್ಮಾ-ಭೂತ-ಆತ್ಮಾ) ಕರ್ಮಗತನಾದರೂ ಅವರ ತೊಡಕಿನಲ್ಲಿ ಅವನು ಸಿಕ್ಕುವುದಿಲ್ಲ." ಕರ್ಮಬಂಧನದಲ್ಲಿ ಬೀಳಬಾರದಾಗಿದ್ದರೆ ಸರ್ವಾತ್ಮಭಾವದ ಸಿದ್ಧಿಯನ್ನು ಪಡೆಯಬೇಕು.

ಭಗವಾನ್ ಶ್ರೀಕೃಷ್ಣನು 'ಸರ್ವಾತ್ಮಭಾವ'ದ ಮಟ್ಟದಲ್ಲಿ ನಿಂತು ಕೆಲಸಮಾಡುತ್ತಾನೆ. ಅರ್ಜುನನು 'ದೇಹಾತ್ಮಭಾವ'ದ ಸ್ಥಿತಿಯಲ್ಲಿದ್ದಾನೆ. ಕರ್ಮಲೇಪವು ತಟ್ಟಬಾರದಾಗಿದ್ದರೆ ಸರ್ವಾತ್ಮಭಾವದ ಸ್ಥಿತಿಯನ್ನು ಸಾಧಿಸಬೇಕು. ಹಿಂದೆ ೧೫ನೆಯ ಶ್ಲೋಕದ ಟೀಕೆಯಲ್ಲಿ ಮನಸಿನ ಉಚ್ಚಸ್ಥಿತಿಗೆ ಹೋದ ಮಹಾತ್ಮನ ವರ್ಣನೆಯನ್ನು ಮಾಡಿದೆ. ಆದರೆ 'ಸರ್ವಾತ್ಮಭಾವ'ಸ್ಥಿತಿಯು ಅದಕ್ಕಿಂತಲೂ ಎರಡು ಮೆಟ್ಟಲು ಮೇಲಣದಾಗಿದೆ. ಇದು ಪೂರ್ಣಪುರುಷನ ಸಿದ್ಧಿಯು.

ಮನುಷ್ಯರಲ್ಲಿ ನಾಲ್ಕು ಪಂಗಡಗಳನ್ನು ಮಾಡಬಹುದು :

೧ ಜಾಗೃತಿ–ದ್ವೈತದ ಅನುಭವ; ಭಿನ್ನಭೇದಗಳ ಅನುಭವ; ಸೃಷ್ಟಿಯ ವಿವಿಧತೆಯ ಅನುಭವ.

೨ ಸ್ವಪ್ನ –ದ್ವೈತದ ಅನುಭವವು ಇಲ್ಲಿಯೂ ಉಂಟು. ಆದರೆ ಕಾಣುವಾಗ ನಿಜ-(ಸತ್ಯ)ವೆಂದು ತೋರಿದರೂ ಮುಂದೆ ಎಲ್ಲವೂ ಹುಸಿಯೆಂಬ ಅನುಭವವು ಬರುವುದು.

೩ ಸುಷುಪ್ತಿ=ಅದ್ವೈತಾನುಭವ; ದ್ವೈತಾನುಭವವು ಹಿಮ್ಮೆಟ್ಟುವುದು; ಬ್ರಹ್ಮರೂಪಸ್ಥಿತಿಯ ಅನುಭವ.

೪ ತುರೀಯ=[ಇದು ಪರಮಸಿದ್ಧಿ. ಸಾಮಾನ್ಯರಿಗೆ ತೀರ ಅಸಾಧ್ಯ] ಶುದ್ಧಾವಸ್ಥೆ.

ಈ ನಾಲ್ಕರಲ್ಲಿ ಮೊದಲಿನ ಮೂರರ ಅನುಭವವು ಪ್ರತಿದಿನದಲ್ಲಿ ಪ್ರತಿಯೊಬ್ಬರಿಗೂ ಸ್ವಲ್ಪ ಹೆಚ್ಚು ಕಡಿಮೆ ಮಾನದಿಂದ ಬಂದೇಬರುತ್ತದೆ ಸುಷುಪ್ತಿಯೊಳಗಿನ ಬ್ರಹ್ಮರೂಪಸ್ಥಿತಿಯನ್ನು ಕುರಿತು ಹೀಗೆ ಹೇಳಿದೆ:

**ಸುಷುಪ್ತಿ–ಸಮಾಧಿ–ಮುಕ್ತಿಷು–ಬ್ರಹ್ಮರೂಪತಾ।**

"ಸುಷುಪ್ತಿ; ಸಮಾಧಿ ಮತ್ತು ಮುಕ್ತಿಗಳಲ್ಲಿ ಬ್ರಹ್ಮರೂಪಸ್ಥಿತಿಯು ಪ್ರಾಪ್ತವಾಗುವುದು." ಎಂದು ಶಾಸ್ತ್ರಕಾರರ ಸಿದ್ಧಾಂತವಿದೆ. ಸುಷುಪ್ತಿಯಲ್ಲಿ ತಮೋಗುಣ ಪ್ರಧಾನ ಬ್ರಹ್ಮರೂಪತೆ, ಸಮಾಧಿಯಲ್ಲಿ ರಜೋಗುಣ ಪ್ರಧಾನ, ಮುಕ್ತಿಯಲ್ಲಿ ಸತ್ವಗುಣಪ್ರಧಾನವಾಗಿರುತ್ತದೆ ಎಂದು ಕಲ್ಪಿಸಬಹುದಾಗಿದೆ ಜಾಗೃತಿಯೊಳಗಿನ ಸಂಕಲ್ಪ ವಿಕಲ್ಪಾತ್ಮಕ ಕ್ರಿಯಾತತ್ಪರವಾದ ಮನಸು ಏಕಾಗ್ರವಾಗಿ ಸ್ಥಿರವಾಗುತ್ತಲೆ ಸುಷುಪ್ತಿ ಇಲ್ಲವೆ ಸಮಾಧಿಸ್ಥಿತಿಯು ತಲೆದೋರುವುದು ಆಗ ಜಾಗೃತಿಯೊಳಗಿನ ನಾನು ನೀನೆಂಬ ದ್ವೈತಸ್ಥಿತಿಯು ಅಳಿಯಲಾರಂಭಿಸುವುದು. ಅದ್ವಯಾನಂದವು ದೊರೆಯಹತ್ತುವುದು. ಉಪನಿಷತ್ತಿನಲ್ಲಿ ಈ ಸ್ಥಿತಿಯನ್ನು ಹೀಗೆ ವರ್ಣಿಸಲಾಗಿದೆ:

**ಯೋ ವೈ ಭೂಮಾ ತತ್ಸುಖಂ ನಾಲ್ಪೇ ಸುಖಮಸ್ತಿ ಭೂಮೈವ ಸುಖಮ್ ॥ ೧ ॥ ಯತ್ರ ನಾನ್ಯತ್ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ ವಿಜಾನಾತಿ ಸ ಭೂಮಾಥ ಯತ್ರಾನ್ಯತ್ಪಶ್ಯತ್ಯನ್ಯಚ್ಛೃಣೋತ್ಯನ್ಯದ್ವಿಜಾನಾತಿ ತದಲ್ಪಂ, ಯೋ ವೈ ಭೂಮಾ ತದಮೃತಮಥ ಯದಲ್ಪಂ ತನ್ಮರ್ತ್ಯಮ್ ॥ ೨ ॥**

—ಛಾ. ೭-೨೩-೨೪

**ಸಂಪೂರ್ಣಭೂಮಾಹಮಿತೀಹ ಭಾವಯ।**

—ಮುಕ್ತಿ ೨. ೭೪.

"ಭೂಮಾ ಸ್ಥಿತಿಯು ಸುಖ. ಅಲ್ಪವಾಗಿರುವುದರಲ್ಲಿ ಸುಖವಿಲ್ಲ ಭೂಮಾ ಇದೇ ಸುಖ. ಭೂಮಾ ಸುಖಾನುಭವದ ಕಾಲದಲ್ಲಿ ಬೇರೆ ಏನೂ ಕಾಣುವುದಿಲ್ಲ. ಬೇರೆ ಏನೂ ಕೇಳಬರುವುದಿಲ್ಲ. ಬೇರೆ ಏನೂ ಅರಿಯುವುದಿಲ್ಲ. ಯಾವಾಗ ಬೇರೊಂದು ಕಾಣುವುದು, ಬೇರೊಂದು ಕೇಳಬರುವುದು, ಬೇರೊಂದು ಒಗೆಯುವುದು ಅದು ಅಲ್ಪಾವಸ್ಥೆ. ಭೂಮಾ ಸ್ಥಿತಿಯೇ ಅಮೃತವು ಸ್ವಲ್ಪವಾದುದು ಸಾವು. ಆದುದರಿಂದ ನಾನು ಪೂರ್ಣ ಭೂಮಾಯೆಂದು ಭಾವಿಸು"

ಇಲ್ಲಿ ಎರಡು ಸ್ಥಿತಿಗಳನ್ನು ವಿವರಿಸದ್ದಾಗಿದೆ. (೧) ಭೂಮಾ' ಸ್ಥಿತಿ. ಇದರಲ್ಲಿ ಕಾಣುವುದು, ಕೇಳುವುದು ಆಡುವುದು ಏನೂ ಇರುವುದಿಲ್ಲ. ಏಕೆಂದರೆ ನೋಟ ಮತ್ತು ನೋಡುವವ, ನಾನು, ನೀನು ಎಂಬೀ ಭೇದವೆ ಇಲ್ಲದಂತಾಗುವುದು. ತತ್‌ಮಯ ಸ್ಥಿತಿಯಿದು. ಇದು ಸೋಂಕಿನಿಂದ ದೊರೆವ ಸುಖವಲ್ಲ. ಸುಷುಪ್ತಿ, ಸಮಾಧಿ ಮತ್ತು ಮುಕ್ತಿಯಲ್ಲಿ ದೊರೆವ ಅಭೌತಿಕ ಆನಂದವು ಅಂತರಂಗದಲ್ಲಿ ಸಹಜವಾಗಿ ಉಂಟಾಗುವುದು. (೨) ಎರಡನೆಯದು ಅಲ್ಪಾವಸ್ಥೆ. ಇದರಲ್ಲಿ ಮನುಷ್ಯನು ಕೇಳುವನು, ಕಾಣುವನು, ಅರಿಯುವನು, ಸೋಂಕಿನಿಂದ ಸುಖಪಡೆಯುವನು. ಇದು ಮನುಷ್ಯನ ಜಾಗೃತ ಮತ್ತು ಸ್ವಪ್ನಸ್ಥಿತಿಯು. ಇದುವೆ ಮರ್ತ್ಯಸ್ಥಿತಿ. ಭೂಮಾ ಎಂದರೆ (ಭೂ–ಮನ್) ಬಹಳ, ವಿಪುಲ, ತುಂಬ ಸ್ಥಿತಿ, (ಬಹೋಃ ಭಾವಃ) ಈ ಸ್ಥಿತಿಯಲ್ಲಿ ಪರಿಪೂರ್ಣಾವಸ್ಥೆಯ ಅನುಭವವುಂಟಾಗುವುದು. ಇದರ ನಿಚ್ಚಳವಾದ ಕಲ್ಪನೆಯುಂಟಾಗಲು ಕೆಳಗಣ ಶಬ್ದಗಳನ್ನು ನೋಡಿ :

| | |
|---|---|
| ಭೂಮಾ | ಅಲ್ಪ |
| ಸುಷುಪ್ತಿನ ಸಮಾಧಿಯ ಅನುಭವ | ಜಾಗೃತಿಯ ಅನುಭವ |
| ಸುಖ | ದುಃಖ |
| ಪೂರ್ಣತೆ | ಅಪೂರ್ಣತೆ |
| ಸರ್ವಗತ | ಏಕದೇಶೀಯ |
| ಅಭಿನ್ನತೆಯ ಅನುಭವ | ಭಿನ್ನಭೇದಗಳ ಅನುಭವ |
| ವ್ಯಾಪಕತೆ | ಅವ್ಯಾಪಕತೆ |
| ಅಚಲ | ಚಲ |
| ಸರ್ವಭೂತಾತ್ಮಭೂತಾತ್ಮ | ಭಿನ್ನಾತ್ಮ |

| | |
|---|---|
| ಸರ್ವಭೂತಸ್ಥಿತಿ | ದೇಹಸ್ಥಿತಿ |
| ಸರ್ವಾತ್ಮಭಾವ | ದೇಹಾತ್ಮಭಾವ |
| | ಭಿನ್ನಾತ್ಮಭಾವ |

ಜಾಗ್ರತಸ್ಥಿತಿಯ ಅನುಭವವು ಸತ್ಯವಾಗಿರುವಂತೆ ಸುಷುಪ್ತಿಯ ಅನುಭವವೂ ಸತ್ಯವಿದೆ. ಸುಷುಪ್ತಿಯೊಳಗಿನ ಭೂಮಾಸ್ಥಿತಿಯು ಅದ್ವೈತಾವಸ್ಥೆಯ ಅನುಭವವೇ ಆಗಿದೆ. ಆದುದರಿಂದಲೆ ಭೂಮಾಸ್ಥಿತಿಯಲ್ಲಿ ನಾನು ನೀನೆಂಬ ಭೇದವು ದ್ವಂದ್ವವು ಅಳಿದಿರುತ್ತದೆ. ಇದನ್ನು ಕುರಿತು ಉಪನಿಷತ್ತಿನಲ್ಲಿ ಹೀಗೆ ಹೇಳಿದೆ:

**ಯತ್ರ ಹಿ ದ್ವೈತಮಿವ ಭವತಿ, ತದಿತರ ಇತರಂ ಪಶ್ಯತಿ, ತದಿತರ ಇತರಂ ಜಿಘ್ರತಿ, ತದಿತರ ಇತರಂ ರಸಯತೇ, ತದಿತರ ಇತರಮಭಿವದತಿ, ತದಿತರ ಇತರಂ ಶೃಣೋತಿ, ತದಿತರ ಇತರಂ ಮನುತೇ, ತದಿತರ ಇತರಂ ಸ್ಪೃಶತಿ, ತದಿತರ ಇತರಂವಿಜಾನಾತಿ; ಯತ್ರ ತ್ವಸ್ಯ ಸರ್ವಾತ್ಮೈವಾಭೂತ್, ತತ್ಕೇನ ಕಂ ಪಶ್ಯೇತ್, ತತ್ಕೇನ ಕಂ ಜಿಘ್ರೇತ್, ತತ್ಕೇನ ಕಂ ರಸಯೇತ್, ತತ್ಕೇನ ಕಮಭಿವದೇತ್, ತತ್ಕೇನ ಕಂ ಶೃಣುಯಾತ್, ತತ್ಕೇನ ಕಂ ಮನ್ವೀತ, ತತ್ಕೇನ ಕಂ ಸ್ಪೃಶೇತ್, ತತ್ಕೇನಕಂವಿಜಾನೀಯಾತ್?ಯೇನೇದಂ ಸರ್ವಂ ವಿಜಾನಾತಿ, ತಂ ಕೇನ ವಿಜಾನೀಯಾತ್? ಸ ಏಷ ನೇತಿ ನೇತ್ಯಾತ್ಮಾಽಗೃಹ್ಯೋ ನ ಹಿ ಗೃಹ್ಯತೇ.... ವಿಜ್ಞಾತಾರಮರೇ ಕೇನ ವಿಜಾನೀಯಾತ್ ?**

—ಬೃಹದಾರಣ್ಯಕ ಉ. ೪. ೫. ೧೫

'ದ್ವೈತವಿರುವಲ್ಲಿಯೆ ಒಂದು ಇನ್ನೊಂದನ್ನು ನೋಡುವುದು; ಒಂದು ಇನ್ನೊಂದನ್ನು ಮೂಸುವುದು; ಸವಿಯುವುದು. ಆಡುವುದು; ಕೇಳುವುದು; ಅರಿಯುವುದು; ಮುಟ್ಟುವುದು; ತಿಳಿಯುವುದು. ಆದರೆ ಯಾವಾಗ ಈ ಆತ್ಮವು ಸರ್ವಗತ ಆತ್ಮವಾಗುವುದೊ ಆಗ ಯಾರು ಯಾರನ್ನು ನೋಡುವುದು? ಯಾರು ಯಾರನ್ನು ಮೂಸುವುದು? ಯಾರನ್ನು ಸವಿಯುವುದು? ಯಾರನ್ನು (ಕುರಿತು) ಆಡುವುದು? ಯಾರನ್ನು ಕೇಳುವುದು? ಯಾರನ್ನು ಅರಿಯುವುದು? ಯಾರನ್ನು ಸೋಂಕುವುದು? ಏತರಿಂದ ಇದೆಲ್ಲ ತಿಳಿಯುವುದೊ ಅದನ್ನು ಏತರಿಂದ ಅರಿಯುವುದು? 'ಇದು ಹೀಗಲ್ಲ, ಹೀಗಲ್ಲ' ವೆಂದು ಹೇಳಿ ಆತ್ಮವನ್ನು ವರ್ಣಿಸುವರು. ಅದರಿಂದ ಆತ್ಮವನ್ನು ಅರಿಯುವುದು ಕಠಿನವಾಗಿದೆ.... ಎಲ್ಲವನ್ನೂ ಅರಿಯುವಂತಹ (ಆತ್ಮ) ನನ್ನು ಯಾವ ಸಾಧನದಿಂದ ತಾನೆ ಅರಿತುಕೊಳ್ಳಬೇಕು?"

ಇದೇ ವಚನವು, ಬೃಹದಾರಣ್ಯಕ ಉಪನಿಷತ್ತಿನಲ್ಲಿ ಇನ್ನೂ ಒಂದೆಡೆಗೆ ಕಾಣಿಸಿಕೊಳ್ಳುತ್ತದೆ (೨. ೪. ೧೪.). ಅದರಂತೆ ಶತಪಥ ಬ್ರಾಹ್ಮಣದಲ್ಲಿಯೂ ಎರಡು ಕಡೆಗೆ ಬಂದಿದೆ. (೧೪. ೫. ೪. ೧೫-೧೬ ಮತ್ತು ೧೭. ೭. ೩. ೨೪-೨೫). ಇದು ಅದ್ವೈತಾನುಭೂತಿಯ ವರ್ಣನೆ. ಎಲ್ಲವೂ ತಾನೇತಾನಾದಾಗಿನ (ಸರ್ವಂ ಆತ್ಮಾ ಏವ ಅಭೂತ್) ಸ್ಥಿತಿಯ ವಿವರಣೆಯಿದು. ಆತ್ಮರೂಪ, ಭೂಮಾ, ಬ್ರಾಹ್ಮೀ, ಸರ್ವಗತ ಆತ್ಮಸ್ಥಿತಿ, ಸರ್ವಾತ್ಮಭಾವಸ್ಥಿತಿ ಇಂತಿವೆಲ್ಲವೂ ಅದ್ವೈತಾವಸ್ಥೆಯ ಪರ್ಯಾಯ ಶಬ್ದಗಳೆ ಆಗಿದೆ. ಇದು ಅನಿರ್ವಚನೀಯ ಸ್ಥಿತಿಯಾಗಿವೆ. ಶಬ್ದಗಳಿಂದ ವರ್ಣಿಸುವುದು ಅಸಾಧ್ಯವು ಆದುದರಿಂದ ಕೆಲವೊಂದು ಮಾತುಗಳಿಂದ ಇದನ್ನು ಸೂಚಿಸುವುದು ಮಾತ್ರ ಶಕ್ಯವಾಗಿದೆ.

ವೇದಗಳು, ಉಪನಿಷತ್ತುಗಳು ಮತ್ತು ಗೀತೆ ಇವುಗಳಲ್ಲಿ ಕೇವಲ ದ್ವೈತ ಅಥವಾ ಅದ್ವೈತ ವಚನಗಳೇ ಇಲ್ಲ. ಎರಡೂ ಬಗೆಯ ವಚನಗಳು ಅಲ್ಲಲ್ಲಿಗೆ ಇವೆ. ಇಲ್ಲಿ ದ್ವೈತಾದ್ವೈತವಾದವು ಅನಾವಶ್ಯಕವಾಗಿದೆ. ಜಾಗೃತಿಯಲ್ಲಿ ಶುದ್ಧ ದ್ವೈತದ ಅನುಭವವು ಬಾರದೆ ಇರುವವರಾರು? ಆದರೆ ಸುಷುಪ್ತಿಯಲ್ಲಿ ನಾನುನೀನೆಂಬ ಭಿನ್ನಭೇದಗಳೆ ಲೋಪವಾಗುವುದರಿಂದ ಅಲ್ಲಿ ಅದ್ವೈತ ಸ್ಥಿತಿಯ ಅನುಭವವು ದೊರೆಯುವುದು. ಮೇಲಣ ಉಪನಿಷದ್ವಚನಗಳಲ್ಲಿ ಭಿನ್ನಭೇದಗಳ ಅನುಭವಕ್ಕೆ 'ಅಲ್ಪ' ವೆಂದು ಹೇಳಲಾಗಿದೆ. ಅದರಂತೆ ಎಲ್ಲವೂ ನಾನೇತಾನಾದ ಸ್ಥಿತಿಗೆ 'ಭೂಮಾ' ಎಂದು ಕರೆಯಲಾಗಿದೆ. ಅಲ್ಪಾನುಭೂತಿಯು ಕ್ಷಣಿಕ. ಏಕೆಂದರೆ ಜಾಗೃತಿಯೊಳಗಿನ ಅನುಭವವು ಇದು. ಸುಷುಪ್ತಿಯೊಳಗಿನ ಭೂಮಾಸ್ಥಿತಿಯೆ ಹಿರಿದಾದುದು. ಏಕೆಂದರ ಇದುವೆ ಜಾಗೃತಿಯಲ್ಲಿಯೂ ನಮ್ಮನ್ನು ಆಳುವುದು. ನಮ್ಮಸ್ಥಿತಿಗತಿಗೆ ಕಾರಣವಾಗಿರುವುದು.

ಕಠೋಪನಿಷತ್ತಿನ ಎರಡನೆಯ ಅಧ್ಯಾಯದಲ್ಲಿಯೂ ಸರ್ವಗತ ಆತ್ಮನ ಒಂದು ಸುಂದರವಾದ ವರ್ಣನೆಯು ಬಂದಿದೆ:

**ಅಣೋರಣೀಯಾನ್ ಮಹತೋ ಮಹೀಯಾ—**
**ನಾತ್ಮಾಸ್ಯ ಜಂತೋರ್ನಿಹಿತೋ ಗುಹಾಯಾಮ್**
**॥ ೨೦ ॥**
**ಅಶರೀರಂ ಶರೀರೇಷ್ವನವಸ್ಥೇಷ್ವವಸ್ಥಿತಮ್ ।**
**ಮಹಾಂತಂ ವಿಭುಮಾತ್ಮಾನಂ ಮತ್ವಾ**
**ಧೀರೋ ನ ಶೋಚತಿ ॥ ೨೧ ॥**

## (೧೩) ನಿತ್ಯ ಜನನ ಮತ್ತು ನಿತ್ಯ ಮರಣ.

ಅಥ ಚೈನಂ ನಿತ್ಯಜಾತಂ ನಿತ್ಯಂ ವಾ ಮನ್ಯಸೇ ಮೃತಮ್ ।
ತಥಾಪಿ ತ್ವಂ ಮಹಾಬಾಹೋ ನೈನಂ ಶೋಚಿತುಮರ್ಹಸಿ ॥ ೨೬ ॥
ಜಾತಸ್ಯ ಹಿ ಧ್ರುವೋ ಮೃತ್ಯುರ್ಧ್ರುವಂ ಜನ್ಮ ಮೃತಸ್ಯ ಚ ।
ತಸ್ಮಾದಪರಿಹಾರ್ಯೇಽರ್ಥೇ ನ ತ್ವಂ ಶೋಚಿತುಮರ್ಹಸಿ ॥ ೨೭ ॥

---

**ಅನ್ವಯ:—** ಅಥ ಚ ಏನಂ ನಿತ್ಯಜಾತಂ, ನಿತ್ಯಂ ವಾ ಮೃತಂ ಮನ್ಯಸೇ ತಥಾಪಿ ಹೇ ಮಹಾಬಾಹೋ! ತ್ವಂ ಏನಂ ಶೋಚಿತುಂ ನ ಅರ್ಹಸಿ ॥ ೨೬ ॥ ಹಿ ಜಾತಸ್ಯ ಮೃತ್ಯುಃ ಧ್ರುವಃ ಮೃತಸ್ಯ ಚ ಜನ್ಮ ಧ್ರುವಂ, ತಸ್ಮಾತ್ ಅಪರಿಹಾರ್ಯೇ ಅರ್ಥೇ ತ್ವಂ ಶೋಚಿತುಂ ನ ಅರ್ಹಸಿ ॥ ೨೭ ॥

ಇನ್ನು, ಆತ್ಮವು ನಿತ್ಯ ಹುಟ್ಟುವುದು, ನಿತ್ಯ ಸಾಯುವುದು, ಎಂದು ನೀನು ಗ್ರಹಿಸುತ್ತಿದ್ದರೆ, ಹಾಗಾದರೂ, ಎಲಾ ಪರಾಕ್ರಮಶಾಲಿಯಾದ ಅರ್ಜುನನೆ! ನೀನು ಶೋಕಿಸುವುದು ತಕ್ಕುದಲ್ಲ. ॥ ೨೬ ॥ ಏಕೆಂದರೆ ಹುಟ್ಟಿದ್ದು ಸಾಯುವುದು ನಿಶ್ಚಿತವು. ಮತ್ತು ಸತ್ತುದು ಮರಳಿ ಹುಟ್ಟುವುದು ನಿಶ್ಚಿತವು. ಆದುದರಿಂದ ಅಪರಿಹಾರ್ಯವಾದ ಮಾತಿಗಾಗಿ ಮಿಡುಕುವುದು ನಿನಗೆ ಯೋಗ್ಯವಲ್ಲ.

**ಭಾವಾರ್ಥ :—** ಹುಟ್ಟಿದ್ದೆಲ್ಲ ಹಾಳಾಗುವುದು ನಿಶ್ಚಿತವಾಗಿದೆ. ಅದನ್ನು ತಪ್ಪಿಸಲಿಕ್ಕಾಗುವುದಿಲ್ಲ. ಆದುದರಿಂದ ಅದನ್ನು ಕುರಿತು ಶೋಕಿಸುವುದು ಯಾರಿಗೂ ಸರಿಯಲ್ಲ.

---

"ಅಣುವಿಗಿಂತಲೂ ಅಣುವು, ಹಿರಿದಾದುದಕ್ಕಿಂತಲೂ ಹಿರಿದಾದುದು ಆದ ಆತ್ಮವು ಈ ಪ್ರಾಣಿಗಳ ಒಡಲಲ್ಲಿದೆ. ಅನಿತ್ಯವಾದ ಶರೀರ— ಒಡೆದು ಹೋಗುವ ಒಡಲಿನಲ್ಲಿ ಶರೀರರಹಿತನಾಗಿ ಇರುವ ಹಿರಿಯನೂ ಒಡೆಯನೂ ಆದ ಆತ್ಮನನ್ನು ತಿಳಿದುಕೊಂಡು ಬಲ್ಲಿದರು ದುಃಖಿಸುವುದಿಲ್ಲ."

ಸಮಾಧಿ ಮತ್ತು ಮುಕ್ತಸ್ಥಿತಿಗಳು ತೀರ ಕಷ್ಟಸಾಧ್ಯವಾಗಿರುವುದರಿಂದ ಅದ್ವಯಾನಂದದ ಅನುಭವವನ್ನು ಸಾಮಾನ್ಯರು ಪ್ರಯತ್ನದಿಂದ ಸುಷುಪ್ತಿ (ಗಾಢನಿದ್ರೆ) ಯಲ್ಲಿ ಕೆಲಮಟ್ಟಿಗೆ ಪಡೆಯಬಹುದಾಗಿದೆ. ಮರಣಕ್ಕೂ 'ಮಹಾನಿದ್ರೆ' ಎಂದು ಒಂದು ಹೆಸರಿದೆ. ಸರ್ವಗತವಾದ, ವಿಭುವಾಗಿರುವ ಮಹತ್ತಾದ ಆತ್ಮದ ಅನುಭವವು ಭೂಮಾಸ್ಥಿತಿಯಲ್ಲಿಯೆ ದೊರೆಯಬಲ್ಲುದು. ಭೂಮಾಸ್ಥಿತಿಯೆಂದರೆ ಅದ್ವಯಾನಂದ ಸ್ಥಿತಿ.

ತನ್ನ ಪೂಜ್ಯ ಗುರುಗಳಾದ ದ್ರೋಣಾಚಾರ್ಯರು, ಮತ್ತು ವಂದ್ಯ ಪಿತಾಮಹರಾದ ಭೀಷ್ಮಾಚಾರ್ಯರನ್ನು ಕಾಳಗದಲ್ಲಿ ಕೊಂದರೆ ಅವರ ನಾಶವಾಗುವುದೆಂದು ಭಾವಿಸಿದ ಅರ್ಜುನನಿಗೆ ಶ್ರೀಕೃಷ್ಣನು 'ಸರ್ವಗತ'ಆತ್ಮದ ವಿಚಾರವನ್ನು ಹೇಳಿ ಅದು ಸ್ಥಿರ (ಸ್ಥಾಣುಃ) ಮತ್ತು ಅಚಲವಾಗಿದ್ದು ಅವಿನಾಶಿಯೂ ಆಗಿದೆಯೆಂದು ತಿಳಿಸಿಕೊಟ್ಟು ಆತನ ಸಂದೇಹವನ್ನು ಕೆಲಮಟ್ಟಿಗೆ ಹೋಗಲಾಡಿಸಿದನು. ಆತ್ಮವು ಅಮರವಾಗಿರುವುದು. ಶರೀರಗಳು ನಾಶವಾಗತಕ್ಕವುಗಳೇ ಅವು ಹಳೆಯವು, ಹೋದರೆ, ಒಟ್ಟೆಗಳಂತೆ ಹೊಸವು ದೊರೆಯುವವು. ಆದುದರಿಂದ ಯಾರ ಸಾವಿಗೂ ಅಳಲಬೇಕಾಗಿಲ್ಲ. 'ಅರ್ಜುನನೆ! ಬಿಲ್ಲಿಗೆ ಹೆದೆಯೇರಿಸು, ಕಾಳಗಕ್ಕೆ ಅನುವಾಗು' ಎಂದು ಶ್ರೀಕೃಷ್ಣನು ಹುರಿದುಂಬಿಸಿದನು.

ಇಲ್ಲಿಗೆ ಸಾಮಾನ್ಯವಾಗಿ ಸಾಂಖ್ಯ ತತ್ವಜ್ಞಾನವು ಮುಗಿದಂತೆ ಆಯ್ತು. ಆತ್ಮವು ಅವಿನಾಶಿಯಾಗಿದೆ. ಎಲ್ಲ ಪ್ರಾಣಿಮಾತ್ರಗಳಲ್ಲಿಯೂ ಇರುಗಿರುವ ಆತ್ಮವು ಒಂದೇ ಆಗಿದೆ. (ಸರ್ವಗತ) ವಿಭುವಾಗಿದೆ. ಅದು ನಾಶಹೊಂದತಕ್ಕ ಶರೀರದಿಂದ ಬೇರೆಯಾಗಿದೆ' ಎಂಬ ಸಿದ್ಧಾಂತವನ್ನು ಈ ವರೆಗೆ ಪ್ರತಿಪಾದಿಸಿದ್ದಾಯ್ತು.

ಇದಕ್ಕಿಂತಲೂ ಭಿನ್ನವಾದ ಇನ್ನೂ ಒಂದು ಬಗೆಯ ಆತ್ಮವಾದಿಗಳಿದ್ದಾರೆ. ಅವರ ಮತದಂತೆ ಪ್ರತಿಯೊಬ್ಬರ ಆತ್ಮವೂ ಬೇರೆ ಬೇರೆ. ಆದರೆ ಅವೆಲ್ಲಕ್ಕೂ ವಿಭುತ್ವ-ಶಕ್ತಿಯುಂಟು. ಇದಕ್ಕಿಂತಲೂ ಸ್ವಲ್ಪ ಭಿನ್ನಾಭಿಪ್ರಾ-ಯದ ಇನ್ನು ಕೆಲರ ಅಭಿಪ್ರಾಯದಂತ ಪ್ರತಿಯೊಂದು ಜೀವಾತ್ಮವೂ ಅಣುಪ್ರಮಾಣದ್ದಿದ್ದು ಬೇರೆಯಾಗಿದೆ. ಇವರಿಬ್ಬರ ದೃಷ್ಟಿಯಿಂದಲೂ ಜೀವಾತ್ಮಗಳು ಅನಂತ-ವಾಗಿವೆ. ಆತ್ಮವು ಅವಿನಾಶಿಯೆಂದು ಮುಂತಾಗಿಯೂ ಇವರು ಹೇಳುವರು. ಜೀವಾತ್ಮನು ಅಣುಪ್ರಮಾಣದವ-ನಿರುವನೆಂದು ನಂಬಿದವರು ಹೇಳುವುದೇನೆಂದರೆ, ಅದು ಸಣ್ಣದಾದರೂ ತನ್ನ ಶಕ್ತಿಯಿಂದ ಶರೀರವನ್ನೆಲ್ಲ ವ್ಯಾಪಿಸಿ-

**ಅವ್ಯಕ್ತಾದೀನಿ ಭೂತಾನಿ ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ತತ್ರ ಕಾ ಪರಿದೇವನಾ ॥ ೨೮ ॥**

---

ಅನ್ವಯ :— ಹೇ ಭಾರತ! ಭೂತಾನಿ ಅವ್ಯಕ್ತಾದೀನಿ ವ್ಯಕ್ತಮಧ್ಯಾನಿ ಅವ್ಯಕ್ತ ನಿಧನಾನಿ ಏವ, ತತ್ರ ಪರಿದೇವನಾ ಕಾ ? ॥ ೨೮ ॥

**ಎಲೈ ಭಾರತಕುಲೋತ್ಪನ್ನನೆ! ಎಲ್ಲ ಭೂತವಾತ್ರಗಳು ಹುಟ್ಟಿನ ಮೊದಲು ಕಾಣವು ; ಹುಟ್ಟಿನ ಬಳಿಕ ಕಾಣಿಸಿಕೊಳ್ಳುವುವು ; ಮತ್ತೆ ಕೊನೆಯಾದ ಮೇಲೆ ಕಾಣದಾಗುವುವು. ಹೀಗಿರುವಲ್ಲಿ ಅಳಲು ಏತಕ್ಕೆ?**

---

ಕೊಂಡಿರುತ್ತದೆ. ದೀಪವು ಚಿಕ್ಕದಾದರೂ ಅದು ಕೋಣೆ-ಯನ್ನೆಲ್ಲ ಬೆಳಗುವುದಿಲ್ಲವೆ?

ಜೀವಾತ್ಮನು ಶರೀರದೊಡನೆಯೆ ತಲೆದೋರಿ ಶರೀರ-ದೊಂದಿಗೇ ಮಣ್ಣುಗೂಡುವುದು, ಎಂದು ನಂಬಿದವರು ಹಲವರುಂಟು. ಇವರಿಂದ ಆತ್ಮವು ಅವಿನಾಶಿ ಎಂದು ಮೊದಲಾದ ವಿಶೇಷಣಗಳು ಸಮ್ಮತವಿಲ್ಲ. ಆತ್ಮವು ದೇಹದೊಡನೆಯೆ ನಾಶವಾಗುವುದು. ಈ ದೃಷ್ಟಿಯಿಂದ ವಿಚಾರಿಸಿದರೂ ಅರ್ಜುನನು ತನ್ನ ದಾಯಾದಿಗಳ ಸಾವಿಗಾಗಿ ಮಿಡುಕುವ ಕಾರಣವಿಲ್ಲವೆಂದು ಶ್ರೀಕೃಷ್ಣನು ವಿವರಿಸುತ್ತಿದ್ದಾನೆ:

(೨೬-೨೭) ದೇಹದೊಡನೆಯೆ ಆತ್ಮವು ಹುಟ್ಟಿ, ಅದರೊಡನೆಯೆ ಮಣ್ಣುಗೂಡುವುದೆಂದು ತಿಳಿದರೂ ಸಾವಿಗಾಗಿ ಶೋಕಿಸುವ ಕಾರಣವಿಲ್ಲ. ಏಕೆಂದರೆ, ಹುಟ್ಟಿದ್ದು ಹುಡಿಗೂಡಲೆ ಬೇಕೆಂಬ ನಿಯಮವಿದೆ. ಆದುದ-ರಿಂದ ಸಾವು ಅನಿವಾರ್ಯವಾಗಿದೆ. ಅನಿವಾರ್ಯವಾಗಿದ್ದು ದಕ್ಕಾಗಿ ಮರುಗುವುದು ಮೂರ್ಖತನವು. ಹುಟ್ಟು ಸಾವಿನ ತಿರುಗಣಿಯು ಮುಕ್ತಿಯು ದೊರೆವ ವರೆಗೆ ನಡೆಯತಕ್ಕುದೇ. ಸೂರ್ಯನು ದಿನಾಲು ಮೂಡಿ ಮುಳು ಗುವನು ಅದಕ್ಕಾಗಿ ಯಾರಾದರೂ ಮಿಡುಕಿದ್ದುಂಟೆ? ಅದರಂತೆ ಆತ್ಮನ ಮೂಡಿ ಮುಳುಗುವಿಕೆಗೂ ದುಃಖಿಸುವ ಕಾರಣವಿಲ್ಲ.

ಪ್ರತಿಯೊಬ್ಬರ ಹುಟ್ಟುಸಾವುಗಳು ಅವರವರ ಕರ್ಮದ ಫಲವಾಗಿದೆ. ಈ ದುರ್ಯೋಧನಾದಿ ಕೌರವರ ಸಾವಿಗೂ ಅವರ ಕರ್ಮವೇ ಕಾರಣವು. ಆದುದರಿಂದ ಅವರ ಮರಣದ ದೋಷವು ನಿನಗೆ ತಗುಲದು. ಈ ದೇಹದ ಕೆಲಸವು ಮುಗಿದೊಡನೆ ಪ್ರತಿಯೊಬ್ಬರಿಗೂ ಸಾವು ತಪ್ಪದು. ಅಂತಹ ಹೊತ್ತಿನಲ್ಲಿ ಅವರ ದೇಹವನ್ನುಳಿಸಲು ನಿನ್ನಂತಹರು ಬೆನ್ನುಕಟ್ಟಿದರೂ ಅದು ನಿರರ್ಥಕವಾಗು ವುದು. ಈಗ ಯುದ್ಧವೇ ನಿನ್ನ ಕರ್ತವ್ಯವಾಗಿದ್ದು ನೀನು ಅದನ್ನು ಮಾಡುವುದಕ್ಕೆ ತಪ್ಪಬೇಡ.

ಈ ದೇಹದ ಋಣಾನುಬಂಧದಿಂದ ಉಂಟಾದ ಪ್ರೇಮ ಸಂಬಂಧವನ್ನು ಕಡಿದುಕೊಂಬುವುದು ಹೇಗೆ? ಎಂದು ಅರ್ಜುನನ ಮನಸಿನಲ್ಲಿ ಒಂದು ಸಂದೇಹವು ತಲೆ ದೋರಿರಬಹುದೆಂದು ತಿಳಿದು ಶ್ರೀಕೃಷ್ಣನು ಮುಂದಿನ ಶ್ಲೋಕದಲ್ಲಿ ಅದಕ್ಕೆ ಉತ್ತರವನ್ನಿತ್ತಿದ್ದಾನೆ. ಯಾರೊಡನೆ ಈ ವರೆಗೆ ಕೂಡಿ ಕೆಲೆದು ನಲಿದು ದಿನಗಳೆದೆವೊ ಅವರ ವಿನಾಶಕ್ಕಾಗಿ ಅಳಲದಿರುವುದು ಹೇಗೆ? ಎಂಬುದಕ್ಕೆ ಶ್ರೀಕೃಷ್ಣನ ಉತ್ತರವೇನೆಂದರೆ :

(೨೮) ಹುಟ್ಟಿದುದೆಲ್ಲವೂ 'ಭೂತ'ವೆನಿಸುತ್ತದೆ. ಈ ವಿಶ್ವದಲ್ಲಿ ಕಣ್ಣಿಗೆ ಕಾಣುವ ಎಲ್ಲ ವಸ್ತುಜಾತವೂ 'ಭೂತ'ವೇ, ಕಾಣುವುದು ಎಂದರೆ ಹುಟ್ಟಿದುದು ಎಲ್ಲವೂ ಹುಡಿಗೂಡುವುದು ನಿಶ್ಚಿತವಾಗಿದೆ(ಗೀ.೨.೨೭). ದೇಹಧಾರಣ ಮಾಡುವ ಮೊದಲು ಇದ್ದ 'ಅವ್ಯಕ್ತ' ಸ್ಥಿತಿಯೇ, ದೇಹಬಿಟ್ಟ ಬಳಿಕವೂ ಉಂಟಾಗುವುದು. ಯಾವಾಗಲೂ ವ್ಯಕ್ತವಾಗಿಯೆ ಇದ್ದುಕೊಂಬುದು ಯಾರಿಗೂ ಸಾಧ್ಯವಿಲ್ಲ. ಇದು ಸೃಷ್ಟಿನಿಯಮಕ್ಕೆ ವಿಪರೀತ. ನೀನು ಎಷ್ಟು ಗೋಳಾಡಿ ಕಷ್ಟಪಟ್ಟರೂ ಭೀಷ್ಮ-ದ್ರೋಣಾದಿಗಳನ್ನು ಜಗತ್ತಿನ ಕೊನೆಯವರೆಗೂ ಅವರನ್ನು ವ್ಯಕ್ತಸ್ಥಿತಿಯಲ್ಲಿಯೆ ಇರಿಸಲಾರೆ. ನೀನಾದರೂ ಏಸುದಿನ ತಾನೆ ವ್ಯಕ್ತನಾಗಿರಬಲ್ಲೆ? ಆಗಬೇಕಾದುದು ಒದಗಲೇಬೇಕು. ಅದಕ್ಕೆ ಮಿಡುಕಿ ಆಗುವುದೇನು?

ಇದೇ ಅಭಿಪ್ರಾಯವೆ ಗೀತೆಯ ಇನ್ನೊಂದೆಡೆ ಯಲ್ಲಿಯೂ ಬಂದಿದೆ :

**ವ್ಯಕ್ತ ಮತ್ತು ಅವ್ಯಕ್ತ.**

**ಅವ್ಯಕ್ತಾದ್ ವ್ಯಕ್ತಯಃ ಸರ್ವಾಃ**
**ಪ್ರಭವಂತ್ಯಹರಾಗಮೇ ।**
**ರಾತ್ರ್ಯಾಗಮೇ ಪ್ರಲೀಯಂತೇ**
**ತತ್ರೈವಾವ್ಯಕ್ತಸಂಜ್ಞಕೇ ॥ (೮-೧೮)**

"(ಬ್ರಹ್ಮನ) ಹಗಲು ಬರಲು ಅವ್ಯಕ್ತದಿಂದ ಎಲ್ಲ ಪದಾರ್ಥಗಳು ವ್ಯಕ್ತವಾಗುವುವು. ಮತ್ತು ಅವನ

## (೧೪) ಯಾರಿಂದಲೂ ಕೊಲ್ಲಲು ಆಗದ ಸೋಜಿಗದ ಆತ್ಮವು.

ಆಶ್ಚರ್ಯವತ್ಪಶ್ಯತಿ ಕಶ್ಚಿದೇನಮಾಶ್ಚರ್ಯವದ್ವದತಿ ತಥೈವ ಚಾನ್ಯಃ ।
ಆಶ್ಚರ್ಯವಚ್ಚೈನಮನ್ಯಃ ಶೃಣೋತಿ ಶ್ರುತ್ವಾಪ್ಯೇನಂ ವೇದ ನ ಚೈವ ಕಶ್ಚಿತ್ ॥ ೨೯ ॥
ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ಭಾರತ ।
ತಸ್ಮಾತ್ಸರ್ವಾಣಿ ಭೂತಾನಿ ನ ತ್ವಂ ಶೋಚಿತುಮರ್ಹಸಿ ॥ ೩೦ ॥

---

ಅನ್ವಯ:— ಕಶ್ಚಿತ್ ಏನಂ ಆಶ್ಚರ್ಯವತ್ ಪಶ್ಯತಿ, ತಥಾ ಏವ ಚ ಅನ್ಯಃ ಏನಂ ಆಶ್ಚರ್ಯವತ್ ವದತಿ, ಅನ್ಯಃ ಚ ಏನಂ ಆಶ್ಚರ್ಯವತ್ ಶೃಣೋತಿ; ಶ್ರುತ್ವಾಅಪಿ ಚ ಕಶ್ಚಿತ್ ಏನಂ ನ ವೇದ ॥ ೨೯ ॥ ಹೇ ಭಾರತ! ಸರ್ವಸ್ಯ ದೇಹೇ ಅಯಂ ದೇಹೀ ನಿತ್ಯಂ ಅವಧ್ಯಃ; ತಸ್ಮಾತ್ ತ್ವಂ ಸರ್ವಾಣಿ ಭೂತಾನಿ ಶೋಚಿತುಂ ನ ಅರ್ಹಸಿ ॥ ೩೦ ॥

ಯಾವನು ಇದನ್ನು ಸೋಜಿಗಗೊಂಡು ನೋಡುವನು' ಅದರಂತೆ ಇನ್ನೊಬ್ಬನು ಇದನ್ನು ಸೋಜಿಗಬಟ್ಟು ಬಣ್ಣಿಸುವನು. ಮಗುದೊಬ್ಬನು ಇದರ ವರ್ಣನೆಯನ್ನು ಸೋಜಿಗದಿಂದ ಕೇಳುವನು. ಆದರೆ ಕೇಳಿಯೂ ಇದನ್ನು ಯಾವನು ಅರಿಯುವುದಿಲ್ಲ ॥ ೨೯ ॥ ಎಲೈ ಭಾರತಕುಲೋತ್ಪನ್ನನಾದ ಅರ್ಜುನನೆ! ಎಲ್ಲ ಒಡಲಲ್ಲಿರುವ ಮತ್ತು ಒಡಲ ಒಡೆಯನಾದ ಈ ಆತ್ಮವು ಎಂದೂ ಕೊಲ್ಲಲ್ಪಡುವುದಿಲ್ಲ; ಆದುದರಿಂದ ಎಲ್ಲ ಭೂತಗಳ ಸಲುವಾಗಿ ಶೋಕಿಸುವುದು ನಿನಗೆ ಯೋಗ್ಯವಲ್ಲ. ॥ ೩೦ ॥

ಭಾವಾರ್ಥ:— ಈ ಆತ್ಮವು ಒಂದು ಸೋಜಿಗದ ವಸ್ತುವಾಗಿದೆ. ಇದರ ವರ್ಣನೆ ಮಾಡುವರು; ಅದನ್ನು ಕೇಳುವರು. ಆದರೆ ಸರಿಯಾಗಿ ಅರಿಯುವವರು ಮಾತ್ರ ಏಸು ಜನವೊ! ಎಲ್ಲರ ಒಡಲಲ್ಲಿ ಇದು ಉಂಟು. ಆದರೆ ಇದನ್ನು ಅಳಿಸುವುದು ಮಾತ್ರ ಯಾರಿಂದಲೂ ಸಾಧ್ಯವಿಲ್ಲ. ಆತ್ಮವು ಅಮರವಾಗಿರುವುದರಿಂದ ಅವರ ಸಲುವಾಗಿ ಮಿಡುಕುವುದು ಅನುಚಿತವು.

---

ಇರುಳು ಬರಲು ಎಲ್ಲ ಪದಾರ್ಥಗಳು ಅವ್ಯಕ್ತದಲ್ಲಿ ಲೀನವಾಗುವವು" ಆದುದರಿಂದ ಈ ಅವ್ಯಕ್ತವು ವ್ಯಕ್ತವಾಗುವ ಮತ್ತು ವ್ಯಕ್ತವು ಅವ್ಯಕ್ತವಾಗುವ ತಿರುಗಣಿಯೊಳಗಿಂದ ಯಾರೂ ತಪ್ಪಿಸಿಕೊಳ್ಳಲಾರರು. ಇದನ್ನು ತಿಳಿದು, ಅಪರಿಹಾರ್ಯವಾದ ಸಂಗತಿಯ ಬಗ್ಗೆ ದುಃಖಿಸುವ ಹೆಡ್ಡತನವನ್ನು ತೋರಿಸದಿರುವುದೇ ಲೇಸಲ್ಲವೆ? ಮಹಾಭಾರತದ ಸ್ತ್ರೀಪರ್ವದ ೨ನೆಯ ಅಧ್ಯಾಯದಲ್ಲಿ ಇದೇ ವಿಚಾರವೆ ಇನ್ನೂ ವಿವರವಾಗಿ ಬಂದಿದೆ:

ಸರ್ವೇ ಕ್ಷಯಾಂತಾ ನಿಚಯಾಃ ಪತನಾಂತಾಃ
ಸಮುಚ್ಛ್ರಯಾಃ ।
ಸಂಯೋಗಾ ವಿಪ್ರಯೋಗಾಂತಾ ಮರಣಾಂತಂ
ಚ ಜೀವಿತಮ್ ॥ ೩ ॥
ಅಯುಧ್ಯಮಾನೋ ಮ್ರಿಯತೇ
ಯುಧ್ಯಮಾನಶ್ಚ ಜೀವತಿ ।
ಕಾಲಂ ಪ್ರಾಪ್ಯ ಮಹಾರಾಜ ನ ಕಶ್ಚಿತ್
ಅತಿವರ್ತತೇ ॥ ೫ ॥
ಅಭಾವಾದೀನಿ ಭೂತಾನಿ ಭಾವಮಧ್ಯಾನಿ ಭಾರತ ।
ಅಭಾವನಿಧನಾನ್ಯೇವ ತತ್ರ ಕಾ ಪರಿದೇವನಾ ॥೬॥

"ಕ್ಷೀಣವಾಗುವವರೆಗೆ ಎಲ್ಲ ಸಂಗ್ರಹವು, ಇಳಿಗಾಲದ ವರೆಗೆ ಎಲ್ಲ ಏಳ್ಗೆಯು, ಅಗಲುವ ವರೆಗೆ ಅಪ್ಪುಗೆಯು, ಸಾಯುವ ವರೆಗೆ ಬಾಳ್ವೆಯು. ಕಾದದಿರುವವನು ಸಾಯುವನು; ಮತ್ತು ಕಾದಿಯೂ ಬದುಕುವನು. ಎಲೈ ಮಹಾರಾಜನೆ! ಹೊತ್ತು ತುಂಬಿ ಬಂದಮೇಲೆ ಮೀರಿ ಬಾಳುವವರಿಲ್ಲ. ಹುಟ್ಟಿನ ಮೊದಲು ಎಲ್ಲ ಭೂತಮಾತ್ರಗಳು ಅಭಾವ ರೂಪದಿಂದ ಇರುವವು. ಬಳಿಕ ನಡುವೆ ಭಾವರೂಪದಿಂದಿರುವವು ಮಡಿಯಲು ಮತ್ತೆ ಅಭಾವಸ್ಥಿತಿಯನ್ನೈದುವವು. ಇದಕ್ಕೆ ಅಳಲುವುದೇಕೆ?"

ಗೀತೆಯಲ್ಲಿ 'ಅವ್ಯಕ್ತ'ವೆಂದು ಹೇಳಿರುವಲ್ಲಿ ಈ ಶ್ಲೋಕದಲ್ಲಿ '**ಅಭಾವ**' ವೆಂಬ ಪದವಿದೆ ಎರಡರ ಅರ್ಥವೂ ಒಂದೇ ಆಗಿದೆ. ಇಂತಹದೆ ಇನ್ನೊಂದು ಶ್ಲೋಕವೂ ಉಂಟು.

### ಅದರ್ಶ ಮತ್ತು ದರ್ಶನ.

ಅದರ್ಶನಾದಾಪತಿತಾಃ ಪುನಶ್ಚಾದರ್ಶನಂ
ಗತಾಃ

ನೈತೇ ತವ ಚ ತೇಷಾಂ ತ್ವಂ ತತ್ರ ಕಾ
ಪರಿದೇವನಾ ॥ —ಮ. ಭಾ. ಸ್ತ್ರೀ. ೨.೧೩

"ಎಲ್ಲ ಭೂತಗಳು ಮೊದಲು ಅದರ್ಶನ (ಅದೃಷ್ಟ) ಸ್ಥಿತಿಯಲ್ಲಿ ಇದ್ದುವು. ಬಳಿಕ ದರ್ಶನ (ದೃಷ್ಟ) ಸ್ಥಿತಿಯಲ್ಲಿ ಬಂದುವು. ತರುವಾಯ ಮತ್ತೆ ಅದರ್ಶನ (ಅದೃಷ್ಟ) ಸ್ಥಿತಿಯನ್ನು ಹೊಂದಿದುವು. ಆದುದರಿಂದ ಯಾವನೊಬ್ಬನು ಕಂಡನು ಅಥವಾ ಕಾಣದಾದನೆಂದು ಮರುಗುವುದೇಕೆ? ನಿಜವಾಗಿ ವಿಚಾರಿಸಿದಲ್ಲಿ ಅವರು ನಿನ್ನವರಲ್ಲ. ನೀನು ಅವರವನಲ್ಲ."

ಇಲ್ಲಿ ಬಂದಿರುವ 'ಅದರ್ಶನ' ಶಬ್ದವು ಅವ್ಯಕ್ತ ಮತ್ತು ಅಭಾವ ಎಂಬುದರ ಪರ್ಯಾಯವೇ ಆಗಿದೆ. ಇವು ಒಂದನ್ನೊಂದನ್ನು ಸ್ಪಷ್ಟೀಕರಿಸುತ್ತವೆ.

| ಮೊದಲು | ನಡುವೆ | ಕೊನೆಗೆ |
|---|---|---|
| ಅವ್ಯಕ್ತಾದೀನಿ | ವ್ಯಕ್ತಮಧ್ಯಾನಿ | ಅವ್ಯಕ್ತನಿಧನಾನಿ |
| | | ಗೀ. ೨.೨೮ |
| ಅವ್ಯಕ್ತಾತ್ | ವ್ಯಕ್ತಯಃ | ಪ್ರಲೀಯಂತೇ |
| | | ಗೀ. ೮.೧೮ |
| ಅಭಾವಾದೀನಿ | ಭಾವಮಧ್ಯಾನಿ | ಅಭಾವನಿಧನಾನಿ |
| | | ಮ. ಭಾ. ಸ್ತ್ರೀ. ೨.೬ |
| ಅದರ್ಶನಾತ್ | ದರ್ಶನಂಗತಾಃ | ಅದರ್ಶನಂ ಗತಾಃ |
| | | ಮ. ಭಾ. ಸ್ತ್ರೀ ೨.೧೨ |

ಹೀಗೆ ಕಾಣುವುದರ ಉಗವು ಕಾಣದಿದ್ದುದರಿಂದ ಆಗಿ, ಮತ್ತೆ ಅದು ಕಾಣದಸ್ಥಿತಿಯನ್ನೈದುವುದು. ಅದಕ್ಕಾಗಿ ಮಿಡುಕಬೇಕಾಗಿಲ್ಲ. ಎಂದು ಹೇಳಿ ಶ್ರೀಕೃಷ್ಣನು ಮತ್ತೆ ಆತ್ಮದ ಅವಿನಾಶಿತ್ವವನ್ನು ಕುರಿತು ಹೇಳುತ್ತಾನೆ:

(೨೯-೩೦) ಆತ್ಮವು ಹೀಗುಂಟು, ಎಂದು ಹೇಳುವುದಕ್ಕಾಗುವುದಿಲ್ಲ. ಹೀಗಿಲ್ಲವೆಂದು ಹೇಳಿಯೂ ತೀರದು. ಅದರಿಂದ ಇದರ ನಿಜಸ್ವರೂಪವು ಒಂದು ಸೋಜಿಗದ ಮಾತೆ ಆಗಿದೆ. ಇದನ್ನು ಶಬ್ದಗಳಿಂದ ವರ್ಣಿಸುವುದು ಅಸಾಧ್ಯ. ಸ್ವಾನುಭವವುಳ್ಳ ಮಹಾತ್ಮರು ಕೂಡ ಇದನ್ನು ಬಾಯಿಂದ ಹೇಳಿ ತಿಳಿಯದೆನ್ನುವರು. ಅನಂತವಾದ ಆತ್ಮನನ್ನು ಎಷ್ಟು ತಾನೆ ಹೇಳಿ ವಿವರಿಸಲಿಕ್ಕಾದೀತು? ಆದುದರಿಂದಲೆ ಲೋಕವೆಲ್ಲವು ಇದನ್ನು ಬೆರಗುಗೊಂಡು ನೋಡುವುದು. ಇದರ ನೆಲೆ ನಿಲುಕದೆ ಸೋಜಿಗಪಡುವುದು.

ಒಡೆದು ಹುಡಿಗೂಡುವ ಈ ಒಡಲಲ್ಲಿರುವ ಆತ್ಮವು ಎಂದೂ ಒಡೆಯದು. ಅದು ಅಮರ. ಅದನ್ನು ಒಡೆದು ತುಂಡರಿಸಲಿಕ್ಕೆ ಯಾರಿಂದಲೂ ಸಾಧ್ಯವಿಲ್ಲ. ಎಲಾ ಅರ್ಜುನನೆ! ನಿನ್ನ ಯಾವ ತೀಕ್ಷ್ಣವಾದ ಶಸ್ತ್ರಾಸ್ತ್ರಗಳೂ ಆತ್ಮವನ್ನು ಕೊಲ್ಲಲಾರವು. ಆದುದರಿಂದ ನೀನು, ಇನ್ನು ಮಿಡುಕುವ ಕಾರಣವೇನು?

ಪ್ರತಿಯೊಬ್ಬರೂ ತಮ್ಮಲ್ಲಿ ಈ ಅಮರ ಆತ್ಮಶಕ್ತಿಯುಂಟೆಂಬ ದೃಢಶ್ರದ್ಧೆಯುಳ್ಳವರಾಗಬೇಕು. ಮತ್ತು ತಾನು ಜನ್ಮರಹಿತನು, ಮುಪ್ಪುಸಾವುಗಳನ್ನು ಮೀರಿದ ಅಮರನು; ಅಶರೀರಿಯು; ಒಡಲ ಒಡೆಯನು; ನಿತ್ಯನು; ಶಾಶ್ವತನು; ಪುರಾಣಪುರುಷನು; ಅವಧ್ಯನು; ಅಚ್ಛೇದ್ಯನು; ಅಶೋಷ್ಯನು; ಅಚಲನು; ಸನಾತನನು; ಅವ್ಯಕ್ತನು; ಅಚಿಂತ್ಯನು; ಅವಿಕಾರಿಯು; ಅಣುವಿನಿಂದಲೂ ಅಣುವು; ಮಹತ್ತಿಗಿಂತಲೂ ಮಹಂತನು; ಎಂಬ ನಿತ್ಯಸಂಕಲ್ಪವುಳ್ಳವರಾಗಬೇಕು. ಈ ಬಗೆಯ ಮನನ ನಿದಿಧ್ಯಾಸದಿಂದ ಅವರ ಅಂತಃಶಕ್ತಿಯು ಅಭಿವೃದ್ಧಿಗೊಳ್ಳುವುದು. ಮತ್ತು ಅವರು ಮೇಲಣ ಮಟ್ಟಕ್ಕೆ ಹೋಗುವರು. ಕಠೋಪನಿಷತ್ತಿನಲ್ಲಿ ಆತ್ಮವನ್ನು ಕುರಿತು ಹೀಗೆ ಹೇಳಿದೆ:

ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ
ಶೃಣ್ವಂತೋಽಪಿ ಬಹವೋ ಯಂ ನ ವಿದ್ಯುಃ ।
ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾಶ್ಚರ್ಯೋ
ಜ್ಞಾತಾ ಕುಶಲಾನುಶಿಷ್ಟಃ ॥ ೭ ॥ ನ ನರೇಣಾವ-
ರೇಣ ಪ್ರೋಕ್ತ ಏಷ ಸುವಿಜ್ಞೇಯೋ ಬಹುಧಾ
ಚಿಂತ್ಯಮಾನಃ । ಅನನ್ಯಪ್ರೋಕ್ತೇ ಗತಿರತ್ರ ನಾಸ್ತಿ
ಅಣೀಯಾನ್ ಹ್ಯತರ್ಕ್ಯಮಣುಪ್ರಮಾಣಾತ್ ॥ ೮ ॥
—ಕಠ. ೧.೨.೮

"ಅನೇಕರಿಗೆ ಆತ್ಮನನ್ನು ಕುರಿತು ಕೇಳುವುದಕ್ಕೂ ದೊರೆಯುವುದಿಲ್ಲ. ಕೇಳಿದ ಮೇಲೂ ಅನೇಕರಿಗೆ ಅದರ ಜ್ಞಾನವಾಗುವುದಿಲ್ಲ. ಕೌಶಲ್ಯದಿಂದ ಇದರ ಜ್ಞಾನವನ್ನು ಪಡೆದವನು ಮತ್ತು ಅದನ್ನು ಕುಶಲತೆಯಿಂದ ತಿಳಿಸಿ ಹೇಳುವವನು ಹೀಗೆ ಇಬ್ಬರಿಬ್ಬರೂ ಎಲ್ಲಿ ದೊರೆಯುವರೆಂಬುದು ಒಂದು ಸೋಜಿಗದ ಸಂಗತಿಯೆ ಆಗಿದೆ. ಅದರಂತೆ ಬಲ್ಲಿದನಾದ ಗುರುವಿನಿಂದ ಈ ಜ್ಞಾನವನ್ನು ಸಂಪಾದಿಸಿದ ಶಿಷ್ಯನು ಸಿಕ್ಕುವುದೂ ಒಂದು ಸೋಜಿಗದ ವಿಷಯವೆ ಆಗಿದೆ. ಹಲವು ಬಗೆಗಳಿಂದ ಅರಿಯಬೇಕಾದ ಈ ಆತ್ಮದ ವಿಚಾರವನ್ನು ಓರ್ವ ಸಾಮಾನ್ಯ ಉಪದೇಶಕನಿಂದ ತಿಳಿದುಕೊಂಡರೆ ಅದು ಸಮರ್ಪಕವಾಗಿ ಗೊತ್ತಾಗದು. ಬಲ್ಲಿದರಿಂದ ತಿಳಿದುಕೊಳ್ಳದೆ ಇದು ಚೆನ್ನಾಗಿ ತಿಳಿಯದು. ಏಕೆಂದರೆ ಈ ವಿಷಯವು ಅತ್ಯಂತ ಸೂಕ್ಷ್ಮವಾಗಿದೆ. ಮತ್ತು ತರ್ಕವನ್ನೂ ಮೀರಿದೆ."

## (೧೫) ಕ್ಷಾತ್ರಧರ್ಮ.

**ಸ್ವಧರ್ಮಮಪಿ ಚಾವೇಕ್ಷ್ಯ ನ ವಿಕಂಪಿತುಮರ್ಹಸಿ ।**
**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ॥ ೩೧ ॥**
**ಯದೃಚ್ಛಯಾ ಚೋಪಪನ್ನಂ ಸ್ವರ್ಗದ್ವಾರಮಪಾವೃತಮ್ ।**
**ಸುಖಿನಃ ಕ್ಷತ್ರಿಯಾಃ ಪಾರ್ಥ ಲಭಂತೇ ಯುದ್ಧಮೀದೃಶಮ್ ॥ ೩೨ ॥**
**ಅಥ ಚೇತ್ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**
**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ ಪಾಪಮವಾಪ್ಸ್ಯಸಿ ॥ ೩೩ ॥**
**ಅಕೀರ್ತಿಂ ಚಾಪಿ ಭೂತಾನಿ ಕಥಯಿಷ್ಯಂತಿ ತೇಽವ್ಯಯಾಮ್ ।**
**ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ ॥ ೩೪ ॥**

---

**ಅನ್ವಯ :—** ಸ್ವಧರ್ಮಂ ಚ ಅಪಿ ಅವೇಕ್ಷ್ಯ ವಿಕಂಪಿತುಂ ನ ಅರ್ಹಸಿ । ಹಿ ಕ್ಷತ್ರಿಯಸ್ಯ ಧರ್ಮ್ಯಾತ್ ಅನ್ಯತ್ ಶ್ರೇಯಃ ನ ವಿದ್ಯತೇ ॥ ೩೧ ॥ ಹೇ ಪಾರ್ಥ! ಯದೃಚ್ಛಯಾ ಚ ಉಪಪನ್ನಂ ಈದೃಶ್ಯಂ ಅಪಾವೃತಂ ಸ್ವರ್ಗದ್ವಾರಂ ಯುದ್ಧಂ ಸುಖಿನಃ ಕ್ಷತ್ರಿಯಾಃ ಲಭಂತೇ ॥ ೩೨ ॥ ಅಥ ತ್ವಂ ಇಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ಚೇತ್, ತತಃ ಸ್ವಧರ್ಮ್ಯಂ ಕೀರ್ತಿಂ ಚ ಹಿತ್ವಾ ಪಾಪಂ ಅವಾಪ್ಸ್ಯಸಿ ॥ ೩೩ ॥ ಅಪಿ ಚ ಭೂತಾನಿ ತೇ ಅವ್ಯಯಾಂ ಅಕೀರ್ತಿಂ ಕಥಯಿಷ್ಯಂತಿ । ಸಂಭಾವಿತಸ್ಯ ಚ ಅಕೀರ್ತಿಃ ಮರಣಾತ್ ಅತಿರಿಚ್ಯತೇ ॥ ೩೪ ॥

**ನಿನ್ನ ಸ್ವಧರ್ಮವೇನೆಂಬುದನ್ನು ನೋಡು. ಆ ದೃಷ್ಟಿಯಿಂದಲೂ ನೀನು ಹೀಗೆ ನಡುಗುವುದು ತರವಲ್ಲ ॥ ೩೧ ॥ ಎಲೈ ಪೃಥಾಪುತ್ರನಾದ ಅರ್ಜುನನೆ! ತನ್ನ ತಾನೆ ನಡೆದುಬಂದ ಇಂತಹ ಯುದ್ಧವು ಬಾಗಿಲನ್ನು ತೆರೆದ ಸ್ವರ್ಗವೆ ಸರಿ. ಇಂತಹ ಸುಸಂಧಿಯು ಭಾಗ್ಯವಂತರಾದ ಕ್ಷತ್ರಿಯರಿಗೆ ದೊರೆಯುತ್ತದೆ. ॥ ೩೨ ॥ ಆದುದರಿಂದ ನೀನು ಈ ಧರ್ಮಯುದ್ಧವನ್ನು ಮಾಡದೆ ಇದ್ದರೆ ನೀನು ಸ್ವಧರ್ಮಕ್ಕೆ ಎರವಾಗುವೆ. ಕೀರ್ತಿಯನ್ನು ಕಳೆಕೊಳ್ಳುವೆ. ಪಾಪಕ್ಕೆ ಪಕ್ಕಾಗುವೆ. ॥ ೩೩ ॥ ಇಷ್ಟೆ ಅಲ್ಲ, ಲೋಕವೆಲ್ಲವೂ, ನಿನ್ನ ಚಿರಕಾಲ ಬಾಳುವ ಅಪಕೀರ್ತಿಯನ್ನು ಸಾರಿದೂರಿ ಹೇಳಹತ್ತುವುದು. ಮತ್ತು ಸಂಭಾವಿತರಿಗೆ ಅಪಕೀರ್ತಿಗಿಂತ ಮರಣವೇ ಹೆಚ್ಚು ಲೇಸೆನಿಸುತ್ತದೆ. ॥ ೩೪ ॥**

---

ಗೀತೆಯಲ್ಲಿಯೂ ಇದೇ ಬಗೆಯ ಒಂದು ಶ್ಲೋಕವುಂಟು :

**ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ ಸಿದ್ಧಯೇ ।**
**ಯತತಾಮಪಿ ಸಿದ್ಧಾನಾಂ ಕಶ್ಚಿನ್ಮಾಂ ವೇತ್ತಿ ತತ್ತ್ವತಃ ॥**
**(೭–೩)**

“ ಸಾವಿರಾರು ಜನಗಳಲ್ಲಿ ಯಾರಾದರೊಬ್ಬರು ಸಿದ್ಧಿಗಾಗಿ ಯತ್ನಿಸುವರು, ಮತ್ತು ಹೀಗೆ ಪ್ರಯತ್ನಿಸುವವರಲ್ಲಿಯೂ ಯಾವನಾದರೊಬ್ಬನು ನನ್ನನ್ನು ಸರಿಯಾಗಿ ತಿಳಿಯುವನು. ” ಇದು ಅತ್ಯಂತ ಸೂಕ್ಷ್ಮವಾದ ವಿಷಯವಾಗಿರುವುದರಿಂದ ತಿಳಿದುಕೊಳ್ಳಲು ತೀರ ಕಠಿನವಾಗಿದೆ. ಆದುದರಿಂದ ತಾನು ಈ ಆತ್ಮತತ್ತ್ವವನ್ನು ಅರಿತಿರುವೆನು, ಎಂದು ತಿಳಿದವರಿಗೂ ಈ ವಿಷಯವು ತಿಳಿದಿರುವುದಿಲ್ಲವೆಂಬುದು ಸೋಜಿಗದ ಸಂಗತಿಯಾಗಿದೆ. ಕೇನೋಪನಿಷತ್ತಿನಲ್ಲಿ ಈ ಬಗ್ಗೆ ಹೀಗೆ ಹೇಳಿದೆ:

**ಯಸ್ಯಾಮತಂ ತಸ್ಯ ಮತಂ ಮತಂ ಯಸ್ಯ ನ ವೇದಸಃ ।**
**ಅವಿಜ್ಞಾತಂ ವಿಜಾನತಾಂ ವಿಜ್ಞಾತಮವಿಜಾನತಾಮ್ ॥**

“ ಯಾವನು ತನಗೆ ಇದು ಇನ್ನೂ ತಿಳಿದಿಲ್ಲ, ಎಂದು ತಿಳಿದಿರುವನೊ ಅವನಿಗೆ ತಿಳಿದಿದೆ. ಆದರೆ ಯಾರು ತನಗೆ ಚೆನ್ನಾಗಿ ಗೊತ್ತಾಗಿದೆಯೆಂದು ಹೇಳುವನೊ ಅವನಿಗೆ ತಿಳಿದಿಲ್ಲ. ತಿಳಿದಿರುವುದೆಂದು ತಿಳಿದವನಿಗೆ ತಿಳಿದಿರುವುದಿಲ್ಲ. ಆದರೆ ಇನ್ನೂ ತಿಳಿಯುವುದು ತುಂಬ ಇದೆಯೆಂದು ಭಾವಿಸಿದವನಿಗೆ ತಿಳಿದಿರುತ್ತದೆ. ”

### ಆಶ್ಚರ್ಯಕಾರಕ ಆತ್ಮಶಕ್ತಿ.

‘ಮೂಕಂ ಕರೋತಿ ವಾಚಾಲಂ ಪಂಗುಂ ಲಂಘಯತೇ ಗಿರಿಮ್’ ಎಂದು ಇದರ ವರ್ಣನೆ ಮಾಡಬಹುದು. ಕಣ್ಣು ಇದೆಯೆಂದು ನಾವು ನೋಡು-

ವುದಿಲ್ಲ. ಅಂತರಂಗದಲ್ಲಿ ಆತ್ಮಶಕ್ತಿಯಿದೆಯೆಂದು ಕಣ್ಣು ನೋಡಬಲ್ಲುದು. ಬಾಯಿಯಿದೆಯೆಂದು ಮಾತನಾಡುವುದಿಲ್ಲ. ಆತ್ಮಶಕ್ತಿಯುಂಟೆಂದು ಬಾಯಿ ಮಾತನಾಡುತ್ತದೆ. ಆ ಕಣ್ಣು ಆ ಬಾಯಿ ಇದ್ದರೂ ಅಂತರಂಗದೊಳಗಿನ ಆ ಶಕ್ತಿಯು ಕಾಣೆಯಾಗುತ್ತಲೆ ಆ ನೋಟ, ಆ ಮಾತು ಎಲ್ಲವೂ ಮಾಯವಾಗುವುವು. ಇಂತು ಲೋಕವೆಲ್ಲವೂ ಅವ್ಯಾಹತವಾಗಿ ನಡೆದುದು ಆ ಆತ್ಮಶಕ್ತಿಯ ಬಲದಿಂದಲೇ ದಿನದ ರೂಢಿಯಿಂದ—ಅತಿಪರಿಚಯದಿಂದ ಮನುಷ್ಯನಿಗೆ ಆತ್ಮಶಕ್ತಿಯ ಆಶ್ಚರ್ಯಕರವಾದ ಸಾಮರ್ಥ್ಯದ ಮರವು ಆದಂತಾಗಿದೆ. ಮಗುವು ಹುಟ್ಟುವುದು, ತನ್ನ ಅಂತಃಶಕ್ತಿಯಿಂದ ಬೆಳೆಯುವುದು, ಪ್ರತಿಭಾವಂತವಾಗಿ ಮೆರೆಯುವುದು ಅಂತಃಶಕ್ತಿಯ—ಆತ್ಮಸಾಮರ್ಥ್ಯದ ದ್ಯೋತಕವಲ್ಲವೆ? ದೇಹವ್ಯಾಪಾರಗಳು ಎಷ್ಟು ಸುಸಂಬದ್ಧವಾಗಿ ಸಾಗಿವೆ! ಉಣ್ಣುವುದು, ಉಂಡುದು ನೆತ್ತರವಾಗಿ ಕಸುವು ಹೆಚ್ಚುವುದು, ವಿಚಾರ ಸಾಮರ್ಥ್ಯದಿಂದ ಪಂಚಮಹಾಭೂತಗಳನ್ನೂ ವಶಪಡಿಸಿಕೊಂಡು ತೊತ್ತಿನಂತೆ ದುಡಿಸಿಕೊಳ್ಳುತ್ತಿರುವುದೂ ಒಂದೊಂದು ವ್ಯಾಪಾರವೂ ಎಷ್ಟೊಂದು ಆಶ್ಚರ್ಯಕರ! ಇಂತಿವೆಲ್ಲವೂ ಆತ್ಮಶಕ್ತಿಯ ಸಾಮರ್ಥ್ಯ ಸೂಚಕವಾಗಿಲ್ಲವೆ? ಇಂತಿಹ ಅದ್ಭುತ ಸಾಮರ್ಥ್ಯದ ಆತ್ಮಶಕ್ತಿಯು ತನ್ನಲ್ಲಿಗೆ ಹೇಗೆ ಹುದುಗಿಕೊಂಡಿದೆಯೆಂಬುದನ್ನು ಅರಿತುಕೊಂಡು ಸಾಧನ ಬಲದಿಂದ ಅದನ್ನು ಪೂರ್ಣ ಅರಳಿಸಿಕೊಂಬುದು ಕರ್ತವ್ಯವಾಗಿದೆ.

ಇಲ್ಲಿಯ ವರೆಗೆ ಸಾಂಖ್ಯತತ್ತ್ವವಿಚಾರವಾಯ್ತು. ಇನ್ನು ಅರ್ಜುನನಿಗೆ ಕ್ಷಾತ್ರಧರ್ಮಕ್ಕನುಸರಿಸಿ ಅವನ ಕರ್ತವ್ಯವನ್ನು ವಿವರಿಸಿ ಹೇಳಿದ್ದಾಗಿದೆ.

(೩೧-೩೮) ಹೋರಾಟದ ಹೊತ್ತು ಬಂದಾಗ ಅಳುಕುವುದು, ಹಿಂಸೆಯಾಗುವುದೆಂದು ಕರ್ತವ್ಯವನ್ನೇ ಬಿಟ್ಟು ಕೊಡುವುದು, ಹಗೆಯು ಎದುರಿಸಿದಾಗ ಅವನಿಗೆ ಬೆನ್ನು ತೋರಿ ಹಿಂಜರಿಯುವುದು, ಹೇಡಿತನಕ್ಕೆ ಕಾರಣವಾಗುವ ದಯೆಯ ಅವಲಂಬನ ಮಾಡುವುದೂ ಇವೆಲ್ಲವೂ ಕ್ಷತ್ರಿಯನಿಗೆ ಸಲ್ಲದ ಮಾತುಗಳು. ಅವನ ಕೀರ್ತಿಗೆ ಕಲಂಕತರುವ ಸಂಗತಿಗಳು.

ಸತ್ಯಧರ್ಮವನ್ನು ಸಂರಕ್ಷಿಸುವುದಕ್ಕಾಗಿ ಕಾದುವುದು ಕ್ಷತ್ರಿಯನ ಪರಮ ಧ್ಯೇಯವಾಗಿದೆ. ದುಃಖದಿಂದ (**ಕ್ಷತಾತ್**) ಲೋಕವನ್ನು ಕಾಯುವನು (**ತ್ರಾಯತೇ**). ಎಂದೇ ಕ್ಷತ್ರಿಯರೆಂಬ ಹೆಸರು ನಿಮ್ಮ ಕುಲಕ್ಕೆ! ಅರ್ಜುನನೆ! ನೀನಂತೂ ಕ್ಷತ್ರಿಯ ಕುಲತಿಲಕನು. ಧರ್ಮನ ಪಕ್ಷದಲ್ಲಿರುವೆ. ಸ್ವರಾಜ್ಯ ಸಂಸ್ಥಾಪನೆಗಾಗಿ ಈಗ ಹೋರಾಡುವ ಸುವರ್ಣಸಂಧಿಯು ಒದಗಿದೆ. ನಿನ್ನ ಹಗೆಗಳು ಧರ್ಮ (ಸತ್ಯ) ವಿರೋಧಿಗಳು. ಅವರು ಎಂತಹ ವಿಶಾಲ ಸಾಮ್ರಾಜ್ಯವನ್ನೆ ಆಳುತ್ತಿರಲಿ, ಎಷ್ಟೇ ವೈಭವಶಾಲಿಗಳೂ ಬಲಾಢ್ಯರೂ ಆಗಿರಲಿ, ಅವರ ರಾಜ್ಯ ವೈಭವಾದಿಗಳ ತಳಹದಿಯು ಅಸತ್ಯ—ಮೋಸ—ಬಲಹೀನರ ಸುಲಿಗೆಯೆ ಆಗಿದೆ. ಆದುದರಿಂದ ಅವರ ಪಕ್ಷದಲ್ಲಿ ಅನಿವಾರ್ಯವಾಗಿ ಇರಬೇಕಾಗಿದ್ದರೂ ಒಳಗೊಳಗೆ ಹಲವರು ಕೌರವರನ್ನು ನಿಂದಿಸುತ್ತಿದ್ದಾರೆ; ನಿಮಗೆ ಅನುಕೂಲರಾಗಿದ್ದಾರೆ. ಆದಕಾರಣ ಈ ದುಷ್ಟರು ತಮ್ಮ ಕರ್ಮದಿಂದಲೆ ಇದೀಗ ನಾಶಕ್ಕೆ ಒಳಗಾಗುತ್ತಿದ್ದಾರೆ. ನೀನು ಈಗ ದುಷ್ಟನಿಗ್ರಹಕ್ಕೆ ನಿಮಿತ್ತಮಾತ್ರನಾಗಿ ಯುದ್ಧಕ್ಕೆ ನಿಲ್ಲು. ಇಂತಹ ಧರ್ಮಯುದ್ಧಕ್ಕಿಂತಲೂ ಶ್ರೇಯಸ್ಕರವಾದುದು ಕ್ಷತ್ರಿಯರಿಗೆ ಇನ್ನೊಂದಿಲ್ಲ.

ಇದೀಗ ಕ್ಷತ್ರಿಯರಿಗೆ ಸ್ವರ್ಗದ ಬಾಗಿಲು ತೆರೆಗೆದಂತೆ. ಕುಲವಂತರಾದ ವೀರರು ಅದರಲ್ಲಿ ಪ್ರವೇಶಿಸಲು ಎಂದೂ ಹಿಂಜರಿಯರು ಆನಂದದಿಂದ ಆತ್ಮಸಮರ್ಪಣೆಮಾಡಿ ಸ್ವರ್ಗವನ್ನು ಸೇರುವರು.

ಶಿಷ್ಟಸಂರಕ್ಷಣೆ, ದುಷ್ಟರ ದಂಡನೆ ಮಾಡಿ ಸಮಾಜವನ್ನು ಭದ್ರವಾದ ಕಲ್ಯಾಣಕಾರಕವಾದ ತಳಹದಿಯ ಮೇಲೆ ಇರಿಸುವುದಕ್ಕಾಗಿ ಮಾಡಬೇಕಾದ ಯುದ್ಧವೆ ಧರ್ಮಯುದ್ಧವು. ನೀನೀಗ ಕೈಕೊಂಡುದುದು ಧರ್ಮಯುದ್ಧವೆ ಆಗಿದೆ. ಏಕೆಂದರೆ ಧರ್ಮ-ವಿರೋಧಿಗಳಾದ ಕೌರವರು ಸಾಮ್ರಾಜ್ಯವಾದಿಗಳು. ಅವರ ಕಪಟ ರಾಜನೀತಿಯು ನಿಮ್ಮನ್ನು ಸ್ವರಾಜ್ಯಕ್ಕೆ ಎರವು ಮಾಡಿದೆ. ಮದಾಂಧರಾದ ಅವರ ದುರ್ನಡತೆಗಳಿಂದ ಸಜ್ಜನರಿಗೆ ತುಂಬ ಪೀಡೆ, ಹಿಂಸೆಯಾಗುತ್ತಲಿದೆ. ಇಂತಹ ದುಷ್ಟರನ್ನು ಶಿಕ್ಷಿಸುವುದಕ್ಕೆ ನೀನು ಹಿಂಜರಿದರೆ ನೀನು ಅಧರ್ಮಕ್ಕೆ ಪ್ರೋತ್ಸಾಹಿಸಿದಂತಾಗುವುದು.

ಇಂತಹ ಯುದ್ಧಗಳಲ್ಲಿ ಹಲವರು ಸಾಯಬಹುದು. ಹಲವರು ಗಾಯಗೊಳ್ಳಬಹುದು. ಆದರೆ ಅದೆಲ್ಲವೂ ಅಪರಿಹಾರ್ಯವಾಗಿದೆ. ಈ ವರೆಗೆ ಲೋಕವು ಅನ್ಯಾಯಗಳನ್ನು ಕಣ್ಣಾರೆ ಕಂಡು ಸುಮ್ಮನಿದ್ದುದರ ಪ್ರಾಯಶ್ಚಿತ್ತವಿದು. ಜನರು ತಮ್ಮದು ನಡೆವ ಅನ್ಯಾಯ ಅನಾಚಾರಗಳನ್ನು ಸಕಾಲದಲ್ಲಿಯೆ ಪಡೆದು ಹಿಡಿದು ನಿಲ್ಲಿಸಿದರೆ ಇಂತಹ ಹೊತ್ತು ಬರುತ್ತಲೆ ಇದ್ದಿಲ್ಲ. ಆದುದರಿಂದ ಆ ತಪ್ಪಿಗೆ ಇಂದು ತಲೆದಂಡವೂ ತಪ್ಪಿದ್ದಲ್ಲ. ಆತ್ಮಶುದ್ಧಿಗಾಗಿ ಇದೊಂದೇ ಉಪಾಯವು ಈಗ ಉಳಿದಿದೆ. ಈ ಯುದ್ಧವು ಲೋಕಕಲ್ಯಾಣಕ್ಕೆ ಕಾರಣವಾಗುವುದಿದೆ,

ಭಯಾದ್ರಣಾದುಪರತಂ ಮಂಸ್ಯಂತೇ ತ್ವಾಂ ಮಹಾರಥಾಃ ।
ಯೇಷಾಂ ಚ ಬಹುಮತೋ ಭೂತ್ವಾ ಯಾಸ್ಯಸಿ ಲಾಘವಮ್ ॥ ೩೫ ॥
ಅವಾಚ್ಯವಾದಾಂಶ್ಚ ಬಹೂನ್ವದಿಷ್ಯಂತಿ ತವಾಹಿತಾಃ ।
ನಿಂದಂತಸ್ತವ ಸಾಮರ್ಥ್ಯಂ ತತೋ ದುಃಖತರಂ ನು ಕಿಮ್ ॥ ೩೬ ॥
ಹತೋ ವಾ ಪ್ರಾಪ್ಸ್ಯಸಿ ಸ್ವರ್ಗಂ ಜಿತ್ವಾ ವಾ ಭೋಕ್ಷ್ಯಸೇ ಮಹೀಮ್ ।
ತಸ್ಮಾದುತ್ತಿಷ್ಠ ಕೌಂತೇಯ ಯುದ್ಧಾಯ ಕೃತನಿಶ್ಚಯಃ ॥ ೩೭ ॥
ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ ಜಯಾಜಯೌ ।
ತತೋ ಯುದ್ಧಾಯ ಯುಜ್ಯಸ್ವ ನೈವಂ ಪಾಪಮವಾಪ್ಸ್ಯಸಿ ॥ ೩೮ ॥

---

ಅನ್ವಯ:— ಮಹಾರಥಾಃ ತ್ವಾಂ ಭಯಾತ್ ರಣಾತ್ ಉಪರತಂ ಮಂಸ್ಯಂತೇ, ಯೇಷಾಂ ಚ ತ್ವಂ ಬಹುಮತಃ ಭೂತ್ವಾ, ಲಾಘವಂ ಯಾಸ್ಯಸಿ ॥ ೩೫ ॥ ತವ ಸಾಮರ್ಥ್ಯಂ ನಿಂದಂತಃ ತವ ಅಹಿತಾಃ ಬಹೂನ್ ಅವಾಚ್ಯವಾದಾನ್‌ವದಿಷ್ಯಂತಿ । ತತಃ ಕಿಂ ನು ದುಃಖತರಮ್ ? ॥ ೩೬ ॥ ಹತಃ ವಾ ಸ್ವರ್ಗಂ ಪ್ರಾಪ್ಸ್ಯಸಿ, ಜಿತ್ವಾ ವಾ ಮಹೀಂ ಭೋಕ್ಷ್ಯಸೇ, ಹೇ ಕೌಂತೇಯ! ತಸ್ಮಾತ್ ಯುದ್ಧಾಯ ಕೃತನಿಶ್ಚಯಃ ಉತ್ತಿಷ್ಠ ॥ ೩೭ ॥ ಸುಖದುಃಖೇ ಲಾಭಾಲಾಭೌ, ಜಯಾಜಯೌ ಸಮೇಕೃತ್ವಾ ತತಃ ಯುದ್ಧಾಯ ಯುಜ್ಯಸ್ವ । ಏವಂ ಪಾಪಂ ಅವಾಪ್ಸ್ಯಸಿ ॥ ೩೮ ॥

**ನೀನು ಹೆದರಿ ರಣರಂಗದಿಂದ ಓಡಿದೆಯೆಂದು ಮಹಾರಥರು ಗ್ರಹಿಸುವರು. ಈ ವರೆಗೆ ಯಾರು ನಿನಗೆ ತುಂಬ ಮನ್ನಿಸಿದರೊ ಅವರೆ ನಿನ್ನನ್ನು ಕೀಳುಬಗೆಯುವರು ॥ ೩೫ ॥ ನಿನ್ನ ಸಾಮರ್ಥ್ಯವನ್ನು ನಿಂದಿಸುವ ನಿನ್ನ ಹಗೆಗಳು ಹಲವು ಆಡಬಾರದ ಮಾತುಗಳನ್ನೂ ಆಡುವರು. ಇದಕ್ಕಿಂತಲೂ ದುಃಖ-ದಾಯಕವಾದುದಾವುದು? ॥ ೩೬ ॥ ಸತ್ತರೆ ಸ್ವರ್ಗವನ್ನು ಸೇರುವೆ; ಗೆದ್ದರೆ ಭೂಮಿಯ ರಾಜ್ಯವನ್ನು ಉಪಭೋಗಿಸುವೆ. ಆದುದರಿಂದ ಎಲೇ ಅರ್ಜುನನೆ! ಯುದ್ಧದ ನಿಶ್ಚಯದಿಂದ ಏಳು ॥ ೩೭ ॥ ಸುಖ-ದುಃಖ, ಲಾಭ-ಹಾನಿ ಮತ್ತು ಗೆಲ್ಲ-ಸೋಲಗಳು ಇವುಗಳನ್ನು ಸಮವೆಂದು ಭಾವಿಸಿ ಯುದ್ಧಕ್ಕೆ ನಿಲ್ಲು. ಅದರಿಂದ ನಿನಗೆ ಪಾಪವು ತಟ್ಟಲಾರದು. ॥ ೩೮ ॥**

---

ನೀನು ವೀರ ಕ್ಷತ್ರಿಯನು. ಯುದ್ಧವು ನಿನ್ನ ಧರ್ಮ. ಅದನ್ನೇ ಬಿಟ್ಟರೆ! ಬೆಂಕಿಯು ಸುಡುವ ಗುಣವನ್ನೇ ತೊರೆದರೆ, ಅದಕ್ಕೆ ಬೆಂಕಿಯೆಂದು ಯಾರೆನ್ನಬೇಕು? ಮನುಷ್ಯನು ತನ್ನ ಕರ್ತವ್ಯ (ಧರ್ಮ)ವನ್ನು ಕಡೆಗಣಿಸಿದರೆ ಆತನು ಮನುಷ್ಯನೆ? ಆಗ ಆತನು ಲೋಕನಿಂದೆಗೆ ಪಾತ್ರನಾಗುವನು. ಹಗೆಗಳು ಆ ಸಂಧಿಯ ಲಾಭ ಪಡೆದು ಪ್ರಪಂಚದಲ್ಲೆಲ್ಲ ನಿನ್ನ ಅಪಕೀರ್ತಿಯ ಡಂಗುರ ಸಾರುವರು. ವೀರನೆಂದು ನಿನ್ನಲ್ಲಿ ಆದರವುಳ್ಳ ಆಪ್ತರು, ಮಿತ್ರರು ನಿನ್ನ ಹೇಡಿತನಕ್ಕಾಗಿ ನಾಚಿಕೆಗೊಂಡು ನಿನ್ನನ್ನು ಹಳಿಯದೆ ಇರರು. ಸಜ್ಜನರಿಗೆ ಅಪಮಾನಕ್ಕಿಂತ ಸಾವೇ ಮಿಗಿಲೆನಿಸುವುದು.

**ಇಂತಹ ಯುದ್ಧದಲ್ಲಿ ನೀನು ಮಡಿದರೆ ಸ್ವರ್ಗವನ್ನು ಪಡೆಯುವೆ. ಗೆದ್ದರೆ ಸ್ವರಾಜ್ಯವನ್ನು ಸಂಪಾದಿಸುವೆ. ಎರಡರಲ್ಲಿ ಯಾವುದೂ ಲಾಭದಾಯಕವೇ ಆಗಿದೆ. ಆದುದರಿಂದ ಈ ಸ್ವರಾಜ್ಯದ ಹೋರಾಟಿಗೆ ಸನ್ನದ್ಧನಾಗು.** ಇಹಪರ ಸುಖವನು ಪಡೆ.

ಸುಖ-ದುಃಖ, ಲಾಭ ಹಾನಿ, ಅಥವಾ ಜಯಾಪಜಯಗಳನ್ನೂ ನೀನು ಲೆಕ್ಕಿಸಬೇಡ. ಆಗಬೇಕಾದುದು ಆಗಲಿ. ಎರಡೂ ಸಮವೆಂದು ಭಾವಿಸು. ನಿನ್ನ ಸ್ವರಾಜ್ಯದ ಹೋರಾಟವನ್ನು ಕೊನೆಗಾಣಿಸು. ಒತ್ತಾಯದಿಂದ ನಿಮ್ಮನ್ನು ದಬ್ಬಿ ಹೊರಗಟ್ಟಿ ನಿಮ್ಮ ರಾಜ್ಯವನ್ನು ಆಳುತ್ತಿರುವ ದುಷ್ಟರನ್ನು ದಂಡಿಸಲು ಅಣಿಯಾಗು. ಇಂತಹ ಯುದ್ಧದಿಂದ ಪಾಪವು ತಟ್ಟದು. ಯುದ್ಧದಿಂದ ಹಿಂಜರಿದರೆ ಮಾತ್ರ ನೀನು ಪಾಪಕ್ಕೆ ಪಕ್ಕಾಗುವೆ. ಈ ಯುದ್ಧವು ನಿನ್ನ ಉದ್ಧಾರಕ್ಕೆ ಕಾರಣವಾಗಿದೆಯೆ ಹೊರತು ಅವನತಿಗಲ್ಲ.

ಇಂತು ಶ್ರೀಕೃಷ್ಣನು ಅರ್ಜುನನಿಗೆ ಮೊದಲು ಸಾಂಖ್ಯತತ್ವಕ್ಕನುಸರಿಸಿ ಬಳಿಕ ಯುಕ್ತಿಯುಕ್ತವಾಗಿ ತಿಳಿಹೇಳಿದ ಬಳಿಕ 'ಯೋಗಸಿದ್ಧಾಂತ'ಕ್ಕೆ ಅನುಸಾರವಾಗಿ ಉಪದೇಶಮಾಡುತ್ತಾನೆ.

## (೧೬) ಯೋಗವಿಚಾರ.

**ಏಷಾ ತೇಽಭಿಹಿತಾ ಸಾಂಖ್ಯೇ ಬುದ್ಧಿರ್ಯೋಗೇ ತ್ವಿಮಾಂ ಶೃಣು ।**
**ಬುದ್ಧ್ಯಾ ಯುಕ್ತೋ ಯಯಾ ಪಾರ್ಥ ಕರ್ಮಬಂಧಂ ಪ್ರಹಾಸ್ಯಸಿ ॥ ೩೯ ॥**

---

**ಅನ್ವಯ:**— ಹೇ ಪಾರ್ಥ! ಏಷಾ ತೇ ಸಾಂಖ್ಯೇ ಬುದ್ಧಿಃ ಅಭಿಹಿತಾಃ ಯೋಗೇ ತು ಇಮಾಂ (ಬುದ್ಧಿಂ) ಶೃಣು। ಯಯಾ ಬುದ್ಧ್ಯಾ ಯುಕ್ತಃ (ತ್ವಂ) ಕರ್ಮಬಂಧಂ ಪ್ರಹಾಸ್ಯಸಿ ॥ ೩೯ ॥

**ಎಲೈ ಅರ್ಜುನನೆ! ಸಾಂಖ್ಯಮತಕ್ಕನುಸರಿಸಿ ನಿನಗೆ ಈಗ ತಿಳಿಹೇಳಿದ್ದಾಯ್ತು; ಇನ್ನು ಯೋಗಮತಕ್ಕನುಸರಿಸಿ ಇದನ್ನು ಕೇಳು. ಈ ವಿಚಾರಕ್ಕನುಸರಿಸಿ ನಡೆದರೆ ಕರ್ಮದ ತೊಡಕನ್ನು ದೂರಮಾಡುವೆ ॥ ೩೯ ॥**

---

(೩೯–೪೧) ಆತ್ಮವು ಅಮರವಾಗಿರುವುದು, ಎಂಬುದು ನಿಜವಾದರೂ 'ಯುದ್ಧರೂಪಿಯಾದ ಹಿಂಸಾತ್ಮಕ ಕರ್ಮದಿಂದ ಬರುವ ಪಾಪವು ತಪ್ಪಿದ್ದಲ್ಲ. ಆದುದರಿಂದ ಈ ಯುದ್ಧವೆಂಬುದೇ ತ್ಯಾಜ್ಯವಾದುದು' ಎಂದು ಅರ್ಜುನನ ಇನ್ನೊಂದು ಸಂದೇಹವಿರಬೇಕೆಂದು ಊಹಿಸಿ ಶ್ರೀಕೃಷ್ಣನು ಅದಕ್ಕೆ ಉತ್ತರವನ್ನಿತ್ತಿರುವನು. **ಯೋಗಮಾರ್ಗವು ಅಥವಾ ಉದ್ಯೋಗದಮಾರ್ಗವು (ಉತ್+ಯೋಗ)** ಮಾನವನ ಏಳ್ಗೆಗೆ ಕಾರಣವಾಗುತ್ತದೆ. ಆದಕಾರಣ ಆ ದೃಷ್ಟಿಯಿಂದಲೂ ಅರ್ಜುನನಿಗೆ ಹೇಳಿದ್ದಾಗಿದೆ.

ಈ ವರೆಗೆ ಶ್ರೀಕೃಷ್ಣನು ಉಪದೇಶಿಸಿದ್ದು, ಕೇವಲ ಕಪಿಲನ ಸಾಂಖ್ಯಮತವನ್ನೆ ಮಾತ್ರವಲ್ಲ. ಸಾಂಖ್ಯ ಬುದ್ಧಿಯಿಂದ ಮಾಡಿದ ಈ ಉಪದೇಶದಲ್ಲಿ ಸಾಂಖ್ಯ ಮತದೊಂದಿಗೆ ತರ್ಕವಾದವನ್ನೂ ಉಪಯೋಗಿಸಿಕೊಂಡುದಾಗಿದೆ. ಅದರಂತೆ ಇದೀಗ ಮಾಡಲಿರುವ ಯೋಗಬುದ್ಧಿಯ ಉಪದೇಶದಲ್ಲಿ ಪಾತಂಜಲಿಯ ಯೋಗಮಾರ್ಗವೊಂದೆ ಇಲ್ಲ. '**ಯೋಗಬುದ್ಧಿ**' ಎಂದರೆ '**ನಿಷ್ಕಾಮ ಕರ್ಮಾನುಷ್ಠಿತವಾದ ಬುದ್ಧಿ**' ಎಂದರ್ಥವಿದೆ. ಇದೇ ಅಧ್ಯಾಯದಲ್ಲಿ ಮುಂದೆ ಕರ್ಮಕೌಶಲ್ಯಕ್ಕೆ ಯೋಗವೆಂದು ಹೇಳಿದೆ (೨. ೫೦); ಇನ್ನೊಂದೆಡೆಯಲ್ಲಿ 'ಸಮತ್ವ' ಅಥವಾ ತೂಕ, ಹದ ಎಂಬರ್ಥದಲ್ಲಿ ಯೋಗ ಶಬ್ದವನ್ನು ಉಪಯೋಗಿಸಿದೆ. (೨. ೪೮); ಪಾತಂಜಲಿ ಯೋಗಕ್ಕೆ ಇಷ್ಟು ವಿಶಾಲವಾದ ಅರ್ಥವು ಆಗುವುದಿಲ್ಲ. ವೈದಿಕ '**ಕರ್ಮಯೋಗಕ್ಕೆ**' ಮಾತ್ರ ಇದು ಸರಿ ಹೋಗುತ್ತದೆ; ಇದೇ '**ನಿಷ್ಕಾಮ ಕರ್ಮಯೋಗವು**' ವಾಜಸನೇಯ ಸಂಹಿತೆಯಲ್ಲಿ ಹೀಗೆ ಹೇಳಿದೆ:

**ತೇನ ತ್ಯಕ್ತೇನ ಭುಂಜೀಥಾಃ ಮಾ ಗೃಧಃ,**
**ಕಸ್ಯಸ್ವಿದ್ಧನಮ್ ॥ ೧ ॥**
**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್**
**ಶತಂ ಸಮಾಃ ।**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ**
**ಲಿಪ್ಯತೇ ನರೇ ॥ ೨ ॥**

— ವಾಜಸ. ೪೦; ಈಶಉಪ. ೧. ೨.

"(೧) ತ್ಯಾಗಿಯಾಗಿ ಭೋಗಿಸು. (೨) ಅಸಕ್ತನಾಗಬೇಡ. (೩) ಎಲ್ಲಾ ಧನವು ಯಾರದು? (೪) ಹೀಗೆ (ನಿಷ್ಕಾಮ) ಕರ್ಮಮಾಡುತ್ತ ನೂರುವರುಷ ಬಾಳುವ ಇಚ್ಛೆ ಮಾಡು (೫) ಇದೊಂದೇ ನಿಜವಾದ ದಾರಿ ಬೇರೆ ಯಾವುದೂ ಅಲ್ಲ. (೬) ಇಂತು (ನಿಷ್ಕಾಮ ಭಾವದಿಂದ ಮಾಡಿದ) ಕರ್ಮವು ಬಂಧನಕರವಾಗುವುದಿಲ್ಲ."

ಇದು ವಿಶಾಲವಾದ ವೈದಿಕ ನಿಷ್ಕಾಮ ಕರ್ಮಯೋಗವು. ಪಾತಂಜಲನದು ಒಂದು ಅಂಶ ಮಾತ್ರ. "ಆಸಕ್ತಿಯನ್ನು ಬಿಟ್ಟು ತ್ಯಾಗಬುದ್ಧಿಯಿಂದ ಆಜನ್ಮವೂ ಕರ್ತವ್ಯ ಕರ್ಮಮಾಡುತ್ತಿರುವುದು" ಇದೇ '**ಯೋಗಬುದ್ಧಿ**' ಇದಕ್ಕೆ '**ಉದ್ಯೋಬುದ್ಧಿ**' ಎಂದರೂ ಸಲ್ಲುವುದು. ಅಥವಾ ಗೀತೆಯ ಮಾತಿನಲ್ಲಿ '**ನಿಷ್ಕಾಮ ಕರ್ಮಬುದ್ಧಿ**' ಎಂದರೂ ಸರಿ. ಇಲ್ಲವೆ ವೇದದ ಭಾಷೆಯಲ್ಲಿ '**ಶ್ರೇಷ್ಠತಮ ಕರ್ಮಬುದ್ಧಿ**' ಎಂದರೂ ಒಂದೇ (ಯಜು. ೧. ೧).

ಬುದ್ಧ್ಯಾಯುಕ್ತೋ ಯಯಾ, ಪಾರ್ಥ
ಕರ್ಮಬಂಧಂ ಪ್ರಹಾಸ್ಯಸಿ। —ಗೀ. ೨. ೩೯

ಏವಂ ತ್ವಯಿ, ನಾನ್ಯಥೇತೋಽಸ್ತಿ, ನ ಕರ್ಮ
ಲಿಪ್ಯತೇ ನರೇ —ವಾಜಸ. ೪೦. ೧

ನೇಹಾಭಿಕ್ರಮನಾಶೋಽಸ್ತಿ ಪ್ರತ್ಯವಾಯೋ ನ ವಿದ್ಯತೇ ।
ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ ಮಹತೋ ಭಯಾತ್ ॥ ೪೦ ॥
ವ್ಯವಸಾಯಾತ್ಮಿಕಾ ಬುದ್ಧಿರೇಕೇಹ ಕುರುನಂದನ ।
ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽವ್ಯವಸಾಯಿನಾಮ್ ॥ ೪೧ ॥

---

ಅನ್ವಯಃ— ಇಹ ಅಭಿಕ್ರಮನಾಶಃ ನ ಅಸ್ತಿ, ಪ್ರತ್ಯವಾಯಃ ನ ವಿದ್ಯತೇ, ಅಸ್ಯ ಧರ್ಮಸ್ಯ ಸ್ವಲ್ಪಂ ಅಪಿ (ಅನುಷ್ಠಾನಂ) ಮಹತಃ ಭಯಾತ್ ತ್ರಾಯತೇ ॥ ೪೦ ॥ ಹೇ ಕುರುನಂದನ! ಇಹ ವ್ಯವಸಾಯಾತ್ಮಿಕಾ ಏಕಾ ಏವ ಬುದ್ಧಿಃ। ಅವ್ಯವಸಾಯಿನಾಂ ಹಿ ಬುದ್ಧಯಃ ಅನಂತಾಃ ಬಹುಶಾಖಾಃ ಚ ॥ ೪೧ ॥

ಇಲ್ಲಿ ಆರಂಭಿಸಿ ಕರ್ಮದ ನಾಶವು ಆಗುವುದಿಲ್ಲ. ಇದರಲ್ಲಿ ಅಡ್ಡಿ ಆತಂಕಗಳೂ ಬರುವುದಿಲ್ಲ. ಈ ಧರ್ಮದ ಸ್ವಲ್ಪ ಆಚರಣೆಯೂ ಮಹಾಭಯದಿಂದ ಕಾಪಾಡುತ್ತದೆ. ॥ ೪೦ ॥ ಎಲೈ ಅರ್ಜುನನೆ! ಈ ದಾರಿಯಲ್ಲಿ ವ್ಯವಸಾಯದಲ್ಲಿ ಸ್ಥಿರವಾಗಿ ನಿಳಿಯುವ ಒಂದೇ ಬುದ್ಧಿ [illegible] ಬೇಕು. ವ್ಯವಸಾಯವಿಲ್ಲದವರ ಬುದ್ಧಿಯು ಹರಕುಹರಕು, ಬಹುವಿಧವಾಗಿ ಹರಿದುಹಂಚಿದು [illegible] ॥ ೪೧ ॥

ಭಾವಾರ್ಥ:— ಈ ಮೊದಲು ಸತ್ ಮತ್ತು ಅಸತ್ ಇವುಗಳ ವಿಚಾರಮಾಡಿದ್ದಾಯ್ತು. ಇನ್ನು [illegible] ಧರ್ಮಕ್ಕನುಸರಿಸಿ ಅರ್ಜುನನ ಪ್ರಸ್ತುತ ಕರ್ತವ್ಯವೇನೆಂಬುದನ್ನು [illegible] ಈ ದಿಕ್ಕಿನಲ್ಲಿ ಮಾಡಿದ ಯಾವ ಕೆಲಸವೂ ವ್ಯರ್ಥವಾಗುವುದಿಲ್ಲ. ಇದನ್ನು ನೆರವೇರಿಸ [illegible] ಬರುವುದಿಲ್ಲ. [illegible] ಅಲ್ಪವಾಗಿದ್ದರೂ ಅದು ಹಿರಿದಾದ ಹೆದರಿಕೆಯಿಂದ [illegible]. [illegible] ಸಾಧನ ಮಾಡುವುದೊಂದೇ ಇಲ್ಲಿ ಆವಶ್ಯಕವಾಗಿದೆ. ಆದರಿಂದ [illegible] ಸಾಧಕರಲ್ಲದವರ [illegible] ಬಹಳ. ಆದರಿಂದ ಅವರ ಬುದ್ಧಿಯು ಎಂದೂ ಸ್ಥಿರವಾಗಿ ಒಂದೇ ಬಗೆಯಾಗಿ ಇರುವುದಿಲ್ಲ. ಇಂತಹರಿಗೆ ಸಿದ್ಧಿಯು ಎಂದೂ ಕೈಗೂಡುವುದಿಲ್ಲ.

---

ಗೀತೆ ಮತ್ತು ವೇದ ಇವೆರಡರ ಅಭಿಪ್ರಾಯಗಳೂ ಒಂದೇ ಎಂಬುದನ್ನು ಇವೆರಡು ವಚನಗಳಿಂದ ನಿಃಸಂದಿಗ್ಧವಾಗಿ ಕಂಡುಕೊಳ್ಳಬಹುದಾಗಿದೆ.

ನಿಷ್ಕಾಮ ಕರ್ಮಯೋಗವು ಶ್ರೇಷ್ಠವಾಗಿದೆಯೆಂದು ಭಾವಿಸಿದರೂ ಆ ವಿಚಾರದಲ್ಲಿ ಇನ್ನೂ ಮೂರು ಮಾತುಗಳ ಸ್ಪಷ್ಟೀಕರಣವು ಅವಶ್ಯಕವಾಗಿದೆ.

(೧) ನಿಷ್ಕಾಮ ಕರ್ಮಿಯು ತನ್ನ ಕೈಕೊಂಡ ಕಾರ್ಯವನ್ನು ಕೊನೆಗಾಣಿಸುವ ಮೊದಲೆ ಮಡಿದರೆ, ಆ ಕೆಲಸವು ನಿಷ್ಫಲವೆ?

(೨) ನಡುವೆ ಅಡೆತಡೆಗಳು ಬಂದು ಕೆಲಸವು ಮೈತಿನ್ನಲಿಕ್ಕಿಲ್ಲವಷ್ಟೆ? (ಬಂಧನಕಾರಕವಾಗುವುದಿಲ್ಲ ತಾನೆ?)

(೩) ಮೊದಲು ಸ್ವಲ್ಪ ಮಾತ್ರ ಕೆಲಸವು ಸಾಧ್ಯವಾಗಿ ಮುಂದೆ ನಿಂತು ಬಿಟ್ಟರ! ಇದರ ಪರಿಣಾಮವೇನಾಗಬಹುದು?

ಈ ಬಗೆಯ ಸಂದೇಹಗಳನ್ನು ನಿವಾರಿಸುವುದಕ್ಕಾಗಿ ಶ್ರೀಕೃಷ್ಣನು ಆಡಿದ ಮಾತಿದು:

ಇಹ ಅಭಿಕ್ರಮನಾಶಃ ನ ಅಸ್ತಿ — ಗೀ. ೨. ೪೦.

"ಇಲ್ಲಿ ಆರಂಭಿಸಿದ ಕರ್ಮದ ನಾಶವಾಗುವುದಿಲ್ಲ" ಈ ದಾರಿಯಿಂದ ಹೊರಟಾಗ ಅದರ ಕಟ್ಟುಕಟ್ಟಳೆಗನುಸರಿಸಿ ಆರಂಭಿಸಿದ ಕೆಲಸವು ಹುಸಿಹೋಗುವುದಿಲ್ಲ. ಪ್ರತಿಯೊಬ್ಬನು ಆರಂಭಿಸಿದ ಕೆಲಸವು ಆ ಪ್ರಮಾಣದಲ್ಲಿ ಅವನೊಡನೆ ಸಂಸ್ಕಾರ ರೂಪದಿಂದ ಇದ್ದೇ ಇರುವುದು: ಆತನು ಮಡಿದರೆ ಅದೂ ಆತನೊಡನೆ ಇರುವುದು.

ತಸ್ಮಿನ್ನಪೋ ಮಾತರಿಶ್ವಾ ದಧಾತಿ ॥
—ವಾಜಸ. ೪೦. ೪; ಕಾಣ್ವಯಜು. ೪೦. ೪; ಈಶ ೪.

"(ಮಾತರಿಶ್ವಾ) ತಾಯ ಬಸುರಿನಲ್ಲಿ ಇರುವವ ಅಂದರೆ ಪುನರ್ಜವು ಪ್ರಾಪ್ತವಾಗುವ ಜೀವವು (ತಸ್ಮಿನ್) ಆ ಪರಮಾತ್ಮನಲ್ಲಿ (ಅಪಃ ದಧಾತಿ) ಎಲ್ಲ ಕರ್ಮಗಳನ್ನು ಧಾರಣಮಾಡುತ್ತಾನೆ" ಒಂದು ದೇಹ ಬಿಟ್ಟು ಇನ್ನೊಂದು ದೇಹವು ಧಾರಣಮಾಡಿದಾಗಲೂ ಹಿಂದೆ ಮಾಡಿದ ಕರ್ಮವು ಮುಂದೆಯೂ ಅವನೊಡನೆ ಬರುವುದು. ಸಾಯಂಕಾಲದ ವರೆಗೆ ಕೆಲಸಮಾಡಿ, ಇರುಳಾಯ್ತೆಂದು ಅದನ್ನು ಅಷ್ಟಕ್ಕೆ ಬಿಟ್ಟು ಮಲಗಿ;

ಮರುದಿನ ಮತ್ತೆ ಎದ್ದು ಮುನ್ನದಿನ ಅರ್ಧಕ್ಕೆ ನಿಲ್ಲಿಸಿದ ಕೆಲಸವನ್ನು ಮತ್ತೆ ಮುಂದುವರಿಸುವುದಿಲ್ಲವೆ? ಅದರಂತೆ ಮೃತ್ಯುರೂಪಿಯಾದ ಮಹಾರಾತ್ರಿಯನ್ನು ಕಳೆದು ಹೊಸ ಜನ್ಮದ ಅಥವಾ ನೂತನ ಸೃಷ್ಟಿಯ ಉದಯವಾದ ಬಳಿಕ ಹಿಂದಿನ ಕರ್ಮವನ್ನು ಮತ್ತೆ ಮುಂದೆ ಸಾಗಿಸಿ ಮುಗಿಸುವುದಕ್ಕೆ ಜೀವವು ಹಾತೊರೆಯುವುದು ಸಹಜ-ವಿ-. ಈ . ಚಾರವು ಮುಂದೆ ಆರನೆಯ ಅಧ್ಯಾಯದಲ್ಲಿ ಬಂದಿದೆ ಅದರ ಮುಖ್ಯಾಂಶವು ಹೀಗಿದೆ:

"ಎಲೈ ಅರ್ಜುನನೆ! ಇಂತಹ ಜನರಿಗೆ ಎಂದೆಂದೂ ಕೇಡಿಲ್ಲ. ಕಲ್ಯಾಣಕಾರಕ ಕಾರ್ಯಗಳಲ್ಲಿ ನಿರತನಾದವನಿಗೆ ದುರ್ಗತಿಯೆಂಬುದೆ ಇಲ್ಲ. ಯೋಗ್ಯಮಾರ್ಗದಲ್ಲಿ ಅರ್ಧಮರ್ಧ ಸಾಧನವಾದವರಿಗೆ ಮರುಜನ್ಮದಲ್ಲಿ ಶುದ್ಧ ಹಾಗೂ ಪವಿತ್ರವಾದ ಸಿರಿವಂತರ ಮನೆಯಲ್ಲಿ ಜನ್ಮವು ಸಿಕ್ಕುವುದು. ಇಲ್ಲವೆ ಜ್ಞಾನ ಸಂಪನ್ನ ಯೋಗಿಗಳ ಮನೆತನದಲ್ಲಿ ಜನ್ಮವು ದೊರೆಯುವುದು. ಅಲ್ಲಿ ಅವರಿಗೆ ಪೂರ್ವಜನ್ಮದ ಬುದ್ಧಿಸಂಸ್ಕಾರವು ಲಭಿಸುವುದು. ಮತ್ತು ಅಲ್ಲಿಂದಲೆ ಆ ಸಾಧಕನು ಮೋಕ್ಷಕ್ಕಾಗಿ ಉದ್ಯೋಗ ನಡಸುವನು. ಪೂರ್ವಾಭ್ಯಾಸದ ಮೂಲಕ ಅವನಿಗೆ ಆ ಮಾರ್ಗದಲ್ಲಿ ಹೋಗುವ ಹಂಬಲವುಂಟಾಗುವುದು. ಹೀಗೆ ಒಮ್ಮನಸಿನಿಂದ ಪ್ರಯತ್ನಿಸುವ ಯೋಗಿಯು ಹಲವು ಜನ್ಮಗಳಿಂದ ಪವಿತ್ರನಾಗಿ ಕೊನೆಗೆ ಪರಮಪದವನ್ನು ಹೊಂದುವನು" (ಗೀ. ೬. ೪೦–೪೫).

ಒಮ್ಮೆ ಆರಂಭಿಸಿದ ಕರ್ಮವು ನಡುವೆ ಎಂದೂ ನಷ್ಟವಾಗುವುದಿಲ್ಲವೆಂಬುದು ಮೇಲಣ ವಿವರಣೆಯಿಂದ ಸ್ಪಷ್ಟವಾಗುವುದು. ಇದನ್ನು ಮನಗಾಣಲು ಇನ್ನೊಂದು ಉದಾಹರಣವನ್ನು ತಕ್ಕೊಳ್ಳಬಹುದು. ಪೂರ್ವವಯಸ್ಸಿನಲ್ಲಿ ಆತ್ಮಸಂಯಮದಿಂದ ಬ್ರಹ್ಮಚರ್ಯವನ್ನು ಪಾಲಿಸಿ ಚೆನ್ನಾಗಿ ಕಥ ಯನ ಮಾಡಿದವನು ಉತ್ತರ ವಯಸ್ಸಿನಲ್ಲಿ ಸುಖಿಗಳಾಗುವುದನ್ನು ಕಾಣಬಹುದು. ಇಲ್ಲ ದೇಹದಲ್ಲಿ ನಡೆವ ಸ್ಥಿತ್ಯಂತರಗಳನ್ನು ನೆನಪಿಗೆ ತಂದುಕೊಳ್ಳಬೇಕು. ಪೂರ್ವವಯಸ್ಸಿನಲ್ಲಿ ಬ್ರಹ್ಮಚರ್ಯಪಾಲನಾದಿ ನಿಯಮಗಳನ್ನು ಅನುಸರಿಸುವ ಅಣುಜೀವಗಳು ಬೇರೆ. ಮತ್ತು ಉತ್ತರಾಯುಷ್ಯದಲ್ಲಿ ಸುಖವನ್ನು ಅನುಭವಿಸುವ ಅಣು ಜೀವಗಳು ಬೇರೆ ದೇಹದಲ್ಲಿ ಕಾಲಕಾಲಕ್ಕೆ ಹೊಸ ಜೀವಾಣುಗಳು ಹುಟ್ಟಿ ಹಾಳಾದ ಹಳೆಯವುಗಳ ಸ್ಥಾನವನ್ನು ಆಕ್ರಮಿಸುವುವೆಂದು ಶಾಸ್ತ್ರಜ್ಞರು ಕಂಡುಹಿಡಿದಿದ್ದಾರೆ ಇನ್ನು ಈ ವಿಷಯವನ್ನು ರಾಷ್ಟ್ರಕ್ಕೆ ಹೋಲಿಸಬಹುದು. ರಾಷ್ಟ್ರದ ಸ್ವಾತಂತ್ರ್ಯಕ್ಕಾಗಿ ವೀರರು ಹೋರಾಟವಮಾಡಿ ಸ್ವರಾಜ್ಯವನ್ನು ಪಡೆಯುವರು. ಅವರ ಮುಂದಿನ ಪೀಳಿಗೆಯವರು ತಮ್ಮ ಪೂರ್ವಜರು ಸಂಪಾದಿಸಿದ ಸ್ವರಾಜ್ಯದ ಸುಖವನ್ನು ಅನುಭವಿಸುವರು. ಹೀಗೆ ಒಮ್ಮೆ ಆರಂಭಿಸಿದ ಕಾರ್ಯವು ಹೇಗೆ ಮುಂದುವರೆಯುವುದೆಂಬುದನ್ನು ಇಲ್ಲಿ ಕಂಡುಕೊಳ್ಳಬಹುದಾಗಿದೆ.

### ಪ್ರತ್ಯವಾಯಃ ನ ವಿದ್ಯತೇ (ಗೀ. ೨-೪೦)

"ಇದರಲ್ಲಿ ಅಡ್ಡಿ ಆತಂಕಗಳು ಒದಗುವುದಿಲ್ಲ.' ಸತ್ಕರ್ಮಗಳನ್ನು ಸತತವಾಗಿ ನಡಸುವುದರಿಂದ ನಡುವಿನ ಅಡೆತಡೆಗಳೆಲ್ಲವೂ ದೂರವಾಗುವುವು. ಅಹಿಂಸಾ, ಸತ್ಯ, ಅಸ್ತೇಯಾದಿ ಯೋಗಮಾರ್ಗದ ನಿಯಮಗಳಿಗೆ ಅನುಸರಿಸಿ ಕೆಲಸವನ್ನು ನೆರವೇರಿಸುವವರಿಗೆ ಯಶಸ್ಸಿನ ಬಗ್ಗೆ ಸಂದೇಹಪಡುವ ಕಾರಣವಿಲ್ಲ. ನಡುವೆ ಕೆಲವೊಂದು ತೊಂದರೆಗಳು ತಲೆದೋರಿದರೂ ಅವು ಕೇವಲ ಸಾಧಕನ ಪರೀಕ್ಷಾರ್ಥವಾಗಿ ಇದ್ದಂತೆಯೆ ಇರುವುವು. ಆ ತೊಂದರೆ ತೊಡಕುಗಳನ್ನು ಬಿಡಿಸುವ, ಆ ಕಾಲದಲ್ಲ ತನ್ನ ಮನಸನ್ನು ತೂಕದಲ್ಲಿ ಇರಿಸಿಕೊಳ್ಳುವ ಯೋಗ್ಯತೆಯು ಬಂದಿದೆಯೆ ಇಲ್ಲವೆ ಎಂಬುದನ್ನು ಅರಿತುಕೊಳ್ಳಲು ಅದೊಂದು ಸಂಧಿಯು ಆತನಿಗೆ ದೊರೆಯುವುದು ಇಂತಹ ವಿಘ್ನಗಳನ್ನು ಮೆಟ್ಟಿ ಮುಂದಡಿಯಿಡುವಾಗಲ ಆತನ ಸತ್ವಶಕ್ತಿಯು ಹೆಚ್ಚು ಹೆಚ್ಚಾಗಿ ಹಬ್ಬುವುದು ಅದುದರಿಂದ ಸಾಧಕನು ಅಡ್ಡಿ ಆತಂಕಗಳಿಗೆ ಹೆದರದೆ ಬೆಚ್ಚದೆ ಅವನ್ನು ಎದುರಿಸಲು ಸಾವಧಾನದಿಂದ ಯಾವಾಗಲೂ ಸಿದ್ಧನಾಗಿರುತ್ತಾನೆ.

> ಸ್ವಲ್ಪಮಪ್ಯಸ್ಯ ಧರ್ಮಸ್ಯ ತ್ರಾಯತೇ
> ಮಹತೋ ಭಯಾತ್ । (ಗೀ. ೨-೪೦)

'ಈ ಧರ್ಮವನ್ನು ಸ್ವಲ್ಪ ಆಚರಿಸಿದರೂ ಅದು ಹಿರಿದಾದ ಹೆದರಿಕೆಯಿಂದ ಕಾಪಾಡುವುದು.' ಅಹಿಂಸಾ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ, ಪಾವಿತ್ರ್ಯ, ಸಂತೋಷ, ಸ್ವಾಧ್ಯಾಯ, ಪ್ರೀತಿ (ಭಕ್ತಿ) ಇತ್ಯಾದಿ ಅಮೌಲಿಕ ಸದ್ಗುಣಗಳಿವೆ. ಇವುಗಳಲ್ಲಿ ಯಾವುದೊಂದನ್ನು ಸರಿಯಾಗಿ ಆಜನ್ಮ ಆಚರಿಸಿದರ ಉಳಿದ ಗುಣಗಳೂ ಆತನಲ್ಲ ಕಾಣಿಸಿಕೊಳ್ಳುವುವು ಮತ್ತು ಆತನು ಮಹಾನುಭಾವನೆಂದು ಹೆಸರಾಗುವಲ್ಲಿ ಸಂದೇಹವೇ ಇಲ್ಲ. ಆದರೆ ಆಜನ್ಮ ಆಚರಣೆ ಸಾಧ್ಯವಿಲ್ಲವೆನಿಸಿದವರು ಇದನ್ನು ಅಲ್ಪಾಂಶದಿಂದ ಆಚರಿಸಿದರೂ ಅದು ಆತನಿಗೆ ಫಲದಾಯಕವಾಗದೆ ಇರದು. ಒಬ್ಬ ಅಂಗಡಿಕಾರನು ಧಾರಣೆ ತುಟ್ಟಿ ಹೇಳುವನೆಂದು ತಿಳಿದರೂ ಆತನು ತೂಕ ಮಾಪುಗಳಲ್ಲಿಯೂ ಉಳಿದ ಲೆಕ್ಕಾಚಾರಗಳಲ್ಲಿಯೂ ಅತ್ಯಂತ ಪ್ರಾಮಾಣಿಕನೆಂದು ಜನರ ಮನಸಿಗೆ ಖಚಿತವಾ,

ಗಿದ್ದರೆ ಅವನಿಗೆ ಅದರ ಲಾಭವು ಸಿಕ್ಕೇಸಿಕ್ಕುವುದನ್ನು ವ್ಯವಹಾರದಲ್ಲಿ ನೋಡುತ್ತೇವೆ ಆದುದರಿಂದ 'ಈ ಧರ್ಮವನ್ನು ಸ್ವಲ್ಪ ಆಚರಿಸಿದರೂ ಕೂಡ ಅದು ದೊಡ್ಡ ಅಂಜಿಕೆಯಿಂದ ಕಾಪಾಡುವುದು' ಎಂದು ಗೀತೆಯು ಸಾರುತ್ತಿದೆ.

ವ್ಯವಸಾಯಾತ್ಮಿಕಾ ಬುದ್ಧಿರೇಕೇಹ
ಕುರುನಂದನ | (ಗೀ. ೨-೪೧)

ಸತ್ಕಾರ್ಯಗಳಲ್ಲಿ ಯಶಸ್ವಿಯಾಗಲು ಅದನ್ನು ನಡೆಸುವವನಲ್ಲಿ 'ವ್ಯವಸಾಯಾತ್ಮಿಕಾ ಬುದ್ಧಿಯು ಬೇಕು. ಇದಿಲ್ಲದವನಿಂದ ಯಾವ ಕೆಲಸಗಳೂ ಯಶಸ್ವಿಯಾಗಿ ಜರುಗವು. 'ವ್ಯವಸಾಯ' ಎಂದರೆ 'ಉದ್ಯೋಗ, ಪ್ರಯತ್ನ, ಅವಿಶ್ರಾಂತ ಪರಿಶ್ರಮ, ಹುಮ್ಮಸ ಎಡೆಬಿಡದೆ ಕೆಲಸಕ್ಕೆ ತೊಡಗುವ ಬುದ್ಧಿ, ನಿಶ್ಚಯ, ವ್ಯಾಪಾರ, ಆಚಾರ, ಹವಣು, ಹಂಚಿಕೆ, ಕೌಶಲ್ಯ' ಇತ್ಯಾದಿ. ಇಂತಿವೆಲ್ಲ ಗುಣಗಳುಳ್ಳ ಬುದ್ಧಿಯೆ, ವ್ಯವಸಾಯಾತ್ಮಿಕಾಬುದ್ಧಿಯು ಅಡೆತಡೆಗಳಿಗೆ ಗಾಬರಿಗೊಳ್ಳದೆ ಎದೆಗುಂದದೆ ಕೆಲಸವನ್ನು ನಡೆಸಿ ಜಾಣ್ಮೆಯಿಂದ ಅದನ್ನು ಕೊನೆಗಾಣಿಸುವ ಧೀರರಲ್ಲಿ ಇಂತಹ ವ್ಯವಸಾಯಾತ್ಮಿಕಾಬುದ್ಧಿಯುಂಟೆಂದು ತಿಳಿಯಬೇಕು. ಈ ಬಗೆಯಾದ ಸ್ಥಿರವಾದ ಏಕಾಗ್ರಬುದ್ಧಿಯುಳ್ಳವರಿಗೆ ಅವರ ಕೈಕೊಂಡ ಕೆಲಸದಲ್ಲಿ ಸಿದ್ಧಿಯು ನಿಶ್ಚಿತ.

ಬಹುಶಾಖಾ ಹ್ಯನಂತಾಶ್ಚ
ಬುದ್ಧಯೋಽವ್ಯವಸಾಯಿನಾಮ್ | (ಗೀ. ೨-೪೧)

'ಬೇಸರವಿಲ್ಲದೆ ಕೆಲಸಮಾಡುವ ಸ್ವಭಾವವಿಲ್ಲದವರಲ್ಲಿ ಹಲವು ಬುದ್ಧಿಗಳಿರುವುದುಂಟು. ಮತ್ತು ಆ ಒಂದೊಂದು ಬುದ್ಧಿಗೂ ಹಲವು ಕವಲು ಒಡೆದಿರುವುವು.' ಇಲ್ಲಿ ಹಲವು ಬುದ್ಧಿಗಳು ಎಂದರೆ ಚಂಚಲ ಅಥವಾ ಅಸ್ಥಿರಬುದ್ಧಿ ಎಂಬರ್ಥವಿದೆ. ಇಂತಹರು ಯಾವುದೊಂದು ಕೈಕೊಂಡ ಕೆಲಸವನ್ನು ಕೊನೆಯವರೆಗೆ ಮಾಡರು. ಇಂದು ಒಂದು ಕೆಲಸ ಹಿಡಿದರೆ ನಾಳೆ ಮತ್ತೊಂದು! ನಾಡದು ಮಗುದೊಂದು! ಆ ಕೆಲಸ ಮಾಡುವಾಗಲು ಒಂದೇ ಬಗೆಯಾದ ಪದ್ಧತಿಯಿಲ್ಲ. ಮುಂಜಾನೆ ಒಂದು ಬಗೆಯಿಂದ ಅದನ್ನು ಸಾಗಿಸಿದ್ದರೆ ಸಂಜೆಗೆ ಇನ್ನೊಂದು ಬಗೆ! ಯಾವ ಕೆಲಸಕ್ಕೂ ಅದರ ಕೊನೆಯ ವರೆಗೆ ಅಂಟಿಕೊಳ್ಳಲಾರರು. ಚಂಚಲಸ್ವಭಾವದ ಮೂಲಕ ಎಲ್ಲ ಕಡೆಗೂ ಎಳೆದಾಟ! ಹೀಗೆ ಹಲವು ಕೆಲಸಗಳನ್ನು ಅರ್ಧಮರ್ಧ ಮಾಡಿ ಬಿಡುವುದರಿಂದ ಇವರಿಗೆ ಮುಂದೆ ತಮ್ಮಲ್ಲಿಯೇ ಅವಿಶ್ವಾಸವುಂಟಾಗುವುದು. ತಾನು ಏನು ಮಾಡುವುದಕ್ಕೂ ಅಸಮರ್ಥನೆಂಬ ಭಾವನೆಯಾಗುವದು ಇಂಥವಗೆ ಯಾವ ಶ್ರೇಯಸ್ಸೂ ಇಲ್ಲದೆ ತ್ರಿಶಂಕುಸ್ವರ್ಗದ ಗತಿಯಾಗುವುದು. ಏಳ್ಗೆಯನ್ನು ಹಾರೈಸುವವನಿಗೆ ಶ್ರದ್ಧೆಯು ಅತ್ಯಂತ ಅವಶ್ಯಕವಾಗಿದೆ. ಆದುದರಿಂದ ಶ್ರೀಕೃಷ್ಣನು ಹೇಳಿರುವುದೇನೆಂದರೆ:

ಶ್ರದ್ಧಾಮಯೋಽಯಂ ಪುರುಷೋ
ಯೋ ಯಚ್ಛ್ರದ್ಧಃ ಸ ಏವ ಸಃ (೧೭-೩)
ಶ್ರದ್ಧಾವಾನ್ ಭಜತೇ ಯೋ ಮಾಂ
ಸ ಮೇ ಯುಕ್ತತಮೋ ಮತಃ (೬-೪೭)
ಶ್ರದ್ದಧಾನಾ ಮತ್ಪರಮಾ ಭಕ್ತಾಸ್ತೇಽತೀವ
ಮೇ ಪ್ರಿಯಾಃ (೧೨-೨೦)
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ
ತೇಽಪಿ ಕರ್ಮಭಿಃ (೩-೩೧)
ಶ್ರದ್ಧಾವಾನ್ ಲಭತೇ ಜ್ಞಾನಂ ತತ್ಪರಃ
ಸಂಯತೇಂದ್ರಿಯಃ (೪-೩೯)

"ಯಾವನ ಶ್ರದ್ಧೆಯೆಂತಹದೊ ಆ ಮನುಷ್ಯನೂ ಅಂತಹನೆ ಇರುವನು ಶ್ರದ್ಧೆಯಿಂದ ನನ್ನನ್ನು ಭಜಿಸುವವನು ಹೆಚ್ಚು ಯೋಗ್ಯನು ನನ್ನಲ್ಲಿ ಪರಮಶ್ರದ್ಧೆಯುಳ್ಳ ಭಕ್ತರು ನನಗೆ ಅತ್ಯಂತ ಪ್ರೀತಿಯವರು. ಶ್ರದ್ಧೆಯುಳ್ಳವರಾಗಿ ಯಾರನ್ನೂ ದ್ವೇಷಿಸದಂತಹರು ಕರ್ಮಬಂಧದಿಂದ ಮುಕ್ತರಾಗುವರು. ಶ್ರದ್ಧೆಯುಳ್ಳ ಆತ್ಮಸಂಯಮಿಗಳು ಜ್ಞಾನಿಗಳಾಗುತ್ತಾರೆ." ಎಂಬ ಈ ಗೀತಾವಚನಗಳಲ್ಲಿ ಶ್ರದ್ಧೆಯ ಮಹಿಮೆಯನ್ನು ವರ್ಣಿಸಿದ್ದಾರೆ. ಮತ್ತು ಶ್ರದ್ಧಾವಿಹೀನನು ಚಂಚಲನೂ ಸಂಶಯಸ್ವಭಾವದವನೂ ಆಗಿ ಆತ್ಮವಿಶ್ವಾಸವನ್ನೇ ಕಳೆದುಕೊಂಡು ಕೊನೆಗೆ ಹಾಳಾಗುತ್ತಾನೆ; ಎಂದೂ ಗೀತೆಯು ಹೇಳುತ್ತದೆ:

ಅಜ್ಞಶ್ಚಾಶ್ರದ್ದಧಾನಶ್ಚ ಸಂಶಯಾತ್ಮಾ ವಿನಶ್ಯತಿ |
ನಾಯಂ ಲೋಕೋಽಸ್ತಿ ನ ಪರೋ
ನ ಸುಖಂ ಸಂಶಯಾತ್ಮನಃ || (೪-೪೦)

"ತಿಳಿಗೇಡಿಯು, ನೆಚ್ಚಿಕೆಯಿಲ್ಲದವನು ಮತ್ತು ಸಂದೇಹಿಯು ಆದ ಮನುಷ್ಯನು ಹಾಳಾಗುತ್ತಾನೆ. ಸಂದೇಹಿಗೆ ಇಹವೂ ಇಲ್ಲ; ಪರವೂ ಇಲ್ಲ. ಸುಖವಂತು ಮೊದಲೆ ಇಲ್ಲ."

ತನ್ನ ವ್ಯವಸಾಯದಲ್ಲಿ ಅರ್ಜುನನು ಏಕಾಗ್ರಬುದ್ಧಿಯುಳ್ಳವನು. ಆದರೆ ಈ ಮೊದಲೆ ಹೇಳಿದಂತೆ ಸಂಜಯನ ಬೋಧನೆಯಿಂದ ಅವನ ಮನಸು ಚಂಚಲವಾಯ್ತು. ಪ್ರಾಪ್ತಕರ್ತವ್ಯವಾದ ಧರ್ಮಯುದ್ಧದಿಂದ ಮನಸು

## (೧೭) ಭೋಗವಾದಿಗಳ ಅವಸ್ಥೆ.

ಯಾಮಿಮಾಂ ಪುಷ್ಪಿತಾಂ ವಾಚಂ ಪ್ರವದಂತ್ಯವಿಪಶ್ಚಿತಃ ।
ವೇದವಾದರತಾಃ ಪಾರ್ಥ ನಾನ್ಯದಸ್ತೀತಿವಾದಿನಃ ॥ ೪೨ ॥
ಕಾಮಾತ್ಮಾನಃ ಸ್ವರ್ಗಪರಾ ಜನ್ಮಕರ್ಮಫಲಪ್ರದಾಮ್ ।
ಕ್ರಿಯಾವಿಶೇಷಬಹುಲಾಂ ಭೋಗೈಶ್ವರ್ಯಗತಿಂ ಪ್ರತಿ ॥ ೪೩ ॥
ಭೋಗೈಶ್ವರ್ಯಪ್ರಸಕ್ತಾನಾಂ ತಯಾಪಹೃತಚೇತಸಾಮ್ ।
ವ್ಯವಸಾಯಾತ್ಮಿಕಾ ಬುದ್ಧಿಃ ಸಮಾಧೌ ನ ವಿಧೀಯತೇ ॥ ೪೪ ॥

---

ಅನ್ವಯ:— ಹೇ ಪಾರ್ಥ! ವೇದವಾದರತಾಃ, ಅನ್ಯತ್ ನ ಅಸ್ತಿ ಇತಿವಾದಿನಃ, ಅವಿಪಶ್ಚಿತಃ, ಕಾಮಾತ್ಮಾನಃ, ಸ್ವರ್ಗಪರಾಃ, ಭೋಗೈಶ್ವರ್ಯಗತಿಂ ಪ್ರತಿ ಕ್ರಿಯಾವಿಶೇಷಬಹುಲಾಂ ಜನ್ಮಕರ್ಮಫಲಪ್ರದಾಂ ಯಾಂ ಇಮಾಂ ಪುಷ್ಪಿತಾಂ ವಾಚಂ ಪ್ರವದಂತಿ, ತಯಾ ಅಪಹೃತಚೇತಸಾಂ ಭೋಗೈಶ್ವರ್ಯಪ್ರಸಕ್ತಾನಾಂ ಬುದ್ಧಿಃ ವ್ಯವಸಾಯಾತ್ಮಿಕಾ (ಭೂತ್ವಾ) ಸಮಾಧೌ ನ ವಿಧೀಯತೇ ॥ (೪೨-೪೪)

---

ಹಿಂಜರಿದಿತು. ಶ್ರದ್ಧೆಯು ಸಂಕೋಚಗೊಂಡಿತು. ಸಂದೇಹಗಳು ತಲೆದೋರಿದುವು. ಶ್ರೀಕೃಷ್ಣನಂತಹ ಸಹಕಾರಿಯ ಮಾತಿನಲ್ಲೂ ವಿಶ್ವಾಸವು ಕಡಿಮೆಯಾಯ್ತು! ಅರ್ಜುನನು 'ಅವ್ಯವಸಾಯಿ'ಯಾದನು. ಇದಕ್ಕೆಲ್ಲ ಕಾರಣವು ಹಿತಶತ್ರುಗಳ ಕುತಂತ್ರ. ಸಾಮ್ರಾಜ್ಯವಾದಿಗಳು ಗೆದ್ದನಾಡಿನ ವ್ಯವಸಾಯಿಗಳನ್ನು ಅವ್ಯವಸಾಯಿಗಳನ್ನಾಗಿಸಲು ಹೀಗೆಯೆ ಬುದ್ಧಿಭೇದವಮಾಡುವರು. ಶಿಕ್ಷಣದ ಹೆಸರಿನಲ್ಲಿ ಅ-ವಿಚಾರಗಳನ್ನೆ ತಲೆಯಲ್ಲಿ ತುಂಬುವರು ಜನರಲ್ಲಿ ಜಗಳಗಳು ಹೆಚ್ಚಿ ಅವರಲ್ಲಿ ಯಾವಾಗಲೂ ಒಡಕುಂಟಾಗುವಂತೆ ಎತ್ತುಗಡೆಮಾಡುವರು. ಅವರಿಗೆ ಸ್ವರಾಜ್ಯ ಸಂಪಾದನೆಯ ವ್ಯವಸಾಯದಲ್ಲಿ ಶ್ರದ್ಧೆಯು ಕಡಿಮೆಯಾಗುವಂತೆ ಸಂದೇಹಗಳು ಹೆಚ್ಚಾಗುವಂತೆ ಪ್ರಚಾರನಡೆಸುವರು. ಇದಕ್ಕೆ ಬಲಿಬಿದ್ದು ಅರ್ಜುನನಂತಹನೆ ಗೋಳಾಡಿರುವಲ್ಲಿ ಜನಸಾಮಾನ್ಯರ ಮಾತೇನು. ಆದುದರಿಂದ ಉತ್ಕರ್ಷವನ್ನು ಅಪೇಕ್ಷಿಸುವವರು ತಮ್ಮ ಸದ್ವ್ಯವಸಾಯದಿಂದ ಬುದ್ಧಿಯನ್ನು ಚಂಚಲವಾಗಗೊಡದೆ ಏಕಾಗ್ರವಾಗಿಡಲು ಪ್ರಯತ್ನಿಸುವುದು ಕರ್ತವ್ಯವಾಗಿದೆ.

ಅವ್ಯವಸಾಯಿಗಳು ಚಂಚಲಚಿತ್ತರಾಗಿ ತಾತ್ಕಾಲಿಕ ಸುಖಭೋಗಗಳಿಗೆ ಮನಸೋತು ಹೇಗೆ ಅಲೆದಾಡುವರೆಂಬುದನ್ನು ಶ್ರೀಕೃಷ್ಣನು ಮುಂದೆ ವಿವರಿಸುತ್ತಾನೆ:

(೪೨-೪೪) ಲೋಕದಲ್ಲಿ ಅನಾದಿಕಾಲದಿಂದಲೂ ಭೋಗವಾದ ಮತ್ತು ತ್ಯಾಗವಾದಗಳೆಂಬ ಎರಡು ಪಂಥಗಳು ನಡೆಯುತ್ತ ಬಂದಿವೆ. ಅವುಗಳಲ್ಲಿ ಎರಡನೆಯದು ವೈದಿಕಪರಂಪರೆಗೆ ಅನುಸರಿಸಿದ್ದಾಗಿದೆ. "(ತೇನ ತ್ಯಕ್ತೇನ ಭುಂಜೀಥಾಃ। ಯಜು. ೪೦-೧) ತ್ಯಾಗಮಾಡಿ, ಯಜ್ಞಶೇಷವನ್ನು ಉಪಭೋಗಿಸಬೇಕು," ಎಂಬುದು ವೇದಗಳ ಸಂದೇಶವಾಗಿದೆ. ಆಜನ್ಮವೂ ಸುಖೋಪಭೋಗವೇ ಹೆಗ್ಗುರಿ, ಎಂಬುದು ಇನ್ನೊಂದು ಪಂಥ. ಇದೇ ಭೋಗವಾದ, ಮನುಷ್ಯನ ಸಾಮಾನ್ಯ ಒಲವು ಸಂಯಮದ ಕಡೆಗೆ ಇಲ್ಲ. ಸ್ವೈರಾಚಾರದ ಕಡೆಗೇ ಇದೆ. ಇದು ಪಶುಪಕ್ಷ್ಯಾದಿಗಳಲ್ಲಿಯೂ ಕಂಡುಬರುವ ಸ್ವಾಭಾವಿಕಗುಣವು. ಆದುದರಿಂದ ಇದಕ್ಕೆ ಪಶುವೃತ್ತಿಯೆಂದರೂ ಅಡ್ಡಿಯಿಲ್ಲ. ಆದರೆ ವಿಚಾರಿಯಾದ ಮಾನವನಿಗೆ ಇದು ಸಮ್ಮತವಾಗಲಾರದು. ತ್ಯಾಗಬುದ್ಧಿಯು ಸಮಾಜವನ್ನು ಸುಸ್ಥಿರಗೊಳಿಸುವುದು ಆರ್ಯ-ಧರ್ಮದ ಶ್ರೇಷ್ಠವಾದ ಧ್ಯೇಯವಾಗಿದೆ. ಭಗವದ್ಗೀತೆಯೂ ಈ ವೈದಿಕಸಿದ್ಧಾಂತವನ್ನೇ ಪುಷ್ಟೀಕರಿಸಿ ಹೇಳುತ್ತಿದೆ ಶ್ರೀಕೃಷ್ಣನು ಭೋಗವಾದಿಗಳ ಚಂಚಲವೃತ್ತಿಯ ಭಯಾನಕ ಚಿತ್ರವನ್ನು ಈ ಶ್ಲೋಕದಲ್ಲಿ ಚಿತ್ರಿಸಿದ್ದಾನೆ ಅದನ್ನು ಕ್ರಮವಾಗಿ ವಿಮರ್ಶಿಸುವ.

೧. ಅವಿಪಶ್ಚಿತ್.-(ಅ—ವಿ—ಪಶ್—ಚಿತ್ = ನ ವಿಶೇಷೇಣ ಪಶ್ಯನ್ ಚಿಂತಯತೇ)- ಬಿಡಿಬಿಡಿಸಿ ನೋಡಿ, ಚೆನ್ನಾಗಿ ಇಡಿಯಾಗಿ ವಿಚಾರಿಸುವವನೆ ತಿಳಿದವನು (ವಿಪಶ್ಚಿತ್). ಯಾವುದನ್ನೂ ಸರಿಯಾಗಿ ನೋಡದವನು, ನೋಡಿದುದನ್ನು ಚೆನ್ನಾಗಿ ಪರ್ಯಾಲೋಚಿಸದವನು ತಿಳಿಗೇಡಿ (ಅವಿಪಶ್ಚಿತ್) ಎಂಬ ಹೆಸರಿಗೆ ತಕ್ಕವನು. ಬರಿದೆ ನೋಡುವುದು ಪಶುಧರ್ಮ. ನೋಡಿ—ನಿಡಿದಾಗಿ ನೋಡಿ, ನೋಡಿದುದನ್ನು ಬಗೆದು ಭಾವಿಸುವುದು

**ಎಲೈ ಅರ್ಜುನನೆ! ವೇದಗಳನ್ನು ಕುರಿತು ವಾದಬೆಳೆಸುವುದರಲ್ಲಿ ಹಿಗ್ಗುಗೊಳ್ಳುವ, ಮತ್ತು ಇದರ (ವಾದವಿವಾದ) ಹೊರತು ಬೇರೆ ಏನು (ಕರ್ತವ್ಯವು) ಇಲ್ಲವೆಂಬುವ ತಿಳಿಗೇಡಿಗಳು ಸ್ವಾರ್ಥಿಗಳಾಗುತ್ತಾರೆ; ಸ್ವರ್ಗವೇ ಗುರಿಯೆಂದು ತಿಳಿಯುತ್ತಾರೆ; ಭೋಗ ಮತ್ತು ಐಶ್ವರ್ಯಗಳನ್ನು ಪಡೆಯಲು ಬೇಕಾಗುವ ಕ್ರಿಯೆಗಳ ವರ್ಣನೆಯು ಯಾತರಲ್ಲಿ ವಿಶೇಷವಾಗಿದೆಯೊ ಮತ್ತು ಯಾವುದರಲ್ಲಿ ಕೇವಲ ಮರಳಿ ಜನ್ಮಕ್ಕೆ ಕಾರಣವಾಗುವ ಫಲವೆ ಪ್ರಾಪ್ತವಾಗುವುದೊ ಅಂತಹ ಬಣ್ಣದ ಮಾತುಗಳನ್ನು ಆಡುವರು. ಅಂತಹ ಮಾತಿನಲ್ಲಿ ಮೈಮರೆತಂತಹ ಅವರು ಭೋಗೈಶ್ವರ್ಯಗಳಲ್ಲಿ ಆಸಕ್ತರಾಗುವರು. ಮತ್ತು ಅವರ ಬುದ್ಧಿಯು (ಎಂದೂ) ವ್ಯವಸಾಯಾತ್ಮಿಕವಾಗುವುದಿಲ್ಲ; ಸಮಾಧಿಯಲ್ಲಿ ಸ್ಥಿರವಾಗಿ ಉಳಿಯುವುದಿಲ್ಲ ‖ ೪೨–೪೪ ‖**

**ಭಾವಾರ್ಥ:—** ಬರಿದೆ ಮಾತಿನಮಲ್ಲಗಾಳಗದ ಹೋರಾಟ ನಡಸುವ ಕ್ರಿಯಾವಿಹೀನರಾದ ಸ್ವಾರ್ಥಿಗಳೂ ಭೋಗೈಶ್ವರ್ಯಗಳ ಲೋಭಿಗಳೂ ಆದ ತಿಳಿಗೇಡಿಗಳ ಮರುಳುಗೊಳಿಸುವ ಮಾತಿನಿಂದ ಯಾರು ಭೋಗೈಶ್ವರ್ಯಗಳಲ್ಲಿ ಮೈಮರೆಯುವರೊ ಅಂತಹರ ಬುದ್ಧಿಯು ಯಾವ ಸತ್ಕರ್ಮಗಳಲ್ಲಿಯೂ ಏಕಾಗ್ರವಾಗಿ ಸ್ಥಿರವಾಗುವುದಿಲ್ಲ. ಯಾವಾಗಲೂ ಚಂಚಲವಾಗಿರುತ್ತದೆ. ಆದುದರಿಂದ ಅವರಿಂದ ಯಾವ ಕೆಲಸವೂ ಕೊನೆಗಾಣುವುದಿಲ್ಲ. ‖ ೪೨–೪೪ ‖

---

ಮಾನವನ ಧರ್ಮ. ಇವರೆ ನಿಜವಾಗಿ ಮನುಷ್ಯರೆಂಬ ಹೆಸರಿಗೆ ತಕ್ಕವರು.

೨. **ವೇದವಾದರತಾಃ** = ವೇದಗಳ ಗೂಢಾರ್ಥವನ್ನು ಗಮನಿಸದೆ ಯಾವಾಗಲೂ ವೇದದ ಶಬ್ದಗಳ ಎಳೆದಾಟವನ್ನು ನಡಸಿ ಅದರ ವಾಗ್ವಾದ ನಡಸುವುದರಲ್ಲಿಯೆ ಕೃತಾರ್ಥತೆಯನ್ನು ಭಾವಿಸುವ ಜನಗಳು ಕೆಲರು ಉಂಟು. ಇವರು ತಮಗೆ ವೇದಗಳ ಆಳವು ತಿಳಿದಿದೆಯೆಂದು ಹೆಮ್ಮೆಪಡುವರಾದರೂ ಅದರಿಂದ ಇವರ ಕಿರುತಿಳಿವಿನ ಪ್ರದರ್ಶನವೆ ಆಗುತ್ತಿರುತ್ತದೆ.

೩. **ನ ಅನ್ಯತ್ ಅಸ್ತಿ, ಇತಿ ವಾದಿನಃ** = ಮೇಲೆ ಹೇಳಿದಂತಹ ಜನಗಳು ತಾವು ಆಡುವುದಕ್ಕಿಂತ ತಾವು ಅರಿತುದಕ್ಕಿಂತ ಇನ್ನು ಹೆಚ್ಚಿನದು ಏನೂ (ವೇದಗಳಲ್ಲಿ) ಇಲ್ಲ, ಎಂದು ನಂಬಿಕೊಂಡಿರುತ್ತಾರೆ ಬರಿ ವೇದವಾದದಿಂದಲೆ ತಮ್ಮ ಇತಿಕರ್ತವ್ಯವಾಯಿತೆಂದು ಗ್ರಹಿಸಿರುತ್ತಾರೆ. ಸೃಷ್ಟಿಯ ಆದಿ ಅಂತ್ಯಗಳ ಸಂಪೂರ್ಣ ಜ್ಞಾನವು ತಮಗಾಗಿದುವಂತೆ ಎಲ್ಲವನ್ನೂ ಸ್ವಲ್ಪವೂ ಬಿಡದೆ ಬಣ್ಣಿಸುವ ಸಾಹಸವನ್ನು ಮಾಡುತ್ತಾರೆ. ವೇದಮಂತ್ರಗಳನ್ನು ಹೇಳುವುದರಿಂದಲೆ ಎಲ್ಲವೂ ಆಯಿತೆಂದೂ ಇನ್ನಾವ ಕರ್ತವ್ಯವೂ ಉಳಿಯಲಿಲ್ಲವೆಂದೂ ಒಗೆಯುತ್ತಾರೆ. ಆದುದರಿಂದ ಇವರ ಅಜ್ಞಾನವು ಬಹಳ ಭಯಂಕರವಾದುದೆಂದು ತತ್ವಜ್ಞರ ಅಭಿಪ್ರಾಯವಿದೆ.

೪. **ಕಾಮಾತ್ಮಾನಃ** = ಕಾಮವೆಂದರೆ ವಿಷಯೋಪಭೋಗೇಚ್ಛೆಯೆ ಆತ್ಮವಾಗಿರುವವರು. ಇವರಿಗೆ ಬೆಡಗು ಬಿನ್ನಾಣ, ಊಟ-ಕೂಟಗಳ ವಿಲಾಸದ ಹೊರತು ಬೇರೊಂದೂ ನೆನಪಾಗುವುದೇ ಇಲ್ಲ. ಸ್ಥೂಲ ಶರೀರಕ್ಕೆ ಸಂಬಂಧಪಟ್ಟ— ಪಶುಧರ್ಮಗಳಲ್ಲಿಯೆ ಆಸರಾದವರು ಇವರು.

೫. **ಸ್ವರ್ಗಪರಾಃ** = ಸ್ವರ್ಗದ ಹುಚ್ಚೋ ಹುಚ್ಚು ಈ ಜನಗಳಿಗೆ! ಸ್ವರ್ಗ ಭೋಗಗಳನ್ನು ಪಡೆಯುವುದಕ್ಕಾಗಿ ಇವರು ಯಾವಾಗಲೂ ಇಲ್ಲಿ ಕಾಮ್ಯಕರ್ಮಾಸಕ್ತರಾಗಿರುತ್ತಾರೆ. ಅದರ ಹೊರತು ಇವರಿಗೆ ಇನ್ನೊಂದು ಯಾವುದೂ ಮಹತ್ವದ್ದೆನಿಸುವುದಿಲ್ಲ. ಇಹಲೋಕದೊಳಗಿನ **ರಾಜಕೀಯ, ಸಾಮಾಜಿಕ ಅಥವಾ ಕೌಟುಂಬಿಕ ಸುಸ್ಥಿತಿಯ ಸಲುವಾಗಿ ಅತ್ಯಂತ ಆವಶ್ಯಕವಾಗಿರುವ ಕರ್ತವ್ಯಗಳನ್ನೂ ಇವರು ಕಡೆಗಣಿಸುವರು!** ಆದರಿಂದ ರಾಷ್ಟ್ರದ ಹಾನಿಯನ್ನು ಮಾಡುವರಲ್ಲದೆ ಆತ್ಮಘಾತವನ್ನೂ ಮಾಡಿಕೊಳ್ಳುವರು. ಏಕೆಂದರೆ, ಐಹಿಕಜೀವನಕ್ಕೆ ಅವಶ್ಯಕವಾದ ಯಾವ ವ್ಯವಸಾಯಬುದ್ಧಿಯೂ ಇವರಲ್ಲಿ ಇಲ್ಲದಿರುವುದರಿಂದ ಇವರು ಕಷ್ಟಕ್ಕೆ ಈಡಾಗುವುದು ನಿಶ್ಚಿತವಾಗಿದೆ. ಆದುದರಿಂದ ಐಹಿಕಸೌಖ್ಯವೂ ಇವರ ಪಾಲಿಗೆ ಇಲ್ಲ. ಅಲ್ಲದೆ ಪರಲೋಕವೂ ನಿಶ್ಚಿತವಿಲ್ಲ. ಏನಾದರೂ ಅದು ಸತ್ತಮೇಲಿನ ಸ್ವರ್ಗ! ಸ್ವರ್ಗೀಯ ಅಪ್ಸರೆಯರ ಮೋಹವಾಗಲಿ, ಅಲ್ಲಿಯ ಅನ್ಯಭೋಗಗಳಾಗಲಿ ಇಲ್ಲಿಯ ವಿಲಾಸಗಳಂತೆಯೆ ಕೀಳ್ಮೆಗೆ ಒಯ್ಯುವುವು. ಆದುದರಿಂದ ಆತ್ಮೋನ್ನತಿಯೆ ಗುರಿಯಾಗಿವುಳ್ಳ ಮಾನವರು ಈ ದಾರಿಗೆ ಹೋಗದಿರುವುದೇ ಹಿತಕರ ಇದನ್ನು ಕುರಿತು ಯೋಗದರ್ಶನದ ಟೀಕಾಚಾರ್ಯರು ಬರೆಯುವುದೇನೆಂದರೆ;

**ಸ್ತ್ರಿಯೋಽನ್ನಪಾನಮೈಶ್ವರ್ಯಮಿತಿ ದೃಷ್ಟವಿಷಯೇ ವಿರಕ್ತಸ್ಯ ಸ್ವರ್ಗವೈದೇಹ್ಯಪ್ರಕೃತಿಲಯತ್ವಪ್ರಾಪ್ತಾವಾನುಶ್ರಾವಿಕ ವಿಷಯೇ ವಿತೃಷ್ಣಸ್ಯ ದಿವ್ಯಾದಿವ್ಯ ವಿಷಯಸಂಪ್ರಯೋಗೇಽಪಿ ಚಿತ್ತಸ್ಯ ವಿಷಯದೋಷದರ್ಶಿನಃ....ವಶೀಕರಣಸಂಜ್ಞಾ ವೈರಾಗ್ಯಮ್॥**
(೧-೧೫)

'ಹೆಣ್ಣು, ಹೊನ್ನು, ತಿಂಡಿತೀರ್ಥ ಇಂತಿವೆಲ್ಲವೂ ಕಣ್ಣಿಗೆಕಾಂಬ ಸಂಗತಿಗಳು. ಸ್ವರ್ಗಾದಿ ಉಪಭೋಗಗಳು ಕಾಣದ ಸಂಗತಿಗಳು. ಇವೆರಡರ ವಿಷಯಕ್ಕೂ ವಿರಕ್ತಿಯನ್ನು ತಾಳಬೇಕು. ಮತ್ತು ಇಂದ್ರಿಯನಿಗ್ರಹ ಮಾಡಬೇಕು; ಇದಕ್ಕೇ ವೈರಾಗ್ಯವೆಂದು ಹೆಸರು. ಮತ್ತು ವೈರಾಗ್ಯವಿಲ್ಲದೆ ಯಾವ ಯೋಗದಲ್ಲಿಯೂ ಸಿದ್ಧಿಯು ಇಲ್ಲ.

೬. **ಭೋಗೈಶ್ವರ್ಯ ಗತಿಂ ಪ್ರತಿ ಜನ್ಮ ಕರ್ಮಫಲಪ್ರದಾಂ॥ ಕ್ರಿಯಾವಿಶೇಷ ಬಹುಲಾಂ ಪುಷ್ಪಿತಾಂ ವಾಚಂ ಪ್ರವದಂತಿ=** ಭೋಗ ಮತ್ತು ಐಶ್ವರ್ಯಗಳನ್ನು ಪಡೆಯುವುದಕ್ಕಾಗಿ ಜನ್ಮಮರಣಾದಿ ಫಲಗಳನ್ನು ಕೊಡುವ ವಿವಿಧ ಕ್ರಿಯೆಗಳನ್ನು ಮಾಡುತ್ತಾರೆ. ಮತ್ತು ಆ ಕ್ರಿಯೆಗಳು ಸರಿಯೆಂದು ಸಿದ್ಧಮಾಡುವುದಕ್ಕಾಗಿ ಬಾಯಿಬಡಿವಳವನ್ನು ಉಪಯೋಗಿಸುತ್ತಾರೆ. ಮತ್ತು ಸಾಮಾನ್ಯ ಬುದ್ಧಿಯ ಜನಗಳನ್ನು ಮರುಳುಗೊಳಿಸಿ ತಮ್ಮ ಭೋಗವಾದವನ್ನು ಪ್ರಚಾರ ಮಾಡುತ್ತಾರೆ. ಇವರೆಲ್ಲರ ಗತಿ ಬಳ್ಳಿಗುರುಡರು ಕೂಡಿ ಹಳ್ಳದಲಿ ಬಿದ್ದಂತೆ ಆಗುವುದು.

೭. **ತಯಾ ಅಪಹೃತಚೇತಸಾಂ ಭೋಗೈಶ್ವರ್ಯಪ್ರಸಕ್ತಾನಾಂ ಬುದ್ಧಿಃ ವ್ಯವಸಾಯಾತ್ಮಿಕಾಃ ಸಮಾಧೌ ನ ವಿಧೀಯತೇ=** ಮೇಲೆ ವರ್ಣಿಸಿದಂತಹರ ಮಾತಿನ ಮಾಯಾಜಾಲಕ್ಕೆ ಮನಸೋತು ಅನೇಕಾನೇಕ ಜನಸಾಮಾನ್ಯರು ಭೋಗಪಂಥಿಗಳಾಗುವರು. ಭೋಗವಿಲಾಸಗಳಲ್ಲಿ ಆಸಕ್ತರಾಗುವುದರಿಂದ ರೋಗಗಳ ನೆಲೆಬೀಡಾಗುವರು. ಹಲವು ಬಗೆಯ ದುಃಖಗಳನ್ನು ಅನುಭವಿಸುವರು. ಇವರಲ್ಲಿ ಯೋಗ್ಯಾಯೋಗ್ಯ ವಿಚಾರ ಮಾಡುವ ವಿವೇಕಶಕ್ತಿಯು ಕಡಿಮೆಯಾಗುವುದು. ಯಾವುದೊಂದು ವ್ಯವಸಾಯದಲ್ಲಿ ಸ್ಥಿರವಾಗಿ ನಿಲ್ಲದೆ ಇವರ ಬುದ್ಧಿಯು ಚಂಚಲವಾಗುವುದು. ಅದರಿಂದ ಇವರು ಯಾವ ಕೆಲಸವನ್ನೂ ಕೊನೆಗಾಣಿಸಲು ಅಸಮರ್ಥರಾಗುತ್ತಾರೆ.

ಊಟ-ಕೂಟಗಳಲ್ಲಿ ಜನ್ಮಸಾರ್ಥಕವಾಯಿತೆಂದು ಭಗಿವವರ ಬಾಳು ನಾಯಿಬಾಳಿಗಿಂತ ಏನುತಾನೆ ಬೇರೆ? ಮಾನವರೆಂದೆನಿಸಿ ಮನಸಿನ ವಿಕಾಸವನ್ನೆ ದುರ್ಲಕ್ಷಿಸಿದರೆ ಅವರಿಗೆ ಮನುಷ್ಯರೆಂಬ ಹೆಸರು ಹೇಗೆ ತಾನೆ ಸಾರ್ಥಕವಾದೀತು?

'ವೇದವಾದರತಾಃ' ಎಂಬ ಮಾತಿನಿಂದ ಗೀತೆಯು ವೇದಗಳನ್ನು ಹೀಯಾಳಿಸಿರುವುದು, ಎಂದು ಕೆಲವರು ಗ್ರಹಿಸುತ್ತಾರೆ. ಆದರೆ ಗೀತೆಯಲ್ಲಿ ವೇದಗಳನ್ನು ಕುರಿತು ಆದರದ ಮಾತುಗಳೂ ಬಂದಿವೆ; ಆದುದರಿಂದ ಆ ಗ್ರಹಿಕೆ ಸರಿಯಲ್ಲವೆಂದು ಬೇರೆ ಹೇಳಬೇಕಾಗಿಲ್ಲ.

**ವೇದಾನಾಂ ಸಾಮವೇದೋಽಸ್ಮಿ॥** ೧೦. ೨೨
**ವೇದೈಶ್ಚ ಸರ್ವೈರಹಮೇವ ವೇದ್ಯಃ॥** ೧೫.೧೫
**ವೇದವಿದೇವ ಚ ಅಹಮ್॥** ೧೫. ೧೫
**(ಅಹಂ) ಋಕ್ ಸಾಮಯಜುರೇವಚ॥** ೯. ೧೭

'ವೇದಗಳಲ್ಲಿ ಸಾಮವೇದವುನಾನು. ಎಲ್ಲ ವೇದಗಳಿಂದ ತಿಳಿಯತಕ್ಕ ವಿಷಯವೆಂದರೆ ನಾನೇ (ಆತ್ಮ). ವೇದಗಳನ್ನು ಬಲ್ಲವನು ನಾನು. ಋಗ್ವೇದ, ಸಾಮವೇದ, ಯಜುರ್ವೇದಗಳು ನಾನೆ ಆಗಿದ್ದೇನೆ.'

ವೇದಗಳನ್ನು ಹಳಿಯುವುದೇ ಗೀತೆಯ ಅಭಿಪ್ರಾಯವಿದ್ದರೆ ಇಂತು ಅದರಲ್ಲಿ ವೇದಗಳ ಮೇಲ್ಮೆಯನ್ನು ವ್ಯಕ್ತಪಡಿಸುವ ಮಾತುಗಳು ಕಾಣಿಸಿಕೊಳ್ಳುವುದೇ ಸಾಧ್ಯವಿದ್ದಿಲ್ಲ. ಆದುದರಿಂದ '**ವೇದವಾದರತ**' ಎಂಬ ಪದಕ್ಕೆ ವೇದಗಳ ಕೇವಲ ಶಾಬ್ದಿಕ ಚರ್ಚೆಯಲ್ಲಿ ಮಗ್ನರಾದ ಎಂದೇ ಅರ್ಥಮಾಡುವುದು ಉಚಿತವಾಗಿದೆ. **ವೇದಗಳ ತಿರುಳನ್ನು ಲಕ್ಷಿಸದೆ ಬರಿಯ ಶಬ್ದಜಾಲದಲ್ಲಿಯೆ ಸಿಲುಕಿಕೊಂಡಿರುವ ಗಿಳಿಪಾಠಿನ ಪಂಡಿತರನ್ನು ಇಲ್ಲಿ ಹೀಯಾಳಿಸಿದ್ದಾಗಿದೆಯೆ ಹೊರತು ವೇದಗಳನ್ನೆ ತೆಗಳಿದೆಯೆಂದು ಭಾವಿಸಲಿಕ್ಕಾಗದು.** ಉಪನಿಷತ್ತಿನಲ್ಲಿಯೂ ಇದೇ ಬಗೆಯಾದ ವಿಚಾರವು ಕಂಡು ಬರುತ್ತದೆ. ಋಗ್ವೇದಾದಿ ನಾಲ್ಕು ವೇದಗಳಿಗೆ '**ಅಪರಾ**' ವಿದ್ಯೆಯೆಂದು ಹೇಳಿದೆ. ಮತ್ತು ಸತ್ಯಜ್ಞಾನಕ್ಕೆ '**ಪರಾ**' ವಿದ್ಯೆಯೆಂದು ಉಲ್ಲೇಖಿಸಿದ್ದಾಗಿದೆ. ಋಗ್ವೇದಾದಿ ವೇದಗಳಲ್ಲಿ ಹೇಳಿದ ತತ್ವಗಳನ್ನು ಆಚರಣೆಯಲ್ಲಿ ತರದೆ ಬರಿ ಶಾಬ್ದಿಕ ಜ್ಞಾನದಿಂದಲೆ ತೃಪ್ತಿಹೊಂದಿದರು '**ಅಪರಾ**' ವಿದ್ಯೆಯವರು. ವೇದಗಳೊಳಗಿನ ಸತ್ಯಜ್ಞಾನವನ್ನು ಅರಿತು ಅರಗಿಸಿಕೊಂಡವರು '**ಪರಾ**' ವಿದ್ಯೆಯನ್ನು ಪಡೆದವರು ಪಕ್ವಾನ್ನಗಳ ಹೆಸರುಗಳಿಂದಲೇ ತೃಪ್ತಿಪಟ್ಟಂತೆ '**ಅಪರಾ**' ವಿದ್ಯೆಯ ಸ್ಥಿತಿಯಿದೆ. ಇದು ಬರಿ ಶಬ್ದಪಾಂಡಿತ್ಯ ಅನುಭವಜನ್ಯವಾದ ಜ್ಞಾನವೆ ಸತ್ಯಜ್ಞಾನ. ಅದು '**ಪರಾ**' ಎಂದರೆ ಶ್ರೇಷ್ಠವಾದುದು; ಎಂದು ಉಪನಿಷತ್ತಿನಲ್ಲಿಯೂ

## (೧೮) ಎರಡರ ಇರುಕಿನಿಂದ ಪಾರಾಗುವುದು.

ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ।
ನಿರ್ದ್ವಂದ್ವೋ ನಿತ್ಯಸತ್ವಸ್ಥೋ ನಿರ್ಯೋಗಕ್ಷೇಮ ಆತ್ಮವಾನ್ ॥ ೪೫ ॥
ಯಾವಾನರ್ಥ ಉದಪಾನೇ ಸರ್ವತಃ ಸಂಪ್ಲುತೋದಕೇ ।
ತಾವಾನ್ ಸರ್ವೇಷು ವೇದೇಷು ಬ್ರಾಹ್ಮಣಸ್ಯ ವಿಜಾನತಃ ॥ ೪೬ ॥

**ಅನ್ವಯ :—** ಹೇ ಅರ್ಜುನ! ವೇದಾಃ ತ್ರೈಗುಣ್ಯವಿಷಯಾಃ। ತ್ವಂ ನಿತ್ಯಸತ್ವಸ್ಥಃ ನಿರ್ದ್ವಂದ್ವಃ ನಿರ್ಯೋಗಕ್ಷೇಮಃ ಆತ್ಮವಾನ್ ಭವ ॥ ೪೫ ॥ ಯಾವಾನ್ ಅರ್ಥಃ ಉದಪಾನೇ (ತಾವತ್) ಸರ್ವತಃ ಸಂಪ್ಲುತೋದಕೇ (ಭವತಿ। ತಥಾ ಯಾವಾನ್ ಅರ್ಥಃ) ಸರ್ವೇಷು ವೇದೇಷು ತಾವಾನ್ ವಿಜಾನತಃ ಬ್ರಾಹ್ಮಣಸ್ಯ (ಭವತಿ) ॥ ೪೬ ॥

ಎಲೈ ಅರ್ಜುನನೆ! ವೇದಗಳಲ್ಲಿ ತ್ರಿಗುಣಾತ್ಮಕ ವಿಷಯಗಳಿವೆ. ಆದುದರಿಂದ ನೀನು ಮೂರು ಗುಣಗಳನ್ನೂ ಮೀರಿ ನಿಲ್ಲು. ನಿತ್ಯ ಸತ್ವಗುಣದಲ್ಲಿ ಸ್ಥಿರನಾಗು. ದ್ವಂದ್ವಗಳಿಂದ (ಎರಡರ ಇರುಕಿನಿಂದ) ದೂರವಿರು. ವಸ್ತುಗಳನ್ನು ಪಡೆದು ಅವನ್ನು ಕಾಪಾಡುವ ಚಿಂತೆಯನ್ನು ಬಿಡು. ಮತ್ತು ಶ್ರೇಷ್ಠವಾದ ಆತ್ಮಶಕ್ತಿಯುಳ್ಳವನಾಗು. ॥ ೪೫ ॥ ಯಾವ ಕೆಲಸಗಳು ಸಣ್ಣ ಹೊಂಡದಿಂದ ಆಗುವವೋ ಅವೆಲ್ಲವು ತುಂಬಿ ಹೊರಸೂಸುವ ಹೆಗ್ಗೆರೆಯಿಂದ ಸಹಜವಾಗಿಯೆ ಆಗುವುವು. ಅದರಂತೆ ಯಾವುದು ಪೂರ್ಣವಾಗಿ ವೇದಗಳಲ್ಲಿರುವುದೊ ಅದೆಲ್ಲವೂ ಬ್ರಹ್ಮವನ್ನು ಬಲ್ಲ ಶ್ರೇಷ್ಠಜ್ಞಾನಿಗೆ ಸಹಜವಾಗಿ ಪ್ರಾಪ್ತವಾಗುವುದು. ॥ ೪೬ ॥

**ಭಾವಾರ್ಥ :—** ಸತ್ವ, ರಜ, ತಮ್ಮವೆಂಬುವು ಮೂರು ಗುಣಗಳು ವೇದಗಳಲ್ಲಿ ಈ ಮೂರರ ವರ್ಣನೆಯೂ ಇದೆ. ನೀನು ವೇದಗಳಲ್ಲಿರುವ ಈ ಜ್ಞಾನವನ್ನು ಪಡೆದು ತ್ರಿಗುಣಗಳನ್ನೂ ಮೀರಿ ನಿಲ್ಲು. ಸುಖ-ದುಃಖಾದಿಗಳ ಇರುಕಿನಲ್ಲಿ ಸಿಕ್ಕಬೇಡ. ಭೋಗ್ಯವಸ್ತುಗಳ ಸಂಗ್ರಹದ ಹುಚ್ಚು ಹಚ್ಚಿಕೊಳ್ಳಬೇಡ. ಶ್ರೇಷ್ಠವಾದ ಆತ್ಮಶಕ್ತಿಯನ್ನು ಸಂಪಾದಿಸು, ಒಂದೇ ಮಾತಿನಲ್ಲಿ ಹೇಳುವುದಾದರೆ, ನೀನು ಶ್ರೇಷ್ಠನಾಗು— ಮಹಾರಿತನಾಗು. ಸಣ್ಣ ಜಲಾಶಯದಿಂದ ಆಗುವ ಕೆಲಸವು ದೊಡ್ಡ ಜಲಧಿಯಿಂದ ಸಹಜವಾಗಿಯೆ ಆಗುವುವು. ವೇದಗಳ ಉಪದೇಶದಿಂದ ದೊರೆಯತಕ್ಕ ಲಾಭವು ಬ್ರಹ್ಮಜ್ಞಾನಿಯಾದ ಅನುಭಾವಿಗೆ ತನ್ನಿಂತಾನೆ ಸಿಗುವುದು. ಆದುದರಿಂದ ಸ್ವಲ್ಪದಿಂದ ಸಂತುಷ್ಟನಾಗದೆ ಶ್ರೇಷ್ಠವನ್ನೇ ಗುರಿಯಾಗಿಟ್ಟುಕೊಂಡು ಹೋಂದಬೇಕು. ॥ ೪೫-೪೬ ॥

ಸೂಚಿಸಿದ್ದಾಗಿದೆ. ವೇದಗಳಲ್ಲಿಯೂ ಒಂದೆಡೆಗೆ ಇದೇ ಭಾವವು ವ್ಯಕ್ತವಾಗಿದೆ.

**ಋಚೋ ಅಕ್ಷರೇ ಪರಮೇ ವ್ಯೋಮನ್ಯಸ್ಮಿನ್ ದೇವಾ ಅಧಿ ವಿಶ್ವೇ ನಿಷೇದುಃ। ಯಸ್ತನ್ನ ವೇದ ಕಿಮೃಚಾ ಕರಿಷ್ಯತಿ, ಯ ಇತ್ತದ್ವಿದುಸ್ತ ಇಮೇ ಸಮಾಸತೇ ॥** (ಋ. ೧. ೧೬೪. ೩೯)

**ಉತತ್ವಃ ಪಶ್ಯನ್ನ ದದರ್ಶ ವಾಚಮುತ ತ್ವಃ ಶೃಣ್ವನ್ನ ಶೃಣೋತ್ಯೇನಾಮ್। ಉತೋ ತ್ವಸ್ಮೈ ತನ್ವಂ ವಿ ಸಸ್ರೇ ಜಾಯೇವ ಪತ್ಯ ಉಶತೀ ಸುವಾಸಾಃ॥** (ಋ. ೧೦. ೭೧ ೪)

"ವೇದಮಂತ್ರಗಳ ಅಕ್ಷರಗಳಲ್ಲಿ ಎಲ್ಲ ದೇವತೆಗಳ ಶಕ್ತಿಯೂ ಹುದುಗಿಕೊಂಡಿದೆ. ಯಾವನು ಇದನ್ನು ಅನುಭವದಿಂದ ಅರಿಯುವುದಿಲ್ಲವೋ ಅವನಿಗೆ ವೇದಮಂತ್ರಗಳಿಂದ ಏನು ತಾನೆ ಲಾಭವಾದೀತು? ಆದರೆ ಯಾವನಿಗೆ ಆ ಸತ್ಯಜ್ಞಾನವು ಪ್ರಾಪ್ತವಾಗಿದೆಯೊ ಅವನೆ ಉಚ್ಚಸ್ಥಾನದಲ್ಲಿ ವಿರಾಜಿಸುವನು. ಕೆಲವರು ಗ್ರಂಥಗಳನ್ನು ಓದಿಕೊಂಡಿದ್ದರೂ ಅವರ ಪಾಡು ಓದಿಕೊಳ್ಳದವರಿಂದ ಬೇರೆಯಾಗಿರುವುದಿಲ್ಲ. ಕೆಲರು ಗ್ರಂಥಗಳನ್ನು ಶ್ರವಣಮಾಡಿಯೂ ಮಾಡದವರಿಗಿಂತ ಬೇರೆಯಾಗಿರುವುದಿಲ್ಲ. (ಆದರೆ ಯಾರು ಗ್ರಂಥಗಳನ್ನು ಓದಿ ಅಥವಾ ಕೇಳಿ ಅದರ ತಿರುಳನ್ನು ಅರಗಿಸಿಕೊಂಡಿರುವರೊ) ಅವರಿಗೆ ಆ ವಿದ್ಯೆಯಿಂದ, ಉತ್ತಮ ಪತಿವ್ರತೆಯಿಂದ ಸದ್ಗೃಹಸ್ಥನಿಗೆ ದೊರೆವ ಸುಖದಂತೆ, ಅದ್ಭುತ ಸುಖವು ಪ್ರಾಪ್ತವಾಗುತ್ತದೆ."

ಅರ್ಥದ ಮರ್ಮವನ್ನು ಅರಿಯದ ಗಿಳಿಯೋದನ್ನು ವೇದಗಳೂ ಖಂಡಿಸಿವೆ. ವೇದಗಳ ಬರಿ ಶಬ್ದಜ್ಞಾನವು ನಿರುಪಯುಕ್ತವೆಂದು ವೇದಗಳೇ ಹೇಳಿರುವುವು. ಗೀತೆಯಲ್ಲಿಯೂ ಇದೇ ವಿಚಾರವು ವ್ಯಕ್ತವಾಗಿದೆ, ಆದುದರಿಂದ

'ವೇದವಾದರತ'ವೆಂಬ ಮಾತಿಗೆ, ಅದು ವೇದಗಳ ನಿಂದೆಯೆಂಬ ಅಪಾರ್ಥವನ್ನು ಕಲ್ಪಿಸುವುದು ಯುಕ್ತವಲ್ಲ. 'ಶಾಬ್ದಾವಡಂಬರವು ಡೊಂಬವಿದ್ಯೆ. ಆ ಗೋಜಿಗೆ ಹೋಗದೆ ತಿರುಳನ್ನು ತಿಳಿದು ಕರ್ತವ್ಯತತ್ಪರನಾಗು,' ಎಂದು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದ್ದಾನೆ. ಉನ್ನತಿಯನ್ನು ಪಡೆಯಬಿಚ್ಛಿಸುವವರೆಲ್ಲ ಶಬ್ದಜಾಲದಿಂದ— ಮಾತಿನ ಮಲ್ಲಗಾಳಗದಿಂದ ದೂರವಿರುವುದು ಲೇಸು. ಅದು ಬಂಜೆಯ ಸಂಸಾರ. ಅಭಿವೃದ್ಧಿಯಿಲ್ಲ. ತಿರುಳನ್ನರಿತು ತನ್ನ ಕರ್ತವ್ಯವನ್ನು ತೊಡಗುವುದೇ ನಿಜವಾದ ಏಳ್ಗೆಯ ದಾರಿಯೆಂದು ಶ್ರೀಕೃಷ್ಣನು ಉಪದೇಶಿಸಿದ್ದಾನೆ.

(೪೫-೪೬) ಭೋಗವಾದದ ಸೆಳವಿನೊಳಗಿಂದ ಪಾರಾಗಲು, ಶ್ರೀಕೃಷ್ಣನು ಇಲ್ಲಿ ಉಪದೇಶಿಸುತ್ತ ದಂದ್ವಾತೀತನಾಗು, ತ್ರಿಗುಣಾತೀತನಾಗು ಎಂದು ಹೇಳಿದ್ದಾನೆ. ದ್ವಂದ್ವಗಳ ಎಂದರೆ ಎರಡರ ತೊಡರು ಯಾವುದು? ತ್ರಿಗುಣಗಳ ಸ್ವರೂಪವೇನು ಎಂಬುದು ಮೊದಲು ಗೊತ್ತಾಗದೆ ಶ್ರೀಕೃಷ್ಣನ ಉಪದೇಶದ ಮರ್ಮವು ತಿಳಿಯಲಾರದು. ಗೀತೆಯಲ್ಲಿ ತ್ರಿಗುಣಗಳ ವರ್ಣನೆಯು ಮುಂದೆ ೧೭ ಹಾಗೂ ೧೮ ನೆಯ ಅಧ್ಯಾಯಗಳಲ್ಲಿ ಸವಿಸ್ತೃತವಾಗಿದೆ. ಅದರ ಸಾರಾಂಶವನ್ನು ಇಲ್ಲಿ ಸ್ವಲ್ಪ ಕೊಟ್ಟಿದೆ:

| | | |
|---|---|---|
| ಸತ್ವ | ರಜ | ತಮ |
| ದೇವಪೂಜೆ | ರಾಕ್ಷಸಪೂಜೆ | ಪ್ರೇತ ಪೂಜೆ |
| ಸ್ನಿಗ್ಧ ಭೋಜನ | ರುಕ್ಷ ಭೋಜನ | ಅಪವಿತ್ರ ಭೋಜನ |
| ಕರ್ತವ್ಯತತ್ಪರತೆ | ಡಾಂಭಿಕತನ | ಶ್ರದ್ಧಾವಿಹೀನತ |
| ದೇಶಕಾಲೋಚಿತ | ಪ್ರತ್ಯುಪಕಾರೇಚ್ಛೆ | ದೇಶಕಾಲವನ್ನುಲೆಕ್ಕಿ |
| ದಾನ | ಯಿಂದ ಮಾಡಿದ ದಾನ | ಸದೆ ಮಾಡಿದ ದಾನ |
| ಅವಿಭಕ್ತಭಾವ | ಪ್ರಥಗ್ಭಾವ | ತುಚ್ಛಭಾವ |
| ನಿಷ್ಕಾಮ ಕರ್ಮ | ಸಕಾಮ ಕರ್ಮ | ಮೋಹಮಯಕರ್ಮ |
| ನಿರ್ವಿಕಾರಿಮನಸು | ವಿಕಾರಿ ಮನಸು | ಮೋಹಮಯ ಮನಸು |
| ಅಹಿಂಸಕ | ಹಿಂಸಕ | ಮೃಗಳ್ನ-ಜೀವಗಳ್ನ |
| ಯಥಾರ್ಥಬುದ್ಧಿ | ಅಯಥಾರ್ಥ-ಬುದ್ಧಿ | ವಿಪರೀತ ಬುದ್ಧಿ |
| ಉಚ್ಚಗತಿ | ಮಧ್ಯಮಸ್ಥಿತಿ | ಅಧೋಗತಿ |

ಇದಕ್ಕೂ ಹೆಚ್ಚಿನ ವಿವರಣೆಯು ಮುಂದೆ ಬರಲಿದೆ. ವೇದಗಳಲ್ಲಿಯೂ ಸತ್ವ ರಜತಮೋಗುಣಗಳ ವಿಚಾರವು ಬಂದಿದೆ. ಬ್ರಹ್ಮಣಸ್ಪತಿ, ಬೃಹಸ್ಪತಿ, ಬ್ರಹ್ಮ, ಆತ್ಮ, ಮೊದಲಾದುವು ಸತ್ವಗುಣದ ದೇವತೆಗಳು. ಇಂದ್ರ, ಮರುತ, ರುದ್ರ ಮೊದಲಾದುವು ರಜೋಗುಣದ ಮೂರ್ತಿಗಳು. ವೃತ್ರ, ಅಸುರಾದಿಗಳು ತಮೋಗುಣಿಗಳು. ಈ ದೇವತೆಗಳ ಮಂತ್ರಗಳನ್ನು ನೋಡಿದರೆ, ವೇದಗಳಲ್ಲಿ ತ್ರಿಗುಣಗಳ ವರ್ಣನೆಯು ಹೇಗೆ ಬಂದಿದೆಯೆಂಬುದು ಗೊತ್ತಾಗುವುದು. ಮಾದರಿಗಾಗಿ ತಮೋಗುಣವಿಚಾರವನ್ನೆ ತಕ್ಕೊಳ್ಳಬಹುದು.

ದೀರ್ಘಂ ತಮ ಆಶಯದಿಂದ್ರಶತ್ರು
( ಋ. ೧.೩೨.೧೦)
ಅಹೀನಾಮಾನ್ಯಾಯಿನಃ ಮಿನಾತಿ
ಪ್ರೋತವ್ಯಯಾಃ ॥ ( ಋ. ೭.೩..೪ )

'ಇಂದ್ರನ ಹಗೆಯಾದ ವೃತ್ರನೆಂಬ ಅಸುರನು ದೀರ್ಘತಮಸ್ಸನ್ನು ಎಂದರೆ ಕಗ್ಗತ್ತಲೆಯನ್ನು ಹರಡಿದ್ದಾನೆ. ಈ ಮೋಸಗಾರನಾದ ಹಗೆಯ ಮಾಟಗಾರಿಕೆ ಮಾಯಾಜಾಲವನ್ನು ಇಂದ್ರನು ದೂರಪಡಿಸಿದನು' ತಮೋಗುಣಿಯಾದ ಅಸುರರು ನಾಶ ಹೊಂದುವರು; ಅಧೋಗತಿಗಿಳಿಯುವರೆಂದು ವೇದದಲ್ಲಿ ವರ್ಣಿಸಿದೆ. ಹೀಗೆ ಯಾವ ಗುಣವು ನಾಶಕ್ಕೆ ಕಾರಣವಾಗುವುದೆಂದು ವರ್ಣಿಸಲ್ಪಟ್ಟಿದೆಯೊ ಅದನ್ನು ಯಾರು ತಾನೆ ಸ್ವೀಕರಿಸುವರು? ಈ ಬಗೆಯಾಗಿ ವೇದವು, ಲೋಕಕ್ಕೆ ತಮೋಗುಣದಿಂದ ದೂರವಿರಲು, ಆ ಗುಣವನ್ನು ನಾಶಗೊಳಿಸಲು ಉಪದೇಶಿಸುತ್ತದೆ. ತಮೋಗುಣವನ್ನು ಬಿಟ್ಟು ಮುಂದೆ ಮನುಷ್ಯನು ರಜೋಗುಣಿಯಾಗುವುದುಂಟು. ರಜೋಗುಣವು ಭೋಗಪ್ರವೃತ್ತಿಯದು. ಇಂದ್ರನು ಇದಕ್ಕೆ ಆದರ್ಶಮೂರ್ತಿ-ವೇದದಲ್ಲಿ ಇಂದ್ರನ ವರ್ಣನೆಯು ಚೆನ್ನಾಗಿಯೆ ಬಂದಿದೆ.

ಇಂದ್ರಸ್ಯ ನು ವೀರ್ಯಾಣಿ ಪ್ರ ವೋಚಂ ಯಾನಿ ಚಕಾರ ಪ್ರಥಮಾನಿ ವಜ್ರೀ। ಅಹನ್ನಹಿಮನ್ವಪಸ್ತತರ್ದ ಪ್ರ ವಕ್ಷಣಾ ಅಭಿನತ್ಪರ್ವತಾನಾಮ್ ॥೧॥ ಅಹನ್ನಹಿಂ ಪರ್ವತೇ ಶಿಶ್ರಿಯಾಣಂ ತ್ವಷ್ಟಾಸ್ಮೈ ವಜ್ರಂ ಸ್ವರ್ಯಂ ತತಕ್ಷ ॥೨॥ (ಋಕ್. ೧.೩೨)

'ವಜ್ರಧಾರಿಯಾದ ಇಂದ್ರನ ಗಂಡುಗಲಿತನವನ್ನು ನಾನು ವರ್ಣಿಸುತ್ತೇನೆ. ಅವನು ಹಗೆಗಳನ್ನು ಕೊಂದನು, ಬೆಟ್ಟಗಳ ಮೇಲಿನ ಹಗೆಗಳ ಕೋಟೆಗಳನ್ನು ಹಾಳು ಮಾಡಿದನು. ಬೆಟ್ಟಗಳಲ್ಲಿ ಆಶ್ರಯವನ್ನು ಹೊಂದಿದ ಹಗೆಗಳನ್ನು ಸಂಹರಿಸಿದನು. ತ್ವಷ್ಟಾರನು ಅವನಿಗೆ ಹಗೆಗಳನ್ನು ಸವರಿಬಿಡುವ ಉತ್ತಮ ವಜ್ರವನ್ನು ಸಿದ್ಧಪಡಿಸಿ ಕೊಟ್ಟನು. ಇಂದ್ರನ ಐಶ್ವರ್ಯ, ಪ್ರಭಾವ, ಪರಾಕ್ರಮ, ರಾಜ್ಯವೈಭವ, ಹಗೆಗಳನ್ನು ಹೊಡೆದೋಡಿಸುವ ತೋಳ್ಬಲ ಇವೆ ಮೊದಲು ಮಿಗಿಲಾದ ಗುಣಗಳು ಮಾನವನ ಮನವನ್ನು ಸೆಳೆಯುವುವು. ಮಾನವನಿಗೆ

ಇಂದ್ರನೆ ಆದರ್ಶನೆಂದೆನಿಸುವನು. ರಜೋಗುಣಿಯಾಗಿ ತುಂಬ ಉದ್ಯೋಗಶೀಲನಾಗುವನು. ವೈಭವವನ್ನು ಸಂಪಾದಿಸುವನು. ಭೋಗಾಸಕ್ತನಾಗುವನು. ಭೋಗ ವಿಲಾಸಗಳು ರೋಗಗಳ ಉಗಮಸ್ಥಾನ. ಇಂದ್ರನಿಗೆ ಮೈತುಂಬ ತೂತುಗಳಾದುವೆಂಬ ಕತೆಯು ಆತನ ಭೋಗವಿಲಾಸಗಳ ಅನಿಷ್ಟಫಲ ಸೂಚಕವಾಗಿಯೆ ಇದೆ. ಈ ಬಗೆಯ ಜನರ ಸಂಪದಭಿವೃದ್ಧಿಯೊಡನೆ ಅವರ ಚಿಂತೆ ಯೋಚನೆಗಳೂ ಬೆಳೆಯುವುವು. ಇಂದ್ರನ ಇಂದ್ರ ಪದವಿಯೂ ಸ್ಥಿರವಲ್ಲ. ಅದಕ್ಕೂ ಕೊನೆಯುಂಟು. ರೋಗ, ಚಿಂತೆ, ಪ್ರತಿಸ್ಪರ್ಧಿಗಳಾದ ವೈರಿಗಳು ಇವೆಲ್ಲ ಚಕ್ರದಲ್ಲಿ ತೊಳಲಿ ನುಗ್ಗುನುಸಿಯಾಗಬೇಕಾಗುವುದು. ಇಂದ್ರಪದವಿಯನ್ನು ಕಳಕೊಳ್ಳಬೇಕಾಗಿ ಕೊನೆಗೆ ವಿರಕ್ತಿಯು ತಲೆದೋರುವುದು. ಸತ್ವಗುಣದ ಕಡೆಗೆ ಮನಸು ಒಲಿಯುವುದು. ಆಗ ಅವನ ಮನಸು ಈ ಕೆಳಗಣ ವೈದಿಕ ಮಂತ್ರಗಳ ಕಡೆಗೆ ಹೊರಳುವುದು :

**ಅಕಾಮೋ ಧೀರೋ ಅಮೃತಃ ಸ್ವಯಂಭೂ ರಸೇನ ತೃಪ್ತೋ ನ ಕುತಶ್ಚನೋನಃ । ತಮೇವ ವಿದ್ವಾನ್ನ ಬಿಭಾಯ ಮೃತ್ಯೋರಾತ್ಮಾನಂ ಧೀರಮಜರಂ ಯುವಾನಮ್ ॥**  — ಅಥರ್ವ ೧೦·೮·೪೪

'ಕಾಮರಹಿತವೂ ತಿಳಿವಿನ ಬಲವುಳ್ಳುದೂ ಸಾವಿಲ್ಲದುದೂ ಸ್ವಯಂಭುವೂ ರಸಪ್ರಾಪ್ತಿಯಿಂದ ತಣಿದುದೂ ಕೊರತೆಯಿಲ್ಲದುದೂ— ಎಲ್ಲ ಬಗೆಯಾಗಿ ಪರಿಪೂರ್ಣವಾಗಿರುವ– ಅಜರ– ಅಮರ– ತರುಣ ಆತ್ಮವನ್ನು ತಿಳಿದು ಅನುಭಾವಿಯಾದವನು ಸಾವಿನ ಹೆದರಿಕೆಯಿಂದ ಮುಕ್ತನಾಗುವನು.

ಇವೆ ಮೇರೆಗೆ ಶುದ್ಧ ಆತ್ಮ, ಬ್ರಹ್ಮ, ಜ್ಯೇಷ್ಠಬ್ರಹ್ಮ, ಸ್ಥಾಣು ಇತ್ಯಾದಿ ದೇವತೆಗಳ ಮಂತ್ರಗಳುಂಟು. ಅವುಗಳ ಬಲದಿಂದ ಅಂತಃಕರಣದಲ್ಲಿ ಸತ್ವಗುಣದ ಬೆಳಕುಬೀಳುವುದು. ಆಗ ಆತನಿಗೆ ರಜೋಗುಣ, ತಮೋಗುಣಗಳ ಕುಂದುಕೊರತೆಗಳು ಹೋದು ಆತನು ನಿತ್ಯ ಸತ್ವಗುಣದಲ್ಲಿ ಸ್ಥಿರವಾಗಿ ಉಳಿಯಲು ಪ್ರಯತ್ನ-ಪಡುವನು.

ಇಂತಿದು ತ್ರಿಗುಣಾತ್ಮಕ ವಿಷಯಗಳನ್ನು ವಿವೇಚಿ-ಸುವ ವೇದಗಳ ಅಧ್ಯಯನದ ಫಲವಿದೆ. ವೇದಾಧ್ಯಯನ-ದಿಂದ ಮನುಷ್ಯನು ತಮೋಗುಣವನ್ನು ತ್ಯಜಿಸಿ ರಜೋ-ಗುಣದೊಳಗಿಂದ ಹಾಯ್ದು ಸತ್ವಸ್ಥನಾಗಿ ಕೊನೆಗೆ ಪರಿಪೂರ್ಣಸ್ಥಿತಿಯನ್ನು ಹೊಂದುವುದಕ್ಕೆ ಪ್ರಯತ್ನಿ-ಸುವನು.

ಆದುದರಿಂದ ಗೀತೆಯಲ್ಲಿ ಹೀಗೆ ಹೇಳಿದೆ: ವೇದಗಳು ತ್ರಿಗುಣಾತ್ಮಕ ವಿಷಯಗಳನ್ನು ವರ್ಣಿಸುವುವು (ತ್ರೈಗುಣ್ಯ ವಿಷಯಾ ವೇದಾಃ); ಆದರೆ ಅವುಗಳ ಅಧ್ಯಯನದಿಂದ ಮನುಷ್ಯನು ತ್ರಿಗುಣಾತೀತನಾಗಲು ಯತ್ನಿಸಬೇಕು (ನಿಸ್ತ್ರೈಗುಣ್ಯೋ ಭವ). ಆದರೆ ಕೆಲವರು, ಈ ವಾಕ್ಯಗಳಿಂದ ಗೀತೆಯು ವೇದಗಳನ್ನು ಜರೆದಿರುವುದೆಂದು ಹೇಳುವರು. ಇದು ಸರಿಯಲ್ಲವೆಂದು ಹಿಂದೆ ಒಂದೆಡೆಯಲ್ಲಿ ಗೀತಾಶ್ಲೋಕದ (೪೩–೪೪) ಟಿಪ್ಪಣಿಯಲ್ಲಿ ವಿವರಿಸಲಾಗಿದೆ.

ವೇದಗಳ ಅಧ್ಯಯನದಿಂದ ಮಾನವನಿಗೆ ತ್ರಿಗುಣಾ-ತ್ಮಕ ವಿಷಯಗಳ ಸ್ಥಿತಿಗತಿಗಳು ತಿಳಿಯುವುವು. ಆದರಿಂದ ಅವನ ಏಳ್ಗೆಗೆ ಸಹಾಯವಾಗುವುದು. ತಮಸ್ಸಿನಿಂದ ರಜಸ್ಸಿಗೆ, ರಜದಿಂದ ಸತ್ವಕ್ಕೆ ಅವನ ಉನ್ನತಿಯಾಗುವುದು. ಬಳಿಕ ಪೂರ್ಣಸ್ಥಿತಿಯ ಅವಸ್ಥೆಯನ್ನು ಪಡೆಯಲು ಯತ್ನಿಸುವನೆಂಬುದನ್ನು ಗೀತೆಯು ಸೂಚಿಸುತ್ತಿದೆ. '**ಊರ್ಧ್ವಂ ಗಚ್ಛಂತಿ ಸತ್ವಸ್ಥಾಃ**' (ಸತ್ವಗುಣಿಗಳು ಉಚ್ಚಸ್ಥಿತಿಯನ್ನೈದುವರು) ಎಂದು ಗೀತೆಯಲ್ಲಿಯೆ ಹೇಳಿದೆ.

ಗುಣಾತೀತ ಸ್ಥಿತಿಯ ವರ್ಣನೆಯು ಗೀತೆಯಲ್ಲಿಯೆ ಇದೆ. ಅರ್ಜುನನು ಶ್ರೀಕೃಷ್ಣನಿಗೆ ಕೇಳುತ್ತಾನೆ: 'ಮಹಾಪ್ರಭುವೆ, ಈ ತ್ರಿಗುಣಾತೀತರ ಲಕ್ಷಣಗಳೇನು? ಅವರ ನಡೆವಳಿ ಎಂತಹದು? ಅವರು ಈ ಸ್ಥಿತಿಗೆ ಒಂದು ಮುಟ್ಟುದುದು ಹೇಗೆ? ಎಂಬುದನ್ನು ವಿವರಿಸು.' (೧೪·೨೧)

ಶ್ರೀಕೃಷ್ಣನು ಹೇಳಿದುದೇನೆಂದರೆ, 'ಎಲಾ ಅರ್ಜುನನೆ! ಗುಣಾತೀತನು ಪ್ರಕಾಶ, ಪ್ರವೃತ್ತಿ ಮತ್ತು ಮೋಹ ಇವು ಬಂದಾಗ ಆತನು ಸುಖಿಸುವುದಿಲ್ಲ ; ಇವು ಬಾರ-ದಿರಲು ಅವುಗಳನ್ನು ಬಯಸುವುದೂ ಇಲ್ಲ. ಉದಾಸೀನ-ನಂತೆ ಸ್ಥಿರವಾಗಿ ಇರುವನು. ತ್ರಿಗುಣಗಳು ಆತನನ್ನು ಅಲುಗಿಸಲಾರವು. ಗುಣಗಳೆ ತಮ್ಮ ಕೆಲಸ ನಡಸಿವೆ, ಎಂಬ ಮನವರಿಕೆಯಾಗಿ ಆತನು ಸ್ಥಿರವಾಗಿರುವನು ; ಚಂಚಲನಾಗುವುದಿಲ್ಲ. ಆತನಿಗೆ ಸುಖದುಃಖಗಳೆರಡೂ ಸಮ; ಹೊನ್ನುಮಣ್ಣಿನಲ್ಲಿ ಭೇದವಿಲ್ಲ. ಹೊಗಳಿಕೆ ಅಥವಾ ತೆಗಳಿಕೆ ಎರಡೂ ಅಷ್ಟೇ: ಬಂದುದು ಬರಲಿ, ಹರಿಯ ದಯೆಯೊಂದಿರಲಿ ಎನ್ನುವನು. ಮಾನಾಪ-ಮಾನಗಳನ್ನು ಎಣಿಸುವುದಿಲ್ಲ. ಹಗೆ ಮತ್ತು ಗೆಳೆಯರಲ್ಲಿ ಸಮಭಾವವನ್ನಿಡುವನು. ಅವನು ತಾನಾಗಿಯೆ ಯಾವ ಕೆಲಸಕ್ಕೂ ಕೈಯಿಕ್ಕುವುದಿಲ್ಲ !

ಗುಣಾತೀತನಿಗೆ 'ನಿಸ್ತ್ರೈಗುಣ್ಯ'ನೆಂದೂ ಕರೆದಿದೆ. ಆತನು ಸತ್ವ-ರಜ, ತಮಗಳನ್ನು ಮೀರಿದವನೆಂದು

ಸಾಮಾನ್ಯಾರ್ಥವಿದ್ದರೂ ಅವನು ಸತ್ವಗುಣದಲ್ಲಿ ಸ್ಥಿರವಾಗಿ ನೆಲಸಿರುತ್ತಾನೆಂಬಲ್ಲಿ ಸಂದೇಹವಿಲ್ಲ. ಏಕೆಂದರೆ ಗುಣಾತೀತನೂ, ನಿಸ್ತ್ರೈಗುಣ್ಯನೂ ಆದವನು 'ನಿತ್ಯಸತ್ವಸ್ಥನು' (ನಿತ್ಯ-ಸತ್ವ-ಸ್ಥಃ) ಆಗಿರುವನೆಂದು ಗೀತೆಯಲ್ಲಿಯೇ ಹೇಳಿದೆ. ಆದುದರಿಂದ ನಿತ್ಯ-ಸತ್ವಶಾಲಿಯೇ ಗುಣತೀತನೆಂಬುದನ್ನು ಮರೆಯಲಾಗದು. ಶ್ರೀ. ಶಂಕರಾಚಾರ್ಯರೂ 'ನಿಸ್ತ್ರೈಗುಣ್ಯ'ದ ಅರ್ಥವನ್ನು 'ನಿಷ್ಕಾಮೋಭವ' (ನಿಷ್ಕಾಮನಾಗು) ಎಂದು ಮಾಡಿದ್ದಾರೆ. ಮತ್ತು 'ನಿತ್ಯಸತ್ವಸ್ಥ'ದ ಅರ್ಥವನ್ನು 'ಸದಾ ಸತ್ವಗುಣಾಶ್ರಿತೋ ಭವ' (ಯಾವಾಗಲೂ ಸತ್ವಗುಣದ ಆಶ್ರಯವನ್ನೆ ಹೊಂದು) ಎಂದು ಹೇಳಿದ್ದಾರೆ.

**ತ್ರೈಗುಣ್ಯವಿಷಯಾ ವೇದಾ ನಿಸ್ತ್ರೈಗುಣ್ಯೋ ಭವಾರ್ಜುನ ! ನಿತ್ಯಸತ್ವಸ್ಥಃ |** —೨. ೪೫.

'ಮೂರುಗುಣಗಳ ವಿಚಾರವು ವೇದಗಳಲ್ಲಿದೆ. ನೀನು ಆ ಮೂರನ್ನೂ ಮೀರಿ ನಿಲ್ಲು; ಎಂದರೆ ಸತ್ವಗುಣಿಯಾಗು;' ಎಂದೇ ಗೀತೆಯ ಅಭಿಪ್ರಾಯವಿದೆ. 'ನಿಸ್ತ್ರೈಗುಣ್ಯ' ಶಬ್ದದಿಂದ ಸತ್ವಗುಣವನ್ನೂ ಬಿಟ್ಟು ಬಿಡಬೇಕೆಂದು ಯಾರಾದರು ಅರ್ಥವನ್ನು ಕಲ್ಪಿಸಿದರೆ ಅದು ಕೇವಲ ಅಪಾರ್ಥವೆಂದು ಬೇರೆ ಹೇಳಬೇಕಾಗಿಲ್ಲ. ಕೇವಲ ಸತ್ವಗುಣಶಾಲಿಯಾದವನೇ 'ಗುಣಾತೀತ'ನೆಂದು ತಿಳಿಯಬೇಕು.

'ನಿರ್ದ್ವಂದ್ವ'ನಾಗು; ಎಂದರೆ ಸುಖದುಃಖಾದಿಗಳಿಂದ ಬಿಡುಗಡೆ ಹೊಂದು, ಎಂದು ಹೇಳುವಲ್ಲಿಯೂ ನೀನು ಸತ್ವಗುಣಿಯಾಗು ಎಂಬ ಅಭಿಪ್ರಾಯವೇ ಇದೆ. '**ಸಮದುಃಖಸುಖಃ, ಸಮಲೋಷ್ಟಾಶ್ಮಕಾಂಚನಃ, ತುಲ್ಯಪ್ರಿಯಾಪ್ರಿಯಃ, ತುಲ್ಯನಿಂದಾತ್ಮಸಂಸ್ತುತಿಃ, ಮಾನಾಪಮಾನಯೋಸ್ತುಲ್ಯಃ, ಮಿತ್ರಾರಿಪಕ್ಷಯೋಃ ತುಲ್ಯಃ**' (೧೪. ೨೪-೨೫) ಎಂದು ಗೀತೆಯಲ್ಲಿ ಹೇಳಿದೆ. ಸುಖ-ದುಃಖ, ಹೊನ್ನು-ಮಣ್ಣು, ಒಳಿತು-ಕೆಡಕು, ಹೊಗಳಿಕೆ-ತೆಗಳಿಕೆ, ಮಾನ-ಅಪಮಾನ, ಹಗೆ-ಕೆಳೆಯ ಇವೆಲ್ಲವನ್ನೂ ಯಾವನು ಸಮವಾಗಿ ಕಾಣಬಲ್ಲನೊ ಅವನೇ ಗುಣಾತೀತನು; ಆತನೇ 'ನಿರ್ದ್ವಂದ್ವನು.' ಆದುದರಿಂದ ನಿರ್ದ್ವಂದ್ವ, ದ್ವಂದ್ವಾತೀತ, ಗುಣಾತೀತ, ನಿಸ್ತ್ರೈಗುಣ್ಯ ಇವೆಲ್ಲವೂ ಒಂದರ್ಥದ ಪರ್ಯಾಯ ಪದಗಳು ದ್ವಂದ್ವಗಳ ಆಚೆಗೆ ಹೋಗುವ ಹದವನ್ನು ಕುರಿತು ಇದೆ ಅಧ್ಯಾಯದ ೧೪-೧೫ ನೆಯ ಶ್ಲೋಕಗಳ ಟಿಪ್ಪಣಿಯಲ್ಲಿ ವಿಶದವಾಗಿ ಹೇಳಿದ್ದಾಗಿದೆ. ಅದನ್ನು ಓದುಗರು ಪರ್ಯಾಲೋಚಿಸಬಹುದು.

'**ನಿರ್ಯೋಗಕ್ಷೇಮ**'ನು ಎಂದರೆ ಯೋಗಕ್ಷೇಮದ ಜಂಜಡವಿಲ್ಲದವನು. ಪಡೆಯುವುದು ಎಂದರೆ ಯೋಗ ಕಾಯುವುದು; ಎಂದರೆ ಕ್ಷೇಮ. ಪ್ರತಿಯೊಬ್ಬ ಸಂಸಾರಿಗೂ ಯೋಗಕ್ಷೇಮದ ಚಿಂತೆಯು ತಪ್ಪಿದ್ದಲ್ಲ' ಇಲ್ಲದುದನ್ನು ಪಡೆವ ಪಡೆವ ಚಿಂತೆ; ಪಡೆದುದನ್ನು ಕಾವ ಚಿಂತೆ. ಈ ಪಡೆವ ಮತ್ತು ಕಾವ ವ್ಯಾಪಾರದಲ್ಲಿ ಲಾಭಹಾನಿ, ಸುಖದುಃಖಗಳು ಬಂದು ಒದಗುವುವು. ಇವುಗಳ ಇರುಕಿನಿಂದ ಪಾರಾಗಬೇಕಾಗಿದ್ದರೆ ಯೋಗಕ್ಷೇಮದ ಗಸಣಿ ತಪ್ಪಬೇಕು. ಆದುದರಿಂದ 'ನಿರ್ಯೋಗಕ್ಷೇಮಿಯು ದ್ವಂದ್ವಾತೀತನು, ಗುಣಾತೀತನು, ಎಂದರೆ ಸತ್ವಸ್ಥನು ಆಗಿರುತ್ತಾನೆ.

ಈ ಶ್ಲೋಕದಲ್ಲಿ ಕೊನೆಗೆ ಆತ್ಮವಂತನಾಗಲು (ಆತ್ಮವಾನ್) ಉಪದೇಶಿಸಿದೆ. ಪ್ರಭಾವಶಾಲಿಯಾದ ಆತ್ಮಶಕ್ತಿಯಾತನೆ ಆತ್ಮವಂತನು. ಪ್ರತಿಯೊಂದು ಪ್ರಾಣಿಯು ಆತ್ಮವಂತವಾಗಿದೆ; ಆತ್ಮವಿಲ್ಲದ ಪ್ರಾಣಿಯೆ ಇಲ್ಲ. ಆದರೆ ಆತ್ಮವಂತರೆಂದರೆ ಎಲ್ಲರೂ ಅಲ್ಲ. ಆತ್ಮಶಕ್ತಿಗಳು ಚೆನ್ನಾಗಿ ಜಾಗೃತವಾದವನೆ ಆತ್ಮವಂತನು. ಜನಸಾಮಾನ್ಯರಲ್ಲಿ ಅವು ಸುಪ್ತವಾಗಿರುತ್ತವೆ. ಸ್ವಲ್ಪ ಇನ್ನೊಂದು ಬಗೆಯಿಂದ ನೋಡಿದರೆ ಇದೇ ಶ್ಲೋಕದಲ್ಲಿ ಈ ಆತ್ಮಬಲವನ್ನು ಹೊಂದತಕ್ಕ ಉಪಾಯಗಳನ್ನೂ ಸೂಚಿಸಿದ್ದು ಕಂಡುಬರುವುದು

"ಯಾವನು ವೇದಗಳಲ್ಲಿ ಮೂರುಗುಣಗಳ ವರ್ಣನೆಯನ್ನು ಓದಿ (ತ್ರೈಗುಣ್ಯವಿಷಯಾಃ ವೇದಾಃ), ಗುಣಾತೀತನಾಗುವನೊ (ನಿಸ್ತ್ರೈಗುಣ್ಯಃ), ಮತ್ತು ಯಾವಾಗಲೂ ಸತ್ವಸ್ಥನಾಗಿರುವನೊ (ನಿತ್ಯಸತ್ವಸ್ಥಃ), ಪಡೆವ ಮತ್ತು ಕಾವ ಹಂಬಲವನ್ನು ತೊರೆಯುವನೊ (ನಿರ್ಯೋಗಃಕ್ಷೇಮಃ), ಆತನು ಶ್ರೇಷ್ಠವಾದ ಆತ್ಮಶಕ್ತಿಯುಳ್ಳವನಾಗುತ್ತಾನೆ."

ಆತ್ಮಶಕ್ತಿಯ ಮಹಿಮೆಯನ್ನು ಮುಂದಿನ ಶ್ಲೋಕದಲ್ಲಿ ಹೇಳಿದೆ. "ಸಣ್ಣಹೊಂಡದಿಂದ ಆಗುವ ಕೆಲಸವು ಹೆಗ್ಗೆರೆಯಿಂದ ಸಹಜವಾಗಿ ಆಗಬಲ್ಲುದು, ವೇದಾಧ್ಯಯನದಿಂದ ಕೈಗೂಡತಕ್ಕುದು ಶ್ರೇಷ್ಠ ಬ್ರಹ್ಮಜ್ಞಾನಿಗೆ ಸಹಜವಾಗಿಯೆ ಸಾಧ್ಯವಾಗುವುದು." ಇದು ಆತ್ಮವಂತನ ಮಹಿಮೆ. 'ವಿಜಾನತಃ ಬ್ರಾಹ್ಮಣಃ,' ಎಂದರೆ ವಿಜ್ಞಾನಿಯಾದ ಬ್ರಾಹ್ಮಣನು ಎಂಬ ಪದಗಳಿವೆ, ಅಲ್ಲಿ, ಬ್ರಹ್ಮವನ್ನು ಅರಿತವನೇ ಬ್ರಾಹ್ಮಣನು. ಆತನೇ ಆತ್ಮವಂತನು. ಈ ಶ್ಲೋಕದಿಂದಲೂ ವೇದಗಳ ಗೌಣತ್ವವೇ ವ್ಯಕ್ತವಾಗುತ್ತದೆಂದು ಕೆಲರ ಭಾವನೆಯಾಗಿದೆ! ಪ್ರಾಥಮಿಕ ಶಾಲೆಯಿಂದ ವಿದ್ಯಾನಿಲಯದ ವರೆಗೂ ಕಲಿಸುವ ಎಲ್ಲ ವಿಷಯಗಳೂ ಕೊನೆಯ ಒಂದು

## (೧೯) ಕರ್ಮಯೋಗ.

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು ಕದಾಚನ ।**
**ಮಾ ಕರ್ಮಫಲಹೇತುರ್ಭೂರ್ಮಾ ತೇ ಸಂಗೋಽಸ್ತ್ವಕರ್ಮಣಿ ॥ ೪೭ ॥**

---

**ಅನ್ವಯ:—** ತೇ ಅಧಿಕಾರಃ ಕರ್ಮಣಿ ಏವ; ಕದಾಚನ ಫಲೇಷು ಮಾ। ಕರ್ಮಫಲಹೇತುಃ ಮಾ ಭೂಃ, ತೇ ಸಂಗಃ ಚ ಅಕರ್ಮಣಿ ಮಾ ಅಸ್ತು ॥ ೪೭ ॥

**ಕೆಲಸಮಾಡುವ ಅಧಿಕಾರವು ಮಾತ್ರ ನಿನ್ನದು. ಫಲದ ಮೇಲೆ ಎಂದೂ ಇಲ್ಲ. ಕರ್ಮಫಲದ ಅಪೇಕ್ಷೆಯನ್ನು ಹಿಡಿಯಬೇಡ. ಮತ್ತು ಕೆಲಸಮಾಡದಿರುವಕಡೆಗೆ ನಿನ್ನ ಒಲವು ಆಗದೆ ಇರಲಿ ॥ ೪೭ ॥**

**ಭಾವಾರ್ಥ:—** ಮಾನವನಿಗೆ ಕೆಲಸಮಾಡುವ ಅಧಿಕಾರವೊಂದೇ ಇದೆ. ಕರ್ಮದ ಫಲದ ಮೇಲೆ ಆತನಿಗೆ ಹಕ್ಕು ಇಲ್ಲ. ಕೆಲಸದ ಫಲದ ಆಸೆಯನ್ನೆ ಯಾವಾಗಲೂ ಇಟ್ಟುಕೊಂಡಿರಕೂಡದು. ಮತ್ತು ಕೆಲಸಗಳನ್ನೆ ಬಿಟ್ಟುಕೊಡುವ ಪ್ರವೃತ್ತಿಯನ್ನೂ ತೊಡೆದುಹಾಕಬೇಕು ॥ ೪೭ ॥

---

ಹಿರಿಯ ಪರೀಕ್ಷೆಯು ಪಾಸಾಗುವುದರಿಂದಲೂ ದೊರೆಯುತ್ತವೆ; ಎಂದು ಹೇಳುವಲ್ಲಿ ಪ್ರಾಥಮಿಕ ಶಿಕ್ಷಣದ ಅವಹೇಲನೆಯುಂಟೆಂದು ಗ್ರಹಿಸಲಾದೀತೆ? ಕೊನೆಯ ಪರೀಕ್ಷೆಯಲ್ಲಿ ಉತ್ತೀರ್ಣವಾಗುವುದಕ್ಕೆ ಅದರ ಆವಶ್ಯಕತೆಯಿದ್ದೇ ಇದೆಯಲ್ಲವೆ? ಅದರಂತೆ ಎಲ್ಲ ವೇದಗಳ ಸರಿಯಾದ ಅಧ್ಯಯನ ಮಾಡಿದವರಿಗೆ ಬ್ರಹ್ಮಜ್ಞಾನವು ಪ್ರಾಪ್ತವಾಗುವುದು. ಅವರು ಬ್ರಹ್ಮಪರಾಯಣರಾಗುವರು. ಅನುಭಾವಿಗಳಾಗುವರು. ಆದುದರಿಂದ ಅನುಭಾವಿಗಳಿಗೆ ವೇದಗಳ ಸಂಪೂರ್ಣ ಅಧ್ಯಯನದ ಫಲವು ಸಹಜವಾಗಿ ದೊರೆಯುತ್ತದೆ, ಎಂದು ಇಲ್ಲಿ ಹೇಳಿದ್ದಾಗಿದೆ. ಆದುದರಿಂದ ಇದು ವೇದಗಳ ಪ್ರಶಂಸೆಯೆ ಆಗಿದೆಯೆಂದು ಹೇಳಲೇಬೇಕಾಗುತ್ತದೆ. ಉಪನಿಷತ್ತಿನಲ್ಲಿ ಒಂದೆಡೆಗೆ ಹೀಗೆಯೆ ಹೇಳಿದೆ:

**ಸರ್ವೇ ವೇದಾ ಯತ್ಪದಮಾಮನಂತಿ**
**ತಪಾಂಸಿ ಸರ್ವಾಣಿ ಚ ಯದ್ವದಂತಿ। —ಕಠ ೨.೧೫**

"ಎಲ್ಲ ವೇದಗಳು ಯಾವ ಸ್ಥಿತಿಯ ವರ್ಣನೆಯನ್ನು ಮಾಡುವುವೊ ಮತ್ತು ಎಲ್ಲ ತಪಸ್ಸನ್ನು ಏತಕ್ಕಾಗಿ ಮಾಡುವುದುಂಟೊ, ಅದು ಶ್ರೇಷ್ಠಸ್ಥಿತಿಯಾಗಿದೆ." ಇಂತು ಉಪನಿಷತ್ತಿನಲ್ಲೂ ವೇದಗಳ ಮೇಲ್ಮೆಯನ್ನೇ ವರ್ಣಿಸಿದ್ದುಂಟು. ಆದುದರಿಂದ ಉಪನಿಷತ್ತುಗಳ ಸಾರವೆನಿಸಿದ ಭಗವದ್ಗೀತೆಯಲ್ಲಿಯೂ ವೇದಗಳ ನಿಂದೆಯಿರುವುದು ಅಸಂಭವನೀಯವಾಗಿದೆ. ಬರಿಯ ಶಾಬ್ದಿಕಜ್ಞಾನವು (ವೇದವಾದವು) ನಿರರ್ಥಕವೆಂದು ಹೇಳಿದ್ದು ಸರಿಯಾಗಿದೆ. ಏಕೆಂದರೆ ಅನುಭವಜನ್ಯ ಜ್ಞಾನದ ಮುಂದೆ ಬರಿಯ ಶಾಬ್ದಿಕಜ್ಞಾನದ ಬೆಲೆಯೇನು? ಹೀಗೆ ಆತ್ಮಾನುಭೂತಿಯ ಮೇಲ್ಮೆಯನ್ನು ತಿಳಿಸಿ ಶ್ರೀಕೃಷ್ಣನು ಮುಂದೆ ಕರ್ಮಮಾರ್ಗದ ಉಪದೇಶಮಾಡಿದ್ದಾನೆ.

(೪೭) ಪ್ರತಿಯೊಬ್ಬನೂ ಕೆಲಸಗಳನ್ನು ಮಾಡುವುದಕ್ಕೆ ಮಾತ್ರ ಬಾಧ್ಯಸ್ಥನಾಗಿದ್ದಾನೆ. ಅದೇಕೆ? ಕೆಲಸಮಾಡುವುದೆ ಮಾನವನ ಹುಟ್ಟುಗುಣವಾಗಿದೆ. ಆದುದರಿಂದಲೆ ಗೀತೆಯಲ್ಲಿ ಹೀಗೆ ಹೇಳಿದೆ:

**ನ ಹಿ ಕಶ್ಚಿತ್ ಕ್ಷಣಮಪಿ ಜಾತು**
**ತಿಷ್ಠತ್ಯಕರ್ಮಕೃತ್ ।**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ**
**ಪ್ರಕೃತಿಜೈರ್ಗುಣೈಃ ॥ (೩.೫)**
**ಶರೀರ ಯಾತ್ರಾಽಪಿ ಚ ತೇ ನ ಪ್ರಸಿದ್ಧ್ಯೇದ**
**ಕರ್ಮಣಃ ॥ (೩.೮)**

"ಒಂದರಗಳಿಗೆಯಾಗಲಿ ಕೆಲಸವಿಲ್ಲದೆ ಯಾರೂ ಕುಳ್ಳಿರಲಾರರು. ಪ್ರಕೃತಿಯಿಂದುಂಟಾದ ಗುಣಗಳ ಎಳೆತದಿಂದ ಪ್ರತಿಯೊಬ್ಬರೂ ಕೆಲಸದಲ್ಲಿ ತೊಡಗಿರುತ್ತಾರೆ. ನಿನ್ನ ದೇಹವ್ಯಾಪಾರಗಳಾದರೂ ಕೆಲಸಮಾಡದೆ ನಡೆಯಲಾರವು" ಹೀಗೆ ಮಾನವನಿಗೆ ಕೆಲಸವು ಬೆಂಬತ್ತಿದೆ. ಕೆಲಸ ನಿಲ್ಲಿಸಿ ಬದುಕಲಾರನು. ಕರ್ಮವೇ ಜೀವನದ ಆಧಾರ. ಉಸಿರಾಟವೂ ಒಂದು ಕೆಲಸ. ಕೆಲಸವೇ ಬೇಡವೆಂದು ಉಸಿರಾಟ ನಿಲ್ಲಿಸಿದರೆ! ಶರೀರಯಾತ್ರೆಯೆ ನಿಲ್ಲುವುದು! ಇಚ್ಛೆಯಿರಲಿ ಇಲ್ಲದಿರಲಿ ಮನುಷ್ಯನಿಂದ ಕೆಲಸಗಳು ಎಡೆಬಿಡದೆ ನಡೆದಿರುತ್ತವೆ. ಊಟ-ಕೂಟವು ಪ್ರಾಣಿಮಾತ್ರಗಳ ಸ್ವಭಾವಧರ್ಮವಾಗಿದೆ. ಉಳಿದ ಪ್ರಾಣಿಗಳ ಕೆಲಸದ ಕ್ಷೇತ್ರವು ಇಷ್ಟೆ ಆಗಿದ್ದರೂ ಮಾನವನದು ಹಲವು ವಿಧವಾಗಿದೆ. ವೈಯಕ್ತಿಕ, ಕೌಟುಂಬಿಕ,

ರಾಜಕೀಯ, ಸಾಮಾಜಿಕ, ಧಾರ್ಮಿಕ ಮುಂತಾದ ಬಗೆಬಗೆಯ ಕಾರ್ಯಕ್ಷೇತ್ರಗಳಲ್ಲಿ ಮನುಷ್ಯನಿಗೆ ಹಲವು ಕರ್ತವ್ಯಗಳಿರುತ್ತವೆ. ಅವನ್ನು ಅವನು ನೆರವೇರಿಸಲೇ ಬೇಕು. ತಪ್ಪಿಸತಕ್ಕದ್ದಲ್ಲ. ಇದನ್ನು ಕುರಿತು ವೇದವು ಹೀಗೆ ವಿಧಿಸುತ್ತದೆ.

**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್**
**ಶತಂ ಸಮಾಃ ।**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ ಕರ್ಮ**
**ಲಿಪ್ಯತೇ ನರೇ ॥**
—ವಾ. ಸಂ. ಯಜು. ೪೦-೨

"ಇಲ್ಲಿ ಇಹಲೋಕದಲ್ಲಿ ಒಳ್ಳೆ ಕೆಲಸಗಳನ್ನು ನೆರವೇರಿಸುತ್ತಲೆ ಮಾನವನು ನೂರು ವರುಷ ಬಾಳುವ ಹಂಬಲವುಳ್ಳವನಾಗಬೇಕು. ಇದೊಂದೇ ಏಳ್ಗೆಯ ದಾರಿ. ಬೇರೊಂದು ಗತಿಯಿಲ್ಲ. ಒಳ್ಳೆ ಕೆಲಸಗಳಿಂದ ಆತನಿಗೆ ಕುಂದು ಬಾರದು" ಇದು ವೇದಗಳ ಆದೇಶ, ಕಟ್ಟಪ್ಪಣೆ. ಈ ದೃಷ್ಟಿಯಿಂದ ಮಾನವರ ಉಪಾಸ್ಯ ದೈವತವು 'ವಿಶ್ವಕರ್ಮ'ನೆನಿಸಿದ ಪರಮಾತ್ಮನೇ ಆಗಿದ್ದಾನೆ. ಆತನು ವಿಶ್ವಕಾರ್ಯದಲ್ಲಿ ಮಗ್ನನಾಗಿದ್ದಾನೆ. ಅಥವಾ ವಿಶ್ವ ಎಂದರೆ ಎಲ್ಲ ಕೆಲಸಗಳೂ ಆತನವೇ. ಭಗವಂತನನ್ನು ಅನುಸರಿಸುವುದೆ ಭಕ್ತನ ಆದ್ಯ ಕರ್ತವ್ಯ. ಆದುದರಿಂದ ಪ್ರತಿಯೊಬ್ಬರೂ ತಾವು ತಮ್ಮ ಅಧಿಕಾರಕ್ಷೇತ್ರದಲ್ಲಿ 'ವಿಶ್ವಕರ್ಮ'ರು ಆಗಬೇಕು. ಕೆಲಸಕ್ಕೆ ಹಿಂಜರಿಯಲಾಗದು. ಮೈಗಳ್ಳತನವೆಂದರೇ ಆತ್ಮಘಾತ ಕಾಯಕವೇ ಕೈಲಾಸ. ವೇದಗಳಲ್ಲಿ ಹೇಳಿದ್ದೂ ಇದನ್ನೇ.

**ಯೋ ಬಧ್ಯಮಾನಮನು ದಿಧ್ಯಾನಾ ಅನ್ವೈಕ್ಷಂತ**
**ಮನಸಾ ಚಕ್ಷುಷಾ ಚ । ಅಗ್ನಿಷ್ಟಾನಗ್ರೇ ಪ್ರಮುಮೋಕ್ತು ದೇವೋ ವಿಶ್ವಕರ್ಮಾ ಪ್ರಜಯಾ**
**ಸಂರರಾಣಃ ॥** —ಅಥರ್ವ ೨-೩೪-೩

"ತೇಜಸ್ವಿಗಳಾದ ಮಹಾತ್ಮರು ಬದ್ಧಜೀವಿಗಳತ್ತ ತಮ್ಮ ಮನಸು ಮತ್ತು ಕಣ್ಣುಗಳಿಂದ ಕಕ್ಕುಲತೆಯಿಂದ ನೋಡುತ್ತಾರೆ. ಪ್ರಜೆಗಳೊಡನೆ ಸಮರಸವಾಗುವ ವಿಶ್ವಕರ್ಮ (ದೇವ)ನು. ಎಲ್ಲರಿಂದಲೂ ಮೊದಲು ಅವರಿಗೆ (ತೇಜಸ್ವಿ ಪರೋಪಕಾರಿಗಳಿಗೆ) ಮೋಕ್ಷಸುಖವನ್ನು ಕೊಡುವನು." ಕಾಯಕಷ್ಟಮಾಡುವ ಕೆಲಸಗಾರರಿಗೆ ಕೈಲಾಸದ ಅಧಿಕಾರವು. ಉಳಿದ ಮೈಗಳ್ಳರು ಬರಿ ಮಣ್ಣುಪಾಲಾಗತಕ್ಕವರೆಂದು ಮೇಲಿನ ವೈದಿಕ ಋಚೆಯಿಂದ ಸ್ಪಷ್ಟವಾಗುತ್ತಿದೆ. ವಿಶ್ವಹಿತವೆ ವಿಶ್ವಕರ್ಮ (ದೇವ)ನ ಕಾರ್ಯ. ಆದುದರಿಂದ ತನ್ನಂತೆ ಲೋಕಕಲ್ಯಾಣದ ಕೆಲಸಗಳಲ್ಲಿ ತಮ್ಮ ತನುಮನಧನಗಳನ್ನು ತೊಡಗಿಸಿದವರೇ ತನ್ನ ಭಕ್ತರೆಂದು ಪರಮಾತ್ಮನು ಎಣಿಸುವನು. ಮತ್ತು ಅಂತಹರಿಗೆ ಸದ್ಗತಿಯನ್ನೀಯುವನೆಂಬುದು ಸ್ಪಷ್ಟವಿದೆ.

**ಶತಕ್ರತು ಇಂದ್ರನು.**

ಮಾನವ ಶರೀರದೊಳಗಿನ ಒಂದೊಂದು ಇಂದ್ರಿಯದಲ್ಲಿಯೂ ಇಂದ್ರನು ತನ್ನ ಶಕ್ತಿಯ ಅಂಶವನ್ನಿಟ್ಟಿದ್ದಾನೆ. ಅಥವಾ ಒಂದೊಂದು ಇಂದ್ರಿಯದ ಮುಖಾಂತರವಾಗಿ ತನ್ನ ಶಕ್ತಿಯನ್ನು ಪ್ರಕಟಿಸುತ್ತಿರುತ್ತಾನೆ. ಇಂದ್ರನಿಗೆ 'ಶತಕ್ರತು' ಎಂದು ಹೆಸರಿದೆ. 'ಶತಕ್ರತು' ಎಂದರೆ ನೂರಾರು ಕರ್ಮಗಳನ್ನು ಮಾಡುವವನು ಎಂಬರ್ಥ. ಮನುಷ್ಯನ ಜೀವಾತ್ಮನು ಶರೀರದಲ್ಲಿ ಕೇಂದ್ರಸ್ಥನಾಗಿದ್ದುಕೊಂಡು ಕೆಲಸಗಳನ್ನು ಎಸಗುತ್ತಾನೆ. ಅವನು ಸ್ವಭಾವತಃ ನೂರಾರು ಕೆಲಸಗಳಲ್ಲಿ ತೊಡಗುತ್ತಾನೆ. 'ವಿಶ್ವಕರ್ಮ'ನಾಗುವುದೆಂದರೂ ಇದೇ. ಆದುದರಿಂದಲೆ ವೇದದಲ್ಲಿ ಹೇಳಿರುವುದೇನೆಂದರೆ:

**ಯಃ ಪ್ರಥಮಃ ಕರ್ಮಕೃತ್ಯಾಯ ಜಜ್ಞೇ ।**
—ಅಥರ್ವ ೪-೨೪-೬

'ಪ್ರಥಮಸ್ಥಾನದಲ್ಲಿದ್ದುಕೊಂಡು ಕೆಲಸಮಾಡುವುದಕ್ಕಾಗಿಯೆ ಆತ್ಮನು ಪ್ರಕಟನಾಗಿದ್ದಾನೆ.'

**ಕರ್ಮ ಕೃಣ್ವಂತು ಮಾನುಷಾಃ ।**
—ಅಥರ್ವ ೬-೨೩-೩

'ಮಾನವರು ಕರ್ಮಮಾಡುವವರಾಗಲಿ.' ಇದು ಅವರ ಹುಟ್ಟುಗುಣವು. ಕೆಲಸಮಾಡದೆ ಬದುಕಲಾರರು. ಈ ಉದ್ದೇಶದಿಂದಲೇ ಗೀತೆಯಲ್ಲಿ ಹೀಗೆ ಹೇಳಿದೆ:

**ಕರ್ಮಣಿ ಏವ ತೇ ಅಧಿಕಾರಃ ।** (೨-೪೭)

**'ಎಲೈ ಮಾನವನೆ! ಕೆಲಸಮಾಡುವುದೇ ನಿನ್ನ ಧರ್ಮವು.'** ಲೋಕಗಳನ್ನು ಬೆಳಗುವುದು ಸೂರ್ಯನ ಧರ್ಮವು. ಆದರೆ—

**ಮಾ ಫಲೇಷು ಕದಾಚನ ।** (೨-೪೭)

'ಫಲದ ಮೇಲೆ ನಿನ್ನ ಅಧಿಕಾರವಿಲ್ಲ. ಕೈಕೊಂಡ ಕೆಲಸದ ಫಲವನ್ನು ತಾನೇ ಉಪಭೋಗಿಸಬೇಕೆಂಬ ಆಸೆಯು ಅಧಾರ್ಮಿಕ. ಗಿಡದ ಕೆಲಸ ಹೂ, ಹಣ್ಣುಗಳನ್ನೀಯುವುದು. ಸೂರ್ಯನ ಕೆಲಸ ಬೆಳಕುಕೊಡುವುದು. ಆದರೆ ಅವೆಲ್ಲವೂ ಹೆರವರಿಗಾಗಿ; ತನಗಾಗಿಯೆ ಅಲ್ಲ

ಈ ಶ್ಲೋಕದಲ್ಲಿ 'ಕರ್ಮಯೋಗ'ದ ಸಾರಭೂತವಾದ ನಾಲ್ಕು ಸೂತ್ರಗಳಿವೆ. ಇವು ಅತ್ಯಂತ ಮಹತ್ವದುವು. ಅವನ್ನು ಯಾವಾಗಲೂ ನೆನಪಿಟ್ಟು ಕೆಲಸಗಳನ್ನು ನೆರವೇರಿಸುವವರಿಗೆ ಹಾನಿಯೆಂಬುದೆ ಇಲ್ಲ.

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ ।**
**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ ಯೋಗ ಉಚ್ಯತೇ ॥ ೪೮ ॥**

---

**ಅನ್ವಯ:—** ಹೇ ಧನಂಜಯ! ಸಂಗಂ ತ್ಯಕ್ತ್ವಾ, ಸಿದ್ಧ್ಯಸಿದ್ಧ್ಯೋಃ ಸಮಃ ಭೂತ್ವಾ, ಯೋಗಸ್ಥಃ ಕರ್ಮಾಣಿ ಕುರು। ಸಮತ್ವಂ ಯೋಗಃ ಉಚ್ಯತೇ ॥ ೪೮ ॥

**ಎಲೈ, ಅರ್ಜುನನೇ! ಆಸಕ್ತಿರಹಿತನಾಗಿ, ಸಿದ್ಧಿ ಮತ್ತು ಅಸಿದ್ಧಿಗಳೆರಡನ್ನೂ ಸಮವೆಂದು ತಿಳಿದು, ಯೋಗಯುಕ್ತನಾಗಿ ಕೆಲಸಮಾಡು. ಸಮತ್ವವೇ ಯೋಗವೆನಿಸುತ್ತದೆ. ॥ ೪೮ ॥**

**ಭಾವಾರ್ಥ:—** ಫಲಾಶೆಯನ್ನು ತೊರೆದು, ಗೊನೆಯು (ಸಿದ್ಧಿಯು) ದೊರೆತರೂ ಸರಿಯೆ, ಬಿಟ್ಟರೂ ಸರಿಯೆ ಎಂದು ಮನಸಿನ ತೂಕವನ್ನು ಸರಿಯಾಗಿಟ್ಟುಕೊಂಡು—ಎಂದರೇ ಯೋಗಯುಕ್ತನಾಗಿ ಮನುಷ್ಯನು ಎಲ್ಲ ಕೆಲಸಗಳನ್ನೂ ಮಾಡುತ್ತಿರಬೇಕು. ಚಿತ್ತವೃತ್ತಿಯನ್ನು ಸಮವಾಗಿಟ್ಟುಕೊಳ್ಳುವ ಯುಕ್ತಿಗೇ ಯೋಗವೆಂಬ ಹೆಸರು. ॥ ೪೮ ॥

---

೧. ಕೆಲಸಮಾಡುವುದೆ ಮನುಷ್ಯನ ಧರ್ಮವು. ಆತನು ಈ ಧರ್ಮವನ್ನು ಮೀರಿ ಎಂದೂ ನಡೆಯಲಾಗದು.

೨. ಫಲವನ್ನು ಆಶಿಸಿ ಕೆಲಸಮಾಡಕೂಡದು.

೩. ಫಲಾಧಿಕಾರವು ಮಾನವನಿಗಿಲ್ಲ.

೪. ಕೆಲಸಮಾಡದಿರುವುದು ಅಧರ್ಮ.

ಪೃಥ್ವಿಯು ಜನರನ್ನು ಧಾರಣಮಾಡಿದೆ. ಸೂರ್ಯನು ಬೆಳಗಲು ತಿರುಗುತ್ತಾನೆ ಗಾಳಿ ಜೀವದಾನಮಾಡಲು ಹರಿಯುತ್ತದೆ. ಚಂದಿರನು ಲೋಕವನ್ನು ಆಲ್ಹಾದಗೊಳಿಸಲು ಮೂಡುತ್ತಾನೆ. ಇಂತಿವೆಲ್ಲ ದೇವತೆಗಳು ಲೋಕಕಲ್ಯಾಣಕ್ಕಾಗಿಯೆ ಕರ್ಮನಿರತರಾಗಿದ್ದಾರೆ; ಇವರೆಲ್ಲ ತಮ್ಮ ಕೆಲಸಗಳನ್ನು ಬಿಟ್ಟುಬಿಟ್ಟರೆ ಲೋಕದ ಗತಿಯೇನಾಗಬೇಕು? ಬೆಳಗದೆ ಇದ್ದರೆ ಸೂರ್ಯನ ಸೂರ್ಯತ್ವವೆಲ್ಲಿ? ಹೊತ್ತದಿದ್ದರೆ ಬೆಂಕಿಯ ಬೆಂಕೆತನವೆಲ್ಲಿ? ಸ್ವಕರ್ಮನಿರತರಾಗುವುದೇ ಧರ್ಮಪಾಲನೆ. ಧರ್ಮವೇ ಜಗತ್ತಿನ ಮೂಲಾಧಾರ. ಲೋಕಸ್ಥಿತಿಯ ಅಡಿಗಲ್ಲು. ಧಾರಣಮಾಡುವುದೆಂದು ಅದಕ್ಕೆ ಧರ್ಮವೆನ್ನುವರು. ಕೆಲಸಮಾಡುವುದು ಮಾನವನ ಧರ್ಮವು. ಅದನ್ನು ಆತನು ಎಸಗಲೇಬೇಕು. ಅದರಿಂದಲೆ ಅವನ ಏಸಕ (ಹೊಳವು) ಲೋಕದಲ್ಲಿ.

ತನಗೇ ಫಲವು ದೊರೆಯಬೇಕೆಂದು ಕರ್ಮಮಾಡುವುದಾದರೆ ಲೋಕದ ಗತಿಯೇನಾದೀತು! ಉಂಡ ಅನ್ನವನ್ನು ಹೊಟ್ಟೆಯು ಉಳಿದ ಇಂದ್ರಿಯಗಳಿಗೂ, ಅರಗಿಸಿ ಕಳಿಸದಿದ್ದರೆ ಬದುಕುವುದಕ್ಕಾದೀತೆ? ಶರೀರದಲ್ಲಿ ಕಾಣುವ ಈ ನಿಯಮವೇ ಸಮಾಜ-ರಾಷ್ಟ್ರ-ವಿಶ್ವಗಳಲ್ಲಿಯೂ ಅನ್ವಯಿಸುತ್ತದೆ. ತಾನು ಒಂದು ಮಹಾಪರೋಪಕಾರವನ್ನು ಮಾಡುತ್ತಿರುವನೆಂಬ ಹೆಮ್ಮೆಯಿಂದ ಕೆಲಸಮಾಡುವುದೂ ಅನುಚಿತವು. ಕೇವಲ ಕರ್ತವ್ಯವೆಂದು ತನ್ನ ಕೆಲಸಗಳನ್ನು ಕಾಲಕಾಲಕ್ಕೆ ಮಾಡುತ್ತಿರುವುದೆ ಸರಿಯಾದ ಮಾರ್ಗ. ಇದುವೆ ನಿಜವಾದ ಧರ್ಮಪರಿಪಾಲನೆ.

ಕರ್ಮಯೋಗದ ನಾಲ್ಕು ಸೂತ್ರಗಳಲ್ಲಿ ಮೊತ್ತಮೊದಲನೆಯದು "ಕರ್ಮಮಾಡುವುದೇ ನಿನ್ನ ಧರ್ಮ; ಅದೇ ನಿನ್ನ ಹಕ್ಕು." ಎಂದಿದೆ. ಇದನ್ನು ಕರ್ತವ್ಯಬುದ್ಧಿಯಿಂದ ನೆರವೇರಿಸುತ್ತಹೋಗುವವನಿಗೆ ಜೀವನದಲ್ಲಿ ಅವನತಿಯ ಹೆದರಿಕೆಯೆ ಇಲ್ಲ. ಉಪನಿಷತ್ತಿನಲ್ಲಿ ಹೀಗೆ ಹೇಳಿದೆ:

**ಕರ್ಮಣಾ ದೇವಾನಪಿಯಂತಿ ।**
—ತೈತ್ತರೀಯ ೨.೪.೧

**ಕರ್ಮಸು ಚ ಅಮೃತಮ್ ।** —ಮುಂಡಕ ೧.೧.೪

**ಪುಣ್ಯಸ್ಯ ಕರ್ಮಣೋ ದೂರಾದ್ಗಂಧೋ ವಾತಿ ।**
—ಮುಂ. ೪ ೨

"ಕರ್ಮಮಾಡಿ ದೇವರನ್ನು ಹೊಂದುವರು. ಕರ್ಮದಲ್ಲಿ ಅಮೃತತ್ವವಿದೆ. ಪುಣ್ಯಕರ್ಮದ ನರುಗಂಪು ದೂರದವರೆಗೂ ಹರಡುವುದು." ಮತ್ತು ದೂರದಲ್ಲಿರುವವರಿಗೂ ಅದರ ಆನಂದ (ಲಾಭವು)ವು ದೊರೆಯುವುದು. ಆದುದರಿಂದ ಮನುಷ್ಯನು ಎಂದೂ ಕರ್ಮಹೀನನಾಗಿ ಜೀವಿಸತಕ್ಕದ್ದಲ್ಲ.

ಇನ್ನು ಕೆಲಸಗಳನ್ನು ನೆರವೇರಿಸುವ ಹದವನ್ನು ಶ್ರೀಕೃಷ್ಣನು ಉಪದೇಶಿಸುತ್ತಿದ್ದಾನೆ:

(೪೯) ಈ ಶ್ಲೋಕದಲ್ಲಿ ಯೋಗದ ವ್ಯಾಖ್ಯೆಯನ್ನು ಹೇಳಿ, ಆ ಯೋಗಕ್ಕನುಸರಿಸಿ ಕರ್ಮಮಾಡಲು ಉಪದೇಶಿಸಲಾಗಿದೆ. ಹಾಗೆ ಯೋಗಯುಕ್ತರಾಗಿ ಮಾಡಿದ ಕೆಲಸವೆ ನಿರ್ದೋಷವಾದುದು.

ಸಮತ್ವವೆಂದರೇ ಯೋಗ. ಸಮತ್ವ, ಸಮಾನಭಾವ, ಸಮಭಾವ, ವೃತ್ತಿಗಳ ಹೊಯ್ದಾಟವನ್ನು ಹಿಡಿತದಲ್ಲಿರಿಸುವುದು, ಚಿತ್ತವೃತ್ತಿಗಳನ್ನು ಅಂಕೆಯಲ್ಲಿರಿಸಿಕೊಳ್ಳುವುದು ಇವೆಲ್ಲವೂ ಒಂದೇ ಅರ್ಥದ ಶಬ್ದಗಳು. ಪಾತಂಜಲ ಯೋಗದರ್ಶನದಲ್ಲಿ 'ಯೋಗಃ ಚಿತ್ತವೃತ್ತಿನಿರೋಧಃ' (ಯೋಗವೆಂದರೆ ಚಿತ್ತವೃತ್ತಿಗಳನ್ನು ತಡೆದು ಹಿಡಿಯುವುದು) ಎಂದು ವ್ಯಾಖ್ಯೆಮಾಡಿದ್ದಾರೆ. (೧. ೧).

ಚಿತ್ತಚಾಂಚಲ್ಯವು ಜನಸಾಮಾನ್ಯರ ಒಂದು ಸ್ಪಷ್ಟ ಲಕ್ಷಣವಾಗಿದೆ. ಗಳಿಗೆಗೆ ಒಂದೊಂದು ತೆರನಾಗಿ ನಮ್ಮನ್ನು ಕುಣಿಸುವ ಚೋತಿ ಮನದ ಕೈಯಲ್ಲಿ ಸಿಕ್ಕವರಿಂದ ಯಾವ ಹಿರಿಗೆಲಸಗಳೂ ಆಗಲಾರವು. ಯಾವದೇ ಒಂದು ಕೆಲಸವನ್ನು ಕೈಕೊಂಡ ಬಳಿಕ ಅದರಲ್ಲಿ ಎಷ್ಟೋ ಅನುಕೂಲ ಪ್ರತಿಕೂಲ ಸಂಗತಿಗಳು ಒದಗತಕ್ಕುವೇ. ಶುಭಾಶುಭ ಪ್ರಸಂಗಗಳು ಬರತಕ್ಕುವೇ. ಲಾಭವಾದಾಗ ಕೊಬ್ಬುವವನಿಂದಾಗಲಿ, ಹಾನಿಯಾಗುತ್ತಲೆ ಕೊರಗುವವನಿಂದಾಗಲಿ ಕೆಲಸಗಳು ಕೊನೆಗಾಣವು. ಬಿಸಿಲು, ಮಳೆ, ಚಳಿಗಾಳಿ ಎಂತಹ ಹೊತ್ತು ಬಂದರೂ ಅದನ್ನು ತನಗೆ ಅನುಕೂಲವಾಗುವಂತೆಯೆ ತಿರುಗಿಸಿಕೊಂಬ ಹದಗಾರಿಕೆ ಬೇಕು. ಬಂದ ಪ್ರಸಂಗದಿಂದ ಮನಸಿನ ಏರಿಳತಗಳನ್ನು ಆಗಗೊಡದೆ, ತನ್ನ ಮುಂದಿನ ದಾರಿಯ ಸ್ಪಷ್ಟ ಕಲ್ಪನೆಯನ್ನಿಟ್ಟುಕೊಂಡು ಅದನ್ನುನಡೆಯುವ ಯೋಜನೆಯೆ ಮುಖ್ಯವಾದುದು. ದಾರಿಯಲ್ಲಿ ಹತ್ತುವ ಹೂದೇಟಕ್ಕೆ ಮನಸೋತು ಅಲ್ಲಿಯೆ ನಿಂತು ಬಿಟ್ಟರೆ ಮುಂದೆ ಗುರಿಯನ್ನು ಮುಟ್ಟುವುದು ಸಾಧ್ಯವಿಲ್ಲ. ಅಥವಾ ಭೀಕರ ಕೊಳ್ಳದಲ್ಲಿ ಏರುದಾರಿಯನ್ನು ಕಂಡು ಕೈಕಾಲುಗೆಟ್ಟರೂ ಕೆಲಸವು ಹಾಳಾಗುವುದು. ಆದುದರಿಂದ ಚಿತ್ತವೃತ್ತಿಗಳನ್ನು ಬಾಹ್ಯ ಪರಿಸ್ಥಿತಿಗೆ ಅಧೀನವಾಗಿರಿಸದೆ ಯಾವನು ಅವನ್ನು ತನ್ನ ಕೈಯಲ್ಲಿಟ್ಟುಕೊಂಡಿರುವನೊ ಅವನೇ ಯೋಗಿ. ಹೀಗೆ ಚಿತ್ತವೃತ್ತಿಗಳನ್ನು ತೂಕದಲ್ಲಿಟ್ಟುಕೊಂಬ ಹದವೇ ಯೋಗ.

'ಸಮತ್ವಂ ಯೋಗ ಉಚ್ಯತೇ' (ಸಮತ್ವವೆ ಯೋಗ) ಎಂಬಲ್ಲಿ ಶ್ರೀಕೃಷ್ಣನು, ಮತ್ತೆ ದ್ವಂದ್ವಾತೀತನಾಗಲು ಉಪದೇಶಿಸಿದ್ದಾನೆ. ಸಿದ್ಧಿ ಅಥವಾ ಅಸಿದ್ಧಿಗಳೆರಡನ್ನೂ ಸಮವೆಂದು ತಿಳಿಯಲು ಹೇಳಿರುವಲ್ಲಿ ದ್ವಂದ್ವಗಳನ್ನು ಸಮವೆಂದು ಭಾವಿಸಲಿಕ್ಕೆ ಸೂಚಿಸಿದ್ದಾಗಿದೆ. ಸುಖದುಃಖಾದಿ ಯಾವ ಅವಸ್ಥೆಯು ಪ್ರಾಪ್ತವಾದರೂ ಮನಸಿನ ತೂಕ ತಪ್ಪಗೊಡದೆ ತನ್ನ ಕರ್ತವ್ಯಕರ್ಮವನ್ನು ಸರಿಯಾಗಿ ಮಾಡುತ್ತಿರುವುದೆ ಯೋಗವೆಂದು ಹೇಳಿದ್ದಾಗಿದೆ.

'ಸಂಗಂ ತ್ಯಕ್ತ್ವಾ' (ಫಲದ ಆಸಕ್ತಿಯನ್ನು ಬಿಟ್ಟು) ಮನುಷ್ಯನು ಕೆಲಸ ಮಾಡಬೇಕು. ಸಂಗದಿಂದಲೆ ಹಲವು ತೊಡರುಗಳು ಬರುವುವೆಂದು ಗೀತೆಯಲ್ಲಿ ಇದೇ ಅಧ್ಯಾಯದಲ್ಲಿ ಮುಂದೆ ಹೇಳಿದ್ದಾಗಿದೆ:

ಧ್ಯಾಯತೋ ವಿಷಯಾನ್ ಪುಂಸಃ
ಸಂಗಸ್ತೇಷೂಪಜಾಯತೇ।
ಸಂಗಾತ್ಸಂಜಾಯತೇ ಕಾಮಃ ಕಾಮಾತ್
ಕ್ರೋಧೋಽಭಿಜಾಯತೇ ॥ ೬೨ ॥
ಕ್ರೋಧಾದ್ಭವತಿ ಸಂಮೋಹಃ
ಸಂಮೋಹಾತ್ ಸ್ಮೃತಿವಿಭ್ರಮಃ।
ಸ್ಮೃತಿಭ್ರಂಶಾತ್ ಬುದ್ಧಿನಾಶೋ
ಬುದ್ಧಿನಾಶಾತ್ ಪ್ರಣಶ್ಯತಿ ॥ ೬೩ ॥

ವೈಷಯಿಕ ವಿಚಾರಗಳಲ್ಲಿಯೆ ಮುಳುಗಿರುವವರಿಗೆ ಆ ವಿಷಯದಲ್ಲಿ ಆಸಕ್ತಿಯು ಹೆಚ್ಚುವುದು. ಆಸಕ್ತನಾಗಿರುವಾಗ (ಸ್ವಲ್ಪ ಅಡೆತಡೆಗಳುಂಟಾದೊಡನೆ) ಸಿಟ್ಟು ಬರುವುದು. ಸಿಟ್ಟಿನಿಂದ (ಬುದ್ಧಿಯು ಮೂಢವಾಗಿ) ಕಂಗೆಡುವನು. ಕಂಗೆಟ್ಟವನಿಗೆ ಹಿಂದುಮುಂದಿನದು ಏನೂ ತಿಳಿಯದಂತಾಗುವುದು. ಹಿಂದುಮುಂದಿನ ವಿಚಾರವೆ ಇಲ್ಲದೆ ಕೆಲಸಕ್ಕೆ ತೊಡಗಿದವನು ಹಾಳಾಗುವನು. ಆದುದರಿಂದ ಆಸಕ್ತಿರಹಿತನಾಗಿ ಚಿತ್ತವೃತ್ತಿಗಳನ್ನು ಸಮವಾಗಿಟ್ಟುಕೊಂಡು ಮಾಡುವ ಕೆಲಸವೆ ಮನುಷ್ಯನ ಉದ್ಧಾರಕ್ಕೆ ಕಾರಣವಾಗುವುದು. ಗೀತೆಯಲ್ಲಿ ಇನ್ನೊಂದೆಡೆಗೆ (೫ನೆಯ ಅಧ್ಯಾಯ) ಹೇಳಿರುವುದೇನಂದರೆ:

ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ
ತ್ಯಕ್ತ್ವಾ ಕರೋತಿ ಯಃ।
ಲಿಪ್ಯತೇ ನ ಸ ಪಾಪೇನ ಪದ್ಮಪತ್ರ-
ಮಿವಾಂಭಸಾ ॥ ೧೦ ॥
ಕಾಯೇನ ಮನಸಾ ಬುದ್ಧ್ಯಾ
ಕೇವಲೈರಿಂದ್ರಿಯೈರಪಿ।
ಯೋಗಿನಃ ಕರ್ಮ ಕುರ್ವಂತಿ
ಸಂಗಂತ್ಯಕ್ತ್ವಾಽಽತ್ಮಶುದ್ಧಯೇ ॥ ೧೧ ॥

ಯಾವನು ಆಸಕ್ತಿರಹಿತನಾಗಿ ಈಶ್ವರಾರ್ಪಣಬುದ್ಧಿಯಿಂದ ಕೆಲಸ ಮಾಡುವನೊ ಆತನು ಕೆಸರಿನೊಳಗಿನ ಕಮಲದಂತೆ ಪರಿಶುದ್ಧನಾಗಿಯೆ ಉಳಿಯುವನು. ಯೋಗಿಗಳು ಆಸಕ್ತಿಯಿಲ್ಲದವರಾಗಿ ಶರೀರ, ಮನಸು,

ದೂರೇಣ ಹ್ಯವರಂ ಕರ್ಮ ಬುದ್ಧಿಯೋಗಾದ್ಧನಂಜಯ ।
ಬುದ್ಧೌ ಶರಣಮನ್ವಿಚ್ಛ ಕೃಪಣಾಃ ಫಲಹೇತವಃ ॥ ೪೯ ॥
ಬುದ್ಧಿಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ ।
ತಸ್ಮಾದ್ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಂ ॥ ೫೦ ॥

ಅನ್ವಯ:— ಹೇ ಧನಂಜಯ! ಕರ್ಮ ಬುದ್ಧಿಯೋಗಾತ್ ದೂರೇಣ ಅವರಂ ಹಿ। ಬುದ್ಧೌ ಶರಣಂ ಅನ್ವಿಚ್ಛ। ಫಲಹೇತವಃ ಕೃಪಣಾಃ ॥ ೪೯ ॥ ಇಹ ಬುದ್ಧಿಯುಕ್ತಃ ಉಭೇ ಸುಕೃತದುಷ್ಕೃತೇ ಜಹಾತಿ। ತಸ್ಮಾತ್ ಯೋಗಾಯ ಯುಜ್ಯಸ್ವ। ಯೋಗಃ ಕರ್ಮಸು ಕೌಶಲಮ್ ॥ ೫೦ ॥

ಎಲೈ ಅರ್ಜುನನೆ! (ಕೇವಲ ಸಕಾಮ) ಕರ್ಮವು (ಸಮತ್ವ ರೂಪಿಯಾದ) ಬುದ್ಧಿಯೋಗಕ್ಕಿಂತಲೂ ಬಹಳ ಕನಿಷ್ಠವಾಗಿದೆ. ಆದುದರಿಂದ (ಸಮತ್ವ) ಬುದ್ಧಿಯ ಆಶ್ರಯ ಮಾಡು. ಫಲೇಚ್ಛೆಯಿಂದ ಕೆಲಸಮಾಡುವವರು ದೀನರಾಗಿರುತ್ತಾರೆ. ॥ ೪೯ ॥ ಈ ಲೋಕದಲ್ಲಿ (ಸಮತ್ವ) ಬುದ್ಧಿಯುಳ್ಳವನು ಸುಕೃತ ಮತ್ತು ದುಷ್ಕೃತಗಳೆರಡನ್ನೂ ತೊರೆಯುವನು. ಆದುದರಿಂದ (ನೀನು ಸಮತ್ವರೂಪಿಯಾದ ಬುದ್ಧಿ—) ಯೋಗದ ಸಾಧನ ಮಾಡು. (ಸಮತ್ವಬುದ್ಧಿ—)ಯೋಗವು ಎಂದರೆ ಕೆಲಸಮಾಡುವ ಹಿಡಿತವೇ ಸರಿ. ॥ ೫೦ ॥

ಭಾವಾರ್ಥ:— ಕೇವಲ ಸಕಾಮ ಕರ್ಮಮಾಡುವುದಕ್ಕಿಂತ ಸಮತ್ವ ಬುದ್ಧಿಯಿಂದ ನಿಷ್ಕಾಮ ಕರ್ಮಮಾಡುವುದು ಮೇಲಾದುದು. ಆದುದರಿಂದ ಮನುಷ್ಯನು ಸಮತ್ವಬುದ್ಧಿಯನ್ನು ಧಾರಣಮಾಡಬೇಕು. ಹೀಗೆ ಕೆಲಸಮಾಡುವ ಕೌಶಲ್ಯಕ್ಕೆ 'ಸಮತ್ವಬುದ್ಧಿಯೋಗ'ವೆಂಬ ಹೆಸರಿದೆ. ॥ ೫೦ ॥

ಬುದ್ಧಿ ಅಥವಾ ಕೇವಲ ಇಂದ್ರಿಯಗಳಿಂದಲೆ ಆತ್ಮಶುದ್ಧಿಗಾಗಿ ಕೆಲಸ ಮಾಡುತ್ತಾರೆ. ಈ ಬಗೆಯ ಕರ್ಮವೇ ಆತ್ಮಶುದ್ಧಿಗೆ ಕಾರಣವಾಗುತ್ತದೆ. ಆದುದರಿಂದ ಮುಂದೆ (೧೮ ನೆಯ ಅಧ್ಯಾಯದಲ್ಲಿ) ಹೇಳಿರುವುದೇನೆಂದರೆ:

ಏತಾನ್ಯಪಿ ತು ಕರ್ಮಾಣಿ ಸಂಗಂ
ತ್ಯಕ್ತ್ವಾ ಫಲಾನಿ ಚ ।
ಕರ್ತವ್ಯಾನೀತಿ ಮೇ ಪಾರ್ಥ ನಿಶ್ಚಿತಂ
ಮತಮುತ್ತಮಮ್ ॥ ೬ ॥
ಕಾರ್ಯಮಿತ್ಯೇವ ಯತ್ಕರ್ಮ ನಿಯತಂ
ಕ್ರಿಯತೇಽರ್ಜುನ ।
ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ
ಸಾತ್ತ್ವಿಕೋ ಮತಃ ॥ ೯ ॥

"ಎಲೈ ಅರ್ಜುನನೆ! ಈ ಎಲ್ಲ ಕೆಲಸಗಳನ್ನು ಆಸಕ್ತಿರಹಿತನಾಗಿ ಫಲೋಚ್ಛೆಯನ್ನು ಬಿಟ್ಟು ಕರ್ತವ್ಯವೆಂದೇ ಭಾವಿಸಿ ಮಾಡತಕ್ಕದ್ದು. ಇದು ನನ್ನ ನಿಶ್ಚಿತವಾದ ಉತ್ತಮ ಅಭಿಪ್ರಾಯವು. ದುರ್ಲಕ್ಷಿಸತಕ್ಕದ್ದಲ್ಲ; ಮಾಡಲೇ ಬೇಕಾದುದು ಎಂಬ ಶ್ರದ್ಧೆಯಿಂದ ಒಂದ ಕೆಲಸವನ್ನು ಆಸಕ್ತಿರಹಿತವಾಗಿ ಮಾಡಿ ಅದರ ಫಲವನ್ನು ತ್ಯಜಿಸಿದರೆ ಅದು ಸಾತ್ವಿಕತ್ಯಾಗವೆಂದೆನಿಸುವುದು."

ಸಾಮಾನ್ಯವಾಗಿ ಮನುಷ್ಯನು ಕೆಲಸ ಮಾಡುವುದು ಸ್ವಾರ್ಥಕ್ಕಾಗಿ, ಸ್ವ-ಅರ್ಥಕ್ಕಾಗಿ; ಎಂದರೆ ಸ್ವಂತಕ್ಕಾಗಿ; ತನ್ನ ಒಂದು ಜೀವದ ಸುಖಕ್ಕಾಗಿ. ಇಂತಹ ಕೆಲಸದಲ್ಲಿ ತನ್ನ ಒಂದು ಜೀವವನ್ನೆ ಅನುಲಕ್ಷಿಸಿ ಉಳಿದುದನ್ನು ದುರ್ಲಕ್ಷಿಸುವುದುಂಟು. ಸರ್ವಾತ್ಮನು ಅಥವಾ ಪರಮಾತ್ಮನು ಆ ಕಾಲಕ್ಕೆ ಕಣ್ಣೆದುರಿಗೆ ಇರುವುದಿಲ್ಲ. ಆದುದರಿಂದ ಸ್ವಾರ್ಥದ ಕೆಲಸವು ಏಕದೇಶಿಯವಾಗಿ ಅದರಲ್ಲಿ ಕುಂದು ಕೊರತೆಗಳು ತಲೆದೋರುವುದು ಅನಿವಾರ್ಯ. ಲೆಕ್ಕ ಮಾಡುವಾಗ ಒಂದು ಅಂಶವನ್ನು ಮಾತ್ರ ಪರಿಗಣಿಸಿ ಉಳಿದುದನ್ನು ಕಡೆಗಣಿಸಿದರೆ ಅದರ ಉತ್ತರವು (ಪರಿಣಾಮವು) ತಪ್ಪಾಗುವುದೆಂಬಲ್ಲಿ ಸಂದೇಹವೆ ಇಲ್ಲ. ಆದುದರಿಂದ ಕೆಲಸದ ಸರಿಯಾದ ದಾರಿಯೆಂದರೆ ತಾನು ಯಾವ ಸರ್ವಾತ್ಮನ ಅಂಶವೊ ಆ ಪರಮ ಆತ್ಮವನ್ನು ಮೊದಲು ಎಣಿಕೆಯಲ್ಲಿ ಹಿಡಿದೇ (ಸ್ವಾರ್ಥದ) ಕೆಲಸವನ್ನು ನೆರವೇರಿಸುತ್ತಿರಬೇಕು. ಬ್ರಹ್ಮಾರ್ಪಣ ವಿಧಿಯಿಂದ ಎಂದರೆ ಈಶ್ವರಾರ್ಪಣ ಬುದ್ಧಿಯಿಂದ ಕೆಲಸಮಾಡುವುದೆಂದರೆ ಇದೇ. ಇದಕ್ಕೇ ಗೀತೆಯಲ್ಲಿ 'ಬುದ್ಧಿಯೋಗ'ವೆಂಬ ಹೆಸರಿದೆ. ತನ್ನ ಒಬ್ಬನ ಕಾಮನಾತೃಪ್ತಿಗಾಗಿ ಕೆಲಸಮಾಡುವುದು, ಎಲ್ಲರ ಸುಖಾಭಿವೃದ್ಧಿಗಾಗಿ ಬ್ರಹ್ಮಾರ್ಪಣ ಭಾವದಿಂದ ಕೆಲಸ ಮಾಡುವುದೇ ಬುದ್ಧಿವಂತಿಕೆಯ ಲಕ್ಷಣವು.

ಇಂತು ಗೀತೆಯಲ್ಲಿ ಅಡಿಗಡಿಗೂ ಫಲಾಶೆಯಿಲ್ಲದೆ, ಆಸಕ್ತಿರಹಿತನಾಗಿ ಕೆಲಸಮಾಡಲು ಉಪದೇಶಿಸಿದ್ದಾಗಿದೆ. ಇದೇ ಕರ್ಮಯೋಗದ ರಹಸ್ಯವು. ಸಮತ್ವಯೋಗವೆಂದರೂ ಇದೇ. ಅರ್ಜುನನು ರಣರಂಗದಲ್ಲಿ ತನಗೆ ಈಗ ಪ್ರಾಪ್ತಕರ್ತವ್ಯವಾಗಿರುವ ಯುದ್ಧವನ್ನು, ಇದೇ ಬಗೆಯಾಗಿ ಸಮತ್ವಬುದ್ಧಿಯಿಂದ ಸಿದ್ಧಿ ಅಸಿದ್ಧಿಗಳಿಂದ ಮನಸ್ಸನ್ನು ಹೊಯ್ದಾಡಗೊಡದೆ, ಮಾಡಲೇ ಬೇಕಾದ ಕೆಲಸವೆಂದು ಅದನ್ನು ಸರಿಯಾಗಿ ನೆರವೇರಿಸಲು ಶ್ರೀಕೃಷ್ಣನು ಉಪದೇಶಿಸಿದ್ದಾನೆ. ಅರ್ಜುನನ ಮೂಲಕವಾಗಿ ಲೋಕಕ್ಕೂ ಜೀವನರಂಗದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬುದನ್ನು ವಿಧಿಸಿದ್ದಾನೆ.

ಅದನ್ನೆ ಇನ್ನೂ ಹೆಚ್ಚಾಗಿ ವಿವರಿಸಲು ಮುಂದೆ ನುಡಿದುದೇನೆಂದರೆ :

(೪೯–೫೦) ಇಲ್ಲಿ 'ಕರ್ಮ' ಮತ್ತು 'ಬುದ್ಧಿ' ಅಥವಾ '**ಬುದ್ಧಿಯೋಗ**' ಎಂಬ ಈ ಪದಗಳು ವಿಶೇಷಾರ್ಥದಲ್ಲಿ ಉಪಯೋಗಿಸಲ್ಪಟ್ಟಿವೆ. ಕರ್ಮವೆಂಬರೆ ಸಕಾಮ ಕರ್ಮವು. 'ಬುದ್ಧಿ' ಅಥವಾ 'ಬುದ್ಧಿಯೋಗ' ಸಾಮ್ಯಬುದ್ಧಿಯಿಂದ ಮಾಡಿದ ನಿಷ್ಕಾಮ ಕರ್ಮವು. ನಿಷ್ಕಾಮಕರ್ಮ ಮತ್ತು ಸಕಾಮ ಕರ್ಮಗಳಲ್ಲಿ ಅಜಗಜಾಂತರವಿದೆ. ಅವುಗಳೊಳಗಿನ ಭೇದವನ್ನು ಸ್ಪಷ್ಟಪಡಿಸುವುದಕ್ಕಾಗಿ ಅವುಗಳ ತುಲನೆಯನ್ನು ಮಾಡುವುದು ಅವಶ್ಯವು.

| | |
|---|---|
| ಅಯೋಗ | ಯೋಗ ( ಬುದ್ಧಿಯೋಗ ) |
| ಸಕಾಮ ಕರ್ಮ | ನಿಷ್ಕಾಮಕರ್ಮ<br>**( ಕರ್ಮಣ್ಯೇವಾಧಿಕಾರಃ )**<br>ಕೆಲಸ ಮಾಡುವ ಅಧಿಕಾರವು ನಿನ್ನದು. ೨. ೪೭. |
| ಸ್ವಂತಕ್ಕಾಗಿ ಫಲೇಚ್ಛೆಯನ್ನು ಹಿಡಿವುದು. | **( ಮಾಫಲೇಷು ಕದಾಚನ )**<br>ಫಲದ ಮೇಲೆ ಆಸೆ ಬೇಡ.<br>**( ಮಾಫಲಹೇತುಃ ಭೂಃ )** |
| ಫಲೇಚ್ಛೆಯಿಂದ ಕೆಲಸ ಮಾಡುವುದು. | ಫಲದ ಆಸೆ ಮಾಡದೆ ಕೆಲಸ ಮಾಡುವುದು.<br>**(ಮಾತೇ ಸಂಗೋಽಸ್ತ್ವಕರ್ಮಣಿ)** |
| ವ್ಯಗ್ರರಾಗಿ ವೇಳೆ ಹಾಳುಮಾಡುವುದು | ವ್ಯಗ್ರತೆಯುಳಿಸಿಕೊಳ್ಳದೆ ವ್ಯವಸಾಯಿಯಾಗುವುದು.<br>( ೨. ೪೮ )<br>**( ಸಂಗಂತ್ಯಕ್ತ್ವಾ )** |
| (ಫಲದ) ಆಸಕ್ತಿಯಿಂದ ಕೆಲಸವಮಾಡುವುದು. | ಆಸಕ್ತಿಯಿಲ್ಲದೆ ಕೆಲಸ ಮಾಡುವುದು.<br>**(ಸಿದ್ಧ್ಯಸಿದ್ಧ್ಯೋಃ ಸಮಃ)** |
| ಸಿದ್ಧಿಯಿಂದ ಕೊಬ್ಬುವುದು; ಸಿದ್ಧಿಯಿಂದ ಕೊರಗುವುದು. | ಸಿದ್ಧಿ - ಅಸಿದ್ಧಿಗಳೆರಡನ್ನೂ ಸಮವಾಗಿ ಎಣಿಸುವ ಬುದ್ಧಿಯನ್ನು ಹೊಂದುವುದು.<br>**(ಯೋಗಸ್ಥಃ ಕುರು ಕರ್ಮಾಣಿ)** |
| ಯೋಗಮಾರ್ಗ ಬಿಟ್ಟು ಕೆಲಸಮಾಡುವುದು. | ಯೋಗಮಾರ್ಗದಲ್ಲಿದ್ದು ಕೆಲಸ ಮಾಡುವುದು.<br>**ಬ್ರಹ್ಮಣ್ಯಾಧಾಯ ಕರ್ಮಾಣಿ** |
| ಸ್ವಾರ್ಥಕ್ಕಾಗಿ ಕೆಲಸ ಮಾಡುವುದು. | ಪರಮಾತ್ಮನಿಗಾಗಿ ಅರ್ಪಿತವೆಂದು ಕೆಲಸಮಾಡುವುದು. |

ಫಲೇಚ್ಛೆಯಿಂದ ಎಂದರೆ ಸ್ವಾರ್ಥಬುದ್ಧಿಯಿಂದ ಮಾಡುವ ಕೆಲಸಗಳು ಕೀಳುತರಗತಿಯವೆಂದೂ, ಫಲೇಚ್ಛೆಯಿಲ್ಲದೆ ಎಂದರೆ ಸರ್ವಾತ್ಮಭಾವದಿಂದ (ಸರ್ವಾತ್ಮನಿಗೆಂದು) ಮಾಡುವ ಕೆಲಸಗಳೆ ಒಳ್ಳೆಕೆಲಸಗಳು, ಅವೆ ಮಿಗಿಲಾದುವು, ಎಂದೂ ಬೇರೆ ಹೇಳಬೇಕಾಗಿಲ್ಲ.

ಕಾಮ್ಯಕರ್ಮಗಳ ಉದ್ದೇಶವು ಭೋಗವಿಲಾಸಗಳನ್ನು ಹೆಚ್ಚಿಸುವುದೆ ಆಗಿರುತ್ತದೆ. ಇಂತಹ ಕಾಮ್ಯಕರ್ಮಾಸಕ್ತರು, ಸಮಾಜಕ್ಕೂ ರಾಷ್ಟ್ರಕ್ಕೂ ಅಖಿಲ ಜನಾಂಗಕ್ಕೂ ಭಯಂಕರರಾದ ಪ್ರಾಣಿಗಳು. ಅವರ ಸ್ಪಷ್ಟ ಚಿತ್ರವನ್ನು ಗೀತೆಯ ೧೬ನೆಯ ಅಧ್ಯಾಯದಲ್ಲಿ ಓದಲಿಕ್ಕೆ ಸಿಕ್ಕುತ್ತದೆ. ಅದನ್ನೇ ವಾಚಕರ ಅವಗಾಹನೆಗಾಗಿ ಇಲ್ಲಿ ಕೊಟ್ಟಿದೆ.

**ಅಸತ್ಯಮಪ್ರತಿಷ್ಠಂ ತೇ ಜಗದಾಹುರನೀಶ್ವರಮ್ |**
**ಅಪರಸ್ಪರಸಂಭೂತಂ ಕಿಮನ್ಯತ್ಕಾಮ**
**ಹೈತುಕಮ್ ॥ ೮ ॥**

**ಏತಾಂ ದೃಷ್ಟಿಮವಷ್ಟಭ್ಯ ನಷ್ಟಾತ್ಮಾನೋಽಲ್ಪ**
**ಬುದ್ಧಯಃ |**
**ಪ್ರಭವಂತ್ಯುಗ್ರಕರ್ಮಾಣಃ ಕ್ಷಯಾಯ**
**ಜಗತೋಽಹಿತಾಃ ॥ ೯ ॥**

**ಕಾಮಮಾಶ್ರಿತ್ಯ ದುಷ್ಪೂರಂ**
**ದಂಭಮಾನಮದಾನ್ವಿತಾಃ |**
**ಮೋಹಾದ್ಗೃಹೀತ್ವಾಸದ್ಗ್ರಾಹಾನ್-**
**ಪ್ರವರ್ತಂತೇಽಶುಚಿವ್ರತಾಃ ॥ ೧೦ ॥**

ಚಿಂತಾಮಪರಿಮೇಯಾಂ ಚ ಪ್ರಲಯಾಂತಾ
ಮುಪಾಶ್ರಿತಾಃ ।
ಕಾಮೋಪಭೋಗಪರಮಾ ಏತಾವದಿತಿ
ನಿಶ್ಚಿತಾಃ ॥ ೧೧ ॥

ಆಶಾಪಾಶಶತೈರ್ಬದ್ಧಾಃ
ಕಾಮಕ್ರೋಧಪರಾಯಣಾಃ ।
ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥ
ಸಂಚಯಾನ್ ॥ ೧೨ ॥

ಇದಮದ್ಯ ಮಯಾ ಲಬ್ಧಮಿಮಂ ಪ್ರಾಪ್ಸ್ಯೇ
ಮನೋರಥಮ್ ।
ಇದಮಸ್ತೀದಮಪಿ ಮೇ ಭವಿಷ್ಯತಿ
ಪುನರ್ಧನಮ್ ॥ ೧೩ ॥

ಅಸೌ ಮಯಾ ಹತಃ ಶತ್ರುರ್ಹನಿಷ್ಯೇ
ಚಾಪರಾನಪಿ ।
ಈಶ್ವರೋಽಹಮಹಂ ಭೋಗೀ ಸಿದ್ಧೋಽಹಂ
ಬಲವಾನ್ ಸುಖೀ ॥ ೧೪ ॥

ಆಢ್ಯೋಽಭಿಜನವಾನಸ್ಮಿ ಕೋಽನ್ಯೋಽಸ್ತಿ
ಸದೃಶೋ ಮಯಾ ।
ಯಕ್ಷ್ಯೇ ದಾಸ್ಯಾಮಿ ಮೋದಿಷ್ಯ ಇತ್ಯಜ್ಞಾನ
ವಿಮೋಹಿತಾಃ ॥ ೧೫ ॥

ಅನೇಕಚಿತ್ತವಿಭ್ರಾಂತಾ ಮೋಹಜಾಲ
ಸಮಾವೃತಾಃ ।
ಪ್ರಸಕ್ತಾಃ ಕಾಮಭೋಗೇಷು ಪತಂತಿ
ನರಕೇಽಶುಚೌ ॥ ೧೬ ॥

ಆತ್ಮಸಂಭಾವಿತಾಃ ಸ್ತಬ್ಧಾಃ ಧನಮಾನ
ಮದಾನ್ವಿತಾಃ ।
ಯಜಂತೇ ನಾಮಯಜ್ಞೈಸ್ತೇ
ದಂಭೇನಾವಿಧಿಪೂರ್ವಕಮ್ ॥ ೧೭ ॥

ಅಹಂಕಾರಂ ಬಲಂ ದರ್ಪಂ ಕಾಮಂ
ಕ್ರೋಧಂ ಚ ಸಂಶ್ರಿತಾಃ ।
ಮಾಮಾತ್ಮಪರದೇಹೇಷು
ಪ್ರದ್ವಿಷಂತೋಽಭ್ಯಸೂಯಕಾಃ ॥ ೧೮ ॥

ತಾನಹಂ ದ್ವಿಷತಃ ಕ್ರೂರಾನ್
ಸಂಸಾರೇಷು ನರಾಧಮಾನ್ ।
ಕ್ಷಿಪಾಮ್ಯಜಸ್ರಮಶುಭಾನಾಸುರೀಷ್ವೇವ
ಯೋನಿಷು ॥ ೧೯ ॥

ಕಾಮ್ಯಕರ್ಮಾಸಕ್ತರು (ಹಲವರು); ಈ ಲೋಕವು ಅಸತ್ಯವಾಗಿದೆ; ನಿರಾಧಾರವಾಗಿದೆ, ಎನ್ನುವರು. ಈ ಲೋಕನಿಯಂತ್ರಕನು (ಈಶ್ವರನು) ಇಲ್ಲವೆ ಇಲ್ಲವೆನ್ನುವರು. ಒಂದು ಮೂಲ (ಸತ್) ವಸ್ತುವಿನಿಂದ ಇದೆಲ್ಲವೂ ಆಗಿದೆಯೆಂದು ಗ್ರಹಿಸದೆ, ಬೇರೆಬೇರೆಯಾಗಿ ಹುಟ್ಟಿರುವುದೆಂಬುವರು. ಮತ್ತು ಈ ಲೋಕದಲ್ಲಿ ಕಾಮೋಪಭೋಗಗಳ ಹೊರತು ಬೇರಾವ ಗುರಿಯೂ ಇಲ್ಲವೆಂದು ನಂಬಿರುವರು. ಈ ಬಗೆಯಾದ ವಿಚಾರ ಸರಣಿಯುಳ್ಳ, ಸ್ವಾರ್ಥಕ್ಕಾಗಿ ಏನು ಮಾಡಲಿಕ್ಕೂ ಹೇಸದ, ದುರಾಚಾರಿಗಳು ಈ ಲೋಕನಾಶಕ್ಕೆ ಕಾರಣರಾಗುತ್ತಾರೆ. ಇವರ ಕಾಮುಕತೆಗೆ ಎಂದೂ ಕೊನೆಯೆ ಇಲ್ಲ. ಹೆಣ್ಣು, ಹೊನ್ನು, ಮಣ್ಣು ಎಷ್ಟು ಸಿಕ್ಕರೂ ಇವರಿಗೆ ಸಾಲದು. ಇವರಲ್ಲಿ (ಹಲವರು) ದಾಂಭಿಕರು, ಕೊಬ್ಬಿ ಕೊನೆಡಾಡುವವರು, (ಹೆರವರ ಹಿತಾಹಿತಗಳನ್ನು ಎಣಿಸದ) ಅಶುಭ ಸಂಕಲ್ಪದವರು, ದುಷ್ಕರ್ಮಿಗಳು. ಪ್ರಲಯದ ವರೆಗೂ ತೀರದ ಅಪರಿಮಿತ ಯೋಚನೆ ಚಿಂತೆಗಳಲ್ಲಿ ಮುಳುಗಿದವರು, ಇಂದ್ರಿಯ ಭೋಗಗಳೇ ಹಿರಿಗುರಿಯೆಂದು ನೆರೆನಂಬಿದವರು, ನೂರಾರು ಆಶಾ ಪಾಶಗಳಲ್ಲಿ ತೊಡಕಿಕೊಂಡವರು, ಕಾಮಕ್ರೋಧಗಳಿಗೆ ಒಳಗಾದವರು ಭೋಗವಿಲಾಸಗಳಿಗಾಗಿ ಅನ್ಯಾಯದಿಂದ ಧನಸಂಚಯ ಮಾಡುವವರು; ಇಂದು ಇದನ್ನು ಪಡೆದೆ; ನಾಳೆ ಅದನ್ನು ಕೈವಶಮಾಡಿಕೊಳ್ಳುವೆನು; ಇಂದು ಇಷ್ಟು ಧನವಿದೆ; ನಾಳೆ ಅಷ್ಟು ಧನಸಂಗ್ರಹಿಸುವೆನು. ಇಂದು ಇವನನ್ನು ಕೊಂದೆನು; ನಾಳೆ ಅವನನ್ನು ನೋಡುವೆನು, ನಾನೇ ಬಲ್ಲಿದ; ನಾನೇ ಬಲಿಷ್ಠ; ನಾನೇ ಸುಖಿ; ನಾನೇ ಧನವಂತ; ನಾನೇ ಕುಲವಂತ; ನನ್ನಂತಹರು ಇನ್ನಾರು?" ಎನ್ನುವವರು ಹಲವರುಂಟು. ಇನ್ನು ಕೆಲವರು, ನಾನು ಯಜ್ಞಮಾಡುವೆನು; ದಾನ ಕೊಡುವೆನು; ಹಿಗ್ಗಿನಲ್ಲಿರುವೆನು; ಎಂಬ ಉಬ್ಬಿನಲ್ಲಿ ಕೊಬ್ಬಿರುವರು. ಇಂತಿವರೆಲ್ಲರೂ, ತಾವು ತಿಳಿದವರೆಂಬ ಹೆಮ್ಮೆ ಅವರಿಗಿದ್ದರೂ ಅವರೆಲ್ಲರೂ ತಿಳಿಗೇಡಿಗಳೇ. ಏಕೆಂದರೆ ಇವರೆಲ್ಲರೂ ಹಲವು ಬಗೆಯ ಮೋಹಭ್ರಾಂತಿಗಳಲ್ಲಿ ಸಿಲುಕಿಕೊಂಡಿರುತ್ತಾರೆ. ವಿಷಯೋಪಭೋಗಗಳಲ್ಲಿಯೆ ಹೊರಳಾಡುವದರಿಂದ (ಹಲವು ಬಗೆಯ ಶಾರೀರಿಕ ಮಾನಸಿಕ ರೋಗ ವ್ಯಾಧಿಗಳ) ಅಪವಿತ್ರವಾದ ನರಕದಲ್ಲಿ ಕೊಳೆಯುವರು. ಇವರಿಗೆ ತಾವು ಧನವಂತರು, ಬುದ್ಧಿವಂತರೆಂಬ ಹೆಮ್ಮೆಯು ಆವರಿಸಿರುತ್ತದೆ. ಇವರಲ್ಲಿ ದಂಭ, ದರ್ಪ, ಕ್ರೋಧ, ಕಠೋರತೆ, ಕ್ರೂರತನ ಮೊದಲಾದ ಗುಣಗಳಲ್ಲಿ ಕೆಲವೊಂದು ಗುಣಗಳು ಯಾವಾಗಲೂ ನೆಲಸಿರುತ್ತವೆ. ಇವರಿಗೆ ತಮ್ಮಲ್ಲಿಯೂ ಹೆರವರಲ್ಲಿಯೂ ಹುದುಗಿಕೊಂಡಿರುವ ಸದಂಶದ—ಚಿದಂಶದ ಅರಿವು ಇಲ್ಲದೆ ಅದನ್ನೇ ಹೀಯಾ

ಳಿಸುವ ಚಪಲವುಂಟಾಗುತ್ತದೆ. ಈ ನೀಚರಾದ, ಕ್ರೂರರಾದ, ದ್ವೇಷಿಗಳಾದ ಅಮಂಗಲ ನರಪಶುಗಳನ್ನು ಪರಮಾತ್ಮನು ಈ ಲೋಕದೊಳಗಿನ ಅತ್ಯಂತ ಹೀನವಾದ ಅಸುರಕುಲದಲ್ಲಿ ಮತ್ತೆ ಮತ್ತೆ ನೂಕುತ್ತಾನೆ.

ಕಾಮ್ಯಕರ್ಮಾಸಕ್ತರೆಲ್ಲರೂ ಸ್ವಾರ್ಥಸಾಧಕರು. ಸ್ವಾರ್ಥಿಗಳೆಲ್ಲರೂ ಲೋಕಪೀಡಕರು. ಲೋಕಪೀಡಕರೆಲ್ಲರೂ ಅಸುರರು. ಇಂತಹ ಅಸುರರ ಆಸುರೀಕೃತ್ಯಗಳಿಂದಲೇ ಮಾನವ ಜನಾಂಗಕ್ಕೆ ಮಹಾಸಂಕಷ್ಟವಾಗುತ್ತದೆ. ಆರ್ಥಿಕ ವಿಪ್ಲವ, ರಾಜಕೀಯ ದಾಸ್ಯ ಮೊದಲಾದ ಕುತ್ತುಗಳಲ್ಲಿ ತೊಳಲಾಡಬೇಕಾಗುತ್ತದೆ. ಈ ದೃಷ್ಟಿಯಿಂದ ವಿಚಾರಿಸಲಾಗಿ ಫಲಾಸೆಯಿಂದ ಮಾಡುವ ಕರ್ಮ (ಕಾಮ್ಯಕರ್ಮ) ಇದುವೆ ಲೋಕದ ಎಲ್ಲ ಆಪತ್ತು-ವಿಪತ್ತುಗಳ ಮೂಲವೆಂದು ಮನಗಾಣಬಹುದಾಗಿದೆ.

ಆದುದರಿಂದ ಫಲೇಚ್ಛೆಯಿಲ್ಲದೆ ಸರ್ವಗತ, ಸರ್ವಾತ್ಮನಿಗೆ (ಪರಮಾತ್ಮನಿಗೆ) ಅರ್ಪಿತವೆಂದು ಮಾಡುವ ಕೆಲಸಗಳೇ ಪವಿತ್ರ ಮತ್ತು ಕಲ್ಯಾಣಕಾರಕವಾಗಿವೆ. ಇದರಿಂದ ಸ್ವ-ಪರ ಹಿತವು ಸಾಧಿಸುವುದು. ಲೋಕದ ಏಳ್ಗೆಯಾಗುವುದು. ವೇದೋಪನಿಷತ್ತುಗಳಲ್ಲಿ ಹೇಳಿದುದು ಇದನ್ನೇ.

**ತಂ ವಿದಿತ್ವಾ ನ ಲಿಪ್ಯತೇ ಕರ್ಮಣಾ ಪಾಪಕೇನ ।**
— ಬೃ ೪.೪ ೨೩

**ತೇನ ತ್ಯಕ್ತೇನ ಭುಂಜೀಥಾ ಮಾಗೃಧಃ**
**ಕಸ್ಯಸ್ವಿದ್ಧನಮ್ ।**
**ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇತ್**
**ಶತಂ ಸಮಾಃ ।**
**ಏವಂ ತ್ವಯಿ ನಾನ್ಯಥೇತೋಽಸ್ತಿ ನ**
**ಕರ್ಮಲಿಪ್ಯತೇ ನರೇ ॥**
— ಈಶ,೧,೨; ವಾ.ಯಜು.೪೦ ೨

ಆ ಪರಮಾತ್ಮನ ಜ್ಞಾನವುಂಟಾಗಲು ಮನುಷ್ಯನಿಗೆ ಪಾಪಕರ್ಮಗಳು ಅಂಟಿಕೊಳ್ಳುವುದಿಲ್ಲ ತ್ಯಾಗದಲ್ಲಿಯೆ ಭೋಗ (ಸೌಖ್ಯ) ಇದೆ. ಧನವು ಪ್ರಜಾಪತಿ ಬ್ರಹ್ಮನದು (ಕಸ್ಯ) ಇದೆ. ಆದುದರಿಂದ ಎಲ್ಲ ಪ್ರಜೆಗಳ ಸೊತ್ತು ಅದು. ಅವರ ಹಿತಕಾರ್ಯಗಳಿಗಾಗಿಯೆ ವಿನಾಸಲಾಗಿರಬೇಕು. ಅದಕ್ಕಾಗಿಯೇ ವಿನಿಯೋಗಿಸಬೇಕು. ಅಂತಹ ಕಾರ್ಯಗಳಲ್ಲಿಯೆ ನಿರತನಾಗಿ ನೂರುವರುಷ ಬಾಳಲು ಹಾರೈಸಬೇಕು. ಹೀಗೆ ಬಾಳುವವರಿಗೆ ಕೆಲಸಗಳ ದೋಷಗಳು ತಗಲುವದಿಲ್ಲ.

ಗೀತೆಯಲ್ಲಿಯೂ ಇದೇ ಬಗೆಯಾಗಿ ಹೇಳಿದ್ದುಂಟು.

**ನ ಮಾಂ ಕರ್ಮಾಣಿ ಲಿಂಪಂತಿ ನಮೇ**
**ಕರ್ಮಫಲೇ ಸ್ಪೃಹಾ ।**
(೪.೧೪)

**ಯೋಗಯುಕ್ತೋ ವಿಶುದ್ಧಾತ್ಮಾ ಜಿತೇಂದ್ರಿಯಃ।**
**ಸರ್ವಭೂತಾತ್ಮಭೂತಾತ್ಮಾ ಕುರ್ವನ್ನಪಿ**
**ನಲಿಪ್ಯತೇ ॥**
(೫.೭)

**ಬ್ರಹ್ಮಣ್ಯಾಧಾಯ ಕರ್ಮಾಣಿ ಸಂಗಂ ತ್ಯಕ್ತ್ವಾ**
**ಕರೋತಿಯಃ ।**
**ಲಿಪ್ಯತೇ ನ ಸಪಾಪೇನ ಪದ್ಮಪತ್ರಮಿವಾಂಭಸಃ ॥**
(೫.೧೦)

**ಯಸ್ಯ ನಾಹಂಕೃತೋ ಭಾವೋ ಬುದ್ಧಿರ್ಯಸ್ಯ**
**ನ ಲಿಪ್ಯತೇ ।**
**ಹತ್ವಾಽಪಿ ಸ ಇಮಾನ್ ಲೋಕಾನ್ನ ಹಂತಿ ನ**
**ನಿಬಧ್ಯತೇ ॥**
(೧೮.೧೭)

"ನನಗೆ ಕರ್ಮಫಲದಲ್ಲಿ ಹಂಬಲವಿಲ್ಲ. ಆದುದರಿಂದ ನನಗೆ ಕರ್ಮಗಳು ಅಂಟಿಕೊಳ್ಳುವುದಿಲ್ಲ. ಸಮತ್ವಬುದ್ಧಿಯ ಯೋಗವನ್ನು ಅನುಸರಿಸುವವನೂ, ಶುದ್ಧಾತ್ಮನೂ ಇಂದ್ರಿಯಗಳನ್ನು ಗೆದ್ದವನೂ ಎಲ್ಲ ಪ್ರಾಣಿಮಾತ್ರಗಳನ್ನು ತನ್ನಂತೆ ಬಗೆವವನೂ ಆದ ಸಾಧಕನಿಗೆ ಕರ್ಮವೂ ಬಂಧನಕಾರಕವಾಗದು. ತಾನು ಮಾಡುವುದೆಲ್ಲವೂ ಶ್ರೀಹರಿಗೆ ಅರ್ಪಿತವೆಂದು ಅನಾಸಕ್ತಿಯಿಂದ ಕೆಲಸ ಮಾಡುವವನಿಗೆ ಯಾವ ಕರ್ಮವೂ ಬಾಧಕವಾಗಲಾರದು. ಕಮಲದ ಎಲೆಯು ನೀರಲ್ಲಿದ್ದರೂ ನೀರು ಅದಕ್ಕೆ ಅಂಟಿಕೊಳ್ಳದು. ಅದರಂತೆ ನಿರಹಂಕಾರಿಯಾದ ಶುದ್ಧಬುದ್ಧಿಯವನು (ದುಷ್ಟರನ್ನು ನಿಗ್ರಹಿಸುವಾಗ ಅವರನ್ನು) ಕೊಂದರೂ ಅದು ಕೊಲೆಯೆನಿಸುವುದಿಲ್ಲ. ಮತ್ತು ಅದು ಪಾಪಕೃತ್ಯವಾಗುವುದಿಲ್ಲ.

ಇದೇ ವಿವರಣೆಯ ಸಾರವಿಷ್ಟೆ: ತನ್ನ ಹಿರಿಮೆಯ ಬಿಂಕದಿಂದ ಬಿಮ್ಮನೆ ಬಿರಿದುಕೊಂಡಿರದ (ಯಸ್ಯ ನಾಹಂಕೃತೋ ಭಾವಃ), ಎಲ್ಲ ಪ್ರಾಣಿಮಾತ್ರಗಳ ಆತ್ಮವೂ ತನ್ನ ಆತ್ಮವೆಂಬ ಶ್ರದ್ಧೆಯಿಂದ (ಸರ್ವಭೂತ-ಆತ್ಮಭೂತ-ಆತ್ಮಾ) ಲೋಕಹಿತದ ಕಾರ್ಯಗಳಲ್ಲಿ ಯಾವನು ತೊಡಗಿಕೊಂಡಿರುವನೊ ಅವನಿಗೆ ಕರ್ಮದಿಂದ ಬರುವ ಕುಂದಕವು ಎಂದೂ ಸೋಂಕದು. ತನ್ನಂತೆ ಪರರ ಬಗೆವ ಬುದ್ಧಿಯು ಸ್ಥಿರವಾಗಿ ನೆಲೆಗೊಂಡು, ಆ ಭಾವನೆಯಿಂದಲೆ ಪ್ರತಿಯೊಂದು ಕೆಲಸ

**ಕರ್ಮಜಂ ಬುದ್ಧಿಯುಕ್ತಾ ಹಿ ಫಲಂ ತ್ಯಕ್ತ್ವಾ ಮನೀಷಿಣಃ ।**
**ಜನ್ಮ ಬಂಧ ವಿನಿರ್ಮುಕ್ತಾಃ ಪದಂ ಗಚ್ಛಂತ್ಯನಾಮಯಮ್ ॥ ೫೧ ॥**

---

**ಅನ್ವಯ :—** ಹಿ ಬುದ್ಧಿ ಯುಕ್ತಾಃ ಮನೀಷಿಣಃ ಕರ್ಮಜಂ ಫಲಂ ತ್ಯಕ್ತ್ವಾ ಜನ್ಮಬಂಧವಿನಿರ್ಮುಕ್ತಾಃ ಅನಾಮಯಂ ಪದಂ ಗಚ್ಛಂತಿ ॥ ೫೧ ॥

ಆದುದರಿಂದ ( ಸಮತ್ವ ) ಬುದ್ಧಿಯಿಂದ ಯುಕ್ತರಾದ ಜ್ಞಾನಿಗಳು ಕರ್ಮದಿಂದ ಪ್ರಾಪ್ತವಾಗತಕ್ಕ ಫಲವನ್ನು ( ಶ್ರೀಹರಿಗೆ ) ಬಿಟ್ಟು, ಹುಟ್ಟು ಸಾವಿನ ಚಕ್ರದಿಂದ ಪಾರಾಗುತ್ತಾರೆ. ಮತ್ತು ದುಃಖರಹಿತವಾದ ಗತಿಯನ್ನು ಹೊಂದುತ್ತಾರೆ.

**ಭಾವಾರ್ಥ :—** ಮಾನವನು ಜ್ಞಾನಿಯಾಗಬೇಕು. ಸಮತ್ವಬುದ್ಧಿಯನ್ನು ಪಡೆಯಬೇಕು. ಕೆಲಸದಲ್ಲಿ ಯಾವಾಗಲೂ ತೊಡಗಿರಬೇಕು. ಆದರೆ ಆ ಕೆಲಸದ ಫಲವನ್ನು ಸರ್ವಭೂತ ಹಿತಕ್ಕಾಗಿ ಮೀಸಲಿಡಬೇಕು. ಅದನ್ನು ತಾನು ಉಪಭೋಗಿಸುವ ಕೃಪಣ ಬುದ್ಧಿಯನ್ನು ಬಿಟ್ಟು ಬಿಡಬೇಕು ಹೀಗೆ ಮಾಡುವವನಿಗೆ ಹುಟ್ಟು ಸಾವಿನ ಗಸಣಿ ತಪ್ಪುವುದು. ಕಷ್ಟ ಕ್ಲೇಶಗಳಿಲ್ಲದ ಪರಮಪದವಿಯು ದೊರೆಯುವುದು.

---

ವನ್ನೂ ಮುಂದುವರಿಸುವ ಸ್ವಭಾವವು ದೃಢವಾಗದವರೆಗೆ ಮಾನವರಿಂದ ನಿಷ್ಕಾಮಕರ್ಮವೇ ಸಾಧ್ಯವಿಲ್ಲ. ಸಕಾಮಕರ್ಮಗಳಿಂದ ನಿಜವಾದ ಲೋಕಹಿತವಾಗಲಿ, ಆತ್ಮಹಿತವಾಗಲಿ ಎಂದೂ ಆಗಲಾರದು.

ತನ್ನಲ್ಲಿಯೇ ತಾನು ಹುದುಗಿಕೊಂಡು ಏಕಾಕಿಯಾಗಿರುವ ವ್ಯಕ್ತಿಗೆ ಪರಹಿತದ ನಿಷ್ಕಾಮಕರ್ಮವೆಂದರೇನೆಂಬುದರ ಅರಿವೆ ಉಂಟಾಗಲಾರದು. ತನ್ನನ್ನು ಉಳಿದು ಇನ್ನೊಂದು ಜೀವದೊಡನೆ ನಿಂದು ಕಲೆದು ಸಮಭಾವ ಸಮರಸವಾಗುವ ಶಕ್ತಿಯು ಹೆಚ್ಚಿದಂತೆ ಪ್ರತಿಫಲದ ಇಚ್ಛೆಯಿಲ್ಲದೆ, ಕೇವಲ ಕರ್ತವ್ಯವೆಂದು ಇನ್ನೊಬ್ಬರಿಗಾಗಿ ಹೇಗೆ ಕೆಲಸ ಮಾಡಬೇಕೆಂಬುದು ಗೊತ್ತಾಗುವುದು. ಆಗ ತನ್ನ ಮಟ್ಟಿಗೆ ತಾನೊಬ್ಬನೇ ಎಂದಿದ್ದ ಸಂಕುಚಿತ ಭಾವವು ತಿಳಿದು ಇನ್ನುಳಿದ ಜೀವಗಳೊಡನೆ ತಾದಾತ್ಮ್ಯ ಹೊಂದುವ ಹದವು ತಿಳಿಯುವುದು. ಗೃಹಸ್ಥಾಶ್ರಮಿಗೆ, ಮದುವೆಯ ಮೊದಲಿದ್ದುದಕ್ಕಿಂತಲೂ ನಲ್ಲೆ ಬಂದಬಳಿಕ ತನ್ನ ಸ್ವಾರ್ಥದ ಕ್ಷೇತ್ರವು ವಿಶಾಲವಾದ ಅನುಭವವು ಬರುತ್ತದೆ. ಮಕ್ಕಳಾದ ಬಳಿಕ ಗಂಡಹೆಂಡರಿಬ್ಬರೂ ಮಕ್ಕಳಿಗಾಗಿ ತಮ್ಮ ಸ್ವಾರ್ಥವನ್ನು ತೊರೆದು ಅವರ ಹಿತದ ಕೆಲಸ ಮಾಡುವರು. ಇದೇ ಮೇರೆಗೆ ತಿಳುವಳಿಕೆ ಹೆಚ್ಚಿದಂತೆ, ಅಂತಃಕರಣವು ವಿಶಾಲವಾದಂತೆ ಮನುಷ್ಯನು ತನ್ನ ಕುಟುಂಬ—ರಾಷ್ಟ್ರ—ಮಾನವ ಜನಾಂಗದೊಡನೆ ಐಕ್ಯಭಾವದಿಂದ ಸಮರಸನಾಗಿ ತನ್ನ ನಿತ್ಯ ವ್ಯವಹಾರಗಳನ್ನು ಸಾಗಿಸುವನು. ತನ್ನ ಮೊದಲಿನ ಒಂಟಿತನದೊಳಗಿನ ನಡೆನುಡಿಗಳನ್ನು ತಿದ್ದಿಕೊಂಡು ಈ ದಿಕ್ಕಿನಲ್ಲಿ ಮುಂದುವರೆಯುತ್ತ ಹೋದಂತೆ ಆ ಮನುಷ್ಯನಿಗೆ ನಿಷ್ಕಾಮಕರ್ಮದ ಹದವು ಗೊತ್ತಾಗುವುದು

ತಾನೇ ಒಬ್ಬ ; ತಾನೇ ತಾನು ; ಎಂದು ಉಳಿದ ಯಾರ ಲೆಕ್ಕಹಿಡಿಯದೆ, ನಡೆವವನು ತಾನೂ ಸುಖಿಯಾಗಲಾರನು. ಇನ್ನಾರಿಗೂ ಸುಖವನ್ನು ಕೊಡಲಾರನು. ತನಗಾಗಿಯೆ ಈ ಮನೆಮಾರು; ತನಗಾಗಿಯೇ ಈ ಹೆಂಡಿರು ಮಕ್ಕಳು ; ಈ ಲೋಕವೆಲ್ಲವು ಹುಟ್ಟಿದುದು ಇರುತ್ತಿರುವುದೂ ತನಗಾಗಿಯೇ ಎಂಬಂತೆ ನಡೆದುಕೊಳ್ಳುವ ಮನುಷ್ಯರು ಅತ್ಯಂತ ಹೀನ ಸ್ವಾರ್ಥಿಗಳಾಗಿರುತ್ತಾರೆ. ಒಂದು ಕುಟುಂಬದಲ್ಲಿಯೆ ಆಗಲಿ, ಸುಖವು ದೊರೆಯಬೇಕಾದರೆ ಅಲ್ಲಿ ಒಬ್ಬರು ಇನ್ನೊಬ್ಬರಿಗಾಗಿ ಕೆಲಸದಲ್ಲಿ ತೊಡಗಿರಬೇಕಾಗಿರುತ್ತದೆ. ಗಂಡನು ಹೆಂಡತಿಗಾಗಿ, ಹೆಂಡತಿಯು ಗಂಡನಿಗಾಗಿ ದಂಪತಿಗಳು ಮಕ್ಕಳಿಗಾಗಿ, ಮಕ್ಕಳು ಹಿರಿಯರಿಗಾಗಿ ಕೆಲಸ ಮಾಡಿದರೆ ಅಲ್ಲಿ ಸುಖಸಂತೋಷಗಳು ನೆಲೆಗೊಳ್ಳುವವು. ಪ್ರತಿಯೊಬ್ಬರೂ ಸ್ವಾರ್ಥಿಗಳಾಗಿ, ತನ್ನ ಎಲೆಯಲ್ಲಿಯೆ ಮಾಡಿದ್ದನೆಲ್ಲ ತೋಡಿಕೊಂಬ ಹಂಬಲಿಗರಾದರೆ ! ಅದೇನು ಮನೆಯೊ? ಕಾಳಗದ ಕಣವೊ? ' ತನ್ನಂತೆ ಪರರ ಬಗೆಯದ ( ಸರ್ವಭೂತಾತ್ಮ ಭೂತಾತ್ಮಾ ), ಕೃಪಣರಾದ ಹೀನ ಸ್ವಾರ್ಥಿಗಳು ( ಕೃಪಣಾಃ ಫಲಹೇತವಃ ) ಲೋಕದಲ್ಲಿ ದುಃಖಗಳನ್ನು ಹೆಚ್ಚಿಸುವುದಕ್ಕೇ ಕಾರಣರಾಗುವರು.

ಕೆಲಸ ಮಾಡುವುದಂತೂ ಯಾರಿಗೂ ತಪ್ಪಿದ್ದಲ್ಲ. ಏಕೆಂದರೆ ಕೆಲಸ ಮಾಡದೆ ಬದುಕುವುದೆ ಸಾಧ್ಯವಿಲ್ಲ. ಒಂದರಗಳಿಗೆಯಾದರೂ ಯಾರೂ ಸುಮ್ಮನಿರಲಾರರು.

ಆದರೆ ಪರಿಸ್ಥಿತಿಯ ಒತ್ತಾಯದಿಂದ ನಿರ್ವಾಹವಿಲ್ಲದೆ ಬಂದುದನ್ನು ಹೇಗೆ ಹೇಗೊ ಮುಗಿಸಿ ಬಿಟ್ಟರೆ ಆಗಲಿಲ್ಲ. ಹದವನ್ನರಿತು ಕೆಲಸ ಮಾಡುವುದರಲ್ಲೆಯೆ ಜಾಣ್ಮೆಯಿದೆ. ಕೆಲಸ ಮಾಡುವ ಹದವನ್ನು ಲೋಕಕ್ಕೆ ಅರಹುದಕ್ಕಾಗಿಯೆ ಗೀತೆಯ ಅವತಾರವಾಗಿದೆ. ಕೆಲಸ ಮಾಡುವ ಈ ಹದಕ್ಕೆ ಯೋಗ—ಕರ್ಮಯೋಗವೆಂದು ಹೆಸರು. ಕೆಲಸಮಾಡುವ ಈ ಕುಶಲತೆಯೆ ಯೋಗವೆಂದು ಕರೆಯಲಾಗಿದೆ (ಯೋಗಃ ಕರ್ಮಸು ಕೌಶಲಂ). ನಿಷ್ಕಾಮಭಾವನೆಯಿಂದ, ಸಮರ್ಪಣ ಭಾವದಿಂದ, ಬ್ರಹ್ಮಾರ್ಪಣ ಬುದ್ಧಿಯಿಂದ ನೆರವೇರಿಸುವ ಹದವೆ ಕರ್ಮಯೋಗವು, ಎಂದು ಭಗವದ್ಗೀತೆಯಲ್ಲಿ ಸ್ಪಷ್ಟವಾಗಿ ವಿವರಿಸಲಾಗಿದೆ. ಇದನ್ನು ಕುರಿತು ಇನ್ನೂ ಹೆಚ್ಚಾಗಿ ಮುಂದಿನ ಶ್ಲೋಕಗಳಲ್ಲಿ ಹೇಳಿದೆ.

(೫೧) ಹಿಂದೆ ಹೇಳಿದ ಬುದ್ಧಿಯೋಗವನ್ನೆ ಇಲ್ಲಿ ಮತ್ತೆ ಸಾರಾಂಶ ರೂಪದಿಂದ ತಿಳಿಸಿದ್ದಾಗಿದೆ. ಅದರ ಮುಖ್ಯ ಮೂರು ನಿಯಮಗಳನ್ನು ಪಾಲಿಸಲು ಆದೇಶವಿದೆ. (೧) (ಸಮತ್ವ) ಬುದ್ಧಿಯುಕ್ತನಾಗು; (೨) ಮನೀಷಿಯಾಗು; (೩) ಕರ್ಮಫಲವನ್ನು (ಸರ್ವಗತ ಆತ್ಮನಿಗೇ ಅರ್ಪಿಸು.

ಹೀಗೆ ಮಾಡಿದಲ್ಲಿ ಮಾನವರಿಗೆ ಎರಡು ಲಾಭಗಳಿವೆ. (೧) ಜನ್ಮಬಂಧದಿಂದ ಮುಕ್ತರಾಗುವರು. (೨) ಕ್ಲೇಶರಹಿತ, ರೋಗರಹಿತ ಸ್ಥಿತಿಯು ಪ್ರಾಪ್ತವಾಗುವುದು.

(ಸಮತ್ವ) ಬುದ್ಧಿಯುಳ್ಳವರಾಗುವುದು (ಬುದ್ಧಿಯುಕ್ತಾಃ), ಇದರ ಅರ್ಥವು ಎಲ್ಲ ಮಾನವ ಜನಾಂಗದ ಬಗ್ಗೆ ಸಮಭಾವನೆಯನ್ನು ತಾಳುವುದು, ವಸುಧೈವ ಕುಟುಂಬಿಯಾಗುವುದು. ಜಾತಿ, ಧರ್ಮ, ಬಣ್ಣ, ಬಳಗ, ದೇಶಕೋಶ ಮೊದಲಾದವುಗಳನ್ನು ಯಾವನ್ನೂ ಗಮನಿಸದೆ ಅದ್ವೇಷಿಯಾಗಿ ಎಲ್ಲರಲ್ಲೂ ಸಹ-ಅನುಭೂತಿ–ಯುಳ್ಳವರಾಗಲು ನಿತ್ಯಸಾಧನವನ್ನು ಮಾಡಬೇಕು. ಈ ಬುದ್ಧಿಯು ಸ್ಥಿರವಾಯ್ತೆಂದರೆ ಅವರಿಂದ ಪಕ್ಷಪಾತ, ಅನ್ಯಾಯಗಳು ಆಗುವುದಿಲ್ಲ. ಸರ್ವಭೂತಹಿತದ ಕಾರ್ಯಗಳಲ್ಲಿ ಇಂತಹರೆ ತನ್ಮಯರಾಗಬಲ್ಲರು.

(ಮನಸಃ ಈಷ್ಟೇ ಇತಿ ಮನೀಷೀ) ತಮ್ಮ ಮನಃಶಕ್ತಿಗಳ ಮೇಲೆ ಪ್ರಭುತ್ವವಿರುವನು ಮನೀಷಿಯು ಮನೀಷಿಯೆಂದರೆ ಜ್ಞಾನಿ, ತಿಳಿದವನು, ಎಂದೂ ಅರ್ಥವಿದೆ. ಆದರೆ 'ಬುದ್ಧಿಯುಕ್ತ' ಎಂಬ ಪದದಿಂದ ಜ್ಞಾನಿ ಎಂಬ ಭಾವವು ವ್ಯಕ್ತವಾಗಿರುವುದರಿಂದ ಇಲ್ಲಿ 'ಮನೀಷಿ' ಎಂದರೆ ಆತ್ಮಸಂಯಮಿ, ಇಂದ್ರಿಯಗಳನ್ನು ಸ್ವಾಧೀನದಲ್ಲಿ ಇಟ್ಟುಕೊಂಡನು, ಅದನ್ನು ಇಷ್ಟವಾದ ಸನ್ಮಾರ್ಗದಲ್ಲಿಯೆ ನಡೆಸುವವನು ಎಂದು ಅರ್ಥಮಾಡುವುದೆ ಉಚಿತವಾಗಿದೆ.

ಸಮತ್ವಬುದ್ಧಿಯುಕ್ತರಾದ ಸಂಯಮಿಗಳು ತಮ್ಮ ಕಾರ್ಯಕಲಾಪಗಳಿಂದ ದೊರೆಯುವ ಫಲವನ್ನು ತೊರೆದು (ಕರ್ಮಜಂ ಫಲಂ ತ್ಯಕ್ತ್ವಾ), ಹುಟ್ಟು ಸಾವಿನ ಪೀಕಲಾಟದಿಂದ ಪಾರಾಗುತ್ತಾರೆ. ಎಂಬಲ್ಲಿ ತೊರೆಯುವುದು ಎಂದರೇನು? ತಕ್ಕೊಳ್ಳದೆ ಇರುವುದಕ್ಕೆ ತೊರೆಯುವುದು ಎಂದು ಹೇಳಬಹುದು. ಒಬ್ಬ ರೈತನು ಆಸರು ಬೇಸರುಗಳಿಲ್ಲದೆ ದುಡಿದ ಕೆಲಸದ ಫಲವಾಗಿ ಆತನ ಹೊಲವು ಹುಲುಸಾಗಿ ಬೆಳೆದಿದೆ. ಆತನು ತನ್ನ ಕೆಲಸದ ಫಲವನ್ನು ತೊರೆಯಬೇಕೆಂದಿದ್ದಾನೆ. ಆತನು ಆ ಪಯಿರನ್ನು ಕುಯಿದು ತರದೆ ಹಾಗೆಯೆ ಬಿಡಬಹುದು; ಅಥವಾ ರಾಶಿಮಾಡಿ ಕಾಳುತಂದು ಅದನ್ನು ತೂರಿ ಸೂರೆಮಾಡಬಹುದು. ಇಲ್ಲವೆ ಯೋಗ್ಯರಿಗೆ ಕೈಯೆತ್ತಿ ಕೊಡಬಹುದು. ಇವೆಲ್ಲ ಪ್ರಕಾರಗಳಲ್ಲಿ ಮೂರನೆಯ ಬಗೆಯ ತೊರೆಯುವಿಕೆಯೆ ದಾನ–ಅರ್ಪಣವೆನಿಸುವುದು. ದೇಶಕಾಲಪರಿಸ್ಥಿತಿಗಳನ್ನು ವಿಚಾರಿಸಿ ಯೋಗ್ಯರಿಗೆ ಕೊಟ್ಟು ಲೋಕಕಲ್ಯಾಣವಾಗುವಂತೆ ತನ್ನ ಕೆಲಸದ ಫಲವನ್ನು ಹಂಚಿಬಿಡುವವನಿಗೆ ಕರ್ಮವು ಬಂಧನಕರವಾಗದೆ ಅವನನ್ನು ಹುಟ್ಟುಸಾವುಗಳ ಆಚೆಗೆ ಒಯ್ಯುವುದು. ಗೀತೆಯ ಕೊನೆಯ ಅಧ್ಯಾಯಗಳಲ್ಲಿ ತ್ಯಾಗ ಮತ್ತು ದಾನವನ್ನು ಕುರಿತು ವಿಶೇಷ ವಿವರಣೆಯಿದೆ. ಅದರಲ್ಲಿ ಹೇಳಿರುವುದೇನೆಂದರೆ:

ತ್ಯಾಗೋ ಹಿ ಪುರುಷವ್ಯಾಘ್ರ ತ್ರಿವಿಧಃ
ಸಂಪ್ರಕೀರ್ತಿತಃ ॥ ೪ ॥
ನಿಯತಸ್ಯ ತು ಸಂನ್ಯಾಸಃ ಕರ್ಮಣೋ
ನೋಪಪದ್ಯತೇ।
ಮೋಹಾತ್ತಸ್ಯ ಪರಿತ್ಯಾಗಸ್ತಾಮಸಃ
ಪರಿಕೀರ್ತಿತಃ ॥ ೭ ॥
ದುಃಖಮಿತ್ಯೇವ ಯತ್ಕರ್ಮ ಕಾಯಕ್ಲೇಶ
ಭಯಾತ್ತ್ಯಜೇತ್।
ಸ ಕೃತ್ವಾ ರಾಜಸಂ ತ್ಯಾಗಂ ನೈವ ತ್ಯಾಗ
ಫಲಂ ಲಭೇತ್ ॥ ೮ ॥
ಕಾರ್ಯಮಿತ್ಯೇವ ಯತ್ಕರ್ಮ ನಿಯತಂ
ಕ್ರಿಯತೇಽರ್ಜುನ।
ಸಂಗಂ ತ್ಯಕ್ತ್ವಾ ಫಲಂ ಚೈವ ಸ ತ್ಯಾಗಃ
ಸಾತ್ತ್ವಿಕೋ ಮತಃ ॥ ೯ ॥
(೧೮ ಅ)

"ತ್ಯಾಗದಲ್ಲಿ ಮೂರು ಬಗೆಗಳಿವೆ. ಮೋಹವಶನಾಗಿ ಮಾಡುವ ತ್ಯಾಗವು ತಾಮಸ. ದುಃಖದಾಯಕವೆಂದು ಶಾರೀರಿಕ ಕಷ್ಟಗಳಿಗೆ ಹೆದರಿ ಮಾಡುವ ತ್ಯಾಗವು ರಾಜಸ. ಆದುದರಿಂದ ಇದರ ಕರ್ತನಿಗೆ ತ್ಯಾಗದ ಶ್ರೇಯಸ್ಸು ದೊರೆಯಲಾರದು. ತನ್ನ ಪಾಲಿನ ಕರ್ತವ್ಯವೆಂದು ಭಾವಿಸಿ ಬಂದ ಒಳ್ಗೆಲಸವನ್ನು ನೆರವೇರಿಸಿ ಆದರ ಫಲವನ್ನು (ಲೋಕಕಲ್ಯಾಣಕ್ಕಾಗಿ ಸರ್ವಾತ್ಮನಿಗೆ) ಅರ್ಪಿಸಿದರೆ ಅದು ಸಾತ್ವಿಕ ತ್ಯಾಗವೆನಿಸುವುದು. ಇದರಂತೆ ದಾನದಲ್ಲಿ ಮೂರು ಪ್ರಕಾರಗಳಿವೆ.

ದಾತವ್ಯಮಿತಿ ಯದ್ದಾನಂ ದೀಯತೇಽ
ನುಪಕಾರಿಣೇ ।
ದೇಶೇಕಾಲೇ ಚ ಪಾತ್ರೇ ಚ ತದ್ದಾನಂ
ಸಾತ್ವಿಕಂ ಸ್ಮೃತಮ್ ॥ ೨೦ ॥
ಯತ್ತು ಪ್ರತ್ಯುಪಕಾರಾರ್ಥಂ ಫಲಮುದ್ದಿಶ್ಯ
ವಾ ಪುನಃ ।
ದೀಯತೇ ಚ ಪರಿಕ್ಲಿಷ್ಟಂ ತದ್ದಾನಂ ರಾಜಸಂ
ಸ್ಮೃತಮ್ ॥ ೨೧ ॥
ಅದೇಶ ಕಾಲೇ ಯದ್ದಾನಮಪಾತ್ರೇಭ್ಯಶ್ಚ
ದೀಯತೇ ।
ಅಸತ್ಕೃತಮವಜ್ಞಾತಂ ತತ್ತಾಮಸ
ಮುದಾಹೃತಮ್ ॥ ೨೨ ॥
(೧೭ ಅ.)

"ಪ್ರತಿ ಉಪಕಾರದ ಆಶೆಯಿಲ್ಲದೆ, ದೇಶ, ಕಾಲ ಮತ್ತು ಪಾತ್ರಗಳ ವಿಚಾರಮಾಡಿ ಕೊಟ್ಟುದು ಸಾತ್ವಿಕ ದಾನವು. ತನಗೆ ಅವರಿಂದ ತಿರುಗಿ ದೊರೆಯಬೇಕೆಂಬ ಆಸೆಯಿಟ್ಟುಕೊಂಡು, ಬಹಳ ಕಷ್ಟದಿಂದ ಜಡಮನಸಿನಿಂದ ಕೊಟ್ಟುದು ರಾಜಸದಾನವು. ದೇಶಕಾಲ ಮತ್ತು ಪಾತ್ರಗಳ ವಿಚಾರಮಾಡದೆ (ಅವಿಚಾರದಿಂದ), ಆದರ ಸತ್ಕಾರಗಳಿಲ್ಲದೆ, ಹೀಯಾಳಿಸಿ ಕೊಟ್ಟುದು ತಾಮಸ ದಾನವು."

ಆದುದರಿಂದ ಕರ್ಮಫಲದ ತ್ಯಾಗ ಅಥವಾ ದಾನವನ್ನು ಮಾಡುವಾಗ ನೆನಪಿಡತಕ್ಕ ಅತ್ಯಂತ ಅವಶ್ಯಕ ಸಂಗತಿಗಳೆಂದರೆ: (೧) ಅದು ಕರ್ತವ್ಯವೆಂದು (೨) ನಿರಪೇಕ್ಷ ಬುದ್ಧಿಯಿಂದ (೩) ಪ್ರತಿಫಲದ ಆಸೆಯಿಲ್ಲದೆ (೪) ಪ್ರತ್ಯುಪಕಾರವನ್ನು ಅಪೇಕ್ಷಿಸದೆ (೫) ಯೋಗ್ಯರಾದವರಿಗೆ (೬) ಯೋಗ್ಯಕಾಲದಲ್ಲಿ (೭) ಯೋಗ್ಯಸ್ಥಳದಲ್ಲಿ ಮಾಡಿದ ದಾನ ಅಥವಾ ತ್ಯಾಗವೆ ಶ್ರೇಷ್ಠವಾದುದು. ಸಾತ್ವಿಕವೆನಿಸುವುದು. ಇಂತಹ ಕೃತಿಯಿಂದಲೆ ಮಾನವನು ಹುಟ್ಟುಸಾವಿನ ಆಚೆಗೆ ಹೋಗುವನು. ಉಳಿದ ಎರಡು ಪ್ರಕಾರಗಳಲ್ಲಿ ರಾಜಸವು ಸಾತ್ವಿಕಕ್ಕಿಂತಲೂ ಕಡಿಮೆ ತರಗತಿಯದು. ಆದರೆ ತಾಮಸವು ಅತ್ಯಂತ ಹೀನ ಮತ್ತು ತ್ಯಾಜ್ಯವಾದ ಪ್ರಕಾರವಾಗಿದೆ. ಇವೆರಡು ಒಂದಕ್ಕಿಂತಲೂ ಒಂದು ಹೆಚ್ಚಿನ ದುಃಖ, ಸಂಕಷ್ಟಗಳಿಗೇ ಕಾರಣವಾಗುವುವು.

ಕರ್ಮಫಲದ ತ್ಯಾಗವು ಲೋಕಕಲ್ಯಾಣಕ್ಕಾಗಿ ಎಲ್ಲರಿಂದಲೂ ಸರಿಯಾಗಿ ಅರ್ಪಿತವಾದರೆ ಅದರಿಂದ ಜಗತ್ತು ಹೇಗೆ ಸುಖಶಾಂತಿಯಲ್ಲಿ ಓಲಾಡಬಹುದು, ಎಂಬುದನ್ನು ಒಂದು ಉದಾಹರಣದಿಂದ ಇಲ್ಲಿ ಸೂಚಿಸಬಹುದು.

ಒಂದು ಹಳ್ಳಿ; ಅಲ್ಲಿ ಒಂದು ನೂರು ಮನೆಗಳಿವೆ. ಆ ಊರಿಗೆ ಒಂದು ಸಾವಿರ ಕೂರಿಗೆ ಹೊಲಗಳಿವೆಯೆಂದು ಕಲ್ಪಿಸುವ. ಪ್ರತಿಯೊಂದು ಮನೆಯವರಿಗೂ ಹತ್ತು ಹತ್ತು ಕೂರಿಗೆ ಹೊಲವು ಪಾಲಿಗೆ ಬರುವುದು. ಇವರೆಲ್ಲ ತಮ್ಮ ಪಾಲಿನ ಹೊಲದ ಮೇರೆಯನ್ನು ತೋರಿಸಲು ಸುತ್ತಲೂ ಬೇಲಿಹಾಕುವ ಅವಶ್ಯಕತೆಯಿದೆ. ಇವರೆಲ್ಲರೂ ತಮ್ಮ ದುಡಿಮೆಯ ಫಲವನ್ನು ಇಡಿ ಊರಿಗಾಗಿ ಕೊಟ್ಟರೆ ಅಥವಾ ಊರವರೆಲ್ಲರೂ ಒಂದೇ ಮನೆಯವರಾಗಿ, ಹೊಂದಿ ಬಾಳಲು ಒಪ್ಪಿದರೆ ಮತ್ತು ಉತ್ತು ಬಿತ್ತುವ ಮೊದಲಾದ ಕೆಲಸಗಳನ್ನು ಹೊತ್ತುಹೊತ್ತಿಗೆ ಸರಿಯಾಗಿ ಮಾಡಹತ್ತಿದರೆ, ಬೇರೆ ಬೇರೆಯಿರುವಾಗ ಹಾಕಬೇಕಾಗದ ಮುಳ್ಳುಬೇಲಿಯ ಅವಶ್ಯಕತೆಯೆ ಉಳಿಯುವುದಿಲ್ಲ. ಪ್ರತಿಯೊಬ್ಬರು ಸಾಮುದಾಯಿಕ ಹಿತಕ್ಕಾಗಿ ಹೆಣಗಾಡುತ್ತಿರುವಲ್ಲಿ ಅಥವಾ ವ್ಯಕ್ತಿಯ ಸ್ವಾರ್ಥವು ಸಾಮುದಾಯಿಕ ಸ್ವಾರ್ಥದಷ್ಟು ವಿಸ್ತೃತವಾಗಿರುವಲ್ಲಿ ನನ್ನ-ನಿನ್ನ ಎಂಬ ತಾರತಮ್ಯದ ಕಾರಣವೇ ಉಳಿಯುವುದಿಲ್ಲ. ಹೀಗೆ ಅಹಂಕಾರವು ವೈಯಕ್ತಿಕ ಸ್ವಾರ್ಥವು, ಸಾರ್ವಜನಿಕ ಹಿತಕಾರ್ಯದಲ್ಲಿ ಪರಿಣಮಿಸಿದರೆ ಅಲ್ಲಿ ದುಃಖ, ಮನಸ್ತಾಪಗಳಿಗೆ ಅವಕಾಶವೆ ಉಳಿಯುವುದಿಲ್ಲ. ಇದೇ ರೀತಿಯಲ್ಲಿ ವೈಯಕ್ತಿಕ ಅಭಿಮಾನವು ವಿಕಾಸಗೊಳ್ಳುತ್ತ ಅನಂತನಷ್ಟು ವಿಸ್ತೃತವಾದರೆ ಆತನ ಕರ್ಮಫಲಗಳೆಲ್ಲ ಅನಂತನಾಯಕ ಶ್ರೀಹರಿಗೆ ಸಮರ್ಪಿತವಾಗುವುದರಲ್ಲಿ ಸಂದೇಹವೆ ಇಲ್ಲ. ಆಗ ಆ ಮನುಷ್ಯನು ಎಲ್ಲ ಬಂಧನಗಳನ್ನು ಮೀರಿ ಮುಕ್ತನೆನಿಸುವನು.

ವೈಯಕ್ತಿಕ ಸ್ವಾರ್ಥ, ವೈಯಕ್ತಿಕ ಭೋಗಲಾಲಸೆಗಳಲ್ಲಿ ಮನುಷ್ಯನ ಎಲ್ಲ ದುಃಖಗಳ ಉಗಮವಿದೆ. ಆತನ ಬಂಧನಕ್ಕೂ ಇದುವೆ ಕಾರಣವು. ಈ ಬಗೆಯ ವೈಯಕ್ತಿಕ ಹಮ್ಮುಬಿಮ್ಮುಗಳನ್ನು ನಾಶಗೊಳಿಸಿದರೆ, ಅಥವಾ ಆತ್ಮಸಮರ್ಪಣ ಬುದ್ಧಿಯಿಂದ, ಪರಮೇಶ್ವರನಿಗೆ ಅರ್ಪಣವೆಂದು ಸಾಮುದಾಯಿಕ ಹಿತದ ಕಾರ್ಯಗಳಲ್ಲಿ ನಿರತ

**ಯದಾ ತೇ ಮೋಹಕಲಿಲಂ ಬುದ್ಧಿರ್ವ್ಯತಿತರಿಷ್ಯತಿ ।**
**ತದಾ ಗಂತಾಸಿ ನಿರ್ವೇದಂ ಶ್ರೋತವ್ಯಸ್ಯ ಶ್ರುತಸ್ಯ ಚ ॥ ೫೨ ॥**
**ಶ್ರುತಿವಿಪ್ರತಿಪನ್ನಾ ತೇ ಯದಾ ಸ್ಥಾಸ್ಯಸಿ ನಿಶ್ಚಲಾ ।**
**ಸಮಾಧಾವಚಲಾ ಬುದ್ಧಿಸ್ತದಾ ಯೋಗಮವಾಪ್ಸ್ಯಸಿ ॥ ೫೩ ॥**

---

**ಅನ್ವಯ:—** ಯದಾ ತೇ ಬುದ್ಧಿಃ ಮೋಹಕಲಿಲಂ ವ್ಯತಿತರಿಷ್ಯತಿ, ತದಾ ಶ್ರೋತವ್ಯಸ್ಯ ಶ್ರುತಸ್ಯ ಚ ನಿರ್ವೇದಂ ಗಂತಾಸಿ ॥ ೫೨ ॥ ಯದಾ ಶ್ರುತಿವಿಪ್ರತಿಪನ್ನಾ ತೇ ಬುದ್ಧಿಃ ನಿಶ್ಚಲಾ ( ಭೂತ್ವಾ ) ಸಮಾಧೌ ಅಚಲಾ ಸ್ಥಾಸ್ಯತಿ, ತದಾಯೋಗಂ ಅವಾಪ್ಸ್ಯಸಿ ॥ ೫೩ ॥

**ನಿನ್ನ ಬುದ್ಧಿಯು ಯಾವಾಗ ಮೋಹದಿಂದ ಹುಟ್ಟುವ ಭ್ರಾಂತಿಯ ಕಂದಕವನ್ನು ದೂರಮಾಡುವುದೋ, ಆಗ ಕೇಳಿದ ಮತ್ತು ಕೇಳತಕ್ಕ ವಿಷಯಗಳನ್ನು ಕುರಿತು ನಿನಗೆ ತಟಸ್ಥವೃತ್ತಿಯು ಸಾಧ್ಯವಾಗುವುದು. ॥ ೫೨ ॥ ಹಲವು ಬಗೆಯ ಮೋಹಕ ಮಾತುಗಳನ್ನು ಕೇಳಿ ಕದಡಿದ ನಿನ್ನ ಬುದ್ಧಿಯು ಯಾವಾಗ ಸ್ಥಿರವಾಗಿ ತಿಳಿಯಾಗುವುದೋ ಆಗಲೆ ನಿನಗೆ ಸಮತ್ವ-ಯೋಗವು ಪ್ರಾಪ್ತವಾಗುವುದು. ॥ ೫೩ ॥**

**ಭಾವಾರ್ಥ :—** ಜನಸಾಮಾನ್ಯರ ಬುದ್ಧಿಯನ್ನು ಮೋಹವು ಆವರಿಸುತ್ತದೆ. ಆ ಮೋಹದ ಹೊದಿಕೆಯನ್ನು ಹರಿದು ದೂರಮಾಡುವ ವರೆಗೆ ಶುದ್ಧಬುದ್ಧಿಯ ಅರಿವು ಅವರಿಗೆ ಆಗದು. ಬುದ್ಧಿಯು ಶುದ್ಧಪಡಿಸಿಕೊಂಡವರಿಗೆ ವಿಷಯ ವಾಸನೆಗಳ ಬಾಧೆಯಾಗದೆ ಬುದ್ಧಿಯು ಸ್ಥಿರವಾಗುವುದು. ಆಗ ಅವರು ಸಮತ್ವ ಯೋಗವನ್ನು ಆಚರಿಸಲು ಸಮರ್ಥರಾಗುವರು.

ಹಾದರೆ ಆ ಮನುಷ್ಯನು ಸ್ವತಂತ್ರನಾಗುವನು. ಹುಟ್ಟು ಸಾವಿನ ಚಕ್ರದಿಂದ ಬಿಡುಗಡೆ ಹೊಂದುವನು. ಈ ಬಂಧನಗಳ ಆಚೆಗೆ ಹೋಗುವುದು, ಎಂದರೆ ಅನುಪಮ ಆನಂದಸ್ಥಿತಿಯನ್ನು ಹೊಂದುವುದು. ಇದನ್ನು ಕುರಿತು ಈ ಮೊದಲು ೨೩–೨೫ ಶ್ಲೋಕಗಳ ಟೀಕೆಯಲ್ಲಿ ವಿವರಿಸಿ ಹೇಳಿದೆ. ವೈಯಕ್ತಿಕ ಸ್ವಾರ್ಥಸ್ಥಿತಿಯೆ ಆ ‘ ಅಲ್ಪ ’ ಅವಸ್ಥೆ. ಇದೇ ಜಾಗೃತಿಯೊಳಗಿನ ಅಹಂಕಾರಸ್ಥಿತಿ. ‘ ಅಲ್ಪ ’ ಅವಸ್ಥೆಯಲ್ಲಿರುವಾಗ ಮಾನವನಿಗೆ ದುಃಖಾದಿ ಬಂಧನಗಳ ಪೀಡೆ ತಪ್ಪಿದ್ದಲ್ಲ. ಈ ವೈಯಕ್ತಿಕ ಅಹಂಕಾರದ ಜಾಗೃತಿಯು ನಷ್ಟವಾಗಿ ಸುಷುಪ್ತಿಯಲ್ಲಿ ಸೇರುತ್ತಲಿ ‘ಭೂಮಾ’ ಸ್ಥಿತಿಯ ಅನುಭವವು ಬರಲಾರಂಭಿಸುವುದು. ಆಗ ಆತನನ್ನು ದುಃಖವು ಸೋಂಕಲಾರದು. ಈ ‘ ಭೂಮಾ ’ ಸ್ಥಿತಿಯು ಅಖಂಡವಾದ ಸಹಜಾನಂದದ ಅವಸ್ಥೆಯೆ ಆಗಿದೆ.

ಈ ಅವಸ್ಥೆಯು ಯಾರಿಗೆ ಪ್ರಾಪ್ತವಾಗುವುದು ?

( ೧ ) (ಬುದ್ಧಿಯುಕ್ತಃ) ಸಮಬುದ್ಧಿಯುಕ್ತನಿಗೆ.

( ೨ ) (ಮನೀಷಿ) ಮನಸು ಮೊದಲಾದ ಇಂದ್ರಿಯಗಳನ್ನು ಅಧೀನದಲ್ಲಿರಿಸಿದವನಿಗೆ.

( ೩ ) (ಕರ್ಮಜಂ ಫಲಂ ತ್ಯಕ್ತ್ವಾ=ದತ್ವಾ) ಕೆಲಸದಿಂದ ಬರುವ ಫಲವನ್ನೆಲ್ಲ ಸರ್ವ ಭೂತಹಿತಕ್ಕಾಗಿ ಅರ್ಪಿಸುವವನಿಗೆ,

ಈ ಭಾವವು, ಉಸಿರಾಡಿಸುವಂತೆ ಸಹಜ ಸ್ವಭಾವವಾಗಬೇಕು. ಆಗಲೆ ಆ ಮಾನವನ ವಿಕಾಸದ ಪರಮಾವಧಿಯಾಯ್ತೆಂದು ತಿಳಿಯತಕ್ಕದ್ದು. ಆಗ ಆತನಿಗೆ ಸಹಜಾನಂದದ ಅನುಭವವು ಪ್ರಾಪ್ತವಾಗುವುದು. ಇದುವೆ ಪರಮಪದವನ್ನು ಪಡೆದುದರ ಕುರುಹು. ಇದನ್ನು ಹೊಂದುವ ಹದವನ್ನು ಕುರಿತು ಮತ್ತೆ ಮುಂದಿನ ಎರಡು ಶ್ಲೋಕಗಳಲ್ಲಿ ವಿವರಿಸಿದ್ದಾಗಿದೆ.

(೫೨–೫೩) ಬುದ್ಧಿಯು ಪರಿಶುದ್ಧವಾಗುವ ಬಗೆಯನ್ನು ಇಲ್ಲಿ ಸೂಚಿಸಿದ್ದಾಗಿದೆ:

( ೧ ) **[ ಮೋಹಕಲಿಲಂ ಬುದ್ಧಿಃ ವ್ಯತಿತರಿಷ್ಯತಿ ]** ಮೋಹದ ಮಲಿನತೆಯಿಂದ ಬುದ್ಧಿಯು ಮುಕ್ತವಾಗುವುದು. ಪರಿಶುದ್ಧವಾಗುವುದು ;

( ೨ ) **[ ನಿರ್ವೇದಂ ಗಂತಾಸಿ ]** ವಿರಕ್ತನಾಗುವು; ಆಸಕ್ತಿರಹಿತನಾಗುವುದು ;

( ೩ ) **[ ನಿಶ್ಚಲಾ ಬುದ್ಧಿಃ ]** ಬುದ್ಧಿಯು ಸ್ಥಿರವಾಗುವುದು ;

( ೪ ) **[ ಸಮಾ-ಧೌ ಅಚಲಾ ಸ್ಥಾಸ್ಯತಿ ]** ಮಹತ್ವ ಬುದ್ಧಿಯಲ್ಲಿ ಸ್ಥಿರವಾಗಿರುವುದು ; ಮತ್ತು ಕೊನೆಗೆ

( ೫ ) **[ ಯೋಗಂ ಅವಾಪ್ಸ್ಯಸಿ ]** ಈ ಯೋಗವನ್ನು ಪಡೆಯುವುದು.

ಮೊದಲಿನ ನಾಲ್ಕು ಮೆಟ್ಟಿಗಳನ್ನು ಏರಿದ ಬಳಿಕ ಕೊನೆಗೆ ಯೋಗಸಿದ್ಧಿಯು ತನ್ನ ತಾನೆ ದೊರೆಯುವುದು. ಇನ್ನು ಈ ನಾಲ್ಕು ಮೆಟ್ಟಿಗಳನ್ನು ಕುರಿತು ವಿಚಾರಿಸುವ.

ಮೊದಲನೆಯದು 'ಮೋಹ-ಕಲಿಲಾವಸ್ಥೆ'. ಈ ಸ್ಥಿತಿಯಲ್ಲಿ ಮನುಷ್ಯನು ಮೋಹವಶನಾಗಿರುತ್ತಾನೆ. ಇಂದ್ರಿಯವೃತ್ತಿಗಳ ಅಧೀನನಾಗಿ ಅವು ಕುಣಿಸಿದಂತೆ ಕುಣಿಯುತ್ತಾನೆ. ಶಬ್ದ, ಸ್ಪರ್ಶ, ರಸ, ರೂಪ ಗ್ರಂಥಿಗಳ ಆಕರ್ಷಣಕ್ಕೆ ಒಳಗಾಗುವುದು ಈ ಸ್ಥಿತಿಯೊಳಗಿನವರ ಸ್ವಭಾವವಾಗಿರುತ್ತದೆ. ಆಂತರಿಕ ಸಹಜಾನಂದದ ಅರಿವು ಇವರಿಗೆ ಇರುವುದಿಲ್ಲ. ಅದರಿಂದ ಇವರು ತಮ್ಮ ಸುಖಕ್ಕಾಗಿ ಹೊರಗಿನ ವಿಷಯಗಳನ್ನು ಅವಲಂಬಿಸಿರಬೇಕಾಗುತ್ತದೆ. ಆದುದರಿಂದ ಇವರು ಯಾವಾಗಲೂ ಬದ್ಧರು ಮತ್ತು ಪರತಂತ್ರರಾಗಿರುತ್ತಾರೆ. ಕಾಮ ಕ್ರೋಧಾದಿ ವಿಕಾರಗಳ ಪ್ರಾಬಲ್ಯದಿಂದ ಇವರು ತುಂಬ ಗೋಳಾಡಿ ಬಳಲಿ ಬೆಂಡಾದ ಬಳಿಕ ಇವರಿಗೆ ಮೋಹದ ದುಷ್ಪರಿಣಾಮಗಳ ಅರಿವು ಉಂಟಾಗುವುದು. ಅದರಿಂದ ದೂರವಿರುವ ಬುದ್ಧಿಯು ಉಪಾಯವು.

ಬ್ರಹ್ಮಚರ್ಯಸಾಧನವೆ ಈ ಸ್ಥಿತಿಯೊಳಗಿಂದ ಪಾರಾಗುವ ಉತ್ತಮ ಉಪಾಯವು. 'ಬ್ರಹ್ಮಚರ್ಯ-ಪ್ರತಿಷ್ಠಾಯಾಂ ವೀರ್ಯಲಾಭಃ' ಬ್ರಹ್ಮಚರ್ಯಪಾಲಿಸುವವರಿಗೆ ವೀರ್ಯ, ಸ್ಥೈರ್ಯಗಳು ಪ್ರಾಪ್ತವಾಗುವವು. ಶಾರೀರಿಕ, ಮಾನಸಿಕಶಕ್ತಿಗಳು ಬೆಳೆಯುವುವು. 'ಬ್ರಹ್ಮ' ಎಂದರೆ ಜ್ಞಾನ, ಮಹತ್ವ, ಶ್ರೇಷ್ಠಶಕ್ತಿ, ಆತ್ಮ, ಪರಮಾತ್ಮ ಎಂದು ಅರ್ಥಗಳುಂಟು. ಬ್ರಹ್ಮಚರ್ಯವೆಂದರೆ ಇಂತಹ ಶ್ರೇಷ್ಠಶಕ್ತಿಯನ್ನು ಪಡೆಯಲು ಅನುಸರಿಸತಕ್ಕ ವಿಶೇಷಪ್ರಕಾರದ ನಡೆವಳಿ. ಮನುಷ್ಯನ ಅಂತರಂಗದಲ್ಲಿ ಹುದುಗಿಕೊಂಡಿರುವ ದಿವ್ಯ ಆತ್ಮಶಕ್ತಿಯನ್ನು ವಿಕಾಸಗೊಳಿಸಲು ಅನುಸರಿಸತಕ್ಕ ಕ್ರಮವೆ ಬ್ರಹ್ಮಚರ್ಯವು. ಇಂದ್ರಿಯಶಕ್ತಿಗಳನ್ನು ಹಿಡಿತದಲ್ಲಿ ಇಟ್ಟುಕೊಂಡು ಅವನ್ನು ಆತ್ಮವಿಕಾಸಕ್ಕೆ ಉಪಯೋಗಿಸಿಕೊಳ್ಳುತ್ತ ಹೋಗುವುದರಿಂದ ಮೋಹದ ಪರಿಯು ತನ್ನತಾನೆ ಹರಿಯುವುದು.

ಎರಡನೆಯ ಸ್ಥಿತಿ ಲೋಭ. ಲೋಭನಾಶಕ್ಕೆ 'ಅಪರಿಗ್ರಹ'ವು ಶ್ರೇಷ್ಠವಾದ ಉಪಾಯವು. ಮೂರನೆಯದು ಕ್ರೋಧ. ಇದಕ್ಕೆ ಅಹಿಂಸೆಯೆ ಮದ್ದು. ಇದರೊಡನೆ ಶ್ರದ್ಧೆ, ಭಕ್ತಿಗಳನ್ನು ಬೆಳೆಯಿಸಿಕೊಳ್ಳಬೇಕು ಅಭಯವೃತ್ತಿಯನ್ನು ಅನುಸರಿಸಬೇಕು. ಮನಸ್ಸು ಪವಿತ್ರವಾಗಿಲ್ಲದವರಿಗೆ ಅಭಯವು ಸಾಧ್ಯವಿಲ್ಲ. ಕಿವಿ, ಕಣ್ಣು, ಮೂಗು, ನಾಲಗೆ, ತೊಗಲುಗಳು ಮನುಷ್ಯನನ್ನು ಅವನರಿಗೆ ತಿಳಿಯಗೊಡದೆಯೆ ವಿಷಯೋಪಭೋಗದ ಕಡೆಗೆ ಸೆಳೆದುಕೊಂಡು ಹೋಗುವವು. ಮೋಹದಲ್ಲಿ ತೊಡಗಿಸುವವು. ಆದುದರಿಂದ ಇವುಗಳ ಎಳತದಲ್ಲಿ ಸಿಕ್ಕಿಬೀಳದಂತೆ ಸದಾ ಜಾಗರೂಕನಾಗಿದ್ದವನ ಬುದ್ಧಿಯು ಮೋಹದ ಕೊಳಚೆಯಲ್ಲಿ ಹೊರಳಾಡದೆ ಪಾರಾಗುವುದು. (ಬುದ್ಧಿಃ ಮೋಹಕಲಿಲಂ ವ್ಯತಿತರಿಷ್ಯತಿ). ಇಂತಹರಿಗೆ ವಿಷಯದಲ್ಲಿ ಆಸಕ್ತಿಯುಂಟಾಗದೆ ವಿರಕ್ತಿಯು ಪ್ರಾಪ್ತವಾಗುವುದು. (ನಿರ್ವೇದಂ ಗಂತಾಸಿ). ಬುದ್ಧಿಯು ಸ್ಥಿರವಾಗುವುದು. (ನಿಶ್ಚಲಾ ಬುದ್ಧಿಃ). ಭೋಗಿಗಳು ಚಂಚಲವೃತ್ತಿಯವರಾಗಿರುತ್ತಾರೆ.

**ಬಹುಶಾಖಾ ಹ್ಯನಂತಾಶ್ಚ ಬುದ್ಧಯೋಽ**
**ವ್ಯವಸಾಯಿನಾಮ್ ।**

ಎಂದು ಇದೇ ಅಧ್ಯಾಯದಲ್ಲಿ (೪೧ ಶ್ಲೋ) ಹಿಂದೆ ಹೇಳಿದೆ. ಅವ್ಯವಸಾಯಿಗಳಾದ ಭೋಗಿಗಳ ಬುದ್ಧಿಯು ಹಲವು ವಿಷಯಗಳಲ್ಲಿ ಹರಿದುಹಂಚಿರುತ್ತದೆ. ಅದರಿಂದ ಅವರಿಗೆ ಚಿತ್ತಶಾಂತಿಯೆಂಬುದು ಇಲ್ಲ. ಚಿತ್ತಚಾಂಚಲ್ಯವು ಅಳಿದು ಅದು ಸ್ಥಿರವಾಗಿ ನಿಲ್ಲಲಾರಂಭಿಸಿದೊಡನೆ ಸಮತ್ವಯೋಗದಲ್ಲಿ ಪ್ರಗತಿಯಾಗುವುದು. (ಸಮಾಧೌ ಅಚಲಾ ಸ್ಥಾಸ್ಯಸಿ) ಸಮತ್ವದಿಂದ ಅದು ಸ್ಥಿರವಾಗಿ ಉಳಿದು ಚಿರವಾದ ಶಾಂತಿಸುಖವು ದೊರೆಯಹತ್ತುವುದು.

ಈ ದೃಷ್ಟಿಯಿಂದ ಯೋಗಬುದ್ಧಿ ಮತ್ತು ಭೋಗಬುದ್ಧಿಗಳ ತುಲನೆಯನ್ನು ಮಾಡಬಹುದಾಗಿದೆ.

| ಯೊಗಬುದ್ಧಿ | ಅಯೋಗವೃತ್ತಿ |
|---|---|
| ಮೋಹಕಲಿಲಂ | ಭೋಗೈಶ್ವರ್ಯ |
| ಬುದ್ಧಿರ್ವ್ಯತಿತರಿಷ್ಯತಿ....\| | ಪ್ರಸಕ್ತಾನಾಂ |
| ತದಾಗಂತಾಸಿ ನಿರ್ವೇದಂ....\| | ಬುದ್ಧಿಃ ಸಮಾಧೌ |
| ಸಮಾಧಾವಚಲಾ | ನ ವಿಧೀಯತೇ\| ೨.೪೪ |
| ಬುದ್ಧಿಃ ತದಾ ಯೋಗಂ | |
| ಅವಾಪ್ಸ್ಯಸಿ ೨ ೫೨-೫೩ | |

ಭೋಗದಿಂದ ದೂರವಿರುವ ಅನಾಸಕ್ತ ಬುದ್ಧಿಯು ನಿಶ್ಚಲವಾಗಿ, ಸಮಾಧಿಯಲ್ಲಿ ಸ್ಥಿರವಾಗುವುದು. ಮತ್ತು ಸಮತ್ವ ರೂಪಯೋಗಮಾರ್ಗದಲ್ಲಿ ಮುಂದುವರಿಯುವುದು. ಮತ್ತು 'ಭೋಗಾಸಕ್ತ ಬುದ್ಧಿಯು ಚಂಚಲವಾಗಿ ಸಮಾಧಿಯಲ್ಲಿ ಸ್ಥಿರವಾಗಿ ನಿಲ್ಲುವುದಿಲ್ಲ.' ಆದುದರಿಂದ ಸಾಧಕನು ಅನಾಶಕ್ತಿಯಿಂದ ಆಚರಿಸಲಿಕ್ಕೆ ಕಲಿಯತಕ್ಕದ್ದು.

'ಶ್ರುತಿ-ವಿಪ್ರತಿಪನ್ನಾ ಬುದ್ಧಿ' ಎಂಬ ಪದವು ಕೆಲವೊಂದ ಸಂದೇಹಗಳಿಗೆ ಎಡೆಗುಡುವಂತಿದೆ. ಇಲ್ಲಿ

## (೨೦) ಸ್ಥಿತಪ್ರಜ್ಞನ ಲಕ್ಷಣಗಳು

**ಅರ್ಜುನ ಉವಾಚ— ಸ್ಥಿತಪ್ರಜ್ಞಸ್ಯ ಕಾ ಭಾಷಾ ಸಮಾಧಿಸ್ಥಸ್ಯ ಕೇಶವ**
**ಸ್ಥಿತಧೀಃ ಕಿಂ ಪ್ರಭಾಷೇತ ಕಿಮಾಸೀತ ವ್ರಜೇತ ಕಿಮ್ || ೫೪ ||**

---

**ಅನ್ವಯಂ:—** ಅರ್ಜುನ ಉವಾಚ, ಹೇ ಕೇಶವ! ಸಮಾಧಿಸ್ಥಸ್ಯ ಸ್ಥಿತಪ್ರಜ್ಞಸ್ಯ ಕಾ ಭಾಷಾ? ಸ್ಥಿತಧೀಃ ಕಾ ಪ್ರಭಾಷೇತ? ಕಿಂ ಆಸೀತ? ಕಿಂ ವ್ರಜೇತ? || ೫೪ ||

**ಅರ್ಜುನನು ಕೇಳಿದನು : ಎಲೈ ಕೇಶವನೆ! ಸಮಾಧಿಯಲ್ಲಿ ನೆಲಸಿದ ಸ್ಥಿತಪ್ರಜ್ಞನ ಲಕ್ಷಣಗಳೇನು? ಸ್ಥಿರಬುದ್ಧಿಯ ಆತನು ಆಡುವುದೆಂತು? ಇರುವುದೆಂತು? ನಡೆವುದೆಂತು? || ೫೪ ||**

---

'ಶ್ರುತಿ' ಎಂಬುದಕ್ಕೆ ಶ್ರವಣದಿಂದ ಪ್ರಾಪ್ತವಾಗುವ ಜ್ಞಾನ ಮತ್ತು 'ವೇದ' ಎಂದು ಎರಡು ಅರ್ಥಗಳುಂಟು. ಇಲ್ಲಿ ಎರಡನೆಯ ಅರ್ಥವನ್ನು ಗ್ರಹಿಸಿ ಕೆಲರು ಈ ಶ್ಲೋಕಕ್ಕೆ ಹೇಳುವ ಅರ್ಥವೇನೆಂದರೆ:

'ವೇದಗಳ ಜ್ಞಾನದಿಂದ ಕೆಟ್ಟು, ಚಂಚಲವಾದ ಬುದ್ಧಿಯು ಯಾವಾಗ ತನ್ನ ಚಂಚಲತೆಯನ್ನು ಬಿಟ್ಟು ಬಿಡುವುದೊ ಆಗಲೆ ಅದು ಸಮಾಧಿಗೆ ಯೋಗ್ಯವಾಗುವುದು.' ಆದರೆ ಇಲ್ಲಿ 'ಶ್ರುತಿ' ಎಂಬುದಕ್ಕೆ 'ವೇದ' ಎಂಬ ಅರ್ಥವು ಅಭಿಪ್ರೇತವಿಲ್ಲ. ಏಕೆಂದರೆ ಇದರ ಹಿಂದೆಯೆ ಒಂದು ಶ್ಲೋಕದಲ್ಲಿ ಶ್ರುತ ಮತ್ತು ಶ್ರೋತವ್ಯಗಳೆಂಬ ಎರಡು ಪದಗಳು ಬಂದಿದ್ದು ಅಲ್ಲಿ ಅವಕ್ಕೆ ಬೇರೆ ಅರ್ಥವಿದೆ. ಗೀತೆಯು ಉಪನಿಷತ್ತುಗಳ ಎಂದರೆ ಶ್ರುತಿಯ ಸಾರವಿದೆ. ಆದುದರಿಂದ ಇದರಲ್ಲಿ ಶ್ರುತಿಯ ನಿಂದೆಯಿರುವುದು ಸಾಧ್ಯವಿಲ್ಲ.

ಅರ್ಜುನನು ಸಂಜಯಾದಿ ಹಿತಶತ್ರುಗಳ ಮಾತುಗಳನ್ನು ಕೇಳಿ ಮರುಳಾಗಿದ್ದನೆಂದು ಹಿಂದೆ ಹೇಳಿದೆ. ಇಂತಹರ ಮಾತಿನ ಮೋಹಕ್ಕೆ ಬಲಿಬಿದ್ದಿರುವೆಯೆಂದು ಹೇಳುವಾಗ ಶ್ರೀಕೃಷ್ಣನು ಇಂಥ ವಿಪರೀತ ಉಪದೇಶಗಳನ್ನು ಕೇಳಿ ನಿನ್ನ ಮನಸು ಚಂಚಲವಾಗಿದೆ' ಎಂದು ಎಚ್ಚರಿಸಿದ್ದಾನೆ. 'ಆ ಚಂಚಲತೆ ಹೋದ ಬಳಿಕ ನಿನ್ನ ಮನಸು ಸ್ಥಿರವಾಗುವುದು. ಅದಕ್ಕಾಗಿ ಮೊದಲು ನಿನ್ನ ಹಗೆಗಳು ಮಾಡಿದ ಉಪದೇಶವನ್ನೆಲ್ಲ ಮರೆತು ಬಿಡು' ಎಂದು ಶ್ರೀಕೃಷ್ಣನು ಅಪ್ಪಣೆಮಾಡಿದ್ದಾನೆ.

ಆಗ ಅರ್ಜುನನು ಸ್ಥಿರಬುದ್ಧಿಯ ಮಹತ್ವವನ್ನು ಚೆನ್ನಾಗಿ ಅರಿತುಕೊಳ್ಳುವುದಕ್ಕಾಗಿ ಶ್ರೀಕೃಷ್ಣನಿಗೆ ಕೆಲವೊಂದು ಪ್ರಶ್ನೆಗಳನ್ನು ಕೇಳುತ್ತಿದ್ದಾನೆ.

(೫೪) ಶ್ರೀಮದ್ಭಗವದ್ಗೀತೆಯ ಆದರ್ಶ ಪುರುಷನೆ 'ಸ್ಥಿತಪ್ರಜ್ಞ'ನು, 'ಸ್ಥಿತಪ್ರಜ್ಞ' ಇದರ ವಿರುದ್ಧವಾಗಿರ ತಕ್ಕವನು 'ಚಂಚಲ ಪ್ರಜ್ಞ'ನು. ಇದು ವಾಸ್ತವ; ಅದು ಆದರ್ಶ. ಮುಟ್ಟಬೇಕಾದ ಗುರಿ ಚಂಚಲತೆಯು ನಷ್ಟವಾಗುವವರೆಗೆ ಅದು ಸಾಧ್ಯವಿಲ್ಲ. ಸ್ಥಿತಿಪ್ರಜ್ಞನಾಗಿರುವವನು ತನ್ನ ಇಷ್ಟವಿದ್ದಾಗ ಸಮಾಧಿಸ್ಥಿತಿಯಲ್ಲಿ ಸೇರಬಹುದು. ಜಾಗೃತಿಯಲ್ಲಿ ಇವರು ವ್ಯವಹಾರಕುಶಲರಾಗಿಯೂ ವರ್ತಿಸಬಲ್ಲರು. ವ್ಯಾವಹಾರಿಕ ಸ್ಥಿತಿಯಲ್ಲಿ ಮೂರು ತರಗತಿಗಳು: (೧) ಆಡುವುದು, (೨) ಇರುವುದು (೩) ಆಚರಿಸುವುದು. ಈ ಮೂರರೊಡನೆ ಸಮಾಧಿಸ್ಥಿತಿಯೊಂದು ಸೇರಿ ನಾಲ್ಕು ಅವಸ್ಥೆಗಳಾಗುವುವು. ಈ ನಾಲ್ಕು ಅವಸ್ಥೆಗಳನ್ನು ಕುರಿತು ಅರ್ಜುನನು ಶ್ರೀಕೃಷ್ಣನಿಗೆ ಪ್ರಶ್ನೆಗಳನ್ನು ಕೇಳಿದ್ದಾನೆ.

೧) '**ಸ್ಥಿತಪ್ರಜ್ಞಸ್ಯ ಸಮಾಧಿಸ್ಥಸ್ಯ ಕಾ ಭಾಷಾ**'? ಸಮಾಧಿಯಲ್ಲಿ ನೆಲೆಯಾಗಿ ನಿಂತ ಸ್ಥಿತಪ್ರಜ್ಞನ ಲಕ್ಷಣಗಳೇನು? ಇಲ್ಲಿ '**ಭಾಷಾ**' ಎಂದರೆ '**ಭಾಷ್ಯ**', '**ವ್ಯಾಖ್ಯೆ**' ಅಥವಾ '**ಲಕ್ಷಣ**' ಎಂಬರ್ಥ. 'ಸ್ಥಿತಪ್ರಜ್ಞನು ಸಮಾಧಿಯಲ್ಲಿ ಆತನು ಹೇಗೆ ಇರುತ್ತಾನೆಂದು ಕೇಳಿದೆ.

(೨) '**ಸ್ಥಿತಧೀಃ ಕಿಂ ಪ್ರಭಾಷೇತ?**' ಸ್ಥಿತಪ್ರಜ್ಞನ ಮಾತಿನ ರೀತಿ ಎಂತಹದು? ಉಳಿದವರಿಂದ ಆತನನ್ನು ಬೇರ್ಪಡಿಸಿ ಗುರುತಿಸುವ ಕುರುಹುಗಳಾವುವು?

(೩) '**ಕಿಂ ಆಸೀತ?**' ಜಾಗೃತಿಯೊಳಗಿಂದ ಸಮಾಧಿಯಲ್ಲಿ ಸೇರಬೇಕೆಂದು ಬಗೆದಾಗ ಆತನು ಇರುವುದು ಹೇಗೆ? ಯಾವ ಆಸನದಲ್ಲಿ ಆತನು ಇರುವನು? ಆತನು ಸಮಾಧಿಯ ಸಿದ್ಧತೆಯನ್ನು ನಡಸಿರುವನೆಂದು ಅರಿತುಕೊಂಬುದು ಹೇಗೆ?

(೪) '**ವ್ರಜೇತ ಕಿಂ?**' ಈತನ ನಡೆವಳಿ ಹೇಗೆ ಇರುವುದು? ಆತನು ಸ್ಥಿತಿಪ್ರಜ್ಞನೆಂದು ಸೂಚಿಸುವ ನಡೆವಳಿಯು ಎಂತಹದು?

ಸ್ಥಿತಪ್ರಜ್ಞನೆಂದರೆ ಸ್ಥಿರಮತಿಯು. ಚಂಚಲತೆಯನ್ನು ನಷ್ಟಪಡಿಸಿಕೊಂಡ ಆದರ್ಶಪುರುಷನು. ಜನಸಾಮಾನ್ಯರು ತಮ್ಮ ನಡೆವಳಿಯನ್ನು ತಿದ್ದಿಕೊಳ್ಳಲು

ಶ್ರೀಭಗವಾನುವಾಚ— ಪ್ರಜಹಾತಿ ಯದಾ ಕಾಮಾನ್ ಸರ್ವಾನ್ ಪಾರ್ಥ ಮನೋಗತಾನ್ ।
ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಸ್ತದೋಚ್ಯತೇ ॥ ೫೫ ॥
ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ ।
ವೀತರಾಗಭಯಕ್ರೋಧಃ ಸ್ಥಿತಧೀರ್ಮುನಿರುಚ್ಯತೇ ॥ ೫೬ ॥
ಯಃ ಸರ್ವತ್ರಾನಭಿಸ್ನೇಹಸ್ತತ್ತತ್ಪ್ರಾಪ್ಯ ಶುಭಾಶುಭಮ್ ।
ನಾಭಿನಂದತಿ ನ ದ್ವೇಷ್ಟಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭ ॥

---

ಅನ್ವಯ:— ಹೇ ಪಾರ್ಥ! ಯದಾ (ನರಃ) ಮನೋಗತಾನ್ ಸರ್ವಾನ್ ಪ್ರಜಹಾತಿ, ಆತ್ಮನಿ ಏವ ಆತ್ಮನಾ ತುಷ್ಟಃ (ಭವತಿ), ತದಾ ಸ್ಥಿತಪ್ರಜ್ಞಃ ಉಚ್ಯತೇ ॥ ೫೫ ॥ ದುಃಖೇಷು ಅನುದ್ವಿಗ್ನಮನಾಃ, ಸುಖೇಷು ವಿಗತಸ್ಪೃಹಃ, ವೀತರಾಗ-ಭಯ-ಕ್ರೋಧಃ ಮುನಿಃ ಸ್ಥಿತಧೀಃ ಉಚ್ಯತೇ ॥ ೫೬ ॥ ಯಃ ಸರ್ವತ್ರ ಅನಭಿಸ್ನೇಹಃ, ತತ್ ತತ್ ಶುಭಾಶುಭಂ ಪ್ರಾಪ್ಯ, ನ ಅಭಿನಂದತಿ, ನ ದ್ವೇಷ್ಟಿ, ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೭ ॥

ಎಲೈ ಅರ್ಜುನನೆ! ಯಾವಾಗ ಮನುಷ್ಯನು ತನ್ನ ಮನಸಿನ ಎಲ್ಲ ಬಯಕೆ (ಹಂಬಲಿಕೆ)ಗಳನ್ನು ತೊರೆಯುವನೊ ಮತ್ತು ಯಾವಾಗ ಅವನು ತನ್ನ ಆತ್ಮದಲ್ಲಿ ತನ್ನ ಆತ್ಮದ ನೆರವಿನಿಂದಲೆ ಹಿಗ್ಗುವನೊ ಆಗ ಆತನಿಗೆ ಸ್ಥಿತಪ್ರಜ್ಞನೆಂದು ಹೇಳುವರು. ॥ ೫೫ ॥ ಯಾವನ ಮನಸು ದುಃಖದಲ್ಲಿ ತಲ್ಲಳಗೊಳ್ಳುವುದಿಲ್ಲವೊ, ಸುಖದಲ್ಲಿ ಲೋಲಾಡುವುದಿಲ್ಲವೊ ಪ್ರೀತಿ, ಭಯ ಮತ್ತು ಸಿಟ್ಟುಗಳು ಯಾರನ್ನು ವಶಪಡಿಸಿಕೊಳ್ಳಲಾರವೊ ಆತನಿಗೆ ಸ್ಥಿತಪ್ರಜ್ಞ ಮುನಿ ಎಂದು ಹೇಳುವರು. ॥ ೫೬ ॥ ಯಾವನು ಎಲ್ಲಿಯೂ ತೊಡಕಿಕೊಳ್ಳದೆ (ಎಲ್ಲೆಡೆಗಳಲ್ಲಿ ಆಸಕ್ತಿರಹಿತನಾಗಿದ್ದು) ಶುಭ ಅಥವಾ ಅಶುಭವು ಪ್ರಾಪ್ತವಾದರೂ ಅದರಿಂದ ಸುಖಿಸುವುದಿಲ್ಲ ಅಥವಾ ಯಾರನ್ನು ದ್ವೇಷಿಸುವುದಿಲ್ಲವೊ ಅವನ ಬುದ್ಧಿಯು ಸ್ಥಿರವಾದುದು (ಎಂದು ತಿಳಿಯಬೇಕು). ॥ ೫೭ ॥

---

ಮಹಾಪುರುಷರ ಮಾದರಿಗಳನ್ನು ಕಣ್ಣೆದುರು ಇಟ್ಟುಕೊಳ್ಳುತ್ತಾರೆ ಮತ್ತು ಆ ಮಾದರಿಯಂತೆ ತಮ್ಮ ನಡೆನುಡಿಗಳನ್ನು ಮಾರ್ಪಡಿಸಿಕೊಳ್ಳುತ್ತಾರೆ. ಅರ್ಜುನನು ಈ ದೃಷ್ಟಿಯಿಂದಲೆ ಸ್ಥಿತಪ್ರಜ್ಞನ ಕುರುಹುಗಳನ್ನು ಹೇಳಲು ಶ್ರೀಕೃಷ್ಣನಿಗೆ ಬಿನ್ನವಿಸಿಕೊಂಡಿದ್ದಾನೆ. ಅರ್ಜುನನ ಆ ಬಿನ್ನಹವನ್ನು ಮನ್ನಿಸಿ ಶ್ರೀಕೃಷ್ಣನು ಆತನಿಗೆ ಹೇಳಿದ್ದೇನೆಂದರೆ:

(೫೫-೫೮) ಈ ಶ್ಲೋಕಗಳಲ್ಲಿ ಸ್ಥಿತಪ್ರಜ್ಞನ ಲಕ್ಷಣಗಳನ್ನು ಹೇಳಿದೆ: ಅವುಗಳಲ್ಲಿ ಮೊದಲನೆಯದು— ಮನೋಗತಾನ್ ಸರ್ವಾನ್ ಕಾಮಾನ್ ಪ್ರಜಹಾತಿ— ಮನಸಿನ ಎಲ್ಲ ಹಂಬಲಿಕೆ ಹಾರೈಕೆಗಳನ್ನು ತೊರೆಯುವುದು. ಸಾಧಕನ ಪ್ರಾಥಮಿಕ ಸ್ಥಿತಿಯಲ್ಲಿ ಒಮ್ಮೆಲೆ ಎಲ್ಲ ಇಷ್ಟೆಗಳನ್ನೂ ತೊರೆದು ಬಿಡುವುದು ಸುಲಭಸಾಧ್ಯವಾದ ಮಾತಲ್ಲ. ಆದುದರಿಂದ ಆರಂಭದಲ್ಲಿ ಅಕಲ್ಯಾಣಕರ ಅಶುಭ ಆಕಾಂಕ್ಷೆಗಳನ್ನು ದೂರವಿರಿಸಿ, ಕಲ್ಯಾಣಕರ ಶುಭ ಆಕಾಂಕ್ಷೆಗಳನ್ನು ಧಾರಣ ಮಾಡುವುದನ್ನು ಕಲಿಯಬೇಕು. ಇದರ ಸಿದ್ಧಿಯಾದ ಒಳಿಕ ಅಶುಭ ಆಕಾಂಕ್ಷೆಗಳಂತೆ ಶುಭ ಆಕಾಂಕ್ಷೆಗಳನ್ನೂ ಬಿಟ್ಟುಬಿಡುವ ಸಾಧನೆಯನ್ನು ಆರಂಭಿಸಬೇಕು. ಏಕೆಂದರೆ ಮನಃಸ್ವಾಸ್ಥ್ಯವು ಪ್ರಾಪ್ತವಾಗಲು ಚಿತ್ತವನ್ನು ಚಂಚಲಗೊಳಿಸುವ ಯಾವ ಹಂಬಲವೂ ಅಂತರಂಗದಲ್ಲಿ ಕೂಡದು. ಮನಸಿನ ಹೋಯ್ದಾಟವು ಸಂಪೂರ್ಣವಾಗಿ ಇಲ್ಲದಂತಾದಾಗಲೆ ಸ್ಥಿತಪ್ರಜ್ಞಾವಸ್ಥೆಯು ಪ್ರಾಪ್ತವಾಗುವುದು. ಆದುದರಿಂದಲೆ ಇಲ್ಲಿ 'ಸರ್ವಾನ್ ಕಾಮಾನ್' ಎಲ್ಲ ಕಾಮನೆಗಳನ್ನೂ ದೂರವಿರಿಸಬೇಕೆಂದು ಹೇಳಿದೆ.

ಅಶುಭ ಆಕಾಂಕ್ಷೆಗಳನ್ನು ತೊರೆಯಬೇಕೆಂದು ಹೇಳುವುದು ಸರಿ. ಆದರೆ ಶುಭೇಚ್ಛೆಗಳನ್ನು ಬಿಟ್ಟುಬಿಡಬೇಕೆಂಬುದು ಹೇಗೆ ಯೋಗ್ಯ? ಎಂದು ಒಂದು ಸಂದೇಹವು ತಲೆದೋರಬಹುದು. ಮುಕ್ತಿ, ಸಮಾಧಿ ಮತ್ತು ಸುಷುಪ್ತಿಗಳಲ್ಲಿ ಬ್ರಹ್ಮರೂಪತೆಯ ಅನುಭವವು ಬರುವುದು. ಇದರಲ್ಲಿ ಸುಷುಪ್ತಿಯೆಂಬುದು ತೀರ ನಿಕೃಷ್ಟವಾದ ತಮೋರೂಪಿಯಾದ ಬ್ರಾಹ್ಮೀಸ್ಥಿತಿಯಾಗಿದೆ. ಸುಷುಪ್ತಿಯೆಂದು ಗಾಢನಿದ್ರೆ. ಗಾಢನಿದ್ರಾಸುಖವು ಅವಿಚ್ಛಿನ್ನವಾಗಿ ದೊರೆಯಲು ಮನಸಿನಲ್ಲಿರುವ ಅಶುಭ ವಿಚಾರಗಳಂತೆ ಶುಭವಿಚಾರಗಳೂ ಅಡ್ಡಿಯನ್ನುಂಟು-

**ಯದಾ ಸಂಹರತೇ ಚಾಯಂ ಕೂರ್ಮೋಽಙ್ಗಾನೀವ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೮ ॥**

---

**ಅನ್ವಯ:—** ಕೂರ್ಮಃ ಅಂಗಾನಿ ಇವ, ಯದಾ ಚ ಅಯಂ ಇಂದ್ರಿಯಾರ್ಥೇಭ್ಯಃ ಇಂದ್ರಿಯಾಣಿ ಸರ್ವಶಃ ಸಂಹರತೇ (ತದಾ) ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೫೮ ॥

**ಆಮೆಯು ಹೇಗೆ ತನ್ನ ಎಲ್ಲ ಇಂದ್ರಿಯಗಳನ್ನು ಒಳಗೆ ಸೆಳೆದುಕೊಳ್ಳುವುದೋ, ಹಾಗೆ, ಯಾವಾಗ ಈ ಮನುಷ್ಯನು ಇಂದ್ರಿಯ ವಿಷಯಗಳಿಂದ ತನ್ನ ಎಲ್ಲ ಇಂದ್ರಿಯಗಳನ್ನು ಹಿಂದೆ ಸೆಳೆಯಬಲ್ಲನೋ ಆಗ ಅತನ ಮತಿಯು ಸ್ಥಿರವಾಯ್ತು (ಎಂದು ತಿಳಿಯತಕ್ಕದ್ದು.)**

**ಭಾವಾರ್ಥ:—** ಯಾವನು ತನ್ನಲ್ಲಿ ತಲೆದೋರಿದ ಎಲ್ಲ ಇಚ್ಛೆಗಳನ್ನು ತೊರೆದು, ತನ್ನ ಆತ್ಮದ ಸಹಜಾನಂದದಲ್ಲಿ ಮೈಮರೆಯಬಲ್ಲನೋ, ಮತ್ತು ಯಾವನು ದುಃಖದಿಂದ ನಿರಾಶನಾಗುವುದಿಲ್ಲ, ಸುಖದಲ್ಲಿ ಆಸಕ್ತನಾಗುವುದಿಲ್ಲವೋ, ಯಾವನು ಯಾರಿಗೆ ಹೆದರುವುದಿಲ್ಲ, ಅಥವಾ ಯಾರ ಮೇಲೆ ಮುನಿಯುವುದಿಲ್ಲವೋ, ಯಾವನು ಅಸಂಗತ ವೃತ್ತಿಯವನಾಗಿದ್ದುಕೊಂಡು ಶುಭಾಶುಭ ಪ್ರಸಂಗಗಳಿಂದ ಹಿಗ್ಗುತಗ್ಗುವುದಿಲ್ಲವೋ, ಮತ್ತು ಯಾವನು ತನ್ನ ಇಂದ್ರಿಯಗಳನ್ನು ಎಲ್ಲ ಭೋಗಗಳಿಂದ ದೂರವಿರಿಸುವನೋ ಅವನ ಬುದ್ಧಿಯು ಸ್ಥಿರವಾಗಿದೆಯೆಂದು ತಿಳಿಯಬೇಕು ॥ ೫೫-೫೮ ॥

---

ಮಾಡುವುವೆಂಬ ಅನುಭವವು ಎಲ್ಲರಿಗೂ ಉಂಟು. ಇದು ಮೂರನೆಯ ತರಗತಿಯ ಸುಷುಪ್ತಿಯ ಮಾತು. ಎಂದಬಳಿಕ ಇನ್ನು ಸಮಾಧಿ ಮತ್ತು ಮುಕ್ತಸ್ಥಿತಿಗಳು ಕ್ರಮವಾಗಿ ಒಂದಕ್ಕಿಂತ ಇನ್ನೊಂದು ಮೇಲ್ತರಗತಿಯ ಬ್ರಾಹ್ಮೀಸ್ಥಿತಿಗಳು. ಅಲ್ಲಿ ನಿರ್ವಿಕಲ್ಪಸ್ಥಿತಿಯ ಅವಶ್ಯಕತೆಯು ಎಷ್ಟೆಂದು ಹೇಳಬೇಕು? ಆದುದರಿಂದ ಸಾಧಕನು ಮುಂದಿನ ತರಗತಿಗೆ ಹೋದಂತೆ ಮನಸಿನಲ್ಲಿ ಯಾವ ಬಗೆಯ ಸಂಕಲ್ಪ ವಿಕಲ್ಪಾತ್ಮಕ ಅಲೆಗಳೂ ಉಂಟಾಗದಂತೆ ಬರದು ಮಾಡಬೇಕು.

> **ಶುಭಾಶುಭ ಫಲೈರೇವಂ ಮೋಕ್ಷ್ಯಸೇ**
> **ಕರ್ಮಬಂಧನೈಃ ॥** (೯.೨೮)
> **ಶುಭಾಶುಭ ಪರಿತ್ಯಾಗೀ ಭಕ್ತಿಮಾನ್ಯಃ ಸ ಮೇ**
> **ಪ್ರಿಯಃ ॥** (೧೨.೧೭)
> **ತತ್ತತ್ಪ್ರಾಪ್ಯ ಶುಭಾಶುಭಮ್ ।**
> **ನಾಭಿನಂದತಿ ನದ್ವೇಷ್ಟಿ ॥** (೨.೫೭)

ಎಂದು ಮುಂತಾಗಿ ಗೀತೆಯಲ್ಲಿ ಹೇಳಿದುದರ ಕಾರಣವೂ ಇದೇ. ಶುಭಾಶುಭ ಕರ್ಮಗಳು ಬಂಧನಕಾರಕಗಳಾಗಿವೆ. ಅದರಿಂದ ಅವೆರಡನ್ನೂ ಬಿಡಬೇಕು. ಶುಭ ಮತ್ತು ಅಶುಭ ಎರಡನ್ನೂ ತೊರೆದ ಭಕ್ತನು ನನಗೆ ಹೆಚ್ಚು ಮೆಚ್ಚುಗೆಯವನು. ಅವನು ಶುಭವು ಪ್ರಾಪ್ತವಾಗಲು ಸಂತೋಷಗೊಳ್ಳುವುದಿಲ್ಲ. ಅಥವಾ ಅಶುಭವು ಬರಲು ಯಾರನ್ನೂ ದ್ವೇಷಿಸುವುದಿಲ್ಲ.

'ಮನೋಗತಾನ್ ಸರ್ವಾನ್ ಕಾಮಾನ್ ಪ್ರಜಹಾತಿ' ಮನಸಿನೊಳಗಿನ ಎಲ್ಲ ಹಂಬಲಗಳನ್ನೂ ತೊರೆಯುವುದು ಗುರಿಯಾಗಿದೆ. ಇದನ್ನು ಕ್ರಮವಾದ ಅಭ್ಯಾಸದಿಂದ ಸಾಧಿಸತಕ್ಕದ್ದು. ಮುಂದೆ ಇದು ಸಹಜ ಸ್ವಭಾವದಂತೆ ಆದಾಗಲೆ ಸ್ಥಿತಪ್ರಜ್ಞಸ್ಥಿತಿಯು ಪ್ರಾಪ್ತವಾಗುವುದು.

ಬಾಯ್ಬೇಡಿಕೆ, ಮೈಬೇಡಿಕೆಗಳನ್ನು ಪಡೆದುಕೊಂಬ ಹೆಣಗಾಟದಲ್ಲಿಯೆ ಮಾನವನ ಆಯುಷ್ಯವೆಲ್ಲವೂ ಹಾಳಾಗುತ್ತದೆ. ಇದೆಲ್ಲವೂ ಒಡೆದು ಹೋಗುವ ಒಡಲ ಹಂಬಲ! ಈ ಹಂಬಲದಲ್ಲಿ ನಿತ್ಯಶಾಶ್ವತ ಆತ್ಮದ ಹಸಿವನ್ನು ಹಿಂಗಿಸಲು ಮನುಷ್ಯನಿಗೆ ವೇಳೆಯೆ ದೊರೆಯುವುದಿಲ್ಲ; ಇದೇ ಸೋಜಿಗ!

ಆತ್ಮನ ಶಕ್ತಿಯು ಅನಂತವಾಗಿದೆ. ಅದರ ಸ್ವಲ್ಪಾಂಶವು ನಮ್ಮಲ್ಲಿ ಕಾಣಿಸಿಕೊಳ್ಳುತ್ತದೆ. ಅದೂ ಹಲವು ಇಂದ್ರಿಯಗಳಲ್ಲಿ ಹರಿದು ಹಂಚಿಹೋಗುತ್ತದೆ. ಮನುಷ್ಯನು ಇಂದ್ರಿಯ ವೃತ್ತಿಗಳನ್ನು ತಣಿಸಲು ಹೊರಮಿಂಚಿಗೆ ಜೆಂಬತ್ತಿ ಬಳಲುವನು. ಈ ಹೊರಗಿನ ಎಳೆತ, ಸೆಳೆತಗಳನ್ನು ಸಂಪೂರ್ಣವಾಗಿ ಬಿಟ್ಟುಬಿಡದೆ ಅಂತರಂಗ ಆತ್ಮಾನಂದದ ಅನುಭವವು ಬಾರದು. ಇದಕ್ಕಾಗಿಯೆ ಅಶುಭ ಆಕಾಂಕ್ಷೆಗಳಂತೆ ಶುಭಕಾಂಕ್ಷೆಗಳನ್ನೂ ತೊರೆಯುವುದು ಅವಶ್ಯಕವಾಗುತ್ತದೆ. 'ಅಕಾಮ' ಸ್ಥಿತಿಯನ್ನು ಹೊಂದಬೇಕಾಗುತ್ತದೆ.

**ಅಕಾಮೋ ಧೀರೋ ಅಮೃತಃ ಸ್ವಯಂಭೂ ರಸೇನ ತೃಪ್ತೋ ನ ಕುತಶ್ಚನೋನಃ। ತಮೇವ ವಿದ್ವಾನ್ ನ ಬಿಭಾಯ ಮೃತ್ಯೋರಾತ್ಮಾನಂ ಧೀರಮಜರಂ ಯುವಾನಮ್ ॥** ( ಅಥರ್ವ ೧೦-೮-೪೪)

" ಅಕಾಮನು, ದೃಢಬುದ್ಧಿಯವನು, ಅಮರನು, ಮೊದಲಿನಿಂದ ತನ್ನ ತಾನೆ ಆದವನು, ರಸದಿಂದ ತೃಪ್ತನು, ಯಾವ ಕೊರತೆಯಿಲ್ಲದವನು, ಮುಪ್ಪು ಇಲ್ಲದವನು, ತರುಣನು ಆಗಿರುವ ಆತ್ಮನನ್ನು ತಿಳಿದವನು (ಜ್ಞಾನಿಯು) ಸಾವಿಗೆ ಹೆದರುವುದಿಲ್ಲ. " 'ಅಕಾಮ' ನಾದವರಿಗೆ ದೊರೆಯತಕ್ಕ ಇಡಿಲ್ಲ ಸೌಭಾಗ್ಯವು 'ಸಕಾಮ'ರಿಗೆ ಹೇಗೆ ತಾನೆ ಸಿಕ್ಕೀತು? ಆದುದರಿಂದ ಉಪನಿಷತ್ತು-ಗಳಲ್ಲಿ ಹೀಗೆ ಹೇಳಿದೆ:

**ಉಪಾಸತೇ ಪುರುಷಂ ಯೇ ಹ್ಯಕಾಮಾಸ್ತೇ
ಶುಕ್ರಮೇತದತಿ ವರ್ತಂತಿ ಧೀರಾಃ ॥**
( ಮು ಉ. ೩-೨-೧)

**ತದ್ವಾ ಅಸ್ಯೈತದಾಪ್ತಕಾಮಮಾತ್ಮಕಾಮ-
ಮಕಾಮಂ ರೂಪಂ ಶೋಕಾಂತರಮ್ ॥**
( ಬೃ ಉ. ೪-೩-೨೧)

**ಯೋಽಕಾಮೋ ನಿಷ್ಕಾಮ ಆಪ್ತಕಾಮ
ಆತ್ಮಕಾಮೋ ನ ತಸ್ಯ ಪ್ರಾಣಾ ಉತ್ಕ್ರಾಮಂತಿ
ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ॥** (ಬೃ. ಉ. ೪-೪-೬)
**ಯದಾ ಸರ್ವೇ ಪ್ರಮುಚ್ಯಂತೇ ಕಾಮಾ ಯೇಽಸ್ಯ
ಹೃದಿ ಶ್ರಿತಾಃ।
ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ
ಸಮಶ್ನುತೇ ॥** ( ಬೃ. ಉ. ೪-೪-೭)

ಅಕಾಮರಾಗಿ ಪರಮ ಪುರುಷನನ್ನು ಆರಾಧಿಸುವ ಧೀರರು ವೀರ್ಯವಂತರಾಗುತ್ತಾರೆ. ಬೇಡಿಕೆಗಳನ್ನು ಪಡೆದವರು, ಆತ್ಮವನ್ನು ಅಪೇಕ್ಷಿಸುವವರು ಅಕಾಮ-ರಾಗಿ—ಬೇಕು ಸಾಕಾಗಿ ಶೋಕಗಳನ್ನು ದಾಟುತ್ತಾರೆ. ಬೇಕುಬಿಟ್ಟವರು ( ಅಕಾಮರು ) ನಿಷ್ಕಾಮರಾಗುತ್ತಾರೆ. ಅವರೆ ಆತ್ಮಕಾಮರು; ಆಪ್ತಕಾಮರು. ಅವರ ಪ್ರಾಣಗಳು ಹೋಗುವುದಿಲ್ಲ. ಅವರು ಬ್ರಹ್ಮತ್ವವನ್ನ ಪಡೆದು ಬ್ರಹ್ಮನಲ್ಲಿಯೆ ಉಳಿಯುವರು. ಬೇಕುಗಳೆನ್ನೆಲ್ಲ ತೊರೆದ ಮೇಲೆಯೆ ಮಾನವರು ಸಾವಿಲ್ಲದವರಾಗುವರು ಬ್ರಹ್ಮಪದವಿಯನ್ನು ಹೊಂದುವರು.

'ಆತ್ಮನಿ ಏವ ಆತ್ಮನಾ ತುಷ್ಟಃ' ತನ್ನಲ್ಲಿಯೆ ತಾನು ಹಿಗ್ಗುಗೊಳ್ಳುವುದಕ್ಕೆ ಸಮರ್ಥನಾಗಬೇಕಾದರೆ ಅವನು ಅಕಾಮ ಅಥವಾ ನಿಷ್ಕಾಮನಾಗಬೇಕು. ಸಕಾಮನು ಬಾಹ್ಯ ಸುಖಭೋಗಗಳನ್ನು ಅನುಭವಿಸಿದ ಮೇಲೂ ಅತೃಪ್ತನಾಗಿರುತ್ತಾನೆ. ಆದರೆ ಅಕಾಮನು ಅಥವಾ ನಿಷ್ಕಾಮನು ಆತ್ಮತೃಪ್ತನು. ಅಕಾಮ ಮತ್ತು ಸಕಾಮರನ್ನು ಹೋಲಿಸಿ ಅವರ ಇರುವಿನಲ್ಲಿರುವ ವ್ಯತ್ಯಾಸವನ್ನು ಅರಿತುಕೊಳ್ಳಬಹುದಾಗಿದೆ.

| | |
|---|---|
| ಅಕಾಮ | ಸಕಾಮ |
| ನಿಷ್ಕಾಮ | ವರ್ಧಮಾನ ಕಾಮ |
| ಆಪ್ತಕಾಮ | ಕಾಮೋಪಭೋಗ ಪರಮ |
| ಆತ್ಮಕಾಮ | ವಿಷಯಭೋಗ ಕಾಮ |
| ಆತ್ಮತುಷ್ಟ | ಅಸಂತುಷ್ಟ |
| ಅಮರ | ಮರ್ತ್ಯ |
| ಧೀರ | ಭೀರು, ಕ್ಷುದ್ರ |
| ಶೋಕರಹಿತ | ಶೋಕಯುಕ್ತ |
| ದುಃಖದಲ್ಲಿಯೂ ಶಾಂತ | ದುಃಖದಲ್ಲಿ ಕಂಗೆಟ್ಟವನು |
| ಸುಖದಲ್ಲಿ ಮೈಮರೆಯದವನು | ಸುಖದಲ್ಲಿ ಸಂಭ್ರಮಿಸುವವನು |
| ಭಯಕ್ರೋಧರಹಿತ | ಭಯಭೀತ, ಕ್ರೋಧಿ |
| ವಿರಕ್ತ | ಭೋಗಲುಬ್ಧ |

ಈ ಹೋಲಿಕೆಯಿಂದ ಸಕಾಮನು ದಿನದಿನಕ್ಕೂ ದುಃಖದ ಕೆಸರಿನಲ್ಲಿ ಹೇಗೆ ಹೆಚ್ಚುಹೆಚ್ಚಾಗಿ ಹುಗಿ-ಯಲ್ಪಡುವನೆಂಬುದೂ ಸ್ಪಷ್ಟವಾಗುವುದು. ಮನಃಶಾಂತಿಗೆ, ಆತ್ಮಸಂತೋಷವು ಬೆಳೆಯುವುದಕ್ಕೆ, ಬೇಕುಗಳನ್ನು ಬೇರುಸಹಿತ ಕಿತ್ತಿ, ನಟ್ಟುಕಡಿದು, ಮನಸನ್ನು ಹಸನಮಾಡುವುದೆ ಶ್ರೇಷ್ಠವಾದ ಉಪಾಯವಾಗಿದೆ.

ನಿರೋಗಿಯಾದ ಮಗುವು ತಾಯಿ ಮೊಲೆಹಾಲನ್ನು ಕುಡಿದೊಡನೆ ಹಿಗ್ಗಿ ತನ್ನಲ್ಲಿ ತಾನೆ ನಲಿದಾಡುವುದು. ಆಪ್ತಕಾಮವಾದೊಡನೆ ಉಂಟಾಗುವ ಸಹಜಾನಂದವನ್ನು ಮಗುವಿನ ಈ ಅವಸ್ಥೆಯಲ್ಲಿ ಮನಗಾಣಬಹುದು. ಬಾಲವೃತ್ತಿಯಲ್ಲಿ ದೊರೆವ ಆ ಸಹಜಾನಂದವು ಆತ್ಮಾನಂದದ ಮಾದರಿಯುದು. ಮನಸಿನ ಹಂಬಲಗಳು ಹೆಚ್ಚಿದಂತೆ ಈ ಆನಂದಕ್ಕೆ ಮಾನವನು ಎರವಾಗುವನು. ಸ್ವರ್ಗೀಯ ದೇವದೂತನಂತೆ ಸ್ವಾನಂದ ಸಾಮ್ರಾಜ್ಯದಲ್ಲಿ ವಿಹರಿಸುತ್ತಲಿದ್ದವನು ಪತಿತ ಮರ್ತ್ಯನಾಗುವನು. ಫಲಾಪೇಕ್ಷೆಯ ಹುಚ್ಚು ಹಂಬಲವೆ ಮಾನವನ ಕೀಳ್ಮೆಗೆ ಕಾರಣವು. ಆ ಫಲವನ್ನು ದಾನಮಾಡಿದರೆ ಮಾನವನ ಏಳ್ಗೆಗೆ ಯಾವ ಅಡೆತಡೆಗಳೆ ಉಳಿಯುವುದಿಲ್ಲ. ಬಹಿರ್ಮುಖನಾಗಿ ಆತ್ಮನಿಂದ ದೂರ ಹೋದಂತೆ ಮಾನವನ ದುಃಖವು ಹೆಚ್ಚುವುದು. ಮರಳಿ ಆತ್ಮಮುಖನಾಗಿ

ಸ್ವಸ್ಥನಾದಾಗಲೆ ಎಲ್ಲ ದುಃಖಗಳೂ ಕೊನೆಗೊಳ್ಳುವುವು. (ಆತ್ಮನಿ ಏವ ಆತ್ಮನಾ ತುಷ್ಟಃ) ಆತ್ಮದಲ್ಲಿ ಸ್ವಶಕ್ತಿಯ ಯೋಗದಿಂದ ಸಂತುಷ್ಟನಾಗುವನು. ಇವನೆ ಸ್ಥಿತ ಪ್ರಜ್ಞನು.

ಆತ್ಮದಲ್ಲಿ ಅಂತಹ ಅಗಾಧ ಶಕ್ತಿಗಳು ಅಡಕವಾಗಿವೆ. ಆದುದರಿಂದಲೆ ಆತ್ಮಾನುಸಂಧಾನದಿಂದ ಮಾನವರಿಗೆ ಅನುಪಮೇಯವಾದ ಸುಖವು ದೊರೆಯುತ್ತದೆ. ಉಪ ನಿಷತ್ತಿನಲ್ಲಿ ಆತ್ಮಶಕ್ತಿಯನ್ನು ಕುರಿತು ಹೇಳಿರುವು ದೇನೆಂದರೆ :

ಆಕಾಶಾತ್ಮಾ ಸರ್ವಕರ್ಮಾ ಸರ್ವಕಾಮಃ
ಸರ್ವಗಂಧಃ
ಸರ್ವರಸಃ ಸರ್ವಮಿದಮಭ್ಯಾತ್ತೋಽ
ವಾಕ್ಯನಾದರಃ ॥ ೨ ॥
ಏಷ ಮ ಆತ್ಮಾಂತರ್ಹೃದಯೇ ಜ್ಯಾಯಾನ್
ಪೃಥಿವ್ಯಾ ಜ್ಯಾ
ಯಾನ್ ಅಂತರಿಕ್ಷಾತ್ ಜ್ಯಾಯಾನ್ ದಿವೋ
ಜ್ಯಾಯಾನೇಭ್ಯೋ ಲೋಕೇಭ್ಯಃ ॥ ೩ ॥
........ಏತದ್ ಬ್ರಹ್ಮ ॥ ೪ ॥ (ಛಾಂ ೩-೧೪)

ಈ ಆತ್ಮನು ಮನೋಮಯನು; ಪ್ರಾಣವೆ ಶರೀರ ವಾಗಿರುವವನು; ಪ್ರಕಾಶರೂಪನು; ಸಂಕಲ್ಪಗಳು ಸತ್ಯವಾಗುವವನು; ಆಕಾಶದಂತಿರುವವನು; ಈತನು ಕರ್ಮಶಕ್ತಿಯುಳ್ಳವನು, ಎಲ್ಲ ಹಾರೈಕೆಗಳುಳ್ಳವನು; ಎಲ್ಲ ಗಂಧಗಳುಳ್ಳವನು, ಮತ್ತು ಎಲ್ಲ ರಸಗಳಿಂದ ಪರಿಪೂರ್ಣನು ಆಗಿರುವನು. ಈತನು ಸರ್ವವ್ಯಾಪಕ ನಾಗಿದ್ದು ಮಾತಿಗೆ ಮೀರಿದ್ದಾನೆ. ಯಾವುದರ ಮೇಲೂ ಈತನು ಅವಲಂಬಿಸಿಲ್ಲ. ಈ ಆತ್ಮನು ನನ್ನ ಹೃದಯಾಂತ ರಾಳದಲ್ಲಿದ್ದಾನೆ. ಇವನು ಪೃಥ್ವಿ, ಅಂತರಿಕ್ಷ, ದ್ಯುಲೋಕ ಗಳಿಂದಲೂ ಹಿರಿದಾದವನು. ಎಲ್ಲ ಲೋಕಗಳಿಗಿಂತಲೂ ಮಿಗಿಲಾದವನು. ಈತನೆ ಬ್ರಹ್ಮ.'' ಅದರಂತೆ

ಆತ್ಮತಃ ಪ್ರಾಣಃ, ಆತ್ಮತಃ ಆಶಾ, ಆತ್ಮತಃ ಸ್ಮರಃ, ಆತ್ಮತಃ ಆಕಾಶಃ, ಆತ್ಮತಃ ತೇಜಃ, ಆತ್ಮತಃ ಆಪ, ಆತ್ಮತಃ ಆವಿರ್ಭಾವತಿರೋಭಾವೌ, ಆತ್ಮತಃ ಅನ್ನಂ, ಆತ್ಮತಃ ಬಲಂ, ಆತ್ಮತಃ ವಿಜ್ಞಾನಂ, ಆತ್ಮತಃ ಧ್ಯಾನಂ, ಆತ್ಮತಃ ಚಿತ್ತಂ, ಆತ್ಮತಃ ಸಂಕಲ್ಪಃ, ಆತ್ಮತಃ ಮನಃ, ಆತ್ಮತಃ ವಾಕ್, ಆತ್ಮತಃ ನಾಮಂ, ಆತ್ಮತಃ ಮಂತ್ರಾಃ, ಆತ್ಮತಃ ಕರ್ಮಾಣಿ, ಆತ್ಮತಃ ಏವ ಇದಂ ಸರ್ವಮ್ ॥ ಛಾಂ ೭-೨೬-೧.

“ಆತ್ಮನಿಂದ ಪ್ರಾಣ, ಆಶೆ, ಕಾಮ, ಆಕಾಶ, ತೇಜ, ಜಲ, ಅನ್ನ, ಬಲ, ಜ್ಞಾನ, ಚಿತ್ತ, ಸಂಕಲ್ಪ, ಮನಸು, ವಾಣಿ, ನಾಮ, ಮಂತ್ರ, ಕರ್ಮ ಆದ್ಯಂತ ಅಖಿಲ ಜಗತ್ತು ಹುಟ್ಟುತ್ತದೆ. ಇವೆಲ್ಲ ಲೋಕದ ಆಗುಹೋಗು ಗಳೆಲ್ಲವೂ ಆತ್ಮನಿಂದಲೆ ಜರಗುವುವು.'' ಇಂತಹ ಅನಂತ ಶಕ್ತಿಯ ಆತ್ಮನ ಸಿದ್ಧಿಯಾದವನಿಗೆ ಯಾತರ ಕೊರತೆ? ಅಲ್ಪದ ಬೆಂಬತ್ತಿ ಬಹಿರ್ವೃತ್ತಿಯವನಾಗುವುದಕ್ಕಿಂತ ಭೂಮಾ ಸುಖಕ್ಕಾಗಿ ಆತ್ಮಾಭಿಮುಖನಾಗುವುದೇ ಜಾಣ್ಮೆ ಯಾಗಿದೆ. ಶ್ರೇಷ್ಠವನ್ನು ಕಡೆಗಣಿಸಿ ಕನಿಷ್ಠಕ್ಕೆ ಕೈಯೊಡ್ಡು ವುದು ತಿಳಿಗೇಡಿತನವಲ್ಲವೆ? ಆದುದರಿಂದಲೆ ಸರ್ವಶಕ್ತಿ ಸಂಪನ್ನವಾದ ಆತ್ಮಸಾಧನೆಯೆ ಮಾನವನ ಪರಮ ಕಲ್ಯಾಣಕಾರಕವಾದ ತಗ್ಗುರಿಯಾಗಿದೆ. ಇದಕ್ಕಾಗಿಯೆ ಆತನು ‘ಆತ್ಮನಿ ಏವ ಆತ್ಮನಾ ತುಷ್ಟಃ’ ಆತ್ಮತೃಪ್ತ ನಾಗಿರುವುದಕ್ಕೆ ಕಲಿಯಬೇಕು ಇದರಿಂದ ಆತನು ಸ್ಥಿರ ವಾದ ಪ್ರಜ್ಞೆಯುಳ್ಳವನಾಗುವನು. ಎಂದರೆ ಸ್ಥಿರಪ್ರಜ್ಞ ನೆನಿಸುವನು.

ಮನಸಿನ ಹಾರೈಕೆಗಳನ್ನೆಲ್ಲ ತೊರೆದುಬಿಟ್ಟರೆ ಆ ಮನು ಷ್ಯನು ಷಂಡನಾದ ನಿಷ್ಕ್ರಿಯನಾಗುವನೆಂದು ಹಲ ವರ ತಿಳುವಳಿಕೆಯಾಗಿದೆ. ಅದಕೆ ಶ್ರೀಕೃಷ್ಣನು ತನ್ನ ಸ್ವಂತದ ಅನುಭವವನ್ನು ಗೀತೆಯಲ್ಲಿ ಹೀಗೆ ಹೇಳಿದ್ದಾನೆ:

ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು
ಲೋಕೇಷು ಕಿಂಚನ ।
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ
ಕರ್ಮಣಿ ॥ ೩-೨೨

ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ
ಕುರ್ವಂತಿ ಭಾರತ ।
ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್-
ಲೋಕ ಸಂಗ್ರಹಮ್ ೩-೨೫

“ಎಲೈ ಅರ್ಜುನನೆ! ಮೂರುಲೋಕಗಳಲ್ಲಿಯೂ ನನಗೆ ಸ್ವಲ್ಪವೂ ಮಾಡತಕ್ಕುದೆಂಬುದೆ ಇಲ್ಲ. ನಾನು ಪಡೆಯ ಬೇಕಾದುದಾಗಲಿ, ಪಡೆಯಲಿಲ್ಲವೆಂಬುದಾಗಲಿ ಒಂದೂ ಇಲ್ಲ. ಹೀಗಿದ್ದರೂ ನಾನು ಕರ್ಮಗಳಲ್ಲಿ ತೊಡಗಿ ಕೊಂಡಿದ್ದೇನೆ. ತಿಳಿಗೇಡಿಗಳು ಆಸಕ್ತರಾಗಿ ಹೆಣಗಾಡು ವಂತೆ ತಿಳಿದವರು ಆಸಕ್ತಿಯಿಲ್ಲದೆ— ನಿಷ್ಕಾಮಭಾವನೆ ಯಿಂದ ಲೋಕಕಲ್ಯಾಣಕ್ಕಾಗಿ ಕೆಲಸಮಾಡುತ್ತಿರ ಬೇಕು.''

ಸ್ಥಿತಪ್ರಜ್ಞನಾದ ಜ್ಞಾನಿಯು ಕೂಡ ಕಾಯಕ (ಕೆಲಸ) ಬಿಡತಕ್ಕದ್ದಲ್ಲವೆಂದು ಇಲ್ಲಿ ಶ್ರೀಕೃಷ್ಣನು

ವಿಧಿಸಿದ್ದನ್ನು ಕಾಣಬಹುದು. ಆಪ್ತ-ಕಾಮ, ಅಕಾಮ, ನಿಷ್ಕಾಮ, ಆತ್ಮಕಾಮ, ಸ್ಥಿತಪ್ರಜ್ಞರಾದ ಆತ್ಮಸಂತುಷ್ಟ ಮಹಾಮುನಿಗಳೂ ಲೋಕಕಲ್ಯಾಣಕ್ಕಾಗಿ ತಮ್ಮ ಜೀವಮಾನ ವಿರುವವರೆಗೂ ಸತತವಾಗಿ ದುಡಿಯುತ್ತಿರುವುದು ಕರ್ತವ್ಯವಾಗಿದೆ. ಜನಕ, ನಾರದ, ವಾಮನ, ಯಾಜ್ಞವಲ್ಕ್ಯ ಮೊದಲಾದ ಪುರಾತನರು ತಮ್ಮ ಜೀವನದಿಂದ ಲೋಕಕ್ಕೆಲ್ಲ ಈ ವಿಷಯದಲ್ಲಿ ಮೇಲ್ಪಂಕ್ತಿಯನ್ನು ಹಾಕಿಕೊಟ್ಟಿದ್ದಾರೆ. ಆತ್ಮಸಿದ್ಧರ ಕಾರ್ಯಕ್ಷೇತ್ರವು ವಿಶಾಲವಾದ ಮಾನವ ಕುಟುಂಬವೆ ಆಗಿರುತ್ತದೆ. ಮತ್ತು ಅವರ ಆತ್ಮಸಿದ್ಧಿಯ ಮೂಲಕ, ಅಂತಹ ವಿಶಾಲಕ್ಷೇತ್ರದಲ್ಲಿ ಕೆಲಸಮಾಡುವ ವಿಶೇಷ ಶಕ್ತಿಗಳೂ ಅವರಿಗೆ ಫಲಿಸಿರುತ್ತವೆ. ಸಾಮಾನ್ಯರಿಗೆ ಅಸಾಧ್ಯವೆನಿಸುವ ಕೆಲಸವನ್ನು ಅವರು ಸಹಜವಾಗಿ ನೆರವೇರಿಸುತ್ತಾರೆ. ಗೀತೆಯ ೩ನೆಯ ಅಧ್ಯಾಯದಲ್ಲಿ ಈ ವಿಷಯಕ್ಕೆ ಹೀಗೆ ಹೇಳಿದೆ:

ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ
ಮಾನವಃ ।
ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ
ನ ವಿದ್ಯತೇ ॥ ೧೭ ॥
ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ
ಕಶ್ಚನ ।
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥ
ವ್ಯಪಾಶ್ರಯಃ ॥ ೧೮ ॥
ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ
ಸಮಾಚರ ।
ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ
ಪೂರುಷಃ ॥ ೧೯ ॥

ಆತ್ಮರತನಾದ ಆತ್ಮತೃಪ್ತ ಮನುಷ್ಯನಿಗೆ ಆತನು ಆತ್ಮಸಂತುಷ್ಟನೆ ಇರುವುದರಿಂದ (ಸ್ವಂತಕ್ಕಾಗಿ) ಮಾಡಬೇಕಾದ ಕೆಲಸವೆ ಏನೂ ಉಳಿದಿರುವುದಿಲ್ಲ. ಕರ್ಮ ಮಾಡುವುದರಲ್ಲಿ ಅಥವಾ ಅದನ್ನು ಬಿಡುವುದರಲ್ಲಿ ಆತನ ಸ್ವಾರ್ಥವು ಎಳ್ಳಷ್ಟೂ ಇರುವುದಿಲ್ಲ. ಮತ್ತು ಭೂತಮಾತ್ರಗಳಿಂದ ಆತನು ಸಾಧಿಸಿಕೊಳ್ಳಬೇಕೆಂಬ ಸ್ವಾರ್ಥವು ಉಳಿದಿರುವುದಿಲ್ಲ. ಆದುದರಿಂದ ನೀನು ಆಸಕ್ತಿರಹಿತನಾಗಿ ಯಾವಾಗಲೂ ಕರ್ತವ್ಯಕರ್ಮಗಳನ್ನು ನೆರವೇರಿಸುತ್ತಿರು. ಆಸಕ್ತಿಯಿಲ್ಲದೆ ಕೆಲಸ ಮಾಡತಕ್ಕವನಿಗೆ ಶ್ರೇಷ್ಠ ಸ್ಥಾನವು ದೊರೆಯುವುದು. ಬೆಳಕು ಕೊಡುವುದು ದೀಪದ ಸ್ವಭಾವವು ಆಗಿರುವಂತೆ ಲೋಕಹಿತಕ್ಕಾಗಿ ಸವೆಯುವುದು ಆತ್ಮಸಿದ್ಧರಾದ ಸ್ಥಿತಪ್ರಜ್ಞರ ಸಹಜ ಗುಣವೆ ಆಗಿಬಿಡುತ್ತದೆ.

ಸಕಾಮ ಮತ್ತು ನಿಷ್ಕಾಮ ಮನುಷ್ಯರ ಕರ್ಮಗಳಲ್ಲಿ ಭೇದವಿದೆ: ಸಕಾಮನು ವೈಯಕ್ತಿಕ ಸಂಕುಚಿತ ಕ್ಷೇತ್ರದಲ್ಲಿಯೆ ಕೆಲಸ ಮಾಡುವನು. ಅಕಾಮನು ಅಥವಾ ಆತ್ಮಕಾಮನಾದ ಪೂರ್ಣಮಾನವನು ಸಂಪೂರ್ಣ ಮಾನವ ಕುಟುಂಬದ ಹಿತಕ್ಕಾಗಿ ವಿಸ್ತಾರವಾದ ಕಾರ್ಯಕ್ಷೇತ್ರದಲ್ಲಿ ತೊಡಗಿಕೊಂಡಿರುವನು. ಸಕಾಮನು ಸ್ವಾರ್ಥಿಯು, ಸಂಕುಚಿತ ಮನಸಿನವನು; ನಿಷ್ಕಾಮನು ಪರೋಪಕಾರಿಯು, ಪಾರಮಾರ್ಥಿಕನು; ಆದಕಾರಣ ಕಾಮ್ಯಭಾವನೆಗಳನ್ನು ತೊರೆದವನು ಕಲ್ಲಿನಂತೆ ನಿಷ್ಕ್ರಿಯನಾಗುವನೆಂಬುದು ಸುಳ್ಳು. ಕಾಮನಾತ್ಯಾಗವೆಂದರೆ ಮೈಗಳ್ಳತನದ ಸಂಚಕಾರವಲ್ಲ; ವಿಸ್ತಾರವಾದ ಕಾರ್ಯಕ್ಷೇತ್ರದಲ್ಲಿ ದುಡಿಯುವುದಕ್ಕೆ ಪಡೆಯುವ ಅರ್ಹತೆ. ಅರಳಿದ ಹೂವು ಲೋಕಕ್ಕೆ ಸಹಜವಾಗಿಯೆ ಆನಂದಕಾರಿಯಾಗುವಂತೆ ಆಪ್ತಕಾಮನ ಸ್ವಾಭಾವಿಕ ಪ್ರವೃತ್ತಿಯೆ ಲೋಕಕಲ್ಯಾಣಕಾರಕವಾಗುವುದು.

ಸ್ಥಿತಪ್ರಜ್ಞನ ಇನ್ನೂ ಕೆಲವು ಕುರುಹುಗಳುಂಟು; (ದುಃಖೇಷು ಅನುದ್ವಿಗ್ನಮನಾಃ) ದುಃಖದಲ್ಲಿ ಮನಸ್ಸನ್ನು ಹೊಯ್ದಾಡಗೊಡದಿರುವುದು, (ಸುಖೇಷು ವಿಗತಸ್ಪೃಹಃ) ಸುಖದಲ್ಲಿ ಆಸಕ್ತನಾಗದಿರುವುದು, (ವೀತರಾಗ-ಭಯಕ್ರೋಧಃ) ಆಸಕ್ತಿ, ಪುಕ್ಕತನ, ಸಿಟ್ಟು ಬಿಟ್ಟುಬಿಡುವುದು, (ಮುನಿಃ) ಮಾತಾಳಿಯಾಗದಿರುವುದು. ಸಾಮಾನ್ಯರು ದುಃಖಗಳ ಆಘಾತಗಳಿಂದ ಗಾಸಿಗೀಡಾಗಿ ಬೆಂಡುಬೆಂಡಾಗಿ, ತಾವು ಕೈಕೊಂಡ ಸತ್ಕಾರ್ಯಗಳನ್ನೂ ಬಿಟ್ಟು ಬಿಡುವರು. ಇದು ಅವರ ಮನೋದೌರ್ಬಲ್ಯದ ಲಕ್ಷಣವು. ಈ ಬಗೆಯ ಹೇಡಿಮನಸಿನವರು ಸುಖಗಳು ಬರುತ್ತಲೂ ಮೈಮರೆಯುವರು. ಸೊಕ್ಕಿ ಸೊರಗುವರು. ಕರ್ತವ್ಯಭ್ರಷ್ಟರಾಗುವರು. ಇಂತಹ ಹಗುರುಮನಸಿನವರು ಯಾವಾಗಲೂ ಸುಖದುಃಖಗಳಲ್ಲಿಯೆ ತೊಳಲಾಡತಕ್ಕವರು. ಇವರಿಂದ ಯಾವ ಹಿರಿಮೆಯ ಕೆಲಸವೂ ಕೈಗೂಡದು. ಏಕೆಂದರೆ ಇವರ ಜೀವನಕ್ಕೆ ಯಾವ ಸ್ಥಿರವಾದ ತಾತ್ವಿಕ, ಸಾತ್ವಿಕ ಅಡಿಗಲ್ಲೇ ಇರುವುದಿಲ್ಲ. ಇವರೆ ಹುಲುಮಾನವರು. ಗಾಳಿಯು ತೂರಿಕೊಂಡು ಒಯ್ದತ್ತ ಅಲೆವವರು. ಸುಖದಲ್ಲಿ ಮೈಮರೆತು ಬಿಡುವುದು, ಇಲ್ಲವೆ ದುಃಖದಲ್ಲಿ ಕಂಗೆಡುವುದೂ ಇವರ ಸ್ವಭಾವ. ಆದರೆ ಮಾನವನು ಈ ಸುಖದುಃಖಗಳ ಗಸಣೆಯಿಂದ ಪಾರಾಗಿ, ಇವುಗಳನ್ನು ಲೆಕ್ಕಿಸದೆ ತನ್ನ ಕರ್ತವ್ಯತತ್ಪರನಾಗಿರಲು ಕಲಿಯದೆ ಹೋದರೆ ಆತನ ಜನ್ಮವು ವ್ಯರ್ಥವೆ ಸರಿ. ದುಃಖಗಳಿಂದ ಉದಾಸೀನನಾಗದೆ, ಸುಖದಿಂದ

ಉನ್ಮತ್ತನಾಗದೆ, ಗಂಡುಗಲಿಯಂತೆ ಕೆಚ್ಚೆದೆಯವನಾಗಿ ತಾನು ಕೈಕೊಂಡ ಸತ್ಕಾರ್ಯವನ್ನು ಮುಂದುವರಿಸುವ ಸಾಮರ್ಥ್ಯವು ಬರಬೇಕಾದರೆ ಆತನು ತನ್ನ ಆತ್ಮಾನಂದ-ದಲ್ಲಿ ತಲ್ಲೀನನಾಗಲು ಕಲಿಯಬೇಕು. ಅಖಂಡ ಸ್ವಾನಂದ ಸಾಮ್ರಾಜ್ಯದಲ್ಲಿ ವಿಹರಿಸಬೇಕು. ಈ ಬಗೆಯ ಸಹಜಾನಂದವನ್ನು ಹೊಂದಲು ಬಲ್ಲವನಲ್ಲಿ ಆತ್ಮಶಕ್ತಿಯು ವಿಕಾಸಗೊಳ್ಳುವುದು. ಆತನು ಬ್ರಹ್ಮ-ಶಕ್ತಿಯಿಂದ ಯುಕ್ತನಾಗುವನು.

ಹೊರಮಿಂಚು ಮಾನವನನ್ನು ಅಡಿಗಡಿಗೂ ತನ್ನತ್ತ ಸೆಳೆಯುತ್ತಿರುತ್ತದೆ. ಕಾಮಕ್ರೋಧಗಳು ಎಲ್ಲೆಲ್ಲೂ ಬಲೆಯನ್ನು ಒಡ್ಡಿನಿಂತಿವೆ ಭೋಗೇಚ್ಛೆಯು ಮಂಕು-ಮಾಡಲು ಪಣತೊಟ್ಟಿದೆ. ಆದುದರಿಂದ ಇವೆಲ್ಲವುಗಳ ದಾರಿಯನ್ನು ಬಿಟ್ಟು ಮಾನವನು ಯಾವಾಗ ತನ್ನಲ್ಲಿ ತಾನು ಸಂತುಷ್ಟನಾಗಲು ( ಆತ್ಮನಿ ಆತ್ಮನಾ ತುಷ್ಟಃ ) ಸಮರ್ಥನಾಗುವನೊ ಆಗಲೆ ಆತನಿಗೆ ಮೇಲಣ ಅರಿಷಡ್ವ-ರ್ಗವು ಏನನ್ನೂ ಮಾಡಲಾರದು. ಮತ್ತು ಆತನ ಆತ್ಮ-ಶಕ್ತಿಯೂ ವೃದ್ಧಿಂಗತವಾಗಬಲ್ಲುದು.

ಸುಖವನ್ನು ಪಡೆಯುವುದು, ದುಃಖವನು ಹೋಗ-ಲಾಡಿಸುವುದು ಇದೆ ಮನುಷ್ಯನ ಅಂತರಾಳದೊಳಗಿನ ಇಚ್ಛೆಯು. ಆದರೆ ಈ ಮನೋಗತವನ್ನೂ ಆತನು ತೊರೆದು ಬಿಡುವುದು ಅವಶ್ಯ. ಏಕೆಂದರೆ ಮನಸು ನಿರ್ವಿಕಾರಿಯಾಗಲು ಇದು ಅಸ್ಟ ಬರುವುದು. ಮನು-ಷ್ಯನು ಸ್ವ-ಸ್ಥನಾಗಿ-ತನ್ನಲ್ಲಿ ತಾನು ಲೀನನಾಗುವುದಕ್ಕೆ ಈ ಮನೋಗತವನ್ನು ದೂರವಿರಿಸದೆ ಗತಿಯಿಲ್ಲ. ಸ್ವ-ಸ್ಥನಾದವನಲ್ಲಿ ಆತ್ಮಶಕ್ತಿಯು ತಲೆದೋರುವುದು. ಆತನು ಎಂತಹ ಸಂಕಟಗಳಿಗೂ ಎದೆಗುಂದದೆ ತನ್ನ ಕರ್ತವ್ಯದಲ್ಲಿ ತೊಡಗಿರುತ್ತಾನೆ. ಇಂದ್ರಿಯ ಭೋಗ-ಗಳಿಂದ ದೊರೆವ ಸುಖದಲ್ಲಿ ಮೈಮರೆಯದವನಿಗೇ 'ನರ'ನೆಂಬ ಹೆಸರು ( ನ+ರಮ್ ) ಸಾರ್ಥಕ ವಾಗಿದೆ.

ಹೊರಗಿನ ಸುಖದ ಹಂಬಲವಿಲ್ಲದವನಿಗೆ ಯಾವ ಸಂಕಷ್ಟವೂ ದುಃಖಕ್ಕೆ ಈಡುಮಾಡಲಾರದು. ಹೊರ-ಗಿನ ಸಾಧನಗಳಿಂದ ಸುಖವನ್ನು ಹೊಂದಬೇಕೆಂಬ ಹಾರೈಕೆಯು ಆ ಮನುಷ್ಯನ ಹೇಡಿತನವನ್ನೇ ಸೂಚಿಸು-ತ್ತದೆ. ಏಕೆಂದರೆ ಅನಂತ ಸಂಪತ್ತಿನ ನಿಕ್ಷೇಪದ ಮೇಲೆ ಕುಳಿತು, ಅದರ ಅರಿವು ಇಲ್ಲದೆ ತಾನು ತಿರುಕನೆಂದು ಹಂಬಲಿಸಿ, ಹಾತೊರೆವ ತಿರಿಗೇಡಿಯಂತೆ ಆತನ ಸ್ಥಿತಿ-ಯಿದೆ. ಮಾನವನಲ್ಲಿ ಅಖಂಡಾನಂದದ ಭಾಂಡರವೆ ಹುದುಗಿಕೊಂಡಿದೆ. ತನ್ನಲ್ಲಿ ತಾನು ನೋಡಿ ಅದರ ಅನುಭವವನ್ನು ಪಡೆಯಲಿಕ್ಕಾಗದೆ ಹೊರಗೆ ತಿರಿಯುವ ದುರ್ದೈವಿಯಾಗಿದ್ದಾನೆ! ಶಾಸ್ತ್ರಗಳು ಮನುಷ್ಯನಲ್ಲಿರುವ ಈ ಆನಂದದ ಅನುಭವವನ್ನು ತಂದುಕೊಡಬಲ್ಲುವು. ಜ್ಞಾನಿಯಾಗಿ ಈ ಅಂತಃಶಕ್ತಿಯನ್ನು ಜಾಗೃತ ಪಡಿಸಿ-ಕೊಂಡವನೆ 'ಸ್ಥಿತಪ್ರಜ್ಞನು.'

ಈ ಸಾಧನೆಯ ಕಾಲದಲ್ಲಿ 'ಸ್ಥಿತಪ್ರಜ್ಞನು' ಮುನಿಯಾಗಿರುವನು. 'ಮುನಿ' ಎಂದರೆ ಮೌನಿ. ಮನುಷ್ಯನಲ್ಲಿರುವ ಶಕ್ತಿಯು ಒಂದೊಂದು ಇಂದ್ರಿಯ ಮುಖಾಂತರವಾಗಿಯೂ ಹೊರಹೊಮ್ಮಲು ಹವಣಿಸು-ತ್ತಿರುತ್ತದೆ. ಮನುಷ್ಯನು ಉಳಿದ ಪಶುಗಳಿಗಿಂತ ಇನ್ನೂ ಒಂದು ವಿಶೇಷ ರೀತಿಯಲ್ಲಿ ತನ್ನ ಶಕ್ತಿಯನ್ನು ಹೊರಪಡಿಸುವವನು: ಅದು ಬಾಯಿಬಡಕ; ನಾಲಗೆಯ ಮುಖಾಂತರವಾಗಿ ಎಷ್ಟೊಂದು ಶಕ್ತಿಯು ಹೊರಗೆ ಹೋಗುವುದೆಂಬ ಅರಿವು ಅನೇಕರಿಗೆ ಇಲ್ಲ. ಈ ಲೋಕದೊಳಗಿನ ಮುಕ್ಕಾಲುಪಾಲಿಗಿಂತ ಹೆಚ್ಚಿನ ಜಗಳ ತೋಟಿಗಳಿಗೆ ನಾಲಗೆಯು ಕಾರಣವಾಗಿರು ತ್ತದೆ. ಜನಗಳು ನಾಲಗೆಯನ್ನು ಬಿಗಿಹಿಡಿಯಲು ಕಲಿತರೆ ಸಂಸಾರವು ಅದೆಷ್ಟೋ ಸುಖಮಯವಾಗ ಬಹುದು ಅನೇಕರು ತಾವು ವಾಗ್ಮಿಗಳೆಂದು ಬಾಯಿಂದ ಹೊರಬಿಡುವ ಉಸಿರು ವ್ಯಕ್ತಿ, ಜಾತಿ, ಮತಗಳಲ್ಲಿ ದ್ವೇಷ ಅಸೂಯೆಗಳನ್ನು ಹೆಚ್ಚಿಸಲಿಕ್ಕೆ ಕಾರಣವಾಗುತ್ತಿರುವು ದನ್ನು ಕಾಣುವೆವು ಲೇಖನಿಯ ಮುಖಾಂತರವಾಗಿ ಹೆಚ್ಚುಮಾಡುವ ಶಕ್ತಿಯು, ಜನರ ಕಾಮುಕತೆಯನ್ನು ಹೆಚ್ಚಿಸಿ ಲೋಕದ ಸಂಯಮ ಶಕ್ತಿಯನ್ನು ನಷ್ಟಮಾ ಡುವುದಕ್ಕೆ ಕಾರಣವಾಗುತ್ತಿರುವುದು. ಈ ದೃಷ್ಟಿಯಿಂದ ವಿಚಾರಿಸಲು ಮೌನದ ಮಹತ್ವವು ಗೊತ್ತಾಗುವುದು. ಅಲ್ಲದೆ ಮನಸ್ಸನ್ನು ಹಿಡಿತದಲ್ಲಿ ತರಲು ಮೌನವು ಸಹಕಾರಿಯಾಗಿದೆ. ಮೌನದ ಸಾಧನಕ್ಕೆ ಯಾವ ಗುಡ್ಡ ಏರಬೇಕಾಗಿಲ್ಲ. ಹೊಳೆ ಈಜಬೇಕಾಗಿಲ್ಲ. ಕೆಲವೊಂದು ಕಾಲ ಮಾತನಾಡದೆ ಇರುವ ಶಿಕ್ಷಣಯಮಾಡುವಂತಹ ಸುಲಭ ಸಾಧನವನ್ನೂ ಮಾಡಲಿಕ್ಕಾಗದವನಿಂದ ಯಾವ ಹಿರಿಗೆಲಸವು ತಾನೆ ಆಗಬಹುದು? ಸಹಜಸಾಧ್ಯವಾಗ ಬಹುದಾದುದನ್ನೂ ಮಾಡಲು ಒಲ್ಲದ ಕೈಲಾಗದವರಿಗೆ ಆತ್ಮಾನಂದದ ಹಂಬಲವಾದರೂ ಏತಕ್ಕೆ? ಸ್ಥಿತಪ್ರಜ್ಞತೆ ಯನ್ನು ಬಯಸುವವರು ಆಗಾಗ ಮೌನದ ಸಾಧನವನ್ನು ಕೈಕೊಳ್ಳುವುದು ಅತ್ಯವಶ್ಯ.

೫೬ ಮತ್ತು ೫೭ ನೆಯ ಶ್ಲೋಕಗಳಲ್ಲಿ ಒಂದೇ ವಿಚಾರ ಇದ್ದರೂ ಅವು ಒಂದನ್ನೊಂದು ಸ್ಪಷ್ಟೀಕರಿಸುತ್ತಲಿವೆ.

## ಇಂದ್ರಿಯಗಳ ಪ್ರಬಲ ಶಕ್ತಿ.

ಭಗವಾನ್ ಶ್ರೀಕೃಷ್ಣನು ಸಂಯಮದ ಮಹತ್ವವನ್ನು ಇನ್ನೂ ಸ್ಪಷ್ಟವಾಗಿ ವಿವರಿಸುವನು:

ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ ।
ರಸವರ್ಜಂ ರಸೋಽಪ್ಯಸ್ಯ ಪರಂ ದೃಷ್ಟ್ವಾ ನಿವರ್ತತೇ ॥ ೫೯ ॥
ಯತತೋ ಹ್ಯಪಿ ಕೌಂತೇಯ ಪುರುಷಸ್ಯ ವಿಪಶ್ಚಿತಃ ।
ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ ॥ ೬೦ ॥
ತಾನಿ ಸರ್ವಾಣಿ ಸಂಯಮ್ಯ ಯುಕ್ತ ಆಸೀತ ಮತ್ಪರ ।
ವಶೇಹಿ ಯಸ್ಯೇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೧ ॥

---

ಅನ್ವಯ :— ನಿರಾಹಾರಸ್ಯ ದೇಹಿನಃ ವಿಷಯಾಃ ರಸವರ್ಜಂ ವಿನಿವರ್ತಂತೇ । ಅಸ್ಯ ರಸಃ ಅಪಿ ಪರಂ ದೃಷ್ಟ್ವಾ ನಿವರ್ತಂತೇ ॥ ೫೯ ॥ ಹೇ ಕೌಂತೇಯ! ಪ್ರಮಾಥೀನಿ ಇಂದ್ರಿಯಾಣಿ ಯತತಃ ವಿಪಶ್ಚಿತಃ ಅಪಿ ಪುರುಷಸ್ಯ ಮನಃ ಪ್ರಸಭಂ ಹರಂತಿ ಹಿ ॥ ೬೦ ॥ ತಾನಿ ಸರ್ವಾಣಿ ಸಂಯಮ್ಯ ಯುಕ್ತಃ ಮತ್ಪರಃ ಆಸೀತ । ಹಿ ಯಸ್ಯ ವಶೇ ಇಂದ್ರಿಯಾಣಿ ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೧ ॥

ದೇಹಧಾರಿಯಾದ ಮನುಷ್ಯನು ನಿರಾಹಾರಿಯಾಗುತ್ತಲೆ ವಿಷಯಗಳು ಆತನಿಂದ ದೂರ ಹೋಗುತ್ತವೆ. ಆದರೆ ಆ ವಿಷಯಗಳ ಸಂಬಂಧಿಯಾದ ರಸವು ಎಂದರೆ ಸೆಳೆತವು ಇನ್ನೂ ಉಳಿದಿರುತ್ತದೆ. ಅದೂ ಪರಬ್ರಹ್ಮನ ಸಾಕ್ಷಾತ್ಕಾರವಾಗುತ್ತಲೆ ಇಲ್ಲದಂತಾಗುವುದು. ॥ ೫೯ ॥ ಎಲೈ ಅರ್ಜುನನೆ! ಪ್ರಬಲವಾದ ಇಂದ್ರಿಯಗಳು ಪ್ರಯತ್ನದಲ್ಲಿರುವ ಜ್ಞಾನಿಯ ಮನಸ್ಸನ್ನು ಕೂಡ ಒತ್ತಾಯದಿಂದ ಸೆಳೆಯುತ್ತವೆ. ॥ ೬೦ ॥ ಈ ಎಲ್ಲ ಇಂದ್ರಿಯಗಳನ್ನು ಅಂಕೆಯಲ್ಲಿಟ್ಟುಕೊಂಡು ಯೋಗಿಯು ಯೋಗವನ್ನು ಆಚರಿಸಬೇಕು; ಮತ್ತು ನನ್ನಲ್ಲಿ ತನ್ಮಯನಾಬೇಕು. ಏಕೆಂದರೆ ಇಂದ್ರಿಯಗಳನ್ನು ಗೆದ್ದವನೆ ಸ್ಥಿರಬುದ್ಧಿಯವನಾಗುವನು. ॥ ೬೧ ॥

ಭಾವಾರ್ಥ :— ಮನುಷ್ಯನು ಭೋಗಗಳನ್ನು ತೊರೆದಾಗ ಅವೆಲ್ಲವು ಆತನಿಂದ ದೂರವಾಗುವುದು ನಿಜ. ಆದರೆ ಭೋಗೇಚ್ಛೆಯು ಎಂದರೆ ಆಳಿವು ಮಾತ್ರ ಇನ್ನೂ ಅಚ್ಚಳಿಯದೆ ಉಳಿಯುವುದು. ಈ ಅಳಿವು ಅಳಿಯಲು ಪರಮಾತ್ಮನ ದರ್ಶನವಾಗಬೇಕು. ಇಂದ್ರಿಯಗಳ ಎಳತವು ಬಹಳ ಬಲವಾದುದು. ಯಾವಾಗಲೂ ಸಾಧನದಲ್ಲಿಯೆ ಇರುವ ಮೈತುಂಬ ಎಚ್ಚರಾಗಿರುವ ಬಲ್ಲಿದನನ್ನೂ ಒಮ್ಮೊಮ್ಮೆ ಮೋಸಗೊಳಿಸಿ ವಿಷಯ ಭೋಗದ ಕಡೆಗೆ ಸೆಳೆಯುತ್ತವೆ. ಆದುದರಿಂದ ಯೋಗಿಯಾದವನು ಇಂದ್ರಿಯಗಳನ್ನೆಲ್ಲ ಅಂಕೆಯಲ್ಲಿಟ್ಟುಕೊಂಡು ಯೋಗಸಾಧನಮಾಡಬೇಕು. ಪರಮಾತ್ಮನಲ್ಲಿ ಲೀನನಾಗಬೇಕು. ಇಂದ್ರಿಯಗಳನ್ನು ಅಂಕೆಯಲ್ಲಿಟ್ಟುಕೊಂಡವನೆ ಸ್ಥಿತಪ್ರಜ್ಞನಾಗುವನು. ॥ ೫೯-೬೧ ॥

---

| ೫೬ ನೆಯ ಶ್ಲೋಕ | ೫೭ ನೆಯ ಶ್ಲೋಕ |
| --- | --- |
| ವೀತರಾಗಃ । | ಅನಭಿಸ್ನೇಹಃ । |
| ಸುಖೇಷು ವಿಗತಸ್ಪೃಹಃ । | ಶುಭಂ ನ ಅಭಿನಂದತಿ । |
| ದುಃಖೇಷು ಅನುದ್ವಿಗ್ನಮನಾಃ । | ಅಶುಭಂ ನ ದ್ವೇಷ್ಟಿ । |
| ವೀತಕ್ರೋಧಃ; ವೀತಭಯಃ । | |

ಆದುದರಿಂದ 'ಸ್ನೇಹಃ' ಎಂದರೆ 'ಆಸಕ್ತಿ' ಎಂದು ಇಲ್ಲಿ ಅರ್ಥಮಾಡಬೇಕು. 'ರಾಗ' ಶಬ್ದವೂ ಇದೇ ಅರ್ಥವುಳ್ಳದಾಗಿದೆ. ಹಿಂದಿನ ಶ್ಲೋಕದಲ್ಲಿ 'ವೀತರಾಗ'ವೆಂಬ ಪದವಿದ್ದು ಇಲ್ಲಿ ಅದರ ವಿವರಣೆಯೆ ಇದ್ದಂತೆ 'ಸರ್ವತ್ರ ಅನಭಿಸ್ನೇಹ' ಎಂಬ ಮಾತಿದೆ. 'ಶುಭಂ ಪ್ರಾಪ್ಯ ನ ಅಭಿನಂದತಿ,' 'ಅಶುಭಂ ನ ದ್ವೇಷ್ಟಿ' ಒಳ್ಳೆಯದಾದರೆ ಹಿಗ್ಗುವುದಿಲ್ಲ; ಕೆಡುಕಾದರೆ ಕುಗ್ಗುವುದಿಲ್ಲವೆಂದೂ ಹೇಳಿದೆ.

೫೮ ನೆಯ ಶ್ಲೋಕದಲ್ಲಿ ಆಮೆಯ ಹೋಲಿಕೆಯನ್ನು ಹೇಳಿ ಸ್ಥಿತಪ್ರಜ್ಞನು ತನ್ನ ಇಂದ್ರಿಯಗಳನ್ನು ವಿಷಯಗಳಿಂದ ಹೇಗೆ ಹಿಂದೆ ಸೆಳೆದುಕೊಳ್ಳುವನು ಎಂಬುದನ್ನು

ಸೂಚಿಸಲಾಗಿದೆ. ಈ ಆಮೆಯ ಹೋಲಿಕೆಯಂತೆ ಯಜುರ್ವೇದದಲ್ಲಿ ಏಳುನದಿಗಳ ದೃಷ್ಟಾಂತವೊಂದಿದೆ:

ಸಪ್ತ ಋಷಯಃ ಪ್ರತಿ ಹಿತಾಃ ಶರೀರೇ ಸಪ್ತ ರಕ್ಷಂತಿ ಸದಮ ಪ್ರಮಾದಮ್ । ಸಪ್ತಾಪಃ ಸ್ವಪತೋ ಲೋಕಮೀಯುಸ್ತತ್ರ ಜಾಗೃತೋ ಅಸ್ವಪ್ನಜೌ ಸತ್ರಸದೌ ಚ ದೇವೌ ॥

—ವಾ. ಯಜು. ೩೪-೫೫

" ಪ್ರತಿದೇಹದಲ್ಲಿಯೂ ಸಪ್ತಋಷಿಗಳಿರುವರು. ಈ ಒಡಲೆಂಬುದು ಸಪ್ತಋಷಿಗಳ ಆಶ್ರಮವಿದ್ದಂತೆಯೆ ಸರಿ. ಇವರು ಈ ಆಶ್ರಮವನ್ನು ಸ್ವಲ್ಪವೂ ಪ್ರಮಾದವಾಗದಂತೆ ಕಾಯುತ್ತಿದ್ದಾರೆ. ಏಳು ನದಿಗಳು ಸುಪ್ತನ ( ಆತ್ಮನ ) ಎಡೆಗೆ ಮರಳಿ ಹೋಗುತ್ತವೆ. ಆಗ ಯಜ್ಞದಲ್ಲಿ ಎರಡು ದೇವತೆಗಳು ನಿದ್ರಿಸದೆ ಎಚ್ಚರಾಗಿರುವರು" ಮೂಗು, ನಾಲಗೆ, ಕಣ್ಣು, ಕಿವಿ, ಬಾಯಿ, ನಾಲಗೆ, ಮತ್ತು ಮನಸು ಇಂತಿವು ಏಳು ಇಂದ್ರಿಯಗಳು ಸಪ್ತಋಷಿಗಳಾದುವು. ಶರೀರ ರೂಪಿಯಾದ ಆಶ್ರಮದಲ್ಲಿ ಇವು ತಪಂಗೈಯುತ್ತಿವೆ. ಇವು ಋಷಿ, ತಪಸ್ವಿ, ಯೋಗಿ ಅಥವಾ ಮುನಿಯೆಂಬ ಹೆಸರಿಗೆ ತಕ್ಕವುಗಳನ್ನಾಗಿಸುವುದು ನಮ್ಮ ಕರ್ತವ್ಯವು. ಈ ಋಷಿಗಳು ಸಂಯಮಿಗಳಾದ ಮಾನವನಿಗೆ ಸರಿಯಾದ ದಾರಿಯನ್ನು ತೋರಬಲ್ಲರು. ಈ ಋಷಿಗಳು ಶರೀರಾಶ್ರಮದಲ್ಲಿ ಶತಸಾಂವತ್ಸರಿಕ ಯಜ್ಞವನ್ನು ಆರಂಭಿಸಿದ್ದಾರೆ. ಆದರೆ ರೋಗಜಂತುರೂಪಿಯಾದ ನಾನಾ ರಕ್ಕಸರು ಈ ಪವಿತ್ರವಾದ ಯಾಗವನ್ನು ನಾಶಮಾಡಲೆಳಸುತ್ತಲಿರುವರು. ಯಜ್ಞವಿರೋಧಿಗಳು ಶತಕ್ರತುವಾಗುವ ಮೊದಲೆ ಅದನ್ನು ಹಾಳುಮಾಡುವರು. ಈ ಯಜ್ಞವಿರೋಧಿಗಳನ್ನು ಹೊಡೆದು ಅಟ್ಟಿ ಯಾಗ ಸಂರಕ್ಷಣೆಗಾಗಿ ನಿದ್ರೆಯಿಲ್ಲದೆ ಹಗಲಿರುಳೂ ಹೋರಾಡುವ ಇಬ್ಬರು ವೀರಕುವರರು ಸನ್ನದ್ಧರಿರುತ್ತಾರೆ. ಅವರೇ ಪ್ರಾಣ ಮತ್ತು ಅಪಾನ. ಇವರು ಭೋಗಾದಿಗಳಿಗೆ ಮನಸು ಮಾಡರು. ದಣಿವನ್ನೂ ಲೆಕ್ಕಿಸರು. ತಮ್ಮ ಕೆಲಸವನ್ನು ಎಡೆಬಿಡದೆ ನಡಸಿರುವರು. ಶರೀರರೂಪಿಯಾದ ಯಜ್ಞಭೂಮಿಯ ಸಂರಕ್ಷಣೆಯೆ ಇವರ ಹೆಗ್ಗುರಿಯಾಗಿರುತ್ತದೆ. ಎಚ್ಚರದಲ್ಲಿರುವಾಗ ( ಆತ್ಮನಿಂದ ಹೊರಟು ) ಹೊರಗೆ ಹರಿಯುವ ಏಳು ನದಿಗಳು ನಿದ್ರೆಯಲ್ಲಿ ಮತ್ತೆ ಅವನಲ್ಲಿ ( ಆತ್ಮನಲ್ಲಿ ) ಸೇರುತ್ತವೆ. ಜಾಗೃತಿಯಲ್ಲಿ ಬಹುಮುಖವಾಗಿರುವ ಇಂದ್ರಿಯಗಳು ಸುಷುಪ್ತಿ, ಸಮಾಧಿ ಅಥವಾ ಮುಕ್ತಿಯಲ್ಲಿ ಅಂತರ್ಮುಖವಾಗುತ್ತವೆ.

ವೇದ ಮತ್ತು ಗೀತೆಯಲ್ಲಿ ಹೇಳಿರುವ ಈ ಉಪದೇಶದ ಅರ್ಥವು ಒಂದೇ ಹೊರಮಿಂಚಿಗೆ ಮರುಳಾಗಿ ಹುರುಳಿಲ್ಲದ ಹಂಬಲ ಹಾರೈಕೆಗಳ ಬಿಸಿಲ್ಗುದುರೆಯ ಬೆಂಬತ್ತುವುದರಿಂದ ಮನುಷ್ಯನ ಆತ್ಮಶಕ್ತಿಯು ವ್ಯರ್ಥವಾಗಿ ಹಾಳಾಗುತ್ತದೆ. ಅದೇ ಆತನು ಒಳಬಾಳಿನವನು. ಅಂತರ್ಮುಖನು ಆದ ಆತನ ಆತ್ಮಶಕ್ತಿಯು ಬೆಳೆಯುತ್ತದೆ. ಆದುದರಿಂದ ಗೀತೆಯಲ್ಲಿ, ನಿಷ್ಕಾಮನಾಗು ಅನಾಸಕ್ತನಾಗು; ಆಮೆಯಂತೆ ಇಂದ್ರಿಯಗಳನ್ನು ವಿಷಯಗಳಿಂದ ತಿರುಗಿ ಎಳೆದುಕೊಳ್ಳುವ ಶಕ್ತಿಯನ್ನು ಪಡೆ, ಎಂದು ಮುಂತಾಗಿ ಹೇಳಿದುದರ ಮಹತ್ವವು ಗೊತ್ತಾಗುವುದು.

(೫೯–೬೧) ಇಂದ್ರಿಯಗಳ ಸೆಳತವು ಎಷ್ಟು ಪ್ರಬಲವಾದುದು ಎಂಬುದರ ಕಲ್ಪನೆಯು ಅವುಗಳನ್ನು ತಡೆಯಲು ಹವಣಿಸಿದವನೆ ಬಲ್ಲನು. ನೀರಿನಗುಂಟ ಹರಿದು ಹೋಗುವವನಿಗೆ ಅದರ ಎಳತದ ಕಸುವು ಎಷ್ಟು ಎಂಬ ಅರಿವು ಉಂಟಾಗುವುದಿಲ್ಲ. ಎದುರು ನೀರಿನಲ್ಲಿ ಈಜುವವನೆ ಅದನ್ನು ಅರಿಯಬಲ್ಲನು. ಸಂಯಮದ ಪ್ರಯತ್ನದಲ್ಲಿರುವವನೇ ಇಂದ್ರಿಯ ಶಕ್ತಿಗಳ ವೇಗವನ್ನು ತಿಳಿದಿರುತ್ತಾನೆ. ವಿಷಯದಿಂದ ದೂರವಿರುವುದರಿಂದ ಸಂಯಮವು ಸಾಧ್ಯವೆಂದಾಗಲಿ, ವಿಷಯಗಳನ್ನು ಅನುಭವಿಸದಿರುವುದರಿಂದ ಸಂಯಮವಾಯಿತೆಂದಾಗಲಿ ತಿಳಿಯುವುದು ತಪ್ಪು. ಇದು ಸಂಯಮದ ಸ್ಥೂಲರೂಪ. ಆದರೆ ಸಂಪೂರ್ಣ ವಾಸನಾತ್ಯಾಗವಾಗದೆ ಆಳಿಪು (ಆಸೆ ನಷ್ಟವಾಗುವುದಿಲ್ಲ. ವಿಷಯದಿಂದ ದೂರವಿದ್ದರೆ ವಿಷಯಗಳ ಪ್ರತ್ಯಕ್ಷ ಸಂಬಂಧವು ಉಂಟಾಗುವುದಿಲ್ಲವೆಂಬುದು ನಿಜ. ಆದರೆ ಆ ವಿಷಯ ರಸಾಸ್ವಾದ. ಆಸೆಯು ಮಾತ್ರ ಮನಸಿನಲ್ಲಿ ಹಾಗೆಯೆ ಉಳಿಯುವುದು. ಹಲವುಬಾರಿ ಈ ಬಗೆಯಾದ ಕೃತ್ರಿಮವಾಗಿ ತಡೆದು ಹಿಡಿಯುವಿಕೆಯಿಂದ ಅದು ಇಮ್ಮಡಿ ಹೆಚ್ಚಾಗುವುದೂ ಉಂಟು. ನಾಳೆ ಉಪವಾಸವೆಂದು ಇಂದು ಇಮ್ಮಡಿ ತಿನ್ನುವ ಹಂಬಲವು ತಲೆದೋರುವುದು. ಏಕಾದಶಿಯ ದಿನ ಅನ್ನದ ಧ್ಯಾನವೇ ಧ್ಯಾನ! ಆದರೆ ಈ ಬಗೆಯ ಆಳಿಪು ಪರಮತತ್ವದ ದರ್ಶನವಾದಮೇಲೆಯೆ ನಾಶವಾಗುವುದು.

ಒತ್ತಾಯದ ಸಂಯಮವು ಫಲಕಾರಿಯಾಗದು. ಸಂಯಮದಲ್ಲಿ ತಿಳಿವು ಬೇಕು. ಆ ವಿಷಯದ ದುಷ್ಪರಿಣಾಮಗಳ ಅರಿವು ತಲೆದೋರಿದೊಡನೆ ಮನಸಿನ ಸೆಳತವು ಎಷ್ಟೊ ಕುಗ್ಗುವುದು. ವಿಚಾರ, ಮನನಗಳ ಬೆಂಬಲದಿಂದ ಸಂಯಮವನ್ನು ಸಾಧಿಸಬಹುದಾಗಿದೆ. ಕೆಲಸ

## (೨೧) ವಿಷಯಗಳ ನೆನಹು ಅಳಿಗಾಲಕ್ಕೆ ಕಾರಣ

ಧ್ಯಾಯತೋ ವಿಷಯಾನ್ ಪುಂಸಃ ಸಂಗಸ್ತೇಷೂಪಜಾಯತೇ।
ಸಂಗಾತ್ ಸಂಜಾಯತೇ ಕಾಮಃ ಕಾಮಾತ್ ಕ್ರೋಧೋಽಭಿಜಾಯತೇ ॥ ೬೨ ॥
ಕ್ರೋಧಾದ್ಭವತಿ ಸಂಮೋಹಃ ಸಂಮೋಹಾತ್ ಸ್ಮೃತಿ ವಿಭ್ರಮಃ।
ಸ್ಮೃತಿಭ್ರಂಶಾದ್ ಬುದ್ಧಿನಾಶೋ ಬುದ್ಧಿನಾಶಾತ್ ಪ್ರಣಶ್ಯತಿ ॥ ೬೩ ॥

---

ಅನ್ವಯ:— ವಿಷಯಾನ್ ಧ್ಯಾಯತಃ ಪುಂಸಃ ತೇಷು ಸಂಗಃ ಉಪಜಾಯತೇ। ಸಂಗಾತ್ ಕಾಮ ಸಂಜಾಯತೇ। ಕಾಮಾತ್ ಕ್ರೋಧಃ ಅಭಿಜಾಯತೇ। ಕ್ರೋಧಾತ್ ಸಂಮೋಹಃ ಭವತಿ। ಸಂಮೋಹಾತ್ ಸ್ಮೃತಿವಿಭ್ರಮಃ। ಸ್ಮೃತಿಭ್ರಂಶಾತ್ ಬುದ್ಧಿನಾಶಃ। ಬುದ್ಧಿನಾಶಾತ್ ಪ್ರಣಶ್ಯತಿ ॥ ೬೨-೬೩ ॥

ವಿಷಯಗಳ ಧ್ಯಾನದಿಂದ ಮನುಷ್ಯನು ಆ ವಿಷಯಗಳಲ್ಲಿ ಆಸಕ್ತನಾಗುತ್ತಾನೆ. ಆಸಕ್ತಿಯಿಂದ ಕಾಮವುಂಟಾಗುವುದು. ಕಾಮದಿಂದ ಕ್ರೋಧವು ತಲೆದೋರುವುದು. ಕ್ರೋಧದಿಂದ ತಿಳಿಗೇಡಿತನವು ಬರುವುದು. ತಿಳಿಗೇಡಿತನದಿಂದ ಆತನ ನೆನಹು ನಷ್ಟವಾಗುವುದು. ನೆನಹು ಹಾಳಾಗುವದರಿಂದ ಬುದ್ಧಿಯು ಇಲ್ಲದಂತಾಗುವದು. ಬುದ್ಧಿ ಹೋಗುತ್ತಲೆ ಎಲ್ಲವೂ ಇಲ್ಲದಂತಾಗುವದು. ॥ ೬೨-೬೩ ॥

ಭಾವಾರ್ಥ:— ಎಡೆಬಿಡದೆ ವಿಷಯ ಚಿಂತನೆ ಮಾಡುವುದರಿಂದ ಆ ವಿಷಯವನ್ನು ಉಪಭೋಗಿಸುವ ಅಳಿಪು ತಲೆದೋರುವುದು. ಮತ್ತು ಆ ಭೋಗವನ್ನು ಪಡೆಯುವದಕ್ಕಾಗಿ ಹೆಣಗಾಟ ನಡೆಯುವುದು. ಆ ಹೆಣಗಾಟಕ್ಕೆ ಅಡೆತಡೆಯುಂಟಾಗಲು ಸಿಟ್ಟಿನಿಂದ ತಲೆತಿರುಗುವುದು. ತಲೆತಿರುಗಿ ಬುದ್ಧಿ ಕುರುಡಾಗುವುದು. ಬುದ್ಧಿ ಕುರುಡಾಗಿ ಕಂಗೆಟ್ಟು ಹಿಂದು ಮುಂದಿನ ನೆನಹು ಇಲ್ಲದಂತಾಗುವುದು. ನೆನಹು ಹಾಳಾದೊಡನೆ ನಾಶವು ಕಟ್ಟಿದ್ದೇ ಸರಿ. ॥ ೬೨ ೬೩ ॥

---

ಇಲ್ಲದವನ ಮನಸು ದೆವ್ವಗಳ ನೆಲೆವೀಡಾಗುವುದು. ಅಕೆಲಸ, ಅಳಿಗೆಲಸ ಹೊಲೆಗೆಲಸಗಳತ್ತ ಇಂದ್ರಿಯಗಳು ಸೆಳೆದೊಯ್ಯುವುವು. ಆದುದರಿಂದ ಇಂದ್ರಿಯ ಮತ್ತು ಮನಸ್ಸನ್ನು ಒಂದಿಲ್ಲೊಂದು ಒಳ್ಗೆಲಸದಲ್ಲಿ ತೊಡಗಿಸಿಡುತ್ತಿರಬೇಕು; ಆಗ ಆ ಕೆಲಸದ ಹಿರಿಮೆಯ ಅರಿವಿನಿಂದ ಹಿಗ್ಗಿ ಜೀವವು ವಿಷಯಸುಖಗಳನ್ನು ಕಡೆಗಣಿಸುವುದರಲ್ಲಿಯೆ ಹಿಗ್ಗುಗೊಳ್ಳಲು ಕಲಿಯುವುದು. ಯೋಗಯುಕ್ತನಾಗಿ ಹಿಡತದಿಂದ ವ್ಯವಹಾರಗಳನ್ನು ಸಾಗಿಸಬೇಕು. ಪರಮಾತ್ಮನಲ್ಲಿ ಮನಸ್ಸನ್ನು ಲೀನಮಾಡಬೇಕು. ಈ ಬಗೆಯಾಗಿ ದೃಢನಿಶ್ಚಯದಿಂದ ವಿಚಾರಪೂರ್ವಕವಾಗಿ ಅನುದಿನವೂ ಸಾಧನ ನಡಸಿದರೆ ಸಿದ್ಧಿಯು ದೊರೆಯಲೇ ಬೇಕು. ಈ ಸಿದ್ಧಿಯೆ ಸ್ಥಿತಪ್ರಜ್ಞಾವಸ್ಥೆ. ಸ್ಥಿತಪ್ರಜ್ಞನು ತೂಕದಿಂದ ನಡೆವವನಾದ್ದರಿಂದ ಆತನ ಜೋಲಿಹೋಗಿ ಎಲ್ಲಿಯೂ ಸೋಲಬೇಕಾಗುವುದಿಲ್ಲ. ಆತನ ಆತ್ಮಶಕ್ತಿಯು ವ್ಯರ್ಥವಾಗಿ ಹಾಳಾಗದೆ ಆತನಲ್ಲಿ ಸಿಲ್ಕು ಉಳಿದು, ಆ ಆತ್ಮಶಕ್ತಿಯ ಬಲದಿಂದ ಆತನು ಒಳ್ಳೆ ಯಶಸ್ಸನ್ನು ಸಂಪಾದಿಸಬಲ್ಲನು.

ಎಡೆಬಿಡದೆ ವಿಷಯಗಳ ಧ್ಯಾನಮಾಡುವುದು, ಹೇಗೆ ಆತ್ಮನಾಶಕ್ಕೆ ಕಾರಣವಾಗುವುದೆಂಬುದನ್ನು ಮುಂದಿನ ಶ್ಲೋಕಗಳಲ್ಲಿ ವರ್ಣಿಸಿದೆ.

(೬೨-೬೩) ಈ ಎರಡು ಶ್ಲೋಕಗಳಲ್ಲಿ ರಜ್ಜೆಯ ಸಂಭ್ರಮದ ಸರ್ವಸ್ವನಾಶದ ಕ್ರಮವನ್ನು ವಿವರಿಸಲಾಗಿದೆ:

ಕಾಮ್ಯಕರ್ಮಾಸಕ್ತರು ಮನಸಿನಲ್ಲಿ ಒಳಗೊಳಗೇ ವಿಷಯ ಸುಖದ ಧ್ಯಾನವನ್ನು ನಡಸಿರುತ್ತಾರೆ. 'ನಾನು ಈ ವಿಷಯ ಸುಖಗಳನ್ನು ಅನುಭವಿಸಬೇಕು. ನಾಳೆ ಇಂತಿದನು ಪಡೆಯುವೆ; ನಾನು ಎಲ್ಲರಿಂದ ಹೆಚ್ಚು ಭೋಗವಿಲಾಸಿಯೆನಿಸಿ ಹೆಸರಾಗುವೆ' ಎಂದು ಮುಂತಾಗಿ ತದೈಕಧ್ಯಾನವನ್ನು ನಡೆಸಿರುತ್ತಾನೆ. ಒಂದೊಂದು ಇಂದ್ರಿಯವನ್ನೂ ಸಂತೈಸುವುದಕ್ಕಾಗಿ ಅದರ ವಿಷಯಗಳನ್ನು ಅನುಭವಿಸಿ ಸುಖಿಸಲು ಹಾತೊರೆಯುತ್ತಾನೆ. ಇದುವೆ ಹಿರಿದಾದ ಜೀವನದ ಗುರಿಯೆಂದು ಬಗೆಯುತ್ತಾನೆ. ಈ ಕಾಮ್ಯಕರ್ಮಗಳು ಬೇಗನೆ ಲಭಿಸಲೆಂದು ಆತನು ಮೊದಮೊದಲು ಧರ್ಮಿಷ್ಠನಂತೆ ನಟಿಸುವನು. ದೇವ ಭೂತಗಳಿಗೆ ನಡೆದುಕೊಳ್ಳುವನು. ಆದರೆ ಆತನ ತೂಕವು ತಪ್ಪಿ ಅನಾಚಾರಿಯಾಗುವನು, ಅಷ್ಟಹಾದಿ

ಹಿಡಿಯುವವನು. ಆತನು ಭೋಗೇಚ್ಛೆಗಳ ಕೈಗೊಂಬೆಯಾಗಿ ಕುಣಿಯುವವನು.

ಭೋಗಿಗೆ ಯಾವ ಒಂದೇ ಭೋಗ್ಯವಸ್ತುವು ಕೊನೆಯವರೆಗೂ ಸವಿಯೆನಿಸುವುದಿಲ್ಲ. ಮಂಡಿಗೆಯು ಮೊದಲು ಸವಿಯೆನಿಸಿದರೂ ದಿನಾಲು ಅದೇ ದೊರೆಯುತ್ತಿದ್ದರೆ ಅದರ ಸವಿಯು ಕಡಿಮೆಯಾಗುವುದು. ಅದಕ್ಕಾಗಿ ಭೋಗವಿಲಾಸಿಗಳು ಪಾತರಗಿತ್ತಿಯಂತೆ ಹೂವಿನಿಂದ ಹೂವಿಗೆ ಅಲೆವ ಸ್ವಭಾವದವರಾಗುವರು. ಚಂಚಲತೆಯೆ ಅವರ ಜೀವನ ಸೂತ್ರವಾಗುವುದು. ಒಂದಕ್ಕೆ ವಿಾಸಲಾಗಿರುವುದನ್ನು ಅವರು ಅರಿಯರು. ಇದುವೆ ವ್ಯಭಿಚಾರವೆನಿಸುವುದು. ಈ ಕಾಮಿಗಳು ಸ್ವೇರಾಚಾರಿಗಳಾಗಿ ನಡೆದುಕೊಂಡು ಬರಬರುತ್ತ ತಮ್ಮಲ್ಲಿರುವ ರಸಗ್ರಹಣ ಶಕ್ತಿಗೂ ಎರವಾಗುವರು. ಎಷ್ಟೇ ಬದಲಿಸಿ, ಹೊಸ ಹೊಸ ಭೋಗವಸ್ತುಗಳನ್ನು ತಂದುಕೊಂಡರೂ ಅದನ್ನು ಅರಗಿಸಿಕೊಂಡು ಆಸ್ವಾದಿಸುವ ನೀರು ಇವರಲ್ಲಿ ಉಳಿಯುವುದಿಲ್ಲ. ಆಸೆಮಾತ್ರ ಉಳಿದಿದ್ದು ದೇಹವು ನಿರ್ವಿಣ್ಣವಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಇವರ ಪಾಲಿಗೆ ಭೋಗ ಸೌಖ್ಯವಂತೂ ದೂರ ಉಳಿದು ನಿರಾಶೆಯೊಂದೇ ದೊರೆಯುವುದು. ನಿರಾಶೆಯಿಂದ ಹೊಟ್ಟೆಯಲ್ಲಿ ಕಿಚ್ಚು ಏಳುವುದು.

ಇನ್ನೊಬ್ಬರ ಮೇಲೆ ಕಿನಿಸಿ ಕೆಂಡವಾಗಲು ಇನ್ನೂ ಒಂದು ಕಾರಣವುಂಟು. ಮತ್ತೊಬ್ಬನು ತನ್ನ ಭೋಗಕ್ಕೆ ಅಡ್ಡಬಂದನು; ತನ್ನ ಭೋಗ್ಯ ವಸ್ತುವನ್ನು ಅಪಹರಿಸಿದನೆಂದು ಕಂಡುಬರುತ್ತಲೆ ಸಿಟ್ಟು ನೆತ್ತಿಗೇರುವುದು. ಆತನ ಪ್ರಾಣ ಹೀರುವ ಬುದ್ಧಿಯುಂಟಾಗುವುದು. ಹೆಣ್ಣು-ಹೊನ್ನು-ಮಣ್ಣಿಗಾಗಿ ನೆತ್ತರದ ಕಾಲುವೆಗಳು ಹರಿದುದನ್ನು ಯಾರು ಕೇಳಿಲ್ಲ? ಯುದ್ಧಗಳ ಕಾರಣ ವೇನು? ಇನ್ನೊಬ್ಬನು ಬಂದು ತನ್ನ ಭೋಗದ ಸೀಮೆಯನ್ನು ಸೆಳೆಯುತ್ತಿರುವನೆಂಬುದೆ ಆಗಿಲ್ಲವೆ?

ಸಿಟ್ಟು ಮನುಷ್ಯನ ಆರೋಗ್ಯಕ್ಕೆ ಅಪಾಯಕರ. ಭೋಗಾಸಕ್ತರು ನಿರ್ವೀರ್ಯರಾಗಿ ಅವರ ಯಕೃತ್ತಾದಿ ಇಂದ್ರಿಯಗಳು ದುರ್ಬಲವಾಗುವವು. ದುರ್ಬಲರಿಗೆ ತಾಳ್ಮೆಯು ಕಡಿಮೆ. ಸಿಟ್ಟು ಮೂಗಿನ ಮೇಲೆಯೆ. ಸಿಟ್ಟಿನಿಂದ ರಕ್ತಾಭಿಸರಣದ ವೇಗವು ಹೆಚ್ಚುವುದು. ಮೆದುಳಿನ ಮೇಲೆ ಅನಿಷ್ಟ ಪರಿಣಾಮಗಳಾಗುವುವು. ತಲೆ ಕೆಡುವುದು. ಆರೋಗ್ಯಕ್ಕೆ ಬಾಧೆ ಬರುವುದು. ನಡೆನುಡಿಗಳಲ್ಲಿ ತೂಕ ತಪ್ಪುವುದು. ಜೋಲಿ ಹೋದವನು ನೆಲ ಕ್ಕುರುಳುವನೆಂದು ಬೇರೆ ಹೇಳಬೇಕೆ? ಆದುದರಿಂದಲೆ ಚೀರುವುದು-ಕೀರುವುದು-ಕಿನಿಸುವುದೂ ವಿವೇಕಿಗಳಿಗೆ ತಕ್ಕವಲ್ಲವೆಂದು ಪೂರ್ವಸೂರಿಗಳು ಹೇಳಿದ್ದುಂಟು.

ಕಾಮ ಏಷ ಕ್ರೋಧ ಏಷ ರಜೋಗುಣ

ಸಮುದ್ಭವಃ ।

ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ

ವೈರಿಣಮ್ ॥ (ಗೀ. ೩.೩೭)

ತಸ್ಮಾತ್ತ್ವ ಮಿಂದ್ರಿಯಾಣ್ಯಾದೌ ನಿಯಮ್ಯ

ಭರತರ್ಷಭ ।

ಪಾಪ್ಮಾನಂ ಪ್ರಜಹಿಹ್ಯೇನಂ ಜ್ಞಾನವಿಜ್ಞಾನ

ನಾಶನಮ್ ॥ (ಗೀ. ೩.೪೧)

ಕಾಮಕ್ರೋಧ ವಿಯುಕ್ತಾನಾಂ ಯತೀನಾಂ

ಯತಚೇತಸಾಮ್ ।

ಅಭಿತೋ ಬ್ರಹ್ಮನಿರ್ವಾಣಂ ವರ್ತತೇ

ವಿದಿತಾತ್ಮನಾಮ್ ॥ (ಗೀ. ೫.೨೬)

ಶಕ್ನೋತೀಹೈವ ಯಃ ಸೋಢುಂ

ಪ್ರಾಕ್ ಶರೀರವಿಮೋಕ್ಷಣಾತ್ ।

ಕಾಮಕ್ರೋಧೋದ್ಭವಂ ವೇಗಂ ಸಯುಕ್ತಃ

ಸ ಸುಖೀನರಃ ॥ (ಗೀ. ೫.೨೩)

ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ।

ಕಾಮಕ್ರೋಧಸ್ತಥಾ ಲೋಭಸ್ತಸ್ಮಾ

ದೇತತ್ತ್ರಯಂ ತ್ಯಜೇತ್ ॥

(ಗೀ. ೧೬.೨೧)

"ರಜೋಗುಣದಿಂದ ಉಂಟಾಗುವ ಈ ಕಾಮ ಮತ್ತು ಕ್ರೋಧಗಳು ಕೂಳಬಕ್ಕ ಮತ್ತು ಮಹಾಪಾಪಿಷ್ಠವಾಗಿವೆ. ಇವನ್ನು ನಿನ್ನ ಹಗೆಯೆಂದು ಭಾವಿಸು. ಆದುದರಿಂದ ನೀನು ನಿನ್ನ ಇಂದ್ರಿಯಗಳನ್ನು ಅಂಕೆಯಲ್ಲಿರಿಸಿ ಜ್ಞಾನ ಮತ್ತು ವಿಜ್ಞಾನಗಳನ್ನು ನಾಶ ಮಾಡುವ ಪಾಪಿಷ್ಠರಾದ ಈ ಹಗೆಗಳನ್ನು ಹೊಡೆದೋಡಿಸು. ಕಾಮಕ್ರೋಧಗಳನ್ನು ತೊರೆದವನೂ, ತನ್ನನ್ನು ತಾನು ಅರಿತವನೂ, ತನ್ನ ಮನಸ್ಸನ್ನು ಗೆದ್ದವನೂ ಆದ ಯತಿಯು ಎಲ್ಲೆಲ್ಲೂ ಬ್ರಹ್ಮನಿರ್ವಾಣಪದವಿಯನ್ನು ಹೊಂದುತ್ತಾನೆ. ಕಾಮಕ್ರೋಧಗಳನ್ನು ಈ ದೇಹದಲ್ಲಿರುವಾಗಲೆ ಯಾವನು ತನ್ನ ಅಳವಿನಲ್ಲಿರಿಸಿಕೊಳ್ಳುವನೊ ಆತನೆ ಯೋಗಿಯು, ಆತನೆ ನಿಜವಾದ ಸುಖಿಯು. ಕಾಮ, ಕ್ರೋಧ ಮತ್ತು ಲೋಭಗಳು ಈ ಮೂರೂ ನರಕದ ಹೆದ್ದಾರಿಗಳು. ಆದುದರಿಂದ ಮನುಷ್ಯನು ಈ ಮೂರನ್ನೂ ತೊರೆಯಬೇಕು."

ರಾಗದ್ವೇಷ ವಿಯುಕ್ತೈಸ್ತು ವಿಷಯಾನಿಂದ್ರಿಯೈಶ್ಚರನ್ |
ಆತ್ಮ ವಶ್ಯೈರ್ವಿಧೇಯಾತ್ಮಾ ಪ್ರಸಾದ ಮಧಿಗಚ್ಛತಿ || ೬೪ ||
ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪಜಾಯತೇ |
ಪ್ರಸನ್ನಚೇತಸೋ ಹ್ಯಾಶು ಬುದ್ಧಿಃ ಪರ್ಯವತಿಷ್ಠತೇ || ೬೫ ||

---

**ಅನ್ವಯ :—** ವಿಧೇಯಾತ್ಮಾ ತು ರಾಗದ್ವೇಷವಿಯುಕ್ತೈಃ ಇಂದ್ರಿಯೈಃ ವಿಷಯಾನ್ ಚರನ್ ಪ್ರಸಾದಂ ಅಧಿಗಚ್ಛತಿ|| ಪ್ರಸಾದೇ ಅಸ್ಯ ಸರ್ವದುಃಖಾನಾಂ ಹಾನಿಃ ಉಪಜಾಯತೇ | ಪ್ರಸನ್ನಚೇತಸಃ ಹಿ ಬುದ್ಧಿಃ ಆಶುಃ ಪರ್ಯವತಿಷ್ಠತೇ || ೬೪-೬೫ ||

ಆದರೆ ಮನಸು ಅಂಕೆಯಲ್ಲಿರುವವನು, ರಾಗದ್ವೇಷರಹಿತನಾಗಿ ಇಂದ್ರಿಯಗಳನ್ನು ಹಿಡಿತದಲ್ಲಿರಿಸಿಕೊಂಡು ( ಬಳಿಕ ) ವಿಷಯದಲ್ಲಿ ಓಡಾಡಬೇಕಾದರೂ ಆತನಿಗೆ ಮನಸಿನ ಪ್ರಸನ್ನತೆಯು ದೊರೆಯುತ್ತದೆ. ಚಿತ್ತವು ಪ್ರಸನ್ನವಾಗಿರುವುದರಿಂದ ಆತನ ದುಃಖಗಳೆಲ್ಲವೂ ದೂರವಾಗುವುವು. ಮತ್ತು ಪ್ರಸನ್ನಚಿತ್ತನಾದುದರಿಂದ ಆತನ ಬುದ್ಧಿಯು ಸ್ಥಿರವಾಗುತ್ತದೆ. || ೬೪-೬೫ ||

**ಭಾವಾರ್ಥ :—** ಮನಸು ಹಿಡಿತದಲ್ಲಿರುವವನು ಯಾತರಲ್ಲಿಯೂ ಮೈಮರೆಯುವುದಿಲ್ಲ. ಯಾರ ದ್ವೇಷವೂ ಆತನಿಗಿಲ್ಲ. ಎಲ್ಲ ಇಂದ್ರಿಯಗಳನ್ನೂ ಸ್ವಾಧೀನದಲ್ಲಿರಿಸಿಕೊಂಡು ಆತನು ವಿಷಯಸೇವನ ಮಾಡುವುದರಿಂದ ಆತನ ಚಿತ್ತವು ಪ್ರಸನ್ನವಾಗಿರುತ್ತದೆ. ಆತನು ಪ್ರಸನ್ನಚಿತ್ತನಾದುದರಿಂದ ಎಲ್ಲ ದುಃಖಗಳೂ ಆತನಿಂದ ದೂರ ಹೋಗುವುವು ಮತ್ತು ಆತನ ಬುದ್ಧಿಯು ಸ್ಥಿರವಾಗುವುದು.

---

ಬುದ್ಧಿಯನ್ನು ಅಡ್ಡದಾರಿಗೆ ಒಯ್ಯುವ ಸಂಗತಿಗಳ ವಿಚಾರವು ಇದಾಯ್ತು. ಇನ್ನು ಬುದ್ಧಿಯನ್ನು ಸ್ಥಿರವಾಗಿಸುವ ಬಗೆಯನ್ನು ಕುರಿತು ಇಲ್ಲಿ ಹೇಳಲಾಗುತ್ತದೆ.

(೬೪-೬೫) ಬುದ್ಧಿಯು ಸ್ಥಿರವಾಗಬೇಕಾದರೆ ಮೊದಲನೆಯ ಉಪಾಯವು ( ರಾಗ-ದ್ವೇಷ ವಿಯುಕ್ತೈಃ ) ಆತನು ಯಾವುದರಲ್ಲಿ ಮೈಮರೆಯುವುದನ್ನಾಗಲಿ, ಯಾವುದರಿಂದ ದೂರ ಓಡುವುದನ್ನಾಗಲಿ ಬಿಟ್ಟು ಬಿಡಬೇಕು. ಎರಡನೆಯದು (ಆತ್ಮವಶ್ಯಾನಿ ಇಂದ್ರಿಯಾಣಿ). ಇಂದ್ರಿಯಗಳನ್ನು ಸಂಪೂರ್ಣವಾಗಿ ತನ್ನ ಕೈಯಲ್ಲಿ ಇಟ್ಟುಕೊಳ್ಳಬೇಕು. ಯಾವ ಇಂದ್ರಿಯವೂ ತನ್ನ ಮನಬಂದಂತೆ ಹರಿದಾಡಕೂಡದು.

ಹೀಗೆ ಮಾಡುವುದರಿಂದ ಆತನು ( ವಿಧೇಯಾತ್ಮಾ ) ತನ್ನ ಆತ್ಮಶಕ್ತಿಯ ಸ್ವಾಮಿಯಾಗುವನು; ಎಂದರೆ ಆತನ ಅಂತಃಕರಣವು ಆತನ ಅಂಕೆಯಲ್ಲಿ ಬರುವುದು. ಯಾವಾಗಲೂ ಉನ್ನತ ವಿಚಾರಿಯಾಗಬೇಕು; ಹೀನ ವಿಚಾರಗಳಿಂದ ದೂರವಿರಬೇಕು. ಯಾವ ಇಂದ್ರಿಯವೂ ತೂಕತಪ್ಪಿ ನಡೆಯಕೂಡದು. ಯಾವುದರಲ್ಲಿ ಮೈಮರೆತು ಬಿದ್ದುಕೊಳ್ಳಲಾಗದು; ಅಥವಾ ಯಾವುದರಿಂದ ಹೇಸಿಕೊಂಡು ಓಡಲಾಗದು. ಇಂತೀ ಬಗೆಯಾಗಿ ನಡೆಯುಳ್ಳವನು ವಿಷಯ ಸುಖದಲ್ಲಿರುವಾಗಲೂ ಮನಸಿನ ಸಮತ್ವ (ತೂಕ) ತಪ್ಪಗೊಡಲಾರನು. ಅದರಿಂದ ಆತನ ಚಿತ್ತವು ಪ್ರಸನ್ನವಾಗಿರುವುದು. ಪ್ರಸನ್ನಚಿತ್ತನು ಯಾವಾಗಲೂ ಸಂತೋಷಿಯಾಗಿರುವನು. ಆತನಿಗೆ ಅಧೋಗತಿಯೆ ಇಲ್ಲ.

ತ್ಯಾಗಿ ಮತ್ತು ಭೋಗಿಯಲ್ಲಿರುವ ವ್ಯತ್ಯಾಸವನ್ನು ಇಲ್ಲಿ ಸೂಚಿಸಿದ್ದಾಗಿದೆ. ಅಥವಾ ಸಂಯಮಿಯಾಗಿದ್ದು ವಿಷಯ ಸೇವೆಯನ್ನು ಮಾಡುವ ತ್ಯಾಗಿಯು ವಿಲಾಸಿಯಿಂದ ಹೇಗೆ ಭಿನ್ನನೆಂಬುದನ್ನು ವರ್ಣಿಸಿದೆ. ವಿಲಾಸಗಳೆ ಜೀವನದ ಕೊನೆಯ ಗುರಿಯೆಂಬುವವರು ಭೋಗಿಗಳು. ಅವರು ಭೋಗಗಳಲ್ಲಿ ಮೈಮರೆಯುವರು. ಆದರೆ ತ್ಯಾಗಿಯು ಸಂಯಮಿಯು. ಆತನು ಎಂದೂ ಅವುಗಳ ಗೇಡಿಯಾಗನು. ಇಂದ್ರಿಯಗಳನ್ನು ಆತ್ಮವಶವಾಗಿರಿಸಿಕೊಂಡು ವಿಷಯಗಳಲ್ಲ ನಡೆಯುವವನು. ಇದನ್ನು ಒಂದು ಹೋಲಿಕೆಯಿಂದ ಇನ್ನಿಷ್ಟು ಸ್ಪಷ್ಟಪಡಿಸಬಹುದು. ಭೋಗಿಯು ವಿಷಯಗಳಿಂದ ಬದ್ಧನು. ತ್ಯಾಗಿಯು ವಿಷಯಗಳಲ್ಲಿ ಎಂದೂ ತೊಡಗಿಕೊಳ್ಳಲಾರನು. ಸೆರೆಯಾಳು ಮತ್ತು ಮೇಲಧಿಕಾರಿ ಇಬ್ಬರೂ ಸೆರೆಮನೆಯಲ್ಲಿ ಇದ್ದರೂ ಒಬ್ಬನು ಅಲ್ಲಿಯೆ ಸಿಕ್ಕಿಬಿದ್ದವನು, ಇನ್ನೊಬ್ಬನು ಬೇಕಾದಾಗ ಹೊರಬರುವ ಸ್ವಾತಂತ್ರ್ಯವುಳ್ಳವನು. ಭೋಗಿಯು ಆಸಕ್ತನು. ತ್ಯಾಗಿಯು ಧರ್ಮಮರ್ಯಾದೆಯನ್ನು ಮೀರದೆ ತನ

## (೨೨) ಹದಗೇಡಿ ಬಾಳಿನವರ ಪಾಡು

**ನಾಸ್ತಿ ಬುದ್ಧಿರಯುಕ್ತಸ್ಯ ನ ಚಾಯುಕ್ತಸ್ಯ ಭಾವನಾ ।**
**ನಚಾ ಭಾವಯತಃ ಶಾಂತಿರಶಾಂತಸ್ಯ ಕುತಃ ಸುಖಮ್ ॥ ೬೬ ॥**
**ಇಂದ್ರಿಯಾಣಾಂ ಹಿ ಚರತಾಂ ಯನ್ಮನೋಽನು ವಿಧೀಯತೇ ।**
**ತದಸ್ಯಹರತಿ ಪ್ರಜ್ಞಾಂ ವಾಯುರ್ನಾವಮಿವಾಂಭಸಿ ॥ ೬೭ ॥**
**ತಸ್ಮಾದ್ಯಸ್ಯ ಮಹಾಬಾಹೋ ನಿಗೃಹೀತಾನಿ ಸರ್ವಶಃ ।**
**ಇಂದ್ರಿಯಾಣೀಂದ್ರಿಯಾರ್ಥೇಭ್ಯಸ್ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೮ ॥**

---

**ಅನ್ವಯಃ—** ಅಯುಕ್ತಸ್ಯ ಬುದ್ಧಿಃ ನಾಸ್ತಿ, ಅಯುಕ್ತಸ್ಯ ಚ ಭಾವನಾ ನ (ಅಸ್ತಿ); ಅಭಾವಯತಃ ಶಾಂತಿಃ ನ (ಅಸ್ತಿ); ಅಶಾಂತಸ್ಯ ಸುಖಂ ಕುತಃ ? ॥ ೬೬ ॥ ಚರತಾಂ ಇಂದ್ರಿಯಾಣಾಂ ಹಿ ಯತ್ ಮನಃ ಅನುವಿಧೀಯತೇ, ತತ್ ಅಸ್ಯ ಪ್ರಜ್ಞಾಂ ಹರತಿ, ವಾಯುಃ ಅಂಭಸಿ ನಾವಂ ಇವ ॥ ೬೭ ॥ ತಸ್ಮಾತ್ ಹೇ ಮಹಾಬಾಹೋ! ಅಸ್ಯ ಇಂದ್ರಿಯಾಣೀ ಇಂದ್ರಿಯಾರ್ಥೇಭ್ಯಃ ಸರ್ವಶಃ ನಿಗೃಹೀತಾನಿ, ತಸ್ಯ ಪ್ರಜ್ಞಾ ಪ್ರತಿಷ್ಠಿತಾ ॥ ೬೮ ॥

(ಸಮತ್ವರೂಪಿಯಾದ) ಯೋಗದ ಅಭ್ಯಾಸವನ್ನು ಮಾಡದವನ ಬುದ್ಧಿಯು (ಸ್ಥಿರ) ಇರುವುದಿಲ್ಲ. ಮತ್ತು ಅವನಲ್ಲಿ ಶ್ರದ್ಧಾಭಕ್ತಿಯೂ ಇರುವುದಿಲ್ಲ. ಮತ್ತು ಶ್ರದ್ಧೆಯಿಲ್ಲದವನಿಗೆ ಶಾಂತಿಯಿಲ್ಲ. ಅಶಾಂತನಿಗೆ ಸುಖವೆಲ್ಲಿಯದು ? ॥ ೬೬ ॥ ವಿಷಯಗಳಲ್ಲಿ ಹೊರಳಾಡುವ ಇಂದ್ರಿಯಗಳನ್ನು ಹಿಂಬಾಲಿಸುವ ಮನಸಿನ ಮಾನವನ ಬುದ್ಧಿಯು ಗಾಳಿಗೆ ಸಿಕ್ಕ ನೀರನೋಲಣ ನಾವೆಯಂತೆ, ಅತ್ತಿತ್ತ ಹರಿದಾಡುತ್ತದೆ. ॥ ೬೭ ॥ ಅದುದರಿಂದ ಎಲೈ ಭುಜಬಲಶಾಲಿಯೆ, ಯಾವನು ಇಂದ್ರಿಯಗಳನ್ನು ಎಲ್ಲ ಬಗೆಯಿಂದಲೂ ವಿಷಯಗಳಿಂದ ತಡೆದು ಹಿಡಿದು ಅವನ್ನು ಸಂಪೂರ್ಣವಾಗಿ ತನ್ನ ಅಂಕೆಯಲ್ಲಿ ಇರಿಸಿಕೊಳ್ಳುವನೊ ಅವನ ಬುದ್ಧಿಯು ಸ್ಥಿರವಾಗುವುದು. ॥ ೬೮ ॥

**ಭಾವಾರ್ಥ:—** ಮನುಷ್ಯನಿಗೆ ಸುಖವು ದೊರೆಯಬೇಕಾದರೆ ಅವನಿಗೆ ಬುದ್ಧಿ ಮತ್ತು ಶ್ರದ್ಧಾಭಕ್ತಿಗಳು ಅತ್ಯವಶ್ಯಕ. ಸಮತ್ವಯೋಗ ಎಂದರೆ ತೂಕದ ನಡೆಯಿಂದಲೆ ಬುದ್ಧಿಯು ಸ್ಥಿರವಾಗಬಲ್ಲದು, ಮತ್ತು ಶ್ರದ್ಧಾಭಕ್ತಿಗಳು ಬೆಳೆಯಬಲ್ಲವು. ಚಂಚಲ ಬುದ್ಧಿಯವನಲ್ಲಿ ಶ್ರದ್ಧಾಭಕ್ತಿಗಳು ಇರಲಾರವು. ಅದರಿಂದ ಆತನ ಮನಸಿಗೆ ಶಾಂತಿ ಸೌಖ್ಯವೂ ಲಭಿಸಲಾರದು. ವಿಷಯಗಳ ಬೆಂಬತ್ತುವ ಮನಸಿನವರ ಬುದ್ಧಿಯು ಚಂಚಲವಾಗುವುದು. ಬಿರುಗಾಳಿಗೆ ಸಿಕ್ಕ ಹಡಗದೊಳಗಿನವರಂತೆ ವಿಷಯಸಾಗರದಲ್ಲಿ ಸಿಲುಕಿದ ಈತನ ಪಾಡಾಗುವುದು. ಯಾವನು ಈ ಬಗೆಯಾಗಿ ವಿಷಯಗಳಲ್ಲಿ ಮೈಮರೆಯದೆ ಇಂದ್ರಿಯಗಳನ್ನು ಸಂಪೂರ್ಣವಾಗಿ ತನ್ನ ಆಧೀನದಲ್ಲಿ ಇಟ್ಟುಕೊಳ್ಳುವನೋ ಆತನ ಬುದ್ಧಿಯು ಸ್ಥಿರವಾಗುವುದು. ಅವನಲ್ಲಿ ಶ್ರದ್ಧಾಭಕ್ತಿಗಳು ನೆಲೆಗೊಳ್ಳುವವು. ಮತ್ತು ಆತನಲ್ಲಿ ಶಾಂತಿಯು ತಲೆದೋರುವುದು. ಶಾಂತಿಯೆ ನಿಜವಾದ ಸೌಖ್ಯವಾಗಿರುವುದರಿಂದ ಈತನು ದುಃಖಗಳಿಂದ ಮುಕ್ತನಾಗುವನು. ಮತ್ತು ಸ್ಥಿತಪ್ರಜ್ಞನೆಂದೆನಿಸುವನು. ॥ ೬೬–೬೮ ॥

---

ತೂಕ ತಪ್ಪಗೊಡದೆ ವಿಷಯಗಳನ್ನು ಸೇವಿಸತಕ್ಕವನು. ಇದರಿಂದ ಈತನ ಮನಸ್ಸು ಯಾವಾಗಲೂ ಪ್ರಶಾಂತವಾಗಿರುವುದು. ಪ್ರಸನ್ನತೆ ಲಭಿಸುವುದು. ವಿಷಯಸೇವನ ಮಾಡಿಯೂ ಬ್ರಹ್ಮಚರ್ಯ ಪಾಲನಮಾಡುವ ಅಸಿಧಾರಾವ್ರತವನ್ನಾಚರಿಸುವವರಿಗೆ ಇದು ಸಾಧ್ಯ.

ಮನುಷ್ಯನು ಸಂಯಮಿಯಾಗಿ ಅನಾಸಕ್ತಿಯಿಂದ ಆಚರಿಸದಿದ್ದರೆ ಆತನಿಗೆ ಅನುಭವಿಸಬೇಕಾಗುವ ದುರ್ಗತಿಯನ್ನು ಮುಂದಿನ ಶ್ಲೋಕಗಳಲ್ಲಿ ವಿವರಿಸಿದ್ದಾಗಿದೆ.

(೬೬–೬೮) ಇಲ್ಲಿ 'ಅ–ಯುಕ್ತ' ಎಂಬ ಪದವನ್ನು 'ಅ–ಯೋಗ–ಯುಕ್ತ' ಎಂಬರ್ಥದಲ್ಲಿ ಉಪಯೋಗಿಸಿದೆ. ಮತ್ತು 'ಬುದ್ಧಿ' ಎಂಬುದನ್ನು 'ಸ್ಥಿರಬುದ್ಧಿ' ಎಂಬರ್ಥದಲ್ಲಿ ಬಳಸಿದೆ. ಆದುದರಿಂದ '**ಅಯುಕ್ತಸ್ಯ**

ಬುದ್ಧಿಃನಾಸ್ತಿ' ಎಂದರೆ ಯೋಗದ (ಸಮತ್ವಯೋಗದ) ಸಾಧಕನಲ್ಲದವನಿಗೆ ಸ್ಥಿರಬುದ್ಧಿಯು ಪ್ರಾಪ್ತವಾಗಲಾರದು ಎಂಬರ್ಥವಾಗುವುದು. ಶ್ರೀಮದ್ಭಗವದ್ಗೀತೆಯಲ್ಲಿ 'ಯೋಗ' ಎಂದರೆ 'ಸಮತ್ವಯೋಗ' ಎಂಬರ್ಥವುಂಟು. ಇದನ್ನು ಇದೇ ಅಧ್ಯಾಯದ ೪೮–೫೦ ಶ್ಲೋಕಗಳಲ್ಲಿ ಸ್ಪಷ್ಟಪಡಿಸಿದೆ.

'ಭಾವನಾ' ಎಂದರೆ ಶ್ರದ್ಧಾ, ಭಕ್ತಿ, ವಿಶ್ವಾಸ. ಬುದ್ಧಿಯು ಸ್ಥಿರವಾಗುವುದಕ್ಕೆ ಶ್ರದ್ಧೆಯು ಅತ್ಯಾವಶ್ಯಕ. ಶ್ರದ್ಧಾವಿಹೀನನ ಬುದ್ಧಿಯು ಚಂಚಲವಿರುತ್ತದೆ. ಚಂಚಲರಿಗೆ ಶಾಂತಿಯು ದೊರೆಯದು. ಶಾಂತಿಯಿಲ್ಲದವರಿಗೆ ಸುಖವೂ ಇಲ್ಲ. ಆದಕಾರಣ ಮನುಷ್ಯನಿಗೆ ಶ್ರದ್ಧೆಯು ಮೊದಲು ಬೇಕು.

ಚಂಚಲರಿಂದ ಕೈಕೊಂಡ ಯಾವ ಕೆಲಸವೂ ಕೊನೆಗಾಣದು. ಒಂದನ್ನು ಆರಂಭಿಸುವಷ್ಟರಲ್ಲಿ ಇನ್ನೊಂದರ ಬೆಂಬತ್ತುವ ಬುದ್ಧಿಯುಂಟಾಗುವುದು! ಸ್ಥಿರಬುದ್ಧಿಯವರ ರೀತಿ ಹೀಗಿರುವುದಿಲ್ಲ. ಕೈಕೊಂಡುದನ್ನು ಯಾವ ಎಡರು ತೊಡರುಗಳನ್ನೂ ಲೆಕ್ಕಿಸದೆ ಅವರು ಕೊನೆಗಾಣಿಸುವರು ಆದರಿಂದ ಯಶಸ್ಸನ್ನು ಪಡೆಯುವರು ಒಂದೆರಡು ಕೆಲಸಗಳನ್ನು ಅನಿವಾರ್ಯವಾಗಿ ನಡುವೆ ಬಿಡಬೇಕಾದರೂ ಅದರಿಂದ ಅವರು ಎದೆಗುಂದದೆ, ಬುದ್ಧಿಗಲಿಯುವರು. ಮುಂದಿನ ಕೆಲಸದಲ್ಲಿ ಹಿಂದಿನ ಅನುಭವದಿಂದ ಕಲಿತುದನ್ನು ಉಪಯೋಗಿಸಿಕೊಳ್ಳುವರು. ಉದ್ಯಮಶೀಲರೂ, ವ್ಯವಸಾಯಿಗಳೂ ಎಂದು ಹೆಸರಾಗುವರು. ಪುರುಷಾರ್ಥಗಳನ್ನು ಪಡೆಯುವರು. ಇದೆಲ್ಲವೂ 'ಸಮತ್ವಯೋಗ'ವನ್ನು ಅನುಸರಿಸುವುದರಿಂದ ದೊರೆಯುವ ಫಲವು.

ಶ್ರದ್ಧೆ–ಧರ್ಮರೂಪಿಯಾದ ಚುಕ್ಕಾಣಿಯು ಇಲ್ಲದವನ ಬಾಳು, ಕಡಲಲ್ಲಿ ಬಿರುಗಾಳಿಗೆ ಸಿಕ್ಕು ದಿಕ್ಕೆಟ್ಟ ಹಡಗದಂತೆಯೆ ಸರಿ. ಒಂದೊಂದು ಇಂದ್ರಿಯವೂ ಅತ್ಯಂತ ಪ್ರಬಲಶಕ್ತಿಯುಳ್ಳದಾಗಿದೆ. ಬಿರುಗಾಳಿಗಿಂತಲೂ ಬಲಿಷ್ಠ. ಇಂತಹ ಹತ್ತು ಇಂದ್ರಿಯಗಳ ಆವೇಗವನ್ನು ಸಹಿಸುವದು ಆವನಿಂದಾದೀತು? ಇಂದ್ರಿಯಗಳು ಮನುಷ್ಯನನ್ನು ವಿಷಯಗಳತ್ತ ಸೆಳೆಯುವುವು. ಮನುಷ್ಯನು ಇಂದ್ರಿಯಗಳ ಆಧೀನನಾದರೆ, ಆಯ್ತು ಆತನ ಪಾಡು ನಾಯಪಾಡೇ! ಚಂಚಲಚಿತ್ತನಾಗಿ ವಿಷಯಗಳ ಬೆಂಬತ್ತಿ ಅಲೆಯಹತ್ತುವನು. ಚಿತ್ತಚಾಂಚಲ್ಯವಿದ್ದಲ್ಲಿ ಅಶಾಂತಿಯು ಬರಲೇಬೇಕು. ಅಶಾಂತಿ, ಚಂಚಲಚಿತ್ತಗಳ ಬಳಗದ್ದೇ ಕ್ರೋಧ ಇಂತಿಬಗೆಯಾಗಿ ಇವೆಲ್ಲ ಅವಗುಣಗಳು ಒಂದೆಡೆಗೆ ಸೇರಲಾರಂಭಿಸುವುವು. ವೈಷಯಿಕ ವಾಸನೆಗಳನ್ನು ಹಿಂಬಾಲಿಸಿ ನಡೆದವನು ಬರಬರುತ್ತ ಎಲ್ಲ ಅವಗುಣಗಳ ಮೂರ್ತಿಯಾಗುವನು. ಎಲ್ಲ ಬಗೆಯಿಂದಲೂ ಪರವಶನಾಗುವನು. ಪರರ ಎಂದರೆ ಹಗೆಗಳ ಕೈಯಲ್ಲಿ ಸಿಕ್ಕಿಬೀಳುವನು. ಇಂತಹನಿಗೆ ಸುಖವೆಂಬುದು ಕೇವಲ ಭ್ರಾಂತಿ!

ಆದುದರಿಂದ ನಿಜವಾಗಿ ಸುಖವನ್ನು ಹಾರೈಸುವವನು ಇಂದ್ರಿಯಗಳನ್ನು (ಇಂದ್ರಿಯಾಣಿ ಇಂದ್ರಿಯಾರ್ಥೇಭ್ಯಃ ಸರ್ವಶಃ ನಿಗೃಹೀತಾನಿ) ವಿಷಯಗಳಲ್ಲಿ ತೊಡಗಿಸದೆ, ತನ್ನ ಅಂಕೆಯಲ್ಲಿ ಇರಿಸಿಕೊಳ್ಳಬೇಕು. ಸ್ಥಿರಬುದ್ಧಿಯವನಾಗಿ (ಪ್ರಜ್ಞಾ ಪ್ರತಿಷ್ಠಿತಾ) ಶಾಂತ ಗಂಭೀರವೃತ್ತಿಯುವನಾಗಬೇಕು. ಇದುವೆ ಮೇಲಣ ಶ್ಲೋಕಗಳ ಆಶಯವು.

ಕಸುವು ಕುಗ್ಗಿದರೆ ದುಃಖವು ಹೆಚ್ಚುವುದು. ಕಸುವು ಬೆಳೆದರೆ ಸುಖವು ಹೆಚ್ಚಾಗುವುದು. ಇಂದ್ರಿಯಗಳು ಸ್ವೈರಾಚಾರಿಗಳಾದರೆ ಮನುಷ್ಯನ ಕಸುವು ಕುಂದುವುದು. ನಿಃಶಕ್ತಿ ಹೆಚ್ಚುವುದು. ಶಕ್ತಿಸಂಗ್ರಹಕ್ಕೆ ಸಂಯಮವೇ ಶ್ರೇಷ್ಠವಾದ ಉಪಾಯವು. ಆದುದರಿಂದ ಸುಖಾಭಿಲಾಷಿಯು ಆತ್ಮಸಂಯಮಿಯಾಗಿರಬೇಕು. ಇಂದ್ರಿಯಗಳಿಗೆ ಮನಸ್ಸಿನ ಕಡಿವಾಣವನ್ನು ಹಾಕಿ ಬಿಗಿದು ಹಿಡಿಯಬೇಕು. ಈ ವಿಷಯಕ್ಕೆ ಉಪನಿಷತ್ತಿನಲ್ಲಿ ಒಂದು ಸುಂದರವಾದ ವರ್ಣನೆಯಿದೆ.

ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವತು ।
ಬುದ್ಧಿಂ ತು ಸಾರಥಿಂ ವಿದ್ಧಿ ಮನಃ ಪ್ರಗ್ರಹ
ಮೇವ ಚ ॥ ೩ ॥

ಇಂದ್ರಿಯಾಣಿ ಹಯಾನ್ಯಾಹುಃ ವಿಷಯಾನ್
ತೇಷುಗೋಚರಾನ್ ।
ಆತ್ಮೇಂದ್ರಿಯ ಮನೋಯುಕ್ತಂ
ಭೋಕ್ತೇತ್ಯಾಹುರ್ಮನೀಷಿಣಃ ॥ ೪ ॥

ಯಸ್ತ್ವವಿಜ್ಞಾನವಾನ್ ಭವತ್ಯಯುಕ್ತೇನ
ಮನಸಾ ಸದಾ ।
ತಸ್ಯೇಂದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ
ಇವ ಸಾರಥೇಃ ॥ ೫ ॥

ಯಸ್ತು ವಿಜ್ಞಾನವಾನ್ ಭವತಿ ಯುಕ್ತೇನ
ಮನಸಾ ಸದಾ ।
ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವ
ಸಾರಥೇಃ ॥ ೬ ॥

ಯಸ್ತ್ವವಿಜ್ಞಾನವಾನ್ ಭವತ್ಯಮನಸ್ಕಃ
ಸದಾಽಶುಚಿಃ

## (೩೩) ಮುನಿಯ ಎಚ್ಚರ ಮತ್ತು ನಿದ್ದೆ

**ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ |**
**ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ || ೬೯ ||**

---

ಅನ್ವಯ:— ಯಾ ಸರ್ವಭೂತಾನಿನಿಶಾ, ತಸ್ಯಾಂ ಸಂಯಮೀ ಜಾಗರ್ತಿ | ಯಸ್ಯಾಂ ಭೂತಾನಿ-ಜಾಗ್ರತಿ, ಸಾ ಪಶ್ಯತಃ ಮುನೇಃ ನಿಶಾ || ೬೯ ||

**ಎಲ್ಲ ಪ್ರಾಣಿಗಳು ನಿದ್ರಿಸುವಲ್ಲಿ ಸಂಯಮಿಯು ಎಚ್ಚತ್ತಿರುವನು. ಮತ್ತು ಎಲ್ಲ ಪ್ರಾಣಿಗಳು ಎಚ್ಚರಿರುವಲ್ಲಿ ಕಣ್ದೆರೆದು ನೋಡುವ ಮುನಿಯ ರಾತ್ರಿಯಾಗಿರುತ್ತದೆ.**

ಭಾವಾರ್ಥ:— ಸಾಮಾನ್ಯ ಜನಗಳು ಮತ್ತು ಆತ್ಮಸಂಯಮಿಗಳ ಇರವು ಇರುಳು ಮತ್ತು ಹಗಲಿನಂತೆ ಬೇರೆಬೇರೆಯಾಗಿದೆ. ಸಾಮಾನ್ಯನು ಯಾವುದನ್ನು ಹೆಚ್ಚಿನದೆಂದು ಎಣಿಸುವನೊ ಅದನ್ನು ಸಂಯಮಿಯು ಕಡೆಗಣಿಸುವನು. ಸಾಮಾನ್ಯರು ಯಾವುದರಲ್ಲಿ ಕಣ್ಣುಮುಚ್ಚಿಕೊಂಡಿರುವರೊ ಅಲ್ಲಿ ತಿಳಿದವರು ಕಣ್ದೆರೆದಿರುತ್ತಾರೆ. || ೬೯ ||

---

ನ ಸ ತತ್ಪದಮಾಪ್ನೋತಿ ಸಂಸಾರಂ
ಚಾಧಿಗಚ್ಛತಿ || ೭ ||
ಯಸ್ತು ವಿಜ್ಞಾನವಾನ್ ಭವತಿ ಸಮನಸ್ಕಃ
ಸದಾ ಶುಚಿಃ |
ಸ ತು ತತ್ಪದಮಾಪ್ನೋತಿ ಯಸ್ಮಾತ್
ಭೂಯೋನ ಜಾಯತೇ || ೮ ||
ವಿಜ್ಞಾನಸಾರಥಿರ್ಯಸ್ತು ಮನಃ
ಪ್ರಗ್ರಹವಾನ್ ನರಃ |
ಸೋಽಧ್ವನಃ ಪರಮಾಪ್ನೋತಿ ತದ್ವಿಷ್ಣೋಃ
ಪರಮಂ ಪದಮ್ || ೯ ||
—ಕಠ. ಉಪ. ೧-೩

“ಆತ್ಮನು ಒಡಲೆಂಬ ತೇರಿನಲ್ಲಿ ಕುಳಿತ ಒಡೆಯನು. ಬುದ್ಧಿಯು ಸಾರಥಿಯು. ಮನಸು ಕಡಿವಾಣ. ಇಂದ್ರಿಯಗಳೆ ಕುದುರೆಗಳು. ಈ ಇಂದ್ರಿಯಗಳು ತಮ್ಮ ವಿಷಯಗಳತ್ತ ಹರಿಯುತ್ತವೆ. ಆತ್ಮನು ಇಂದ್ರಿಯಗಳು ಮತ್ತು ಮನಸು ಕೂಡಿದುದಕ್ಕೇ ತಿಳಿದವರು ಭೋಕ್ತಾರನೆಂದೆನ್ನುವರು. ತಿಳಿಗೇಡಿಯು ಬುದ್ಧಿ (ಯೋಗದಿಂದ) ಯುಕ್ತನಾಗಿರುವುದಿಲ್ಲ. ಅದರಿಂದ ಆತನ ಮನಸೆಂಬ ಕಡಿವಾಣವು ಸಡಿಲಿ ಇಂದ್ರಿಯಗಳು ಸಿಕ್ಕತ್ತ ಹರಿಯುವುವು. ಈ ಅವಸ್ಥೆಯಲ್ಲಿ ಅಂಕೆಯಲ್ಲಿಲ್ಲದ ಕುದುರೆಗಳ ತೇರಿನಲ್ಲಿ ಕುಳಿತವನಂತೆ ಕಷ್ಟಕ್ಕೆ ಈಡಾಗಬೇಕಾಗುವುದು. ಆದರೆ ತಿಳಿದವನು ಬುದ್ಧಿಯುಕ್ತನಾಗಿ ತನ್ನ ಇಂದ್ರಿಯಗಳನ್ನು ಅಳವಿನಲ್ಲಿ ಇರಿಸಿಕೊಂಡಿರುತ್ತಾನೆ. ಅದರಿಂದ ಆತನಿಗೆ ಒಳ್ಳೆಯ ಕುದುರೆಗಳನ್ನು ಹೂಡಿದ ತೇರಿನಲ್ಲಿ ಕುಳಿತವನಂತೆ ಸುಖವು ದೊರೆಯುತ್ತದೆ. ತಿಳಿಗೇಡಿಯೂ ಮನಸ್ಸನ್ನು ಹರಿಬಿಟ್ಟವನೂ ಅಪವಿತ್ರನೂ ಆದವನು ಎಂದೂ ಏಳ್ಗೆಯನ್ನು ಹೊಂದಲಾರನು. ಅವನ ಇಳಿಗಾಲವೆ ನಿಶ್ಚಿತ. ಆದರೆ ತಿಳಿದವನು ಮನಸನ್ನು ಅಧೀನದಲ್ಲಿಟ್ಟುಕೊಳ್ಳುವುದರಿಂದ ಆತನು ಪವಿತ್ರನಾಗಿರುತ್ತಾನೆ. ಆತನು ಹುಟ್ಟು-ಸಾವುಗಳ ಪೀಕಲಾಟದಿಂದ ಪಾರಾಗುವನು ಅಮರಪದವಿಯನ್ನು ಪಡೆಯುವನು. ಯಾವನ ಬುದ್ಧಿರೂಪಿಯಾದ ಸಾರಥಿಯು ಸುಸಂಸ್ಕೃತನಾಗಿರುವನೊ ಮತ್ತು ಆ ಸಾರಥಿಯು ಮನಸ್ಸೆಂಬ ಕಡಿವಾಣವನ್ನು ಸರಿಯಾಗಿ ಹಿಡಿದಿರುವನೊ ಆತನು ಮಾತ್ರ ಈ ಸರಿಯಾದ ದಾರಿಯಿಂದ ಹೋಗಿ ಪರಮ ಪದವನ್ನು ಹೊಂದುವನು; ಶ್ರೇಷ್ಠ ಆನಂದವನ್ನು ಅನುಭವಿಸುವನು.”

ಈ ತೇರಿನ ಹೋಲಿಕೆಯ ಬದಲು ಗೀತೆಯಲ್ಲಿ ಇದೇ ಅರ್ಥದಲ್ಲಿ ನೌಕೆಯ ಉಪಮೆಯುಂಟು. ತೇರಿನಲ್ಲಿ ಕುಳಿತವನು ತನ್ನ ಉದ್ದಿಷ್ಟಸ್ಥಳಕ್ಕೆ ನೇರವಾಗಿ ಸರಿಯಾಗಿ ಹೋಗಬೇಕಾಗಿದ್ದರೆ ಆತನು ಕುದುರೆಗಳನ್ನು ಅಡ್ಡದಾರಿಗೆ ಹೋಗಗೊಡಬಾರದು. ಕುದುರೆಗಳು ಸರಿದಾರಿಯಲ್ಲಿರುವಂತೆ ಕಡಿವಾಣವನ್ನು ಎಚ್ಚರದಿಂದ ಹಿಡಿಯಬೇಕು. ಕಡಿವಾಣವನ್ನು ಸರಿಯಾಗಿ ಹಿಡಿಯಲು ಸಾರಥಿಯಾದ ಬುದ್ಧಿಯು ತಿಳಿಯಾಗಿರಬೇಕು. ಸುಶಿಕ್ಷಣವನ್ನು ಪಡೆದಿರಬೇಕು.

ಇನ್ನು, ಶ್ರೀಕೃಷ್ಣನು ಸಂಯಮಿ ಮತ್ತು ಅಸಂಯಮಿಗಳಲ್ಲಿರುವ ಅಂತರವನ್ನು ವಿವರಿಸುವನು.

(೬೯) ಸಾಮಾನ್ಯರು ತಮ್ಮ ಸ್ವಾರ್ಥಕ್ಕಾಗಿ ತುಂಬ ಜಾಗರೂಕರಾಗಿದ್ದು ಅದಕ್ಕಾಗಿ ಹಲವರನ್ನು ವಂಚಿಸು-

**ಆಪೂರ್ಯಮಾಣಮಚಲಪ್ರತಿಷ್ಠಂ ಸಮುದ್ರಮಾಪಃ ಪ್ರವಿಶಂತಿ ಯದ್ವತ್ ।**
**ತದ್ವತ್ಕಾಮಾ ಯಂ ಪ್ರವಿಶಂತಿ ಸರ್ವೇ ಸ ಶಾಂತಿಮಾಪ್ನೋತಿ ನ ಕಾಮಕಾಮೀ ॥೭೦॥**

---

**ಅನ್ವಯ:—** ಆಪೂರ್ಯಮಾಣಂ ಅಚಲಪ್ರತಿಷ್ಠಂ ಸಮುದ್ರಂ ಯದ್ವತ್ ಆಪಃ ಪ್ರವಿಶಂತಿ, ತದ್ವತ್ ಯಂ ಸರ್ವೇ ಕಾಮಾಃ ಪ್ರವಿಶಂತಿ, ಸಃ ಶಾಂತಿಂ ಆಪ್ನೋತಿ; ಕಾಮಕಾಮೀ ನ ॥ ೭೦ ॥

**ಎಲ್ಲ ಬದಿಯಿಂದ ನೀರು ತುಂಬುತ್ತಿದ್ದರೂ ಅಚಲವಾಗಿರುವ ಸಮುದ್ರಕ್ಕೆ ಹೇಗೆ ಎಲ್ಲ ನದಿಗಳೂ ಬಂದು ಸೇರುವುವೋ ಹಾಗೆ ಎಲ್ಲ ವಿಷಯಗಳು ಯಾವನಲ್ಲಿ ಒಳಸೇರುವುವೋ ಅವನಿಗೆ ನಿಜವಾದ ಶಾಂತಿಯು ಪ್ರಾಪ್ತವಾಗುವುದು. ವಿಷಯಗಳನ್ನು ಬೆಂಬತ್ತುವವನಿಗೆ ಅಲ್ಲ. ॥ ೭೦ ॥**

**ಭಾವಾರ್ಥ:—** ಎಲ್ಲ ದಿಕ್ಕಿನಿಂದಲೂ ನದನದಿಗಳೂ ಬಂದು ಸೇರಿದರೂ ಸಮುದ್ರವು ತನ್ನ ಗಾಂಭೀರ್ಯವನ್ನು ಎಂದೂ ಬಿಡುವುದಿಲ್ಲ ; ತನ್ನ ತೂಕವನ್ನು ತಪ್ಪಗೊಡುವುದಿಲ್ಲ. ಮೇರೆಯನ್ನು ಮೀರುವುದಿಲ್ಲ. ಅದರಂತೆ ಯಾವ ಮನುಷ್ಯನು ವಿಷಯಗಳು ಬಂದು ಸೇರಿದರೂ ಅವನ್ನು ಸ್ವೀಕರಿಸುವಾಗ ತನ್ನ ತೂಕವನ್ನು ತಪ್ಪಗೊಡುವುದಿಲ್ಲವೊ, ( ಧರ್ಮ ) ಮರ್ಯಾದೆಯನ್ನು ಮೀರುವುದಿಲ್ಲವೋ ಅವನಿಗೇ ಶಾಂತಿಸೌಖ್ಯವು ದೊರೆಯುವುದು. ತಾನೇ ವಿಷಯಗಳಿಗೆ ಆಸೆಪಟ್ಟು ಅವನ್ನು ಹಿಂಬಾಲಿಸಿ ಹೋಗುವವನಿಗೆ ಎಂದೂ ಶಾಂತಿಯಿಲ್ಲ.

---

ವುದಕ್ಕೂ ಹೇಸುವುದಿಲ್ಲ. ಆದರೆ ತಿಳಿದವರು ಪರರ ಹಿತಕ್ಕಾಗಿ ಜಾಗರೂಕರಾಗಿದ್ದು, ಪರಹಿತದಲ್ಲಿ ಸ್ವಾರ್ಥವನ್ನು ಮರೆತುಬಿಟ್ಟಿರುತ್ತಾರೆ. ಇದುವೆ ಒಬ್ಬರ ಹಗಲು ಇನ್ನೊಬ್ಬರ ಇರುಳು. ಒಬ್ಬರ ಇರುಳು ಮತ್ತೊಬ್ಬರ ಹಗಲು.

ಇರುಳಿನಲ್ಲಿ ನಾಚು ರಂಗುಗಳಲ್ಲಿ ಮೈಮರೆತು ವಿಲಾಸಿಗಳು ಎಚ್ಚರಾಗಿರುವರು. ಸಂಯಮಿಯು ಆಗ ಸುಖನಿದ್ರೆಯನ್ನು ಅನುಭವಿಸುವನು. ಉತ್ತರ ರಾತ್ರಿಯಲ್ಲಿ ವಿಲಾಸಿಗಳು ಮೈಮೇಲಿನ ಅರಿವ ಇಲ್ಲದೆ ಹೊರಳಾಡುವಾಗ ಸಂಯಮಿಯು ಉಷಃಕಾಲದಲ್ಲಿ ಎದ್ದು ಸ್ನಾನ, ಧ್ಯಾನಾದಿ ತನ್ನ ಆತ್ಮೋನ್ನತಿಕಾರಕ ಕೆಲಸಗಳಲ್ಲಿ ತೊಡಗುವನು. ವಿಲಾಸಿಗಳು ಅಮಿತ ಭೋಗವಿಲಾಸದ ದಣಿವಿನಿಂದ ನಿಶ್ಶಕ್ತರಾಗಿ ಹಗಲನ್ನೂ ಇರುಳನ್ನಾಗಿ ಮಾಡುವರು. ಆದರೆ ಸಂಯಮಿಯು ಹಗಲನ್ನು ತನ್ನ ಆತ್ಮವಿಕಾಸದ ಕಾರ್ಯಗಳಿಗಾಗಿ ಉಪಯೋಗಿಸಿಕೊಳ್ಳುತ್ತಾನೆ. ವಿಲಾಸಿಯ ಕರ್ಮವು ಆತನನ್ನು ರೋಗ, ದುರ್ಮರಣದ ಕಡೆಗೆ ವೇಗದಿಂದ ಸೆಳೆದೊಯ್ಯುತ್ತವೆ. ಸಂಯಮಿಯ ಕಾರ್ಯಕಲಾಪಗಳು ಆತನಿಗೆ ಶಾಶ್ವತ ಕೀರ್ತಿ, ಅಮರ ಪದವಿಯನ್ನು ಕೊಡಿಸುತ್ತವೆ.

ಜನಸಾಮಾನ್ಯರು ಸ್ವದೇಶ ಸ್ವರಾಜ್ಯಾದಿಗಳ ಬಗ್ಗೆ ಕತ್ತಲೆಯಲ್ಲಿರುತ್ತಾರೆ. ತಮ್ಮ ಕೃತಿಗಳೇ ಸ್ವರಾಜ್ಯಕ್ಕೆ ಹೇಗೆ ಬಾಧಕವಾಗುತ್ತವೆ, ಎಂಬ ಅರಿವು ಅವರಿಗೆ ಇರುವುದೇ ಇಲ್ಲ. ಪರದೇಶದ ವಸ್ತುಗಳನ್ನು ಕೊಂಡು ತಮ್ಮ ನಾಡಿನ ಉದ್ಯೋಗ, ವ್ಯಾಪಾರಗಳನ್ನು ಮುಳುಗಿಸುತ್ತಾರೆ. ದೇಶದ ಪಾರತಂತ್ರ್ಯವನ್ನು ಸ್ಥಿರಗೊಳಿಸುವ ನಿಂದ್ಯ ಕೆಲಸಗಳನ್ನು ಹೊಟ್ಟೆಯ ಪಾಡಿಗಾಗಿ ಕೈಕೊಳ್ಳುತ್ತಾರೆ. ಆದರೆ ಸಂಯಮಿಯು ತನಗೆ ತೊಂದರೆಯಾದರೂ ಅದನ್ನು ತಾಳಿಕೊಂಡು ತನ್ನ ನಾಡಿಗಾಗಿ ತನ್ನ ತನುಮನಧನಗಳನ್ನು ಸವೆಯಿಸುತ್ತಾನೆ. ಇಲ್ಲಿಯೂ ಒಬ್ಬನ ಇರುಳು ಇನ್ನೊಬ್ಬರ ಹಗಲು !

ಇಂದ್ರಿಯಗಳ ಸ್ವೇಚ್ಛಾವಿಹಾರವೇ ಸುಖದ ಹೆದ್ದಾರಿಯೆಂದು ವಿಲಾಸಿಯ ವಿಚಾರ. ಆದರೆ ಸಂಯಮಯುಕ್ತವಾದ ನಡೆವಳಿಯೆ ನಿಜವಾದ ಕಲ್ಯಾಣಕಾರಕವೆಂದು ತಿಳಿದವನ ವಿಚಾರ. ಇಂತಿದು ಒಬ್ಬನು ಕಣ್ಣು ಮುಚ್ಚಿದಲ್ಲಿ ಇನ್ನೊಬ್ಬನು ಕಣ್ತೆರೆದಿರುವ ಬಗೆಯಾಗಿದೆ ' ಜಗತ್ತು ನನ್ನ ಸೇವೆಗಾಗಿ ನಿರ್ಮಾಣವಾಗಿದೆ ' ಎಂದು ಬಗೆವವನು ಒಬ್ಬ : ' ಜಗತ್ತಿಗಾಗಿ ನಾನಿದ್ದೇನೆ ' ಎಂದು ನಂಬಿದವನು ಇನ್ನೊಬ್ಬ. ' ತಾನು ಬೇಡಿದ ( ಭೋಗ ) ವಸ್ತುಗಳನ್ನು ದಯಪಾಲಿಸು ' ಎಂದು ದೇವರನ್ನು ಬೇಡುವವನು ಒಬ್ಬನು. ' ತನ್ನಿಂದ ಸತ್ಕಾರ್ಯಗಳನ್ನು ಮಾಡಿಸು ; ಸತ್ಯದೆಡೆಗೆ ತನ್ನನ್ನು ನಡಸು ' ಎಂದು ಪ್ರಾರ್ಥಿಸುವವನು ಮತ್ತೊಬ್ಬ. ತನಗೆ ಅನುಕೂಲವಾಗಿ ಎಲ್ಲವನ್ನೂ ಒದಗಿಸಿಕೊಡುವದಿಲ್ಲವೆಂದು ಕಾಣುತ್ತಲೆ ದೇವರೇ ಇಲ್ಲವೆಂದು ಸಾರಿ ಕೇಳುವವನು ಒಬ್ಬ. ' ಏನು ಬಂದುದು ಬರಲಿ, ನಿನ್ನ ದಯೆಯೊಂದಿರಲಿ ' ಎಂದು ದೇವನಲ್ಲಿ ಅನನ್ಯ ಭಕ್ತಿಯುಳ್ಳವನು ಇನ್ನೊಬ್ಬನು.

' ಬೇಕು ' ಎಂದು ಹಲುಬುವವನು ಎಂದೆಂದಿಗೂ ಬಡವನೆ. ಆತನ ಅತೃಪ್ತ ಜೀವವು ಪ್ರಶಾಂತ ಅಂತಃ-

ವಿಹಾಯ ಕಾಮಾನ್ ಯಃ ಸರ್ವಾನ್ ಪುಮಾನ್ ಚರತಿ ನಿಸ್ಪೃಹಃ ।
ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ ॥ ೭೧ ॥
ಏಷಾ ಬ್ರಾಹ್ಮೀ ಸ್ಥಿತಿಃ ಪಾರ್ಥ ನೈನಾಂ ಪ್ರಾಪ್ಯ ವಿಮುಹ್ಯತಿ ।
ಸ್ಥಿತ್ವಾಸ್ಯಾಮಂತಕಾಲೇಽಪಿ ಬ್ರಹ್ಮನಿರ್ವಾಣಮೃಚ್ಛತಿ ॥ ೭೨ ॥

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಸಾಂಖ್ಯ ಯೋಗೋನಾಮ ದ್ವಿತೀಯೋಽಧ್ಯಾಯಃ

---

ಅನ್ವಯ:— ಯಃ ಪುಮಾನ್ ಸರ್ವಾನ್ ಕಾಮಾನ್ ವಿಹಾಯ, ನಿಸ್ಪೃಹಃ ನಿರ್ಮಮಃ ನಿರಹಂಕಾರಃ (ಭೂತ್ವಾ) ಚರತಿ, ಸಃ ಶಾಂತಿಂ ಅಧಿಗಚ್ಛತಿ ॥ ೭೧ ॥ ಹೇ ಪಾರ್ಥ! ಏಷಾ ಬ್ರಾಹ್ಮೀ ಸ್ಥಿತಿಃ, ಏನಾಂ ಪ್ರಾಪ್ಯ ನ ವಿಮುಹ್ಯತಿ, ಅಂತಕಾಲೇ ಅಪಿ ಅಸ್ಯಾಂ ಸ್ಥಿತ್ವಾ ಬ್ರಹ್ಮನಿರ್ವಾಣಂ ಋಚ್ಛತಿ ॥ ೭೨ ॥

ಯಾವನು ಎಲ್ಲ ಬೇಕುಗಳನ್ನು ಬಿಟ್ಟು, ಹಂಬಲಗಳನ್ನು ತೊರೆದು, ತನ್ನತನವನ್ನು ಮರೆತು, ಹಮ್ಮುಹೆಮ್ಮೆಗಳನ್ನು ದೂರವಿರಿಸಿ ನಡೆಯುವನೊ ಅವನೆ ಶಾಂತಿಯನ್ನು ಹೊಂದುವನು ॥ ೭೧ ॥ ಎಲೈ ಅರ್ಜುನನೆ! ಬ್ರಹ್ಮಪದವಿಯನ್ನು ಹೊಂದಿದವನ ಇರವು ಇದು. ಈ ಸ್ಥಿತಿಯನ್ನು ಮುಟ್ಟಿದವರು ಮತ್ತೆ ಮರುಳರಂತೆ ನಡೆಯುವುದಿಲ್ಲ. ಸಾಯುವಾಗ ಸಹ ಇದೆ ಬಗೆಯಾಗಿ ಉಳಿದು ಬ್ರಹ್ಮನಿರ್ವಾಣವನ್ನು ಹೊಂದುವರು. ॥ ೭೨ ॥

ಭಾವಾರ್ಥ:— ಯಾವನು ತನ್ನ ಅಂತರಂಗದಲ್ಲಿಯು ಕೂಡ ಸ್ವಾರ್ಥವುಳ್ಳವನಾಗಿರುವುದಿಲ್ಲವೊ, ನಿರಿಚ್ಛನಾಗಿ 'ತಾನು, ತನ್ನದು' ಎಂಬ ಮೋಹದಲ್ಲಿ ತೊಡಕಿಕೊಳ್ಳುವುದಿಲ್ಲವೊ, ನಿರಹಂಕಾರಿಯಾಗಿ ತನ್ನ ಬಂಧುಬಳಗಗಳ ಮಾಯಾಜಾಲದಿಂದ ಹೊರಬೀಳುವನೊ, ಅಖಿಲ ಲೋಕಕಲ್ಯಾಣದ ದೃಷ್ಟಿಯಿಂದ ತನ್ನ ಎಲ್ಲ ವ್ಯವಹಾರಗಳನ್ನು ನಡಸುವನೊ, ಅವನೇ ನಿಜವಾದ ಶಾಂತಿಯನ್ನು ಹೊಂದುವನು. ॥ ೭೧ ॥ ಎಲೈ ಅರ್ಜುನನೆ! ಬ್ರಹ್ಮಜ್ಞನಾಗಿ, ಬ್ರಹ್ಮರೂಪನಾದವನ ನಡೆವಳಿ ಹೀಗಿರುವುದು. ಒಮ್ಮೆ ಈ ಸ್ಥಿತಿಯನ್ನು ಮುಟ್ಟಿದವನು ಮುಂದೆ ಎಂದೂ ಮೋಹವಶನಾಗುವುದಿಲ್ಲ. ಸಾಯುವಾಗ ಕೆಲರಿಗೆ ಈ ಸ್ಥಿತಿಯು ಪ್ರಾಪ್ತವಾಗಬಹುದು. ಅವರು ಕೂಡ ಬ್ರಹ್ಮನಿರ್ವಾಣವನ್ನು ಎಂದರೆ ಮೋಕ್ಷವನ್ನು ಹೊಂದುವರು. ॥ ೭೨ ॥

---

ಕರಣದಲ್ಲಿ ತಲೆದೋರುವ ಸುಖಕ್ಕೆ ಎಂದೆಂದಿಗೂ ಎರವಾಗುತ್ತದೆ. ಹಂಬಲ, ಹೊಯ್ದಾಟಗಳಿಲ್ಲದ ಮನಸಿನವರ ಅಂತರಂಗದಲ್ಲಿರುವ ಶಾಂತಿಸುಖಕ್ಕೆ, ಪೂರ್ಣತೆಯ ಅನುಭವಕ್ಕೆ ಉಪಮೆಯಿಲ್ಲ. ಇದು ಸ್ಥಿತಪ್ರಜ್ಞನಿಗೆ ಮಾತ್ರ ದೊರೆಯುವ ಸುಖವು. ಇನ್ನು ಬ್ರಾಹ್ಮೀಸ್ಥಿತಿಯನ್ನು ವರ್ಣಿಸಲಾಗಿದೆ:

(೭೦–೭೨) ಬ್ರಾಹ್ಮೀಸ್ಥಿತಿಗೆ ಸಮುದ್ರದ ಹೋಲಿಕೆಯನ್ನು ಕೊಟ್ಟಿದೆ. ಸಮುದ್ರವೆಂದರೆ ಸ್ಥೈರ್ಯ ಗಾಂಭೀರ್ಯಾದಿಗುಣಗಳಿಗೆ ಆದರ್ಶವಾಗಿದೆ. ಪರಿಪೂರ್ಣತೆಗೂ ಇದು ಮಾದರಿ. ಚಳಿಗಾಲದಲ್ಲಿ ಕುಗ್ಗುವುದಿಲ್ಲ. ಮಳೆಗಾಲದಲ್ಲಿ ಕೊಬ್ಬುವುದಿಲ್ಲ. ಅಥವಾ ಎಂದೂ ತನ್ನ ಮೇರೆಯನ್ನು ಮೀರಿ ನಡೆಯುವುದಿಲ್ಲ. ಪರಬ್ರಹ್ಮ ವಸ್ತುವೂ ಇದರಂತೆಯ ಪರಿಪೂರ್ಣವಾಗಿದೆ. ಸೃಷ್ಟಿಯ ಸ್ಥಿತಿ ಲಯಾದಿಗಳಿಂದ ಅದರಲ್ಲಿ ಯಾವ ಹೆಚ್ಚು ಕಡಿಮೆಗಳೂ ಆಗುವುದಿಲ್ಲ. ಸಮುದ್ರಕ್ಕೆ ನೆಲೆಯಿಲ್ಲ. ಕೊನೆಯಿಲ್ಲ. ಅದರಂತೆ ಪರಬ್ರಹ್ಮವೂ ಅನಂತವಾಗಿದೆ. ಆದುದರಿಂದ ಬ್ರಾಹ್ಮೀಸ್ಥಿತಿಗೆ ಸಮುದ್ರದ ಉಪಮೆಯನ್ನು ಕೊಟ್ಟುದು ಉಚಿತವಾಗಿದೆ.

ಸಮುದ್ರಕ್ಕೆ ಎಷ್ಟೇ ಮಹಾನದಿಗಳು ಬಂದು ಸೇರಿದರೂ ಅದು ಮರ್ಯಾದೆ ಮೀರುವದಿಲ್ಲ. ಅದರಂತೆ ಯಾವ ಪದವಿಪಟ್ಟಗಳು, ಸುಖಭೋಗಗಳು ಪ್ರಾಪ್ತವಾದರೂ ಜ್ಞಾನಿಯು ಕೊಬ್ಬುವುದಿಲ್ಲ. ಧರ್ಮವಿಚಾರಿನಡೆಯುವುದಿಲ್ಲ. ಜಗತ್ತು ಅಳಿದರೂ ಬ್ರಹ್ಮನಲ್ಲಿ ಯಾವ ಕೊರತೆಯಿಲ್ಲ. ಚಂಚಲತೆಯಿಲ್ಲ. ಅದರಂತೆ ಬ್ರಾಹ್ಮಿಸ್ಥಿತಿಯನ್ನು ಮುಟ್ಟಿದವನು ಯಾವ ಹಾನಿಹರಿಬಗಳಲ್ಲಿಯೂ ತನ್ನ ಮನಸ್ಸನ್ನು ಹೊಯ್ದಾಡಗೊಡದೆ ಅಚಲನಾಗಿರುತ್ತಾನೆ. ಸಾಮಾನ್ಯ ಮಾನವರು ಅಂಥ ಇಂಥ ಕ್ಷುಲ್ಲಕ ಕಾರಣಗಳಿಂದಲೂ ತಲೆಕೆಟ್ಟು, ಆತ್ಮಹತ್ಯೆಯವರೆಗೆ ಹೋಗುತ್ತಾರೆ! ಸುಖದುಃಖಗಳ ಆಘಾತಗಳಿಂದ ಒಮ್ಮೆಲೆ ಹೀಗೆ ಹೊಯ್ದಾಡುವುದು ಅಸ್ಥಿರತೆಯ ಲಕ್ಷಣವು.

ಇದು ಕಿರುಕುಳರ ಗುಣವು. ಮಹಾತ್ಮರು ದುಃಖದ ಬರಸಿಡಿಲು ತಾಗಿದರೂ ಎದೆಗುಂದದೆ ತಮ್ಮ ಕರ್ತವ್ಯ ತತ್ಪರರಾಗಿರುತ್ತಾರೆ. ಇಂತಹರೆ 'ಪೂರ್ಣಪುರುಷರು.'

ಮೊದಲು ನಯವಿನಯಶೀಲನೂ, ಸುಹೃದನೂ, ಸಜ್ಜನನೂ ಎನಿಸಿದವನು ಅಧಿಕಾರ, ಧನಸಂಪತ್ತು ಬಂದೊಡನೆ ತಿರುವುಮುರವಾಗಿ ವರ್ತಿಸುವುದು ಅನುಭವಕ್ಕೆ ಬರುತ್ತದೆ. ಇಂತಹರು ತೋರಿಕೆಯ ಸಜ್ಜನರೆಂದು ತಿಳಿಯಬೇಕು. ಇವರ ಅಂತರಂಗವು ಬದಲಾಗುತ್ತಿರುವುದಿಲ್ಲ ಪ್ರತಿಕೂಲ ಪರಿಸ್ಥಿತಿಯ ಮೂಲಕ ಅವರು ಮೆತ್ತಗೆ ನಡೆದುಕೊಳ್ಳುತ್ತಿದ್ದರೂ ಅನುಕೂಲ ಸ್ಥಿತಿಯು ಬರುತ್ತಲೆ ಬಚ್ಚಿಟ್ಟಿದ್ದ ಇವರ ನಿಜಸ್ವರೂಪವು ಹೊರಗೆ ಬರುವುದು. ಹೀನ ಜೀವಗಳವು ಉಚ್ಚ ಜೀವವು ಬ್ರಾಹ್ಮೀಸ್ಥಿತಿಯು ಪ್ರಾಪ್ತವಾದ ಬಳಿಕ ಮರಳಿ ಎಂದೂ ಕೀಳ್ಮೆಗೆ ಇಳಿಯುವುದಿಲ್ಲ. ಇವರು ತಮಗೆ ಹೆಚ್ಚುಹೆಚ್ಚಿನ ಅನುಕೂಲತೆಗಳು ದೊರೆತಂತೆ ಇನ್ನೂ ಹೆಚ್ಚುಹೆಚ್ಚಿನ ಪರೋಪಕಾರ ಮಾಡುವರು. ತನ್ಮೂಲಕವಾಗಿ ಆತ್ಮಶುದ್ಧಿಯನ್ನು ಮಾಡಿಕೊಳ್ಳುವರು.

### ಭೋಗಪ್ರಾಪ್ತಿ

'ಸರ್ವೇ ಕಾಮಾಃ ಯಂ ಪ್ರವಿಶಂತಿ' ಯಾವನ ಕಡೆಗೆ ಎಲ್ಲ ಕಾಮೋಪಭೋಗಗಳು ತಾವಾಗಿಯೆ ಹರಿದು ಬಂದು ಕೂಡುವವೋ (ಸಮುದ್ರಕ್ಕೆ ನದಿಗಳು ಬರುವಂತೆ) 'ಸಃ ಶಾಂತಿಂ ಆಪ್ನೋತಿ' ಅವನು ಶಾಂತಿಯನ್ನು ಹೊಂದುತ್ತಾನೆ ಎಂದು ಈ ಶ್ಲೋಕದಲ್ಲಿ ಹೇಳಿದೆ. ಈತನು ತಾನಾಗಿ ಆ ಕಾಮನೆಗಳ ಬೆಂಬತ್ತಿ ಹೋಗುವುದಿಲ್ಲ. ಆ ಎಲ್ಲ ಕಾಮನೆಗಳೆ ಆತನಲ್ಲಿ ಬಂದು ಸೇರುವುವು. ಆದರೂ ಆತನು ಚಂಚಲನಾಗುವುದಿಲ್ಲ. ಸಮುದ್ರದಂತೆ ಅಚಲನಾಗಿರುವನು.

ಬೇಡಿದಾಗ ಬಾರದುವು, ಬೇಡವೆಂದಾಗ ತಾವಾಗಿಯೆ ಬಂದು ಕೈಮುಗಿದು ನಿಲ್ಲುವುವು, ಈ ಕಾಮನೆಗಳು! ಸಾಮಾನ್ಯರು ಒಂದು ಕಾಲಕ್ಕೆ ಒಂದು ಭೋಗವನ್ನು ಮಾತ್ರ ಅನುಭವಿಸಬಲ್ಲರು. ಆದರೆ ಈ ಬ್ರಾಹ್ಮೀಸ್ಥಿತಿಗೆ ಮುಟ್ಟಿದವನಲ್ಲಿ ಎಲ್ಲ ಕಾಮನೆಗಳೂ ಬಂದು ತಮ್ಮ ಸೇವೆಯನ್ನು ಒಮ್ಮೆಲೆ ಸಲ್ಲಿಸುವುವು. ಆದರೂ ಆತನು ತನ್ನ ಕೇಂದ್ರದಿಂದ ಕದಲುವುದಿಲ್ಲ. ಇದು ಬ್ರಾಹ್ಮಿಸ್ಥಿತಿಯವನ ವೈಶಿಷ್ಟ್ಯವಾಗಿದೆ.

### ಕಾಮುಕಾಮಿಯು ಮತ್ತು ಆತ್ಮಕಾಮಿಯು

ಕಾಮನೆಗಳ ಬೆಂಬತ್ತಿದವನು 'ಕಾಮುಕಾಮಿ'ಯು. ಹೊರಗೆ ಎಲ್ಲಿಯೊ ಸುಖವುಂಟೆಂದು ಅದನ್ನು ಪಡೆಯಲು ಇಂದ್ರಿಯಗಳು ಎಳಸಿದತ್ತ ಇವನು ಹರಿದಾಡುವನು. ಇದೆಲ್ಲವೂ ಬಿಸುಲುಗುದುರೆಯ ಬೆಂಬತ್ತಿ ನೀರನ್ನು ಅರಸಿದಂತೆಯೆ, ಎಂಬುದು ಕೊನೆಗೆ ಮನವರಿಕೆಯಾಗಿ ನಿರಾಶೆಯಿಂದ ಮಿಡುಕುವುದು, ಕಾಮುಕಾಮಿಯ ಹಣೆಯಲ್ಲಿ ಬರೆದಿದ್ದುದು ನಿಶ್ಚಿತ. ಆದರೆ ಆತ್ಮಕಾಮಿಯು ಎಲ್ಲಿ ಹೊರಗೆ ಹರಿದಾಡುವುದಿಲ್ಲ. ಚಂಚಲಚಿತ್ತನಾಗುವುದಿಲ್ಲ. ತನ್ನಲ್ಲಿ ತಾನೇ ಸಂತುಷ್ಟನಾಗಿ (ಆತ್ಮನ್ಯೇವ ಆತ್ಮನಾತುಷ್ಟಃ), ಸ್ವ-ಸ್ಥನಾಗಿರುತ್ತಾನೆ. ಆತನು 'ಆಪೂರ್ಯಮಾಣ' ಎಂದರೆ ತುಂಬಿ ಪರಿಪೂರ್ಣನಾದ ಮೇಲೂ ತುಂಬುವ ಮೊಡಲು ಇದ್ದಂತೆಯೆ ಪೂರ್ಣನಾಗಿರುತ್ತಾನೆ. ಆತ್ಮತೃಪ್ತನಾದುದರಿಂದ ಸ್ಥಿರನೂ, ಅಚಲನೂ ಆಗಿರುತ್ತಾನೆ. ಇವರಿಬ್ಬರಲ್ಲಿರುವ ವ್ಯತ್ಯಾಸವನ್ನು ಕೆಳಗಣ ವಿವರದಿಂದ ಚೆನ್ನಾಗಿ ನೆನಪಿಡಬಹುದಾಗಿದೆ.

| ಆತ್ಮಕಾಮಿ | ಕಾಮುಕಾಮಿ |
|---|---|
| ಆತ್ಮಕಾಮಿ; ಆಪ್ತಕಾಮಿ | ಭೋಗಕಾಮಿ, ವಿಷಯಿ |
| ಅಕಾಮನು; ನಿಷ್ಕಾಮನು | ಸಕಾಮನು |
| ಪೂರ್ಣನು | ಚಂಚಲನು |
| ಸ್ಥಿರನು; ಅಚಲನು | ಚಂಚಲನು; ಅಸ್ಥಿರನು |
| ಪ್ರತಿಷ್ಠಿತನು | ಅಪ್ರತಿಷ್ಠಿತನು |
| ಪರಿಪೂರ್ಣನು | ಅಪೂರ್ಣನು (ಪೂರ್ಯಮಾಣನು) |
| ಭೋಗಗಳು ಇವನೆಡೆಗೆ ತಾವಾಗಿ ಬರುವುವು | ಭೋಗಗಳ ಕಡೆಗೆ ಇವನೆ ಓಡುವನು |
| ಬ್ರಾಹ್ಮೀಸ್ಥಿತಿಯವನು | ಸಾಂಸಾರಿಕನು |
| ಶಾಂತನು | ಅಶಾಂತನು |
| ತೃಪ್ತನು | ಅತೃಪ್ತನು |

### ಕಾಮನಾತ್ಯಾಗ

'ಸರ್ವಾನ್ ಕಾಮಾನ್ ವಿಹಾಯ' ಎಲ್ಲ ಕಾಮನೆಗಳನ್ನು ತೊರೆದು ಇರುವವನಿಗೆ ಯಾವುದ ಏನನ್ನಾದರೂ ಪಡೆಯಬೇಕೆಂಬ ಹಂಬಲವೆ ಉಳಿಯುವುದಿಲ್ಲ, ಆದರಿಂದ ಆತನು ನಿಸ್ಪೃಹನೆನಿಸುವನು. ನಿಷ್ಕಾಮನಾಗುವನು. ನಾನುತಾನೆಂಬ ಭಿನ್ನಭಾವವು ಅಳಿಯುವುದು. ಮಮತ್ವವು ನಷ್ಟವಾಗುವುದು. ಆತನಿಗೆ ಹೆಮ್ಮೆಬಿಮ್ಮುಗಳು ಸೋಂಕುವುದಿಲ್ಲ. ಕಾಮುಕಾಮಿಯ ಒಂದೊಂದು ಇಂದ್ರಿಯವೃತ್ತಿಯೂ ಪ್ರಬಲವಾಗಿ ಆತನನ್ನು ಒಂದೊಂದು ಹೊಸ ಹೊಸ ತೊಡಕಿನಲ್ಲಿ ಹಾಕುವುದು. ಹೊಸ ಹೊಸ ಭೋಗಗಳ ಹಂಬಲದಿಂದ ಹರಿದಾಟವು ಹೆಚ್ಚುವುದು. ಸ್ವಸ್ಥತೆಯು ನಷ್ಟವಾಗು.

ವುದು. ಆದುದರಿಂದ ಕಾಮಕಾಮಿಯು ಶಾಂತಿಯೆ ಇಲ್ಲದೆ ದುಃಖಕ್ಕೆ ಈಡಾಗುವನು.

**ಅಕಾಮನ ಬಗೆ**

ಬೇಕು ಎಂಬುದೆ ಇಲ್ಲವಾದ ಬಳಿಕ ಅಕಾಮನು ಅಕೆಲಸಿಗನು ಎಂದರೆ ಮೈಗಳ್ಳನಾಗುವ ಸಂಭವವಿದೆ; ಆತನು ಕಲ್ಲಿನಂತೆ ಸ್ತಬ್ಧನೂ ನಿಷ್ಕ್ರಿಯನೂ ಆಗುವನು; ಎಂದು ಸಂದೇಹಪಡಬಹುದಾಗಿದೆ. ಆದರೆ ಶ್ರೀಕೃಷ್ಣನು 'ನಿಸ್ಪೃಹಃ ಚರತಿ' ನಿಸ್ಪೃಹನಾಗಿ ವರ್ತಿಸುವನು— ವ್ಯವಹಾರ ಸಾಗಿಸುವನು ಎಂದು ಹೇಳಿದ ಮಾತನ್ನು ಮರೆಯಲಾಗದು. ಆಶಾಪಾಶಗಳಿಂದ ಬದ್ಧನು ಯಾವ ಹಿರಿಗೆಲಸಗಳನ್ನು ಮಾಡಲಿಕ್ಕೂ ಅಸಮರ್ಥನಾಗಿರುತ್ತಾನೆ. ಆತನ ಒದ್ದಾಟವೇನೊ ಹೆಚ್ಚಿರುವುದು ನಿಜ. ಆದರೆ ಒದ್ದಾಟ— ಓಡಾಟವೆಂದರೆ ನಿಜವಾದ ಕಾರ್ಯಪದ್ಧತಿಯಲ್ಲ. ಅದರಿಂದ ಯಾವ ಮಹಾಕಾರ್ಯವೂ ನೆರವೇರದು. ಕಾಮನೆಗಳನ್ನು— ಲೋಭ ಮೋಹಗಳನ್ನು ತೊರೆದವನು ಉಚ್ಚವಾತಾವರಣದಲ್ಲಿ ವಿಹರಿಸಬಲ್ಲನು. ಆತನ ಕಾರ್ಯಕ್ಷೇತ್ರವೂ ವಿಸ್ತೃತವಾಗಿರುತ್ತದೆ. ಅದರಿಂದ ಆತನು ಲೋಕಕಲ್ಯಾಣಕಾರಕ ಮಹಾಕಾರ್ಯಗಳನ್ನು ಕೈಕೊಂಡು ಅವನ್ನು ಕೊನೆಗಾಣಿಸಬಲ್ಲನು.

**ಅಹಂಕಾರ ಮತ್ತು ಮಮತ್ವ**

ನಿಸ್ಪೃಹತೆ, ನಿರ್ಮಮತ್ವ, ಮತ್ತು ನಿರಹಂಕಾರ ಇವು ಮೂರೂ ಒಂದಕ್ಕೊಂದು ಹೊಂದಿಕೊಂಡ ಗುಣಗಳು. ಅಹಂಕಾರದಿಂದ ಮಮತ್ವವುಂಟಾಗುವುದು. ಮಮತ್ವದಿಂದ ಸ್ಪೃಹಾ— ಇಷ್ಟೆಗಳು ತಲೆದೋರುವುವು ಅಹಂಕಾರವನ್ನು ಹೊಡೆದುಹಾಕಿದರೆ ಆತನಲ್ಲಿ ಮಮತ್ವವು ಇಲ್ಲದಂತಾಗುವುದು. ಮಮತ್ವವು ಇಲ್ಲದಂತಾಗಲು ಕಾಮನೆಗಳು ತಾವಾಗಿಯೆ ಮಾಯವಾಗುವುವು. ಆದುದರಿಂದ ನಿಷ್ಕಾಮನಾಗಿ ವರ್ತಿಸವರ್ತಿಸಬೇಕಾಗಿದ್ದರೆ ಅಹಂಕಾರವನ್ನು ಮೊದಲು ತ್ಯಜಿಸಬೇಕು.

**ಸ್ವಾರ್ಥ ಮತ್ತು ಪರಮಾರ್ಥ**

ತನ್ನಮಟ್ಟಿಗೇ ಎಣಿಕೆಹಾಕಿ. ತನ್ನ ಹಿತಕ್ಕಾಗಿಯೆ ಹೆಣಗಾಡುವುದು ಸ್ವಾರ್ಥ. ಲೋಕಕಲ್ಯಾಣದ ಗುರಿಯನ್ನು ಇಟ್ಟುಕೊಂಡು ಅದರ ಸಿದ್ಧಿಗಾಗಿ ಹೋರಾಡುವುದು ಪರಾರ್ಥ; ಇದೇ ಪರಮಾರ್ಥ. ಸ್ವಾರ್ಥಿಯು ತನ್ನ ಲಾಭಕ್ಕಾಗಿ ಹೆರವರ ಅಹಿತವನ್ನೂ ಮಾಡಲು ಹೇಸನು. ಪರಮಾರ್ಥಿಯು ಲೋಕಹಿತಕ್ಕಾಗಿ ತನ್ನ ಆತ್ಮಾರ್ಪಣವನ್ನೂ ಮಾಡಲು ಸಿದ್ಧನಾಗಿರುತ್ತಾನೆ. ಸ್ವಾರ್ಥಿಯು ಸಕಾಮನೆಂದೆನಿಸುವನು ಪರಮಾರ್ಥಿಯು ನಿಷ್ಕಾಮನು. ಏಕೆಂದರೆ ಆತನಿಗೆ ಕೇವಲ ತನ್ನ ಲಾಭವೇ ಗುರಿಯಾಗಿರುವುದಿಲ್ಲ. ಆದುದರಿಂದ ಈತನು ಅಕಾಮನೂ ಅಹುದು. ಆಪ್ತಕಾಮನೂ ಅಹುದು. ಸ್ವಾರ್ಥವು ತನ್ನ ಮೋರೆಗೆ ತಾನೇ ಆರತಿಬೆಳಗಿಕೊಂಬುವುದು. ಪರಮಾರ್ಥವು ಜನತಾಜನಾರ್ದನನ ಪೂಜೆಗೈಯ್ದು ಫಲವನ್ನೀಯುವುದು. ಆದುದರಿಂದ ನಿಷ್ಕಾಮಕರ್ಮದ ಮಹಿಮೆಯು ಅಗಾಧವಾದುದು.

ಸಂಕುಚಿತವಾತಾವರಣದಲ್ಲಿ ಮನಸು ಪ್ರಸನ್ನವಾಗುವುದಿಲ್ಲ. ಎತ್ತರವಾದ ಬೆಟ್ಟದ ಮೇಲೆ ವಿಶಾಲವಾದ ಕ್ಷೇತ್ರವು ಕಣ್ಣಿಗೆ ಕಾಣಿಸಿಕೊಂಬುವುದು. ಪರಿಶುದ್ಧವಾದ ಹವೆಯನ್ನು ಉಸಿರಾಡಿಸುವುದರಿಂದ ಮನಸ್ಸಿನ ಆಹ್ಲಾದವು ಹೆಚ್ಚುವುದು. ಸ್ವಾರ್ಥದ ಸಂಕುಚಿತ ವಾತಾವರಣದಲ್ಲಿ ಮನಸಿನ ಶಾಂತಿಯು ಅಳಿಯುವುದು. ಹೊಟ್ಟೆಕಿಚ್ಚು ಹಗೆತನಗಳು ಹೆಚ್ಚುವುವು. ಲೋಕದೊಳಗಿನ ಎಲ್ಲ ಕೋಲಾಹಲಗಳ ಮೂಲವು ಸ್ವಾರ್ಥದಲ್ಲಿಯೇ ಇದೆ. ಶಾಂತಿ, ಸ್ನೇಹ, ಪ್ರೀತಿಗಳಿಂದ ಮಾನವನ ಆತ್ಮಶಕ್ತಿಯು ವೃದ್ಧಿಂಗತವಾಗುವುದು ಮನುಷ್ಯಮಾತ್ರರೆಲ್ಲ ಪ್ರೀತಿಗಾಗಿ ಹಂಬಲಿಸುವುದು, ಅವರ ಸ್ವಭಾವಧರ್ಮವಾಗಿದೆ. ಸಂಕುಚಿತ ಸ್ವಾರ್ಥವು, ಹೊಡೆದಾಟ ಹೋರಾಟಗಳು ಕೂಡ ಪ್ರೀತಿಯ ಒಂದು ವಿಕೃತಸ್ವರೂಪವೇ ಆಗಿದೆ. ಪ್ರೀತಿಯ ಸೆಳೆಯು ಬತ್ತಿದೊಡನೆ ಮನುಷ್ಯನು ಆತ್ಮಹತ್ಯೆಮಾಡಿಕೊಳ್ಳಲಿಕ್ಕೂ ಹಿಂಜರಿಯುವುದಿಲ್ಲ. ಮಾನವನು ಬದುಕಿದುದು ಪ್ರೀತಿಗಾಗಿ: ಪ್ರೀತಿಮಾಡುವುದರಲ್ಲಿ, ಪ್ರೀತಿಯನ್ನು ಮಾಡಿಸಿಕೊಂಬುವುದರಲ್ಲಿಯೇ ಆತನು ನಿಜವಾದ ಸುಖವನ್ನು ಅನುಭವಿಸುವನು. ಎಲ್ಲ ಸಂಕುಚಿತ ಕಾಮನೆ— ಭಾವನೆಗಳನ್ನು ತೊರೆದು, ವಿಶ್ವಪ್ರೇಮದ ವಿಶಾಲವಾದ ಕ್ಷೇತ್ರದಲ್ಲಿ ವಿಹರಿಸು. ಅದುವೆ ನಿಷ್ಕಾಮಕರ್ಮದ 'ಕುರು'ಕ್ಷೇತ್ರ. ಶಾಂತಿಸುಖದ ತವರು. ಎಂಬುದು ಮೇಲಣ ಶ್ಲೋಕದ ಆಶಯವಾಗಿದೆ.

**ಯಃ ಕಾಮಾನ್ ವಿಹಾಯ ನಿಸ್ಪೃಹಃ ಚರತಿ**
**ಸಃ ಶಾಂತಿಂ ಅಧಿಗಚ್ಛತಿ ॥ ೭೦ ॥**
**ಆತ್ಮವಶ್ಯೈಃ ಇಂದ್ರಿಯೈಃ ವಿಷಯಾನ್ ಚರನ್**
**ಪ್ರಸಾದಂ ಅಧಿಗಚ್ಛತಿ ॥ ೬೪ ॥**

ಇವೆರಡೂ ಶ್ಲೋಕಗಳ ಅರ್ಥವು ಒಂದೇ ಆಗಿದೆ. ಕಾಮನೆಗಳನ್ನು ಬಿಟ್ಟು ಯಾವ ಹಂಬಲವೂ ಇಲ್ಲದೆ ಲೋಕವ್ಯವಹಾರಗಳನ್ನು ಸಾಗಿಸಿದರೆ ಶಾಂತಿಯು

ದೊರೆಯುವುದು; ಆದರಂತೆ ಇಂದ್ರಿಯಗಳನ್ನು ಅಂಕೆಯಲ್ಲಿ ಇಟ್ಟುಕೊಂಡು ವಿಷಯಗಳಲ್ಲಿ ವ್ಯವಹರಿಸಿದರೂ ಪ್ರಸನ್ನತೆಯು ದೊರೆಯುವುದು. ಒಂದರಲ್ಲಿ ಕಾಮನೆಗಳನ್ನು ಬಿಡಬೇಕೆಂದು ಹೇಳಿದೆ. ಇನ್ನೊಂದರಲ್ಲಿ ಇಂದ್ರಿಯಗಳನ್ನು ತನ್ನ ಅಂಕೆಯಲ್ಲಿ ಇಟ್ಟುಕೊಳ್ಳಬೇಕೆಂದು ಹೇಳಿದೆ. ಆದುದರಿಂದ ಕಾಮನೆಗಳನ್ನು ಬಿಡುವುದು ಎಂದರೆ ಇಂದ್ರಿಯಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಂಡು ವ್ಯವಹರಿಸುವುದು ಎಂತಲೇ ಅರ್ಥವಾಗುವುದು. ಇಂದ್ರಿಯಗಳನ್ನು ತನ್ನ ಅಧೀನವಿರಿಸಿಕೊಂಡವನಿಗೆ ಶಾಂತಿ, ಪ್ರಸನ್ನತೆಗಳು ಲಭಿಸುವುವು. ಇಂದ್ರಿಯಗಳು ಸ್ವೇಚ್ಛಾಚಾರಿಯಾದವನಿಗೆ ಅಶಾಂತಿ, ದುಃಖಗಳು ಒದಗುವುವು.

೫೫ ನೆಯ ಶ್ಲೋಕದಲ್ಲಿ 'ಸರ್ವಾನ್ ಮನೋಗತಾನ್ ಕಾಮಾನ್ ಪ್ರಜಹಾತಿ' ಎಂಬ ಶ್ಲೋಕದಿಂದ ಸ್ಥಿತಪ್ರಜ್ಞನ ವರ್ಣನೆಗೆ ಆರಂಭವಾಗುವುದು. ಇಲ್ಲಿ (೭೧) ಸರ್ವಾನ್ ಕಾಮಾನ್ ವಿಹಾಯ ಎಂದು ಉಪದೇಶವಿದೆ. ಕಾಮನೆಗಳನ್ನು ಬಿಡಬೇಕೆಂಬುದನ್ನೇ ಮತ್ತೆ ಮತ್ತೆ ಬಗೆಬಗೆಯಿಂದ ಹೇಳಿದೆ. ಸ್ಥಿತಪ್ರಜ್ಞನಾಗಬೇಕೆಂಬುವವನಿಗೆ ಇದು ಮೊದಲ ಕೆಲಸ. ಕಾಮನೆಗಳನ್ನು ತೊರೆಯುವುದು ಎಂದರೆ ಇಂದ್ರಿಯ ಸಂಯಮನ; ಆತ್ಮದಮನ.

ಆತ್ಮದಮನ ಮಾಡಲು ಆಗದವನಿಗೆ ಬ್ರಾಹ್ಮೀಸ್ಥಿತಿಯು ದೊರೆಯದು. ಮನುಷ್ಯನು ಪಡೆಯತಕ್ಕ ಪರಮ ಉಚ್ಚ ಪದವಿಯೆ ಬ್ರಾಹ್ಮೀಸ್ಥಿತಿ. ಬ್ರಾಹ್ಮೀಸ್ಥಿತಿಯೆಂದರೆ ನಾರಾಯಣಪದವಿ ನರನು ನಾರಾಯಣನಾಗುವುದು, ಎಂದರೆ ಬ್ರಾಹ್ಮೀಸ್ಥಿತಿಯನ್ನು ಹೊಂದುವುದು ಜೀವನು ಶಿವನಾಗುವುದೆಂದರೂ ಇದೆ. ಇದಕ್ಕೆ ಉಪನಿಷತ್ತಿನಲ್ಲಿ 'ಭೂಮಾ' ಸ್ಥಿತಿಯೆಂದು ಹೇಳಿದೆ. ಅಲ್ಪತ್ವವು ಅಶಿವತ್ವವು. ಭೂಮಾ, ಬ್ರಾಹ್ಮೀ ಅಥವಾ ಶಿವಾ ಅವಸ್ಥೆಯೆ ಮಾನವನ ಹೆಗ್ಗುರಿ. ಇದನ್ನು ಹೊಂದಿದವನ ಒಂದು ಕುರುಹು ಇದೆ.

## 'ಏನಾಂ ಪ್ರಾಪ್ಯ ನ ಮುಹ್ಯತಿ'

'ಇದನ್ನು ಹೊಂದಿದವನು ಎಂದೂ ಮೋಹವಶನಾಗುವುದಿಲ್ಲ' ಯಾವಾಗಲೂ ಆ ಸ್ಥಿತಿಯಲ್ಲಿ, ಅಲ್ಲಮ ಪ್ರಭುವು ಹೇಳಿದಂತೆ, ಬೆಳ್ಳಂಬೆಳಕು; ಕತ್ತಲೆ ಎಂದರೆ ಅರಿವುಗೇಡಿತನ, ಮೋಹ, ಭ್ರಾಂತಿಗಳೆಂಬುವು ಇಲ್ಲ. ಬ್ರಾಹ್ಮೀಸ್ಥಿತಿಯು ಕುರಿತು ವೇದದಲ್ಲಿ ಹೇಳಿರುವುದೇನೆಂದರೆ:

ಊರ್ಧ್ವೋನು ಸೃಷ್ಟಾಃ ತಿರ್ಯಙ್ನು ಸೃಷ್ಟಾಃ
ಸರ್ವಾ ದಿಶಃ ಪುರುಷ ಆ ಬಭೂವ |
ಪುರಂ ಯೋ ಬ್ರಹ್ಮಣೋ ವೇದ ಯಸ್ಮಾಃ
ಪುರುಷ ಉಚ್ಯತೇ ॥ ೨೮ ॥
ಯೋ ವೈ ತಾಂ ಬ್ರಹ್ಮಣೋ ವೇದಾಮೃತೇನಾ-
ವೃತಾಂ ಪುರಮ್ |
ತಸ್ಮೈ ಬ್ರಹ್ಮ ಚ ಬ್ರಾಹ್ಮಾಶ್ಚ ಚಕ್ಷುಃ ಪ್ರಾಣಂ
ಪ್ರಜಾಂ ದದುಃ ॥ ೨೯ ॥
ನ ವೈ ತಂ ಚಕ್ಷು ರ್ಜಹಾತಿ ನ ಪ್ರಾಣೋ
ಜರಸಃ ಪುರಾ |
ಪುರಂ ಯೋ ಬ್ರಹ್ಮಣೋ ವೇದ ಯಸ್ಮಾಃ
ಪುರುಷ ಉಚ್ಯತೇ ॥ ೩೦ ॥
ಅಷ್ಟಾ ಚಕ್ರಾ ನವದ್ವಾರಾ ದೇವಾನಾಂ
ಪೂರಯೋಧ್ಯಾ |
ತಸ್ಯಾಂ ಹಿರಣ್ಯಯಃ ಕೋಶಃ ಸ್ವರ್ಗೋ
ಜ್ಯೋತಿಷಾವೃತಃ ॥ ೩೧ ॥
ತಸ್ಮಿನ್ ಹಿರಣ್ಯಯೇ ಕೋಶೇ ತ್ರ್ಯರೇ ತ್ರಿ-
ಪ್ರತಿಷ್ಠಿತೇ |
ತಸ್ಮಿನ್ಯದ್ಯಕ್ಷಮಾತ್ಮನ್ವತ್ತದ್ವೈ ಬ್ರಹ್ಮವಿದೋ
ವಿದುಃ ॥ ೩೨ ॥
ಪ್ರಭ್ರಾಜಮಾನಾಂ ಹರಿಣೀಂ ಯಶಸಾ ಸಂಪರೀ-
ವೃತಾಮ್ |
ಪುರಂ ಹಿರಣ್ಯಯೀಂ ಬ್ರಹ್ಮಾ ಪ್ರವಿವೇಶಾ-
ಪರಾಜಿತಾಮ್ ॥ ೩೩ ॥

—ಅಥರ್ವವೇದ ೧೦,೨.

'ಮೇಲ್ಗಡೆಯಲ್ಲೂ ಎಲ್ಲ ಬದಿಗಳಲ್ಲೂ ಈ ಪುರುಷನು ತುಂಬಿಕೊಂಡಿದ್ದಾನೆ. ಬ್ರಹ್ಮಪುರದಲ್ಲಿ ಇರುವುದರಿಂದ ಈತನಿಗೆ ಪುರುಷನೆಂಬ ಹೆಸರು. ಅಮೃತದಿಂದ ಆವರಿಸಿದ ಬ್ರಹ್ಮಪುರವನ್ನು ಇವನು ಬಲ್ಲನು. ಇವನಿಗೆ ಬ್ರಹ್ಮನು ಮತ್ತು ಬ್ರಹ್ಮನಿಂದ ಹುಟ್ಟಿದ ಎಲ್ಲ ದೇವತೆಗಳು ಕಣ್ಣು, ಜೀವ, ಮತ್ತು ಮಕ್ಕಳನ್ನು ದಯಪಾಲಿಸುವರು. ಬ್ರಹ್ಮನಗರವನ್ನು ಅರಿತವನ ಕಣ್ಣು ಮತ್ತು ಪ್ರಾಣಗಳು ಆತನನ್ನು ಮುಪ್ಪಿನವರೆಗೂ ತೊರೆಯುವುದಿಲ್ಲ. ಆ ಪುರದಲ್ಲಿ ಇರುವುದರಿಂದಲೇ ಆತ್ಮನಿಗೆ ಪುರುಷನೆಂದು ಹೆಸರಿದೆ. ಎಂಟು ಚಕ್ರಗಳು, ಒಂಬತ್ತು ಬಾಗಿಲುಗಳಿಂದ ಕೂಡಿದ ಈ ಪುರವು ದೇವತೆಗಳ ಅಯೋಧ್ಯ, ಎಂದರೆ ಯುದ್ಧದಿಂದ ಗೆಲ್ಲಲು ಅಸಾಧ್ಯವಾದುದು ಆಗಿದೆ. ಅದರಲ್ಲಿ ಸುವರ್ಣಮಯ ಕೋಶವಿದೆ ಅದೊಂದು

ತೇಜೋಯುಕ್ತ ಸ್ವರ್ಗವೇ ಸರಿ. ಅಲ್ಲಿ ಮೂರು ಪಟ್ಟಿಗಳಿದ್ದು ಅದರ ಮೇಲೆ ಅದು ವಿರಾಜಮಾನವಾಗಿದೆ. ಆ ಸುವರ್ಣಮಯ ಕೋಶದಲ್ಲಿ ಪೂಜ್ಯನೂ ಚೈತನ್ಯಯುಕ್ತನೂ ಆದ ದೇವನಿರುವನು. ಆತನನ್ನು ಬ್ರಹ್ಮವಿದರು ಅರಿಯುವರು. ಎಂದೂ ಸೋಲನ್ನರಿಯದ, ತೊಳಗಿ ಬೆಳಗುತ್ತಿರುವ ಮನೋಹರವಾದ ಸುವರ್ಣಮಯ ತನ್ನ ಪುರಿಯಲ್ಲಿ ಬ್ರಹ್ಮನು ಪ್ರವೇಶಿಸುವನು'

## ಬ್ರಹ್ಮಪುರ

ಇದಕ್ಕೆ ಒಂಬತ್ತು ಬಾಗಿಲಗಳು (ನವ-ದ್ವಾರ): ಎರಡು ಕಣ್ಣು; ಎರಡು ಮೂಗಿನ ಹೊರಳೆ; ಎರಡು ಕಿವಿ; ಒಂದು ಬಾಯಿ; ಮಲ ಮತ್ತು ಮೂತ್ರದ್ವಾರ; ಇಂತಿವು ಒಂಬತ್ತು ದ್ವಾರಗಳು. ಆದುದರಿಂದ ಇದಕ್ಕೆ ದ್ವಾರಕಾ ಅಥವಾ 'ದ್ವಾರಾವತಿ' ಎಂದೂ ಹೆಸರುಂಟು. ಅಲ್ಲದೆ ಎಂಟು ಚಕ್ರಗಳುಂಟು. (೧) ಮೂಲಾಧಾರ, ಬೆನ್ನು ಮೂಳೆಕೆಯ ಅಡಿಯಲ್ಲಿ; (೨) ಸ್ವಾಧಿಷ್ಠಾನ, ಜನನೇಂದ್ರಿಯದ ಹಿಂಬದಿಗೆ; (೩) ಮಣಿಪೂರ ಮತ್ತು (೪) ಸೂರ್ಯಚಕ್ರ, ಹೊಕ್ಕುಳ ಹತ್ತಿರ; (೫) ಅನಾಹತ, ಎದೆಯಲ್ಲಿ (೬) ವಿಶುದ್ಧ, ಕೊರಳಲ್ಲಿ (೭) ಆಜ್ಞಾ, ಹುಬ್ಬುಗಳ ನಡುವೆ; (೮) ಸಹಸ್ರಾರ, ಮಿದುಳಿನಲ್ಲಿ ಮೂಲಾಧಾರ ಚಕ್ರದಲ್ಲಿ ಜೀವಾತ್ಮನ ಸುಪ್ತಶಕ್ತಿಯು ಹುದುಗಿಕೊಂಡಿರುತ್ತದೆ. ಅದನ್ನು ಜಾಗೃತಗೊಳಿಸುವುದು ಒಂದು ಮಹತ್ವದ ಕಾರ್ಯವಾಗಿದೆ. ಆ ಶಕ್ತಿಯು ಜಾಗೃತವಾಗಿ ಅದು ಮನುಷ್ಯನನ್ನು ಉನ್ನತಸ್ಥಿತಿಗೆ ಒಯ್ಯುವುದು. ಈ ಶರೀರದಲ್ಲಿ ಪರಮಾತ್ಮ ತತ್ವವು ಅಂಶರೂಪದಿಂದ ವಾಸಿಸುತ್ತದೆ. ಅದರಿಂದ ಇದು ಅತ್ಯಂತ ಪವಿತ್ರವಾದುದಾಗಿದೆ. ಹೊಲಸು ಹೇಸಿಕೆಗಳಿಂದೊಡಗೂಡಿದ ಒಡಲು, ಎಂದು ಇದನ್ನು ಹೀಯಾಳಿಸುವುದು ತಿಳಿಗೇಡಿತನವು. ಇದನ್ನು ಪವಿತ್ರವಾದ ದೇಗುಲವನ್ನಾಗಿ ಪರಿಣಮಿಸುವುದು ನಮ್ಮ ಕರ್ತವ್ಯವು. ಬ್ರಹ್ಮಲೋಕ, ಬ್ರಹ್ಮನಗರ, ಬ್ರಹ್ಮಪುರ, ಅಯೋಧ್ಯೆ, ದ್ವಾರಕೆ ಎಂದು ಮುಂತಾಗಿರುವ ದೇಹದ ಹೆಸರುಗಳು ಇದರ ಹಿರಿಮೆಯನ್ನೂ ಪಾವಿತ್ರ್ಯವನ್ನೂ ಸಿದ್ಧಪಡಿಸುತ್ತಲಿವೆ. ಆದದರಿಂದ ಈ 'ಕಾಲುಗಳೆ ಕಂಬವಾಗಿರುವ, ಶಿರವೆ ಹೊನ್ನ ಕಳಸವಾದ ದೇಹವೆಂಬ ದೇಗುಲದಲ್ಲಿ.' ಪರಮಾತ್ಮನನ್ನು ಒಲಿಸಿ ಇರಿಸಿಕೊಳ್ಳಬೇಕಲ್ಲದೆ, ಬೇರಾವ ಕಿರುಕುಳ ಭೂತರಕ್ಕಸರಿಗೆ ಎಡೆಯನ್ನೀಯಲಾಗದು.

ಈ ಬ್ರಹ್ಮಪುರಿಯ ಮಹಿಮೆಯನ್ನು ವ್ಯಕ್ತಗೊಳಿಸುವ ಈ ವಿಶೇಷಣಗಳು ನೆನಪಿಡುವಂತಿವೆ. ಬಭ್ರಾಜಮಾನಾ (ತಳತಳಿಸುವ), ಹರಿಣೀ (ದುಃಖಹಾರಿ), ಯಶಸಾ ಸಂಪರೀವೃತಾ (ಯಶಸ್ಸಿನಿಂದೊಡಗೂಡಿದ), ಅಪರಾಜಿತಾ (ಸೋಲನ್ನರಿಯದ), ಅಯೋಧ್ಯಾ (ಕಾದಿಗೆಲ್ಲಲಿಕ್ಕಾಗದ), ಈ ಪುರಿಯೆ ಬ್ರಹ್ಮನಗರಿಯು. ಇದರಲ್ಲಿ ಅವನು ಪ್ರವೇಶಿಸುವನು. ಬ್ರಾಹ್ಮೀಸ್ಥಿತಿಯನ್ನು ಪಡೆದವನು ಇದರ ಒಡೆಯನಾಗಿ ಆಳುವನು. ಉಳಿದವರು ಈ ಒಡಲ ತೊತ್ತುಗಳಾಗಿ ಬಾಳುವರು. ಈ ರಾಜ್ಯದ ಒಡೆತನವನ್ನು ಪಡೆಯುವುದೆ ಸ್ವರಾಜ್ಯ ಸಂಪಾದನೆ ಮಾಡುವುದು. ಸಮ್ರಾಟಪದವಿಯನ್ನು ಹೊಂದುವುದು. ಇಂತಹ ಸಾಮ್ರಾಜ್ಯ ವೈಭವವನ್ನು ಅನುಭವಿಸುವುದು ಪ್ರತಿಯೊಬ್ಬನ ಜನ್ಮಸಿದ್ಧ ಹಕ್ಕು ಇದೆ. ಅದನ್ನು ಹೊಂದಿ ಆನಂದಿಸಬೇಕೆಂಬುದೇ ಗೀತೆಯ ಸಂದೇಶ.

ಬ್ರಹ್ಮಪುರಿಯಲ್ಲಿ ಒಂದು ಕೋಶ (ಭಾಂಡಾರ) ವಿದೆ. ಅದು ಮೂರು ಅರೆಗಳ ಮೇಲೆ (ತ್ರ್ಯರೇ) ಭದ್ರವಾಗಿ ಇಡಲ್ಪಟ್ಟಿದೆ. ಅದು ಹೊನ್ನಿನಂತೆ ಹೊಳೆಯುವುದು (ಹಿರಣ್ಮಯಃ), ಇದುವೆ ಸ್ವರ್ಗವು (ಸ್ವರ್ಗಃ), ಇಲ್ಲಿ ಒಡೆಯರಾಗಿ ಪ್ರವೇಶಿಸಿದವರು ಸ್ವರ್ಗಸುಖವನ್ನು ಅನುಭವಿಸುವರು. ಇಲ್ಲಿಯೆ ದೇವತೆಗಳ ನೆಲೆವೀಡಾದ ಅಮರಾವತಿಯಿದೆ (ದೇವಾನಾಂ ಪೂಃ), ದಿವ್ಯವಾದ ತೇಜಸ್ಸು ಸುತ್ತಿಮುತ್ತಿಕೊಂಡಿದೆ ಇಲ್ಲಿ ಚೈತನ್ಯರೂಪಿಯಾದ ಪೂಜ್ಯನಾದ ಒಬ್ಬ ದೇವನಿದ್ದಾನೆ (ಆತ್ಮನ್ವತ್ ಯಕ್ಷಂ), ಇವನನ್ನು ಕೇವಲ ಬ್ರಹ್ಮಜ್ಞಾನಿಗಳೇ ಬಲ್ಲರು (ತತ್ ಬ್ರಹ್ಮವಿದಃ ವಿದುಃ). ಇದನ್ನು ಅರಿಯುವುದೆ ಎಲ್ಲರ ಗುರಿಯಾಗಿದೆ. ಇದುವೆ ಬ್ರಹ್ಮವಸ್ತುವು.

ಈ ಪುರಿಯಲ್ಲಿ ಇರುವುದರಿಂದಲೆ ಆತ್ಮನಿಗೆ ಪುರುಷನೆಂಬ ಹೆಸರು. (ಯಸ್ಮಾತ್ ಪುರುಷಃ ಉಚ್ಯತೇ), ಅದನ್ನು ಅರಿತು ಆಚರಿಸುವವನಿಗೆ ಯಶಸ್ಸು ದೊರೆಯುವುದು. 'ತಸ್ಮೈ ಬ್ರಹ್ಮ ಚ ಬ್ರಾಹ್ಮಾಶ್ಚ ಚಕ್ಷುಃ ಪ್ರಾಣಂ ಪ್ರಜಾಂದದುಃ' ಈತನಿಗೆ ಬ್ರಹ್ಮನೂ ಆತನಿಂದಾದ ಉಳಿದ ದೇವತೆಗಳೂ ಕಣ್ಣು, ಪ್ರಾಣ, ಪ್ರಜೆಗಳನ್ನು ದಯಪಾಲಿಸುವರು. ಇಲ್ಲಿ ಬ್ರಹ್ಮನೆಂದರೆ ಪರಮಾತ್ಮನೆಂದೂ ಬ್ರಾಹ್ಮವೆಂದರೆ ಆತನಿಂದಾದ ಅಗ್ನಿ, ವಾಯು, ವಿದ್ಯುತ್, ಸೂರ್ಯ ಮೊದಲಾದವರೆಂದೂ ಅರ್ಥವಿದೆ. ಬ್ರಾಹ್ಮೀಸ್ಥಿತಿಯನ್ನು ಮುಟ್ಟಿದವನಿಗೆ ಎಲ್ಲ ಸಿದ್ಧಿಗಳೂ ದೊರೆಯುವುವೆಂದು ಅಥರ್ವವೇದವು ಹೇಳುತ್ತದೆ.

## ಕಣ್ಣು, ಪ್ರಾಣ ಮತ್ತು ಪ್ರಜೆ

ಬ್ರಹ್ಮಜ್ಞಾನಿಗೆ ದೇವರು ಪ್ರಜೆ ಎಂದರೆ ಮಕ್ಕಳನ್ನು— ಯೋಗ್ಯವಾದ ಮಕ್ಕಳನ್ನು ಕೊಡುವನು. ಎಂದು ಹೇಳಿರುವುದರಿಂದ ವೇದಕಾಲದಲ್ಲಿಯೂ ಬ್ರಹ್ಮಜ್ಞಾನಿ-

ಗಳು ಗೃಹಸ್ಥಾಶ್ರಮಿಗಳಾಗಿರುತ್ತಿದ್ದರೆಂಬುದು ಸ್ಪಷ್ಟವಿದೆ. ಇಷ್ಟೆ ಅಲ್ಲ, ಬ್ರಹ್ಮಜ್ಞಾನಿಯು ಸತ್ಪುತ್ರರನ್ನು ಪಡೆಯುವನು ಎಂಬುದರಿಂದ ಬ್ರಹ್ಮಜ್ಞಾನವನ್ನು ಸಂಪಾದಿಸುವುದು ಮುಪ್ಪಿನಲ್ಲಿ ಎಂಬ ಈಗಿನ ಗ್ರಹಿಕೆಯು ತಪ್ಪಾಗಿದೆಯೆಂಬ ಮಾತೂ ಬಯಲಿಗೆ ಬರುತ್ತದೆ. ಪ್ರಜೋತ್ಪಾದನೆಗೆ ಯೋಗ್ಯವಾದ ವಯಸ್ಸು ಎಂದರೆ ತಾರುಣ್ಯವೇ ಸರಿ. ಆದುದರಿಂದ ವಿದ್ಯಾರ್ಜನೆಯ ಕಾಲದಲ್ಲಿಯೆ —ಬ್ರಹ್ಮಚಾರಿಯಾಗಿದ್ದಾಗಲೆ ಬ್ರಹ್ಮಜ್ಞಾನವನ್ನು ಪಡೆಯುವಂತೆ ಅಂದಿನ ವಿದ್ಯಾಭ್ಯಾಸದ ಕ್ರಮವಿದ್ದಿತೆಂಬುದು ನಿಶ್ಚಿತವಾಗುತ್ತದೆ. ಹೀಗೆ ಸತ್ಯಜ್ಞಾನವನ್ನು ಪಡೆದು ಮದುವೆಯಾಗಿ ಸಂಸಾರವನ್ನು ಆರಂಭಿಸಿದವರೆ ಮುಂದಾಳುಗಳಾಗಿರುವ ಸಮಾಜವು—ರಾಷ್ಟ್ರವು ಹೇಗೆ ತಾನೆ ಲೋಕವಿಖ್ಯಾತವಾಗಿ ಯಶಸ್ವಿಯಾಗದೆ ಇದ್ದೀತು? ಬ್ರಾಹ್ಮೀಸ್ಥಿತಿಯನ್ನು ಹೊಂದಿದವರಿಗೆ ದೇವರು ಪ್ರಾಣಗಳನ್ನು ನೀಡುವನು, ಎಂದರೆ **ಅವರು ದೀರ್ಘಾಯುಷಿಗಳಾಗಿ** ಬಾಳುವರೆಂದರ್ಥವು. ಸತ್ಯಜ್ಞಾನಿಯು ಅವಿಚಾರಿ ಅಥವಾ ಅನಾಚಾರಿಯಾಗುವುದು ಸಾಧ್ಯವಿಲ್ಲ. ಆದರಿಂದ ಆತನು ದೀರ್ಘಾಯುಷಿಯಾಗುವುದು ಸಹಜ. ಜೋರ್ಗಲ್ಲೊ ಸಾವಿರಾರು ವರುಷ ಬಾಳಬಹುದು. ಹಾಗೆ ಬರಿ ದೇಹವನ್ನು ಹಲವು ವರುಷ ಕಾಪಾಡಿ ಇಟ್ಟರೂ ಅದು ವ್ಯರ್ಥ. ಆದರಿಂದ ಲೋಕಕಲ್ಯಾಣದ ಕೆಲಸಗಳು ನಡೆಯುತ್ತಿದ್ದರೆ ಮಾತ್ರ ಆ ದೀರ್ಘಾಯುಷ್ಯವು ಸಾರ್ಥಕ. ಬ್ರಹ್ಮಜ್ಞಾನಿಗೆ ದೇವರು ಕಣ್ಣನ್ನು ಎಂದರೆ ದಿವ್ಯದೃಷ್ಟಿಯನ್ನು ಈಯುವನು. ಕನ್‌ ಧಾತು ಹೊಳೆ, ಪ್ರಕಾಶಿಸು. ಆದರಿಂದಲೆ ಕಣ್ಣು ಎಂಬ ಪದವು ಆಗಿದೆ. ಮುಂದಿನ ದಾರಿ ಹೊಳೆಯದವರ ಕಣ್ಣು ಕಣ್ಣಲ್ಲ. ಅದೊಂದು ತೂತು. ಸತ್ಯಜ್ಞಾನಿಯು ಎಂದೂ ಕಂಗೆಡುವುದಿಲ್ಲ. ಆತನಿಗೆ ಮುಂದಿನ ದಾರಿಯು ನಿಚ್ಚಳವಾಗಿ ಕಾಣುತ್ತದೆ.

**ನ ವೈ ತಂ ಚಕ್ಷುಃ ಜಹಾತಿ; ನ ಪ್ರಾಣಃ**
**ಜರಸಃ ಪುರಾ।**
**ಪುರಂ ಯಃ ಬ್ರಹ್ಮಣಃ ವೇದ ಯಸ್ಯಾಃ**
**ಪುರುಷ ಉಚ್ಯತೇ ॥**

ಯಾವುದರಲ್ಲಿ ಇರುವುದರಿಂದ ಈ ಆತ್ಮನಿಗೆ ಪುರುಷನೆಂಬ ಹೆಸರು ಪ್ರಾಪ್ತವಾಗಿದೆಯೊ ಆ ಬ್ರಹ್ಮಪುರಿಯನ್ನು ಯಾವನು ಅರಿಯುವನೊ —ಎಂದರೆ ತನ್ನ ತಾನು ಅರಿಯುವನೊ ಆತನ ಕಣ್ಣು ಮತ್ತು ಪ್ರಾಣಗಳು ಮುಪ್ಪಿನ ಮೊದಲು ಎಂದೂ ಹೋಗುವುದಿಲ್ಲ. ತೀರ ಹಾಗಲ ಹಣ್ಣಿನಂತಾಗುವವರೆಗೂ ಅವನ ಇಂದ್ರಿಯಗಳು ಸುಸ್ಥಿತಿಯಲ್ಲಿಯೆ ಉಳಿಯುವುವೆಂದು ಈ ಮಂತ್ರವು ಹೇಳುತ್ತದೆ.

**ಸುಪ್ರಜಾನಿರ್ಮಾಣ, ದೀರ್ಘಾಯುಷ್ಯ ಮತ್ತು ಕೊನೆಯ ವರೆಗೂ ಪರಾವಲಂಬಿಯಾಗದಂತಹ ಸುದೃಢವಾದ ಇಂದ್ರಿಯಗಳ ಪ್ರಾಪ್ತಿ** ಇವು ಬ್ರಹ್ಮಜ್ಞಾನಿಗೆ ಲಭಿಸತಕ್ಕ ಫಲಗಳು. ಎಲ್ಲ ಕಾಮನೆಗಳನ್ನು ತೊರೆದು ನಿಃಸ್ಪೃಹನಾಗಿ ಪಡೆಯಬೇಕೆಂದು ಗೀತೆಯು ಉಪದೇಶಿಸಿದ ಬ್ರಾಹ್ಮೀಸ್ಥಿತಿಯು ಮೈಗೆ ಬೂದಿ ಬಳಿದುಕೊಂಡು ಸಂಸಾರದಿಂದ ಓಡಿಹೋಗತಕ್ಕ ಅವಸ್ಥೆಯಲ್ಲವೆಂದು ಮೇಲಣ ವಿವರಣೆಯಿಂದ ವೇದದ ಆಧಾರದಿಂದ ಸಿದ್ಧವಾಗುತ್ತದೆ. ಗೀತೆಯಲ್ಲಿ ಹೇಳಿದ ಬ್ರಾಹ್ಮೀಸ್ಥಿತಿಯನ್ನು ಹೊಂದಿದವರಿಗೆ ಒಳ್ಳೆಯ ಸಂತತಿಯು ದೊರೆಯುವುದು; ದೀರ್ಘಾಯುಷ್ಯವು ಪ್ರಾಪ್ತವಾಗುವುದು. ಕೊನೆಯ ವರೆಗೆ ಇಂದ್ರಿಯಗಳು ದೃಢವಾಗಿ ಉಳಿಯುವುವು. ಎಂದು ವೇದವು ಆಶ್ವಾಸನವನ್ನೀಯುತ್ತದೆ. ನಿಜವಾದ ಬ್ರಹ್ಮಜ್ಞಾನಿಯು ತನ್ನ ನಡೆವಳಿಯಿಂದ ಲೋಕಕ್ಕೆಲ್ಲ ಮಾದರಿಯನ್ನು ಹಾಕಿಕೊಡುವನು. ಸಂಸಾರದಲ್ಲಿದ್ದು ಲೋಕಕಲ್ಯಾಣಕ್ಕಾಗಿ ತನ್ನ ಜೀವವನ್ನು ಸವೆಸುವನು, ಎಂದು ವೇದ ಮತ್ತು ಗೀತೆ ಇವೆರಡರ ಉಪದೇಶದ ಸಾರವಾಗಿದೆ.

ಇಂತು ಶ್ರೀಮದ್ಭಗವದ್ಗೀತಾರೂಪಿಯಾದ ಉಪನಿಷತ್ತಿನಲ್ಲಿ ಹೇಳಿದ ಬ್ರಹ್ಮವಿದ್ಯೆಯಿಂದ ನಿಶ್ಚಿತವಾದ ಶ್ರೀಕೃಷ್ಣ ಮತ್ತು ಅರ್ಜುನರ ಸಂವಾದದೊಳಗಿನ ಸಾಂಖ್ಯಯೋಗವೆಂಬ ಹೆಸರಿನ ಎರಡನೆಯ ಅಧ್ಯಾಯವು ಮುಗಿದುದು.



# ಶ್ರೀಮದ್ಭಗವದ್ಗೀತೆಯ ಎರಡನೆಯ ಅಧ್ಯಾಯದ ವಿಚಾರ

## ಸಾಂಖ್ಯ ಮತ್ತು ಯೋಗ

### ಸಾಂಖ್ಯ ತತ್ವಜ್ಞಾನದ ಹಿರಿಮೆ :

ಭಾರತೀಯ ತತ್ವಜ್ಞಾನದಲ್ಲಿ 'ಸಾಂಖ್ಯ' ಮತ್ತು 'ಯೋಗ' ಮಹತ್ವದ ಮಾರ್ಗಗಳಿವೆ. ಇವೆರಡರಲ್ಲೂ ಸಾಂಖ್ಯರಿಗೆ ಮೊದಲನೆಯ ಸ್ಥಾನ. ಮೇಲಣ ಮಾನ. 'ಸಿದ್ಧಾನಾಂ ಕಪಿಲೋ ಮುನಿಃ' ಎಂದು ಹೇಳಿ ಶ್ರೀ. ಕೃಷ್ಣನೂ ಆ ತತ್ವಜ್ಞಾನಿಯ ಹಿರಿಮೆಯನ್ನು ಸಿದ್ಧಗೊಳಿಸಿದ್ದಾನೆ. ಆದುದರಿಂದ ಸಾಂಖ್ಯತತ್ವ ವಿಚಾರವನ್ನೇ ಎಲ್ಲರೂ ಮೊದಲು ಹೇಳಲಾಗಿದ. ಎರಡನೆಯ ಅಧ್ಯಾಯದ ಹೆಸರೆ 'ಸಾಂಖ್ಯ ಯೋಗ' ಎಂದಿದೆ ಎರಡನೆಯ ಅಧ್ಯಾಯದಲ್ಲಿ ೧೧ ರಿಂದ ೩೦ ವರೆಗೆ ಸುಮಾರು ೨೦ ಶ್ಲೋಕಗಳನ್ನು ಈ ತತ್ವವಿವರಣೆಗಾಗಿ ಮೀಸಲಾಗಿರಿಸಿದೆ. ೩೧ ರಿಂದ ೩೯ ವರೆಗೆಒಂಬತ್ತು ಶ್ಲೋಕಗಳಲ್ಲಿ ವೀರನಿಗೆ ಉತ್ಸಾಹವನ್ನು ಅರ್ಜುನನಲ್ಲಿ ಉಂಟುಮಾಡುವುದಕ್ಕಾಗಿ ಕ್ಷಾತ್ರಧರ್ಮದ ಉಪದೇಶವಿದೆ. ಮತ್ತು ೪೦ ರಿಂದ ೫೩ ವರೆಗೆ ಯೋಗದ ವಿವರಣೆಯಿದ್ದು ಕೊನೆಯ ೫೪ ರಿಂದ ೭೨ ವರೆಗೆ ಸ್ಥಿತಪ್ರಜ್ಞನ ವಿಚಾರವು ಬಂದಿದೆ. ಸ್ಥಿತಪ್ರಜ್ಞಾವಸ್ಥೆಯೆಂದರೆ ಬ್ರಾಹ್ಮೀಸ್ಥಿತಿಯು. ಈ ಸ್ಥಿತಿಗೆ ಮುಟ್ಟಿದವನೆ ಪೂರ್ಣ ಪುರುಷನು. ಇದರಲ್ಲಿ ವಿವರಿಸಿದ ಸಾಂಖ್ಯ ವಿಚಾರವು ಅತ್ಯಂತ ಮಹತ್ವದ್ದಾಗಿರುವುದರಿಂದ ಅದನ್ನು ಸಾರಾಂಶ ರೂಪದಿಂದ ಮತ್ತೆ ಸಂಗ್ರಹಿಸಲಾಗಿದೆ.

### ಸಾಂಖ್ಯ ಸಿದ್ಧಾಂತ

ಸಮ್ಯಕ್ ಖ್ಯಾಯತೇ ಅಥವಾ ಸಮ್ಯಕ್ ಖ್ಯಾನಂ ಎಂದು ಸಾಂಖ್ಯ ಶಬ್ದವನ್ನು ಬಿಡಿಸಿ ಹೇಳಬಹುದು. ಯುಕ್ತಿ ಪ್ರಯುಕ್ತಿಗಳಿಂದ ಚೆನ್ನಾಗಿ ವಿವರಿಸಲು ಸಮರ್ಥವಾದ ಶಾಸ್ತ್ರವು ಇದು, ಎಂದು ಅದರ ಅರ್ಥವು. ನಮ್ಮ ಈ ತತ್ವವಿಚಾರದ ಗ್ರಂಥಗಳೇ ವಿಶೇಷವಾಗಿರುವುದು ಇದರ ಲೋಕಪ್ರೀತಿಯ ನಿದರ್ಶಕವಾಗಿದೆ. ಉಪನಿಷತ್ತಿನಲ್ಲಿ ಸನತ್ಕುಮಾರಾದಿಗಳು ಪ್ರತಿಸಾದಿಸಿದ್ದೂ ಈ ತತ್ವಜ್ಞಾನವನ್ನೇ. ಈ ಶಾಸ್ತ್ರದ ಮುಖ್ಯ ಸಿದ್ಧಾಂತವು 'ಏಕಾತ್ಮವಾದ'. ಆತ್ಮವು ಒಂದೇ ಇದ್ದು ಅದು ಎಲ್ಲೆಲ್ಲಿಯೂ ಇಡಿಗಿದೆ; ಎಂಬ ಈ ವಿಚಾರವು ಬಗೆಬಗೆಯಿಂದ ಗೀತೆಯಲ್ಲಿ ಅಲ್ಲಲ್ಲಿ ಕಾಣಿಸಿಕೊಳ್ಳುತ್ತದೆ.

**೧ ಸರ್ವಗತಃ (ಶ್ಲೋ. ೨೪)**

ಆತ್ಮವು ಒಂದು ಇದ್ದು ಅದು ಸರ್ವವ್ಯಾಪಿಯಾಗಿದೆ. ಎಲ್ಲದರಲ್ಲಿ ಹಾಸುಹೊಕ್ಕಾಗಿದೆ, (ಸರ್ವಗತ) ನಮಗೆ ಕಾಣುವ ಕಾಣದಿರುವ ಜಡಚೇತನಾದಿ ಎಲ್ಲ ವಸ್ತುಗಳ ಅಣುಕೀಣುಗಳೊಳಗೂ ಇದು ಇಡಗಿದೆ.

**೨ ಅಚಲಃ (ಶ್ಲೋ. ೨೪)**

ಆತ್ಮವು ಅಖಂಡವಾಗಿ ಎಲ್ಲೆಲ್ಲೂ ತುಂಬಿಕೊಂಡಿರುವುದರಿಂದ, ಇದಿಲ್ಲದ ಎಡೆಯೆ ಇಲ್ಲದುದರಿಂದ ಇದಕ್ಕೆ ಅಲುಗಾಟವೆಂಬುದೇ ಇಲ್ಲ. ಆದುದರಿಂದ ಇದು ಅಚಲವೆಂಬುದು ಉಚಿತವಾಗಿದೆ. ಅರ್ಥಮರ್ಥವಿದ್ದರೆ ಮಾತ್ರ ಉಲುಕುವುದಕ್ಕೆ ಅವಕಾಶವಿರಬೇಕಲ್ಲವೆ?

ಅನಂತ ಜೀವಗಳಿಗೆ ಬೇರೆಬೇರೆಯಾದ ಅನಂತ ಆತ್ಮಗಳಿವೆಯೊ? ಅದವಾ ಎಲ್ಲರಲ್ಲೂ ತುಂಬಿಕೊಂಡಿರುವ ಆತ್ಮವು ಒಂದೆಯೋ ಎಂಬ ಒಂದು ಸಂದೇಹವು ತಲೆದೋರುವಂತಿದೆ. ಆದರೆ ಸರ್ವಗತವಾದ ಆತ್ಮವು ಒಂದೇ ಆಗಿದೆಯೆಂಬುದಕ್ಕೆ ಗೀತೆಯಲ್ಲಿ ಬಂದಿರುವ ಆಧಾರ ವಚನಗಳನ್ನು ನೋಡಿಕೊಳ್ಳಬಹುದು.

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ**
**ಶರೀರಿಣಃ (ಶ್ಲೋ. ೧೮)**

ದೇಹಗಳೆಲ್ಲವೂ ಅಳಿಯತಕ್ಕವು. ಉಳಿಯತಕ್ಕ ನಿತ್ಯ ವಸ್ತುವು ಆತ್ಮವು ಮಾತ್ರ ಎಂದು ಈ ಶ್ಲೋಕವು ಹೇಳುತ್ತದೆ. ಶರೀರ ಧಾರಿಯಾದ ಆತ್ಮನ (ನಿತ್ಯಸ್ಯ), ನಾಶವಂತ ದೇಹಗಳು ಹಲವು (ಅಂತವತಃ ದೇಹಾಃ) ಎಂಬುದು ಆತ್ಮನು ಒಬ್ಬನೇ ಎಂಬ ಮಾತನ್ನೇ ಸ್ಪಷ್ಟೀಕರಿಸುತ್ತದೆ.

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ**
**ಭಾರತ। (ಶ್ಲೋ. ೩೦)**

'ದೇಹಧಾರಿಯಾದ ಅವಧ್ಯನಾದ ನಿತ್ಯ ಆತ್ಮನು ಎಲ್ಲ ದೇಹಗಳಲ್ಲಿಯೂ ಹುದುಗಿಕೊಂಡಿದ್ದಾನೆ;' ಇದರಂತೆ

**ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯ**
**ಸ್ಥಿತಃ। (೧೦-೨೦)**

**ಅಹಂ ವೈಶ್ವಾನರೋ ಭೂತ್ವಾ ಪ್ರಾಣಿನಾಂ ದೇಹ ಮಾಶ್ರಿತಃ।** (೧೫–೧೪)

'ನಾನು ಒಬ್ಬನೆ ಆತ್ಮರೂಪದಿಂದ ಎಲ್ಲ ಭೂತಮಾತ್ರ ಗಳಲ್ಲಿ ನಿಂತುಕೊಂಡಿದ್ದೇನೆ. ನಾನು ವಿಶ್ವದ ನೇತಾರನಾಗಿ ಎಲ್ಲ ಪ್ರಾಣಿಗಳ ದೇಹಗಳನ್ನು ಆಶ್ರಯಿಸಿದ್ದೇನೆ.' ವೇದಗಳಲ್ಲಿ, 'ವೈಶ್ವಾನರ' ಶಬ್ದದಿಂದ ವಿಶ್ವದಲ್ಲಿ ಇವನೊಬ್ಬನೇ ನರನು, ಇವನೆ ವಿಶ್ವಾತ್ಮನು ಎಂದು ವೈಶ್ವಾನರ ದೇವತೆಯ ಮಂತ್ರಗಳಲ್ಲಿ ಹೇಳಿದೆ.

ಆದರೆ ಎಚ್ಚರದಲ್ಲಿರುವಾಗ ನಮಗೆ ಬರುವುದು ಕೇವಲ ದ್ವೈತದ ಅನುಭವವು ಎಂಬಲ್ಲಿ ಸಂದೇಹವೆ ಇಲ್ಲ. ಪ್ರತಿಯೊಬ್ಬರ ಆತ್ಮವೂ ಬೇರಬೇರೆ. ಆದುದರಿಂದ ತಾನು ಅಲ್ಪನು, ಕ್ಷೀಣನು, ಕಿರುಕಳನು, ಕ್ಷುದ್ರನು, ಮರ್ತ್ಯನು ಎಂಬ ಸಂಕುಚಿತವಿಚಾರಗಳು ಆತನನ್ನು ಸುತ್ತಿಮುತ್ತುತ್ತವೆ. ಆದರೆ ಶಾಸ್ತ್ರವು ಇದರ ವಿರುದ್ಧವಾಗಿ ಉಪದೇಶಿಸುತ್ತದೆ. ಆತ್ಮನು ಬ್ರಹ್ಮಸ್ವರೂಪನು, ವಿಭುವು, ಜ್ಞಾನಿ, ಅಪರಿಮಿತನು, ಮಹಾನ್, ಭೂಮಾ. ಅಜರ, ಅಮರ ಇತ್ಯಾದಿಯಾಗಿ ವರ್ಣನೆಗಳುಂಟು. ಇದರ ಕೆಲವೊಂದು ಅನುಭವವು ಪ್ರತಿಯೊಬ್ಬರಿಗೂ ಸುಷುಪ್ತಿಯಲ್ಲಿ ಬಾರದೆ ಇಲ್ಲ. ಸುಷುಪ್ತಿಯಲ್ಲಿ ಭೂಮಾ ಸ್ಥಿತಿಯ–ಏಕತ್ವದ ಅವಸ್ಥೆಯ ಅನುಭವವು ಮನುಷ್ಯರಿಗೆ ಬರುತ್ತದೆ ಸುಷುಪ್ತಿ, ಸಮಾಧಿ ಮತ್ತು ಮುಕ್ತಿಗಳಲ್ಲಿ ಆತ್ಮನ ಪೂರ್ಣತೆಯ ಅನುಭವವು ದೊರೆಯುತ್ತದೆ.

**ಮಮೈವಾಂಶೋ ಜೀವಲೋಕೇ ಜೀವಭೂತಃ ಸನಾತನಃ।** (೧೫–೭)

'ನನ್ನ (ಪರಮಾತ್ಮನ) ಒಂದು ಸನಾತನ ಅಂಶವು ಜೀವಲೋಕದಲ್ಲಿ ಜೀವವಾಗಿದೆ' ಬೆಂಕಿಯ ಕಿಡಿಯು ಹೇಗೆ ಅಂಶರೂಪ ಅಗ್ನಿಯೆ ಆಗಿದೆಯೊ ಅದರಂತೆ ಜೀವವೂ ಪರಮಾತ್ಮನ ಅಂಶವೆಂಬಲ್ಲಿ ಸಂದೇಹವಿಲ್ಲ. ಆದುದರಿಂದ ಸರ್ವಗತ ಎಂದರೆ ಎಲ್ಲೆಡೆಗಳಲ್ಲಿಯೂ ತುಂಬಿಕೊಂಡಿರುವ ಆತ್ಮವು ಒಂದೇ ಎಂದು ಸಾಂಖ್ಯರ ನಿಶ್ಚಿತ ಸಿದ್ಧಾಂತವಾಗಿದೆ.

೩. **ನಿತ್ಯಃ** (ಶ್ಲೋ. ೧೮; ೨೦; ೨೧; ೨೪; ೨೬; ೩೦) ಆತ್ಮನು ನಿತ್ಯನು ಎಂದರೆ ಎಂದೆರಡೂ ಬದಲಾದವನು. ಆದುದರಿಂದ

೪. **ಶಾಶ್ವತಃ** (ಶ್ಲೋ. ೨೦); **ಸನಾತನಃ** (ಶ್ಲೋ. ೨೪); ಬದಲಾಗದೆ ಇರುವುದರಿಂದಲೆ ಆತ್ಮನು ಮೊದಲಿನಿಂದಲೂ ಶಾಶ್ವತವಾಗಿದ್ದವನೆಂದು ಹೇಳುವುದು ಯುಕ್ತವಾಗಿದೆ ಈ ಕಾರಣದಿಂದಲೆ.

೫. **ಅಜಃ** (ಶ್ಲೋ. ೨೦; ೨೧). ಆತ್ಮನಿಗೆ ಜನ್ಮ–ಹುಟ್ಟು ಎಂಬುದೆ ಇಲ್ಲ. **ನ ಜಾಯತೇ** (ಶ್ಲೋ. ೨೦); ಎಂದು ಹೇಳಿದೆ.

೬. **ಅನಾಶೀ** (ಶ್ಲೋ. ೧೮); **ಅವಿನಾಶೀ** (೨೧); **ಅವ್ಯಯಃ** (೨೧); **ನಿತ್ಯಂ ಅವಧ್ಯಃ** (೩೦); **ಅಚ್ಛೇದ್ಯಃ** (೨೪).

ಆತ್ಮಕ್ಕೆ ಅಳಿವೆ ಇಲ್ಲ. ಇದಕ್ಕೆ ಸವಕಳಿಯಿಲ್ಲ; ಹೆಚ್ಚು ಕಡಿಮೆಯಾಗುವುದು ಇಲ್ಲ; ಇದನ್ನು ಕೊಲ್ಲಲಿಕ್ಕೆ ಆಗುವುದಿಲ್ಲ. ತುಂಡರಿಸುವುದೂ ಸಾಧ್ಯವಿಲ್ಲ. ಇದೇ ಮಾತನ್ನು ಇನ್ನೂ ಒಂದು ಬಗೆಯಿಂದ ಹೀಗೆ ಹೇಳಿದೆ. **ನಮ್ರಿಯತೇ** (೨೦); **ನ ಹನ್ಯತೇ** (೧೯); **ಹನ್ಯಮಾನೇ ಶರೀರೇ ನ ಹನ್ಯತೇ** (೨೦); **ನೈನಂ ಛಿಂದಂತಿ ಶಸ್ತ್ರಾಣಿ** (೨೩).

ಇದು ಮಡಿಯುವುದಿಲ್ಲ. ಇದನ್ನು ಮಡಿಸುವುದು ಯಾರಿಂದ ಸಾಧ್ಯವಿಲ್ಲ. ದೇಹವನ್ನು ತುಂಡರಿಸಬಹುದು. ಆದರೆ ಇದನ್ನು ಕೊಂಕಿಸುವುದೂ ಸಾಧ್ಯವಿಲ್ಲ. ಇಂತಿವೆಲ್ಲ ವಿಶೇಷಣ ವರ್ಣನೆಗಳಿಂದ **ಆತ್ಮವು ಅಮರವೆಂಬ** ಮಾತನ್ನು ಸಿದ್ಧಪಡಿಸಿದಂತಾಯ್ತು. ಇನ್ನು ಒಂದು ದೇಹವನ್ನು ಬಿಟ್ಟಬಳಿಕ (ಅದು ನಾಶವಾದ ನಂತರ) ಆತ್ಮವು ಮತ್ತೆ ದೇಹಧಾರಣಮಾಡುವುದೆ? ಇಲ್ಲವೆ? ಎಂಬ ಮಾತನ್ನು ಸ್ಪಷ್ಟಗೊಳಿಸಲು ಶ್ರೀಕೃಷ್ಣನು ಹೇಳುವುದೇನೆಂದರೆ—

**ಭೂತ್ವಾ ಅಭವಿತಾನ** (೨೦).

'ಒಮ್ಮೆ ದೇಹಧಾರಣಮಾಡಿದಬಳಿಕ ಮುಂದೆ ಮತ್ತೆ ಎಂದೂ ದೇಹಧಾರಣಮಾಡಲಿಕ್ಕಿಲ್ಲವೆಂದಲ್ಲ.' ಒಮ್ಮೆ ಶರೀರಿಯಾದಂತೆ ಮುಂದೆಯೂ ಬೇಕಾದಾಗ ಶರೀರ ಧಾರಣಮಾಡಬಹುದು.

**ನತ್ವೇವಾಹಂ ಜಾತು ನಾಸಂ ನತ್ವಂ ನೇಮೇ ಜನಾಧಿಪಾಃ।**
**ನಚೈವ ನ ಭವಿಷ್ಯಾಮಃ ಸರ್ವೇ ವಯಮತಃ ಪರಮ್ ॥ ೧೨ ॥**
**ದೇಹಿನೋಽಸ್ಮಿನ್ ಯಥಾದೇಹೇ ಕೌಮಾರಂ ಯೌವನಂ ಜರಾ।**
**ತಥಾ ದೇಹಾಂತರಪ್ರಾಪ್ತಿಃ ಧೀರಸ್ತತ್ರ ನಮುಹ್ಯತಿ ॥ ೧೩ ॥**
(ಅಧ್ಯಾ. ೨).

ನಾನು ಇಲ್ಲದೆ ಇದ್ದ ಕಾಲವಿಲ್ಲ; ನೀನೂ ಹಿಂದೆ ಎಂದೂ ಇದ್ದಿಲ್ಲವೆಂತಲ್ಲ. ಈ ಅರಸರು ಹಿಂದೆ ಹುಟ್ಟಿ

ಬಂದಿದ್ದಿಲ್ಲವೆಂಬುವಂತಿಲ್ಲ. ಇನ್ನು ಮುಂದೆಯೂ ನಾವು ಎಂದೂ ಮತ್ತೆ ಹುಟ್ಟಿಬರಲಿಕ್ಕಿಲ್ಲ; ಅಥವಾ ಆಗಲಿಕ್ಕಿಲ್ಲವೆಂಬಹಾಗಿಲ್ಲ. ಅರ್ಥಾತ್ ನಾವು ಹಿಂದೆ ಇದ್ದೆವು. ಇಂದು ಇದ್ದೇವೆ. ಮುಂದೆಯೂ ಇರುವೆವು. ಮನುಷ್ಯನಿಗೆ ಹೇಗೆ ಹುಡುಗತನ, ಹರಯ, ಮುಪ್ಪು-ಗಳಿವೆಯೊ ಹಾಗೆ ಈ ಆತ್ಮನಿಗೆ ಬೇರೆ ದೇಹಗಳು ಬರುವುವು. ಆದುದರಿಂದ ಇದನ್ನರಿತವರು ಒಂದು ದೇಹವು ಅಳಿದುಹೋಗುವುದೆಂದು ಎಂದೂ ಅಳಲುವು-ದಿಲ್ಲ. ಇಂತು ಈ ಹುಟ್ಟುಸಾವುಗಳಿಲ್ಲದ ಶಾಶ್ವತ ಆತ್ಮವು ತನಗೆ ಬೇಕಾದಾಗ ದೇಹಧಾರಿಯಾಗುವುದು. ದೇಹಗಳು ಹೊಸವು ಆದರೂ ಅದರಲ್ಲಿ ಹುದುಗಿ-ಕೊಂಡಿರುವ ಆತ್ಮವು ಎಂದಿನಿಂದಲೂ ಇದ್ದುದು. ಆದುದರಿಂದ ಇದಕ್ಕೆ

೭. **ಪುರಾಣಃ** (೨೦).

'ಪುರಾಣಪುರುಷ'ನೆಂಬ ಹೆಸರು. **ಪುರಾ ಅಪಿ ನವಃ ಪುರಾಣಃ** ಹಳೆಯದಾದರೂ ಹೆಚ್ಚು ಹೊಸತಾಗಿರು-ವಂತೆಯೆ ಇರುವುದರಿಂದ ಇದಕ್ಕೆ 'ಪುರಾಣ'ನೆಂಬ ಹೆಸರು ಉಚಿತವಾಗಿದೆ. ಇದು ಎಂದೆಂದಿಗೂ, ಪ್ರಾಯದ್ದೆ. ಇದಕ್ಕೆ ಮುಪ್ಪೆಂಬುದೆ ಇಲ್ಲ.

**ವಾಸಾಂಸಿ ಜೀರ್ಣಾನಿ ಯಥಾ ವಿಹಾಯ**
**ನವಾನಿ ಗೃಹ್ಣಾತಿ ನರೋಽಪರಾಣಿ ।**
**ತಥಾ ಶರೀರಾಣಿ ವಿಹಾಯ ಜೀರ್ಣಾನಿ ಅನ್ಯಾನಿ**
**ಸಂಯಾತಿ ನವಾನಿ ದೇಹೀ ॥**
**(೨-೨೨)**

'ಹಳೆಯ ಬಟ್ಟೆಗಳನ್ನು ಹರಿದ ಬಳಿಕ ಬಿಟ್ಟು ಹೊಸ-ವನ್ನು ತಕ್ಕೊಳ್ಳುವಂತೆ ಈ ಒಡಲು ಒಡೆದ ಬಳಿಕ ಆತ್ಮನು ಹೊಸದನ್ನು ಹೊಂದುವನು' ಇಂತು ಆತ್ಮನು ಮತ್ತೆ ಮತ್ತೆ ಹೊಚ್ಚಹೊಸಬನಾಗುವನು.

೮. **ಅದಾಹ್ಯಃ, ಅಕ್ಲೇದ್ಯಃ, ಅಶೋಷ್ಯಃ** (೨೪).

ಆತ್ಮವು (ಬೆಂಕಿಯಿಂದ) ಸುಡದು; (ನೀರಿನಲ್ಲಿ) ನೆನೆಯದು; (ಗಾಳಿಯಿಂದ) ಒಣಗದು. ಇದನ್ನೇ ಬಿಡಿಸಿಯೂ ಹೇಳಿದ್ದುಂಟು.

**ನ ಏನಂ ದಹತಿ ಪಾವಕಃ । ನ ಚ ಏನಂ**
**ಕ್ಲೇದಯಂತಿ ಆಪಃ ।**
**ನ ಶೋಷಯತಿ ಮಾರುತಃ** (೨೩).
**ಅವಿಕಾರ್ಯಃ ಅಯಂ ಉಚ್ಯತೇ ।** (೨೫).

ಆದುದರಿಂದ ಇದಕ್ಕೆ ಅವಿಕಾರಿ ಎಂದರೆ ಯಾತ-ರಿಂದಲೂ ವ್ಯತ್ಯಾಸಹೊಂದದಂತಹದು ಎಂದೂ ಹೇಳಿದ್ದುಂಟು. ಇದಕ್ಕಾಗಿಯೆ ಇದು

**ಸ್ಥಾಣುಃ** (೨೪).

'ಸ್ಥಿರವಾದುದು.' ಅಲೆದಾಟವಿಲ್ಲ; ಕದಲುಬದಲಿಲ್ಲ. ನೆಲೆದೂಗಿ ನಿಂತುದಾಗಿದೆ. ಆದರೆ

೧೦. **ಅವ್ಯಕ್ತಃ ಅಚಿಂತ್ಯಃ**

ಇದು ಯಾರಿಗೂ ಕಾಣದಂತಹದೂ ಕಲ್ಪಿಸಲಿಕ್ಕೂ ಆಗದಂತಹದೂ ಆಗಿದೆ. ಆದುದರಿಂದ ಇದು ಬಹಳ ಸೋಜಿಗದ ವಸ್ತುವಾಗಿದೆ.

**ಆಶ್ಚರ್ಯವತ್ ಪಶ್ಯತಿ ಕಶ್ಚಿದೇನಂ....**
**ವೇದ ನ ಚೈವ ಕಶ್ಚಿತ್ ।** (೨೯).

'ಪ್ರತಿಯೊಬ್ಬರೂ ಸೋಜಿಗಗೊಂಡು ಇದನ್ನು (ಆತ್ಮವನ್ನು) ಆಶ್ಚರ್ಯ ಪೂರ್ಣ ದೃಷ್ಟಿಯಿಂದ ನೋಡುವರು; ಆದರೆ ಇದನ್ನು ಅರಿತವರು ಮಾತ್ರ ಯಾರೂ ಇಲ್ಲ.' ತಿಳಿದವರಿಗೂ ತಿಳಿದುದೆಲ್ಲವನ್ನು ಶಬ್ದದಿಂದ ಹೇಳಲಿಕ್ಕಾ-ಗದಿರುವದು ಇನ್ನೂ ಒಂದು ಸೋಜಿಗ! ಆದುದರಿಂದಲೆ ಇದಕ್ಕೆ 'ಸ್ವ-ಸಂವೇದ್ಯ' ಎಂದರೆ ತನ್ನಲ್ಲಿ ತಾನೆ ತಿಳಿಯಬಲ್ಲವಸ್ತು ಇದು; ಇನ್ನಾರಿಗೆ ಹೇಳಲಿಕ್ಕರಿದು.

ಇಂತಿದು ಗೀತೆಯಲ್ಲಿ ಬಂದ ಏಕಾತ್ಮವಾದವು. ಇನ್ನುಳಿದ ಉಪದೇಶಗಳಿಗೆಲ್ಲ ಮೊದಲು ಇದನ್ನು ಹೇಳಲಾಗಿದೆ. ಅದರಿಂದ ಇದರ ಮಹತ್ವವು ಗೊತ್ತಾಗುವುದು. ಇದರ ನೆಲೆಗಟ್ಟಿನ ಮೇಲೆಯೆ ಇನ್ನು ಮುಂದಿನ ಎಲ್ಲ ಉಪದೇ-ಶವು ನಿಂತಿದೆ. ಆದುದರಿಂದ ಈ ಏಕಾತ್ಮವಾದವನ್ನು ತನ್ನ ನಡೆಯಲ್ಲಿ ಅಳವಡಿಸಿಕೊಳ್ಳದವರಿಗೆ ಮುಂದಿನ ಉಪದೇಶವೂ ಅಷ್ಟು ಫಲಕಾರಿಯಾಗದು.

## ಸಾಂಖ್ಯ ವಿಚಾರ

ಅಣುಕೀಣು ತೃಣಕಾಷ್ಠಗಳಲ್ಲೆಲ್ಲ ತುಂಬಿಕೊಂಡಿರುವ ಆತ್ಮವು ಒಂದೇ ಎಂಬುದು ದೃಢವಾದ ಬಳಿಕ ಆ ಮನು-ಷ್ಯನ ನಡೆವಳಿಯಲ್ಲಿ ತಾನು ಮತ್ತು ಪರನರು ಎಂಬ ಭಿನ್ನಭೇದವು ಅಳಿಯಲಾರಂಭಿಸುವುದು. ತಾನು ಯಾರಿ-ಗಾದರೂ ಹಿಂಸಿಸಿದರೆ ಅದು ತನ್ನ ಹಿಂಸೆಯೆ ಎಂಬ ಭಾವವು ಒಡಮೂಡುವುದು ಯಾರನ್ನಾದರೂ ಮೋಸ-ಗೊಳಿಸಿದರೆ ಅದು ಆತ್ಮವಂಚನೆಯೇ ಸರಿ, ಎಂಬ ಮಾತು ಮನದಟ್ಟಾಗುವುದು. ಇನ್ನು ಈ ಮಾತು ಯಾರಿಗೆ ಮನದಟ್ಟಾಗದಿದ್ದರೂ, ಎಲ್ಲರ ಆತ್ಮವು ಒಂದೇ ಆಗಿರುವುದರಿಂದ ಯಾವನೊಬ್ಬನು ಪರರಿಗೆಂದು ಮಾಡಿದ ಅಪಕಾರ್ಯವು ಮರಳಿ ಆತನನ್ನೆ ಬಾಧಿಸದೆ ಬಿಡದು. **ಪರವರು ಎಂಬ ಮಾತಿಗೆ, ತಾತ್ವಿಕ ವಿಚಾರ ಶೀಲರಲ್ಲಿ ಎಡೆಯೆ ಇಲ್ಲ.**

**ಮೃತ್ಯೋಃ ಸಮೃತ್ಯುಮಾಪ್ನೋತಿ ಯ ಇಹ**
**ನಾನೇವ ಪಶ್ಯತಿ**
**( ಕಠ. ೪.೧೦; ಬೃಹ. ೪.೪.೧೯)**

ಯಾವನು ಇಲ್ಲಿ (ತಾನು ಹೆರವರು ಎಂದ ಮುಂತಾಗಿ) ಭಿನ್ನಭೇದದಿಂದ ಕಾಣುವನೊ ಅವನ ಮೃತ್ಯುವಿಗಿಂತಲೂ ಹೆಚ್ಚಿನ ಮೃತ್ಯುವನ್ನು ಹೊಂದುವನು, ಎಂದು ಉಪನಿಷತ್ತುಗಳಲ್ಲಿ ಹೇಳಿದುದು ಈ ಕಾರಣದಿಂದಲೇ ಜನಗಳಿಗೆ ಚಿಕ್ಕಂದಿನಿಂದಲೇ ಈ ತತ್ತ್ವವು ಮನವರಿಕೆಯಾದರೆ ಅವರು ನಿಶ್ಚಿತವಾಗಿಯೂ ಒಳ್ಳೆ, ನಲ್ನುಡಿಯುವರಾಗದೆ ಇರಲಾರರು.

ಪ್ರತಿಯೊಬ್ಬನೂ ಅನುಭವಿಸುವುದು ತನ್ನ ಕೆಲಸದ ಪರಿಣಾಮಗಳನ್ನೇ. ಅವರವರ ಸುಖದುಃಖಗಳಿಗೆ ಅವರವರೇ ಹೊಣೆಗಾರರು. ಇನ್ನು ಕೊಲ್ಲಲ್ಪಡತಕ್ಕ ಕೌರವರು ಸಾಯುವುದು ತಮ್ಮ ಕರ್ಮದಿಂದಲೇ. ತಾನು ಸುಖಿಯಾಗಬೇಕೆಂದು ಅತ್ಯಾಚಾರಿಯಾಗಿ ಇನ್ನೊಬ್ಬರ ಸೊತ್ತನ್ನು ಕಸಿದುಕೊಳ್ಳುವವರಿಗೆ ಕೊನೆಗೆ ದುಃಖಕ್ಕೆ ಈಡಾಗಬೇಕಾಗುವದು. ಆದುದರಿಂದ ಅತ್ಯಾಚಾರ, ಅನಾಚಾರಿಯಾಗುವ ಯುಕ್ತಿಸಲ್ಲಿ ತಾನು ಇನ್ನೊಬ್ಬರೆಂದು ಯಾರನ್ನಾದರೂ ಹಿಡಿಸುತ್ತಿರುವುದು, ವಂಚಿಸುತ್ತಿರುವುದು ಶುದ್ಧ ಭ್ರಮೆ; ಇದು ಆತ್ಮವಂಚನೆ ಎಂದು ಗೊತ್ತಾಗಿ, ಆತನು ಉಳಿದವರ ಹಿತಕ್ಕಾಗಿಯೆ ಪ್ರಯತ್ನಿಸಿದರೆ ಕೊನೆಗೆ ನಿಶ್ಚಿತವಾಗಿಯೂ ಅವನು ಸುಖಿಯಾಗುವನು ಆದುದರಿಂದ ಲೋಕಕಲ್ಯಾಣಕ್ಕಾಗಿ ತಮ್ಮಲ್ಲಿರುವ ಶಕ್ತಿಗಳನ್ನು ವಿನಿಯೋಗಿಸುವುದೇ ಸುಖವನ್ನು ಪಡೆಯುವ ನಿಜವಾದ ಹಂಚಿಕೆಯಾಗಿದೆ.

**ಸುಖವೂ ಅಷ್ಟೇ; ದುಃಖವೂ ಅಷ್ಟೆ.**

ಬರಿ ಸುಖವನ್ನು ಮಾತ್ರ ಸಂಪಾದಿಸಬೇಕೆಂಬ ಹಂಬಲದಲ್ಲಿ ಮನುಷ್ಯನು ತಿಳಿಗೇಡಿಯಂತೆ ನಡೆದುಕೊಳ್ಳುತ್ತಾನೆ. ಸುಖ-ದುಃಖಗಳು ನೆಳಲು-ಬೆಳಕುಗಳಂತೆ, ಅವಳಿ ಮಕ್ಕಳಂತೆ ಒಂದಕ್ಕೊಂದು ಅಂಟಿಕೊಂಡಿವೆ. ಸಂಪೂರ್ಣವಾಗಿ ಒಂದರಿಂದ ಒಂದನ್ನು ಬೇರ್ಪಡಿಸುವುದು ಭಾವಲೋಕದಲ್ಲಿ ಮಾತ್ರ ಸಾಧ್ಯ; ಭೂಲೋಕದಲ್ಲಿ ಎಂದೆಂದೂ ಸಾಧ್ಯವಿಲ್ಲ. ಆದುದರಿಂದ ಈ ಮಾತನ್ನು ಮನದಂದು ತಿಳಿದವರು ತಮ್ಮ ಕರ್ತವ್ಯದಲ್ಲಿ ಮುಂದೆ ಸಾಗುತ್ತಾರೆ. ಸುಖದುಃಖಗಳೆರಡನ್ನೂ ಕಡೆಗಣಿಸುತ್ತಾರೆ. ಆದುದರಿಂದಲೆ ಗೀತೆಯಲ್ಲಿ ಎರಡನ್ನೂ ಸಮಾನವೆಂದು ತಿಳಿಯಬೇಕಾಗಿ ಹೇಳಿದೆ.

**ಸುಖದುಃಖೇ ಸಮೇ ಕೃತ್ವಾ ಲಾಭಾಲಾಭೌ**
**ಜಯಾಜಯೌ ॥ (೩೮)**

**ಸಮದುಃಖ ಸುಖಂ ಧೀರಂ ಸೋಽಮೃತತ್ವಾಯ**
**ಕಲ್ಪತೇ । (೧೫)**

**ಶುಭಾಶುಭಂ ನಾಭಿನಂದತಿ ; ನದ್ವೇಷ್ಟಿ । (೫೭)**

**ವೀತರಾಗ ಭಯಕ್ರೋಧಃ ಸ್ಥಿತಧೀಃ ಮುನಿಃ**
**ಉಚ್ಯತೇ । (೫೬)**

ಎರಡನೆಯ ಅಧ್ಯಾಯದಲ್ಲಿ ಹೇಳಿದ ಮಹತ್ವದ ಎರಡನೆಯ ಮಾತಿದು. 'ಸುಖದುಃಖ, ಲಾಭಾಲಾಭ, ಜಯಾಪಜಯ, ಶುಭಾಶುಭ, ಮೊದಲಾದ ಎರಡರ ತೊಡಕಿನಲ್ಲಿ ಸಿಲುಕಿ ಬಳಲದಿರುವುದೇ ಜಾಣ್ಮೆ. ತಿಳಿದವರು ಎರಡನ್ನೂ ಸಮವೆಂದು ಭಾವಿಸುವರು. ಆದರಂತೆ ಎರಡನ್ನೂ ಸಮವೆಂದು ಭಾವಿಸುವುದರ ರೀತಿ ಯಾವುದು? ಎಂಬುದರ ವಿವರಣೆಯೂ ಗೀತೆಯಲ್ಲಿದೆ:

**ದುಃಖೇಷು ಅನುದ್ವಿಗ್ನಮನಾಃ ಸುಖೇಷು**
**ವಿಗತಸ್ಪೃಹಃ । (೫೬)**

**ಸರ್ವತ್ರ ಅನಭಿಸ್ನೇಹಃ । (೫೭)**

ಜೀವನದಲ್ಲಿ ಬೇಕು. ಬೇಕು ಎಂದು ಎಷ್ಟು ಹಂಬಲಿಸಿದರೂ ಹಲವು ಬಾರಿ ಸುಖವು ದೂರದೂರ ಹೋಗುವುದು; ಬೇಡ ಬೇಡವೆಂದು ತಡೆಹಿಡಿದರೂ ದುಃಖವು ಮೈಮೇಲೆ ಬೀಳುವುದು ಅಂತಹ ಸಂದರ್ಭದಲ್ಲಿ ಮನುಷ್ಯನು ಹೇಗೆ ನಡೆದುಕೊಳ್ಳಬೇಕೆಂಬುದನ್ನು ಗೀತೆಯು ಚೆನ್ನಾಗಿ ಹೇಳಿದೆ. 'ದುಃಖವು ಬಂದಾಗ ಮನಸ್ಸಿನಲ್ಲಿ ಕಳವಳಕ್ಕೆ ಎಡೆಗೊಡಬೇಡ. ಮತ್ತು ಸುಖವು ಬಂದಾಗ ಅದರಲ್ಲಿ ಆಸೆಪಡಬೇಡ,' ಮೈಮರೆಯಬೇಡ. ಯಾವದೇ ವಿಷಯದಲ್ಲಿ ಹೆಚ್ಚಿನ ಅಂಟು-ನಂಟು ಬೇಡ,' ಅದೇ ಎಲ್ಲ ಸುಖದುಃಖಗಳ ಮೂಲ ಎರಡನ್ನೂ ಸಮವಾಗಿ ಕಾಣು; ಮತ್ತು ತನ್ನ ಕೈಕೊಂಡ ಸತ್ಕಾರ್ಯದಲ್ಲಿ ಅನುದಿನವೂ ಮುಂದಡಿಯಿಡುತ್ತ ಸಾಗುವುದೇ ಪರಮಕಲ್ಯಾಣದ ನಿಜವಾದ ದಾರಿಯಾಗಿದೆ. ಚಳಿ ಬೀಳಲಿ, ಮಳೆಬರಲಿ, ಬಿಸಿಲು ತಾಗಲಿ ಏನೇ ಆಗಲಿ ತನ್ನ ಮುಟ್ಟತಕ್ಕ ಊರಿನ ಕಡೆಗೆ ಸಾಗುವುದು ಹೇಗೆ ಕರ್ತವ್ಯವೋ, ಅದರಂತೆ ಜೀವನದ ಗುರಿಯನ್ನು ಕುರಿತು ಸಾಗಿದಾಗ ಕೈಕೊಂಡ ಒಳ್ಳೆಲಸವನ್ನು ಕಡೆಗಾಣಿಸುವಾಗ ಸುಖದುಃಖಗಳ-ಎರಡರ-ಎಡರನ್ನು ಕಾಲಿಗೆ ತೊಡಕಿಸಿಕೊಳ್ಳದೆ ಬಿಡಿಸಿಕೊಂಡು ಮುಂದುವರಿಯುವುದೇ ತಿಳಿದವರ ಕೆಲಸವಾಗಿದೆ. ಪರಮಾತ್ಮನೇ ಸುಖದುಃಖಗಳನ್ನು ಮನುಷ್ಯರ ಸತ್ವಪರೀಕ್ಷೆಗಾಗಿ ತಂದೊಡ್ಡುತ್ತಾನೆ, ಎಂಬ

ನಂಬುಗೆಯೂ ಮಾನವನ ಉನ್ನತಿಗೆ ಸಹಾಯಕವಾಗಿದೆ. ಸುಖಸಂಪತ್ತು ದೊರೆತಾಗ ಕೊಬ್ಬಿ ಕೊನೆದಾಡದಿರುವುದೂ ದುಃಖಕಷ್ಟಗಳು ಒದಗಿದಾಗ ಬೆಂದು ಬೆಂಡಾಗದಿರುವುದೂ ಕರ್ತವ್ಯವಾಗಿದೆಯೆಂದು ಈ ನಂಬುಗೆಯುಳ್ಳವರು ತಿಳಿದಿರುತ್ತಾರೆ. ಹಲವು ಬಾರಿ ವಿಪತ್ತುಗಳು ಪಶ್ಚಾತ್ತಾಪದಿಂದ ಮಾನವನ ಹಿತಕ್ಕೆ ಕಾರಣವಾಗುತ್ತವೆ. ಸಂಕಟಗಳು ಬಂದಾಗ ದೇಶದಲ್ಲಿ ಮೊದಲು ಎಂದೂ ಇಲ್ಲದ ಒಕ್ಕಟ್ಟು, ದೃಢನಿಶ್ಚಯಗಳು ಕಾಣಿಸಿಕೊಳ್ಳುವುವು. ಆ ನಾಡಿಗರಲ್ಲಿ ಸುಪ್ತವಾಗಿರುವ ಹಲವು ಶ್ರೇಷ್ಠಗುಣಗಳು ಇಂತಹ ಸಂದರ್ಭದಲ್ಲಿ ಜಾಗೃತವಾಗುವುವು. ಇದಕ್ಕೆ ವಿಪರೀತವಾಗಿ, ಸುಖದ ಕಾಲದಲ್ಲಿ ಭೋಗಲಾಲಸೆಯು ಹೆಚ್ಚುವುದು. ಅವಗುಣಗಳು ತಲೆದೋರಹತ್ತುವುವು. ಆದುದರಿಂದ ಸುಖವು ಅಥವಾ ದುಃಖವು ಪ್ರವಾಸಿಕನಿಗೆ ಹತ್ತುವ ಗಾಳಿಮಳೆಗಳಂತೆ ನೈಮಿತ್ತಿಕ. ಅವುಗಳಿಂದ ಹಿಗ್ಗುವುದಾಗಲಿ, ಕುಗ್ಗುವುದಾಗಲಿ, ಹಾನಿಕರ. ಎರಡೂ ಈಶ ಇಚ್ಛೆಯಿಂದ ಬಂದುವು, ಎಂದು ಸಮಭಾವವನ್ನು ತಾಳುವುದೇ ಮೇಲು; ಮತ್ತು ಲೇಸು.

**ಸಿದ್ಧ್ಯಸಿದ್ಧ್ಯೋಃ ಸಮೋ ಭೂತ್ವಾ ಸಮತ್ವಂ**
**ಯೋಗ ಉಚ್ಯತೇ । (೨. ೪೮)**
**ಸಮಃ ಸಿದ್ಧಾವಸಿದ್ಧೌ ಚ ಕೃತ್ವಾಪಿ ನ**
**ನಿಬಧ್ಯತೇ । (೨. ೪೪)**
**ಸಮಃ ಶತ್ರೌ ಚ ಮಿತ್ರೇ ಚ ತಥಾ**
**ಮಾನಾಪಮಾನಯೋಃ ।**
**ಶೀತೋಷ್ಣಸುಖದುಃಖೇಷು ಸಮಃ**
**ಸಂಗವಿವರ್ಜಿತಃ। (೧೨. ೧೮)**
**ತುಲ್ಯನಿಂದಾಸ್ತುತಿರ್ಮೌನೀ ಸಂತುಷ್ಟೋ**
**ಯೇನಕೇನಚಿತ್ । (೧೨. ೧೯)**

ಯೋಗವೆಂದರೇನು? ಸಿದ್ಧಿ ಅಸಿದ್ಧಿಗಳೆರಡನ್ನೂ ಸಮವೆಂದು ಬಗೆವುದು, ಹಗೆ ಕೆಳೆ, ಮಾನಾಪಮಾನ, ಶೀತೋಷ್ಣ, ಸುಖದುಃಖ, ಹೊಗಳಿಕೆ ಬೊಗಳಿಕೆಗಳೆಲ್ಲವೂ ಸಮವೆಂಬ ದೃಢವಾದ ಭಾವನೆಯಿಂದ ನಡೆದುಕೊಳ್ಳುವುದೆ ಯೋಗ. ಈ ಬಗೆಯಾಗಿ ನಡೆವವನೆ ಯೋಗಿ. ಇಂತಹ ಯೋಗಿಗೆ ಈ ಲೋಕದಲ್ಲಿ ಯಾವ ಕಾಲ್ತೊಡಕೂ ಇಲ್ಲದೆ ಆತನು ತನ್ನ ಕೈಕೊಂಡ ನಲ್ಗೆಲಸಗಳನ್ನು ಯಶಸ್ವಿಯಾಗಿ ಕೊನೆಗಾಣಿಸಿ ಹೆಸರು ಹೊಂದುತ್ತಾನೆಂದು ಗೀತೆಯು ಹೇಳಿದುದು ಎಳ್ಳಷ್ಟು ಸುಳ್ಳಲ್ಲ. ಯಾವ ಪಾಡೆ ಇರಲಿ, ಆ ವಿಶ್ವಚಾಲಕ ಪರಮಶಕ್ತಿಯಲ್ಲಿ ದೃಢವಾದ ನಂಬುಗೆಯನ್ನಿಟ್ಟು ತಮ್ಮ ಕರ್ತವ್ಯವನ್ನು ಮಾಡುತ್ತಿರುವುದೆ ಉನ್ನತಿಯ ಮಾರ್ಗ. ಇದಕ್ಕೆ ಹೊರತಾದುದು ಅಧೋಮಾರ್ಗ. ಈ ಲೋಕದಲ್ಲಿ ಆಗಿ ಹೋದ ಮಹಾಪುರುಷರ ಚರಿತೆಗಳೂ ಈ ಮಾತಿಗೆ ಸಾಕ್ಷಿಯಾಗಿವೆ. ಸುಖ ದುಃಖಗಳೆರಡನ್ನೂ ಸಮವೆಂದು ಬಗೆದುದರಿಂದ ಅವರು ಅಂತಹ ಯಶೋವಂತರಾಗಲು ಸಾಧ್ಯವಾಯಿತೆಂಬುದು ಅವರ ಚರಿತೆಯಿಂದ ಕಂಡುಕೊಳ್ಳಬಹುದಾಗಿದೆ.

ಎರಡರ ಎಸರಿನಿಂದ ಪಾರಾಗಲು ಗೀತೆಯಲ್ಲಿ ಹೇಳಿದ ಈ ಸಮಭಾವದಹಂಚಿಕೆಯು ಅತ್ಯಂತ ಮಹತ್ವದ್ದಾಗಿದೆ. ಈ ಸಮಭಾವವು ಮೈಯುಣ್ಣಲು ಇನ್ನೊಂದು ಹಂಚಿಕೆಯನ್ನು ಅಲ್ಲಿಯೆ ಹೇಳಿದೆ.

**ವಿಹಾಯ ಕಾಮಾನ್ಯಃ ಸರ್ವಾನ್ ಪುಮಾನ್**
**ಚರತಿ ನಿಸ್ಪೃಹಃ ।**
**ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ**
**॥ ೭೧ ॥**

‘ಮನಸಿನೊಳಗಿನ ಎಲ್ಲ ಕಾಮನೆಗಳನ್ನು ತೊರೆದು, ತನ್ನ ಮತ್ತು ಹೆರವರ ಎಂಬ ಭಿನ್ನ ಭಾವವನ್ನು ತೊಲಗಿ, ಯಾವ ಹಂಬಲ ಹಾರೈಕೆಗಳ ಬಂಜಡದಲ್ಲಿ ಸಿಲುಕದೆ ನಿರಹಂಕಾರವಾಗಿ (ಸಮಭಾವದಿಂದ) ತನ್ನ ವ್ಯವಹಾರಗಳನ್ನು ಸಾಗಿಸುವನೊ ಅವನಿಗೆ ಶಾಂತಿಸುಖವು ತೊರೆಯುತ್ತದೆ.’ ಇಹಲೋಕದಲ್ಲಿ ಮಾನವನಿಗೆ ದೊರೆಯಬಹುದಾದ ಪರಮ ಸುಖವೆಂದರೇ ಇದು. ಇದು ದೊರೆಯಲು ಅವನು ಹೇಗೆ ನಡೆದುಕೊಳ್ಳಬೇಕೆಂಬ ವಿಚಾರದಲ್ಲಿ ಇನ್ನೂ ಕೆಲವು ಸೂಚನೆಗಳನ್ನು ಮಾಡಿದ್ದುಂಟು.

**ಇಂದ್ರಿಯಾಣಿ ಇಂದ್ರಿಯಾರ್ಥೇಭ್ಯಃ ಸಂಹರತೇ ।**
**( ೫೮ )**
**ಯಸ್ಯ ಇಂದ್ರಿಯಾಣಿ ಇಂದ್ರಿಯಾರ್ಥೇಭ್ಯಃ**
**ಸರ್ವಶಃ ನಿಗೃಹೀತಾನಿ । ( ೬೮ )**

‘ಇಂದ್ರಿಯಗಳನ್ನು ಅವುಗಳ ವಿಷಯಗಳಿಂದ ದೂರ ಸರಿಸುವದು, ಹೀಗೆ ಮಾಡದ ಇಂದ್ರಿಯಗಳನ್ನು ಅವುಗಳ ವಿಷಯಗಳ ಹಿಂದೆ ಹರಿಗೊಟ್ಟರೆ ಮನಸ್ಸಿನ ತೂಕವು ತಪ್ಪಿ ಅಂತಃಶಾಂತಿಯು ಹಾಳಾಗುವುದು. ಈ ಸುಖದುಃಖಾದಿ ದ್ವಂದ್ವಗಳನ್ನು ಸಮವಾಗಿ ಭಾವಿಸುವ ಶಕ್ತಿ ಅಳಿಯುವುದು.

**ಆತ್ಮನಿ ಏವ ಆತ್ಮನಾ ತುಷ್ಟಃ । ( ೫೫ )**

ಇಂದ್ರಿಯ ವೃತ್ತಿಗಳನ್ನು ಅಂಕೆಯಲ್ಲಿರಿಸಿದ ಬಳಿಕ ‘ತನ್ನಲ್ಲಿ ತಾನೆ ಸಂತುಷ್ಟನಾಗಲು’ ಕಲಿಯುವುದು ಹೊರಗಿನ ವಸ್ತುಗಳನ್ನು ಪಡೆದು ಸುಖಿಯಾಗಬಹುದೆಂಬ ಹಂಬಲವು ಹುಸಿ. ಆದುದರಿಂದ ತನ್ನ ಆತ್ಮವು ತನ್ನ ಆತ್ಮದಿಂದಲೇ ಸುಖಿಯಾಗುವುದನ್ನು ಮನಗಾಣಬೇಕು.

**ಕಾಮಾಃ ಅಪೂರ್ಯಮಾಣಂ ಅಚಲಪ್ರತಿಷ್ಠಂ**
**ಪ್ರವಿಶಂತಿ || ೭೦ ||**

“ಯಾವನಿಗೆ ತನ್ನ ಪೂರ್ಣತೆಯ ಅನುಭವವು ಉಂಟಾಗುವುದೋ ಅವನು ತನ್ನ ಕರ್ತವ್ಯಕ್ಕೆ ದೃಢವಾಗಿ ಅಂಟಿಕೊಂಡಿರುವನು. ಎಲ್ಲ ಕಾಮಗಳೂ, ಎಲ್ಲ ಭೋಗಗಳೂ ತಾವಾಗಿಯೇ ಅಂತಹನ ಬಳಿಸಾರುವುವು.” ಬೇಡಿ ಬೆನ್ನಟ್ಟಿದರೆ ಓಡಿ ದೂರ ಹೋಗುತ್ತಿದ್ದ ಸುಖಗಳು, ಅದರ ಹಂಬಲವನ್ನು ತೊರೆದು ಸ್ವಸ್ಥನಾಗಿ ತನ್ನ ಕರ್ತವ್ಯತತ್ಪರನಾಗಲು ಅವನಲ್ಲಿ ತಾವಾಗಿಯೆ ಬಂದು ಅವನ ಸೇವೆಗೆ ಕೈಕಟ್ಟಿಕೊಂಡು ನಿಲ್ಲುವುವು. ನಿರಿಚ್ಛನೂ, ನಿಸ್ಪೃಹನೂ, ನಿಷ್ಕಾಮನೂ ಆದ ಸಂಯಮಿಗೆ ಶಾಂತಿ ಸುಖಗಳ ಸ್ವಾನಂದ ಸಾಮ್ರಾಜ್ಯವು ಲಭಿಸುವುದು ; ಗೀತೆಯ ಎರಡನೆಯ ಅಧ್ಯಾಯದಲ್ಲಿ **ಸಾಂಖ್ಯ ಶಾಸ್ತ್ರ**ದ ರೀತಿಯಲ್ಲಿ ವಿವರಿಸಿ ಹೇಳಿದ್ದಾಗಿದೆ. ಇನ್ನು **ಯೋಗ-ಮಾರ್ಗ**ದ ವಿಚಾರವು.

### ಯೋಗಮಾರ್ಗ

**ಸಿದ್ಧ್ಯಸಿದ್ಧ್ಯೋಃ ಸಮೋಭೂತ್ವಾ ಸಮತ್ವಂ ಯೋಗ ಉಚ್ಯತೇ** || (೪೮) **ಬುದ್ಧ್ಯಾ ಯುಕ್ತೋ ಜಹಾತೀಹ ಉಭೇ ಸುಕೃತದುಷ್ಕೃತೇ | ತಸ್ಮಾತ್ ಯೋಗಾಯ ಯುಜ್ಯಸ್ವ ಯೋಗಃ ಕರ್ಮಸು ಕೌಶಲಂ** || (೫೦)

ಎಂಬ ಈ ಶ್ಲೋಕಗಳಲ್ಲಿ ಯೋಗದ ವ್ಯಾಖ್ಯೆ ಬಂದಿದೆ. **ಕೆಲಸಮಾಡುವ ಹದವೇ ಯೋಗ** ; ಸಮತ್ವ ಎಂದರೆ **ತೂಕ ತಪ್ಪಗೊಡದಿರುವುದೇ ಯೋಗ** ; ಎಂದು ಎರಡು ತೆರನಾಗಿ ಯೋಗವೆಂದರೇನೆಂದು ತಿಳಿಸಿಹೇಳಿದ್ದುಂಟು. **ಲಾಭಹಾನಿ**, ಸಿದ್ಧಿ ಅಸಿದ್ಧಿ, ಸುಖದುಃಖ ಎಂಬೀ ಒಗೆಯ ಎರಡರ ಎಳೆದಾಟದಲ್ಲಿ ಸಿಲುಕಿ ತನ್ನ ತೂಕ ತಪ್ಪಗೊಡದಿರುವ, ತೂಕ ತಪ್ಪಿದಂತೆ ತನ್ನ ಒಳ್ಗೆಲಸಗಳನ್ನು ಮುಂದುವರಿಸುವ ಹದವೆ ಯೋಗ. ಆದುದರಿಂದ ಇದಕ್ಕೆ ‘**ಸಮತ್ವಯೋಗ**’ವೆಂದು ಕರೆಯಬಹುದಾಗಿದೆ. ಪ್ರತಿಯೊಂದು ಕೆಲಸವನ್ನು ಈ ಹಂಚಿಕೆಯಿಂದಲೇ ನೆರವೇರಿಸಬೇಕೆಂದು ಗೀತೆಯು ಒತ್ತಾಯದಿಂದ ಹೇಳುತ್ತದೆ.

**ಯೋಗಸ್ಥಃ ಕುರು ಕರ್ಮಾಣಿ ಸಂಗಂ ತ್ಯಕ್ತ್ವಾ ಧನಂಜಯ** | (೪೮)

‘ಯೋಗದಲ್ಲಿ ನೆಲಸಿ ಕೆಲಸಗಳನ್ನು ನೆರವೇರಿಸು. ಮತ್ತು ಕಾಮನೆಗಳನ್ನು ತೊಲಗು.’ ಕರ್ತವ್ಯಕರ್ಮಗಳನ್ನು ನೆರವೇರಿಸುವಾಗ ಸುಖದುಃಖಾದಿ ದ್ವಂದ್ವಗಳನ್ನು ಲೆಕ್ಕಿಸದಿರುವುದೇ ಯೋಗ. ಇದೇ ‘**ಸಮಬುದ್ಧಿ**’. ಈ ಸಮಬುದ್ಧಿಯು ಸ್ಥಿರವಾಗಿ ಉಳಿದು ವಿಶ್ವಚಾಲಕ ಶಕ್ತಿಯು— ಪರಮೇಶ್ವರನು ತಮ್ಮಿಂದ ಕೆಲಸಮಾಡಿಸುತ್ತಿರುವನು; ಎಂಬ ಶ್ರದ್ಧೆಯು ದೃಢವಾಗಿರಬೇಕು. ತಾವು ಆಜ್ಞೆಗಳನ್ನು ನೆರವೇರಿಸುವ ಬಂಟರು ಎಂಬ ಭಾವನೆಯು ಜಾಗೃತವಿದ್ದರೆ ಯುದ್ಧದೊಳಗಿನ ಸೈನಿಕನು ಹೇಗೆ ತನ್ನ ಕರ್ತವ್ಯವನ್ನು ನೆರವೇರಿಸುವಾಗ ಯಾವ ಎರಡುತೊಡರುಗಳನ್ನು ಲೆಕ್ಕಿಸದೆ. ಜೀವದ ಹಂಗು ದೊರೆದು ಅದಕ್ಕೆ ಅಂಟಿಕೊಂಡಿರುವನೊ ಹಾಗೆಯೆ ಯೋಗಿಯು— ಕರ್ಮಯೋಗಿಯು ನಡೆವಳಿಯಾಗಿರಬೇಕು. ಮನುಷ್ಯನಿಗೆ ಕರ್ತವ್ಯಪಾಲನೆಯ ಅಧಿಕಾರವೊಂದೇ ಉಂಟು. ಅದರ ಫಲದ ಆಸೆ ಇರಕೂಡದೆಂಬ ವಿಚಾರವನ್ನು ಗೀತೆಯು ಬಹಳ ಚೆನ್ನಾಗಿ ವಿವರಿಸಿದೆ.

**ಕರ್ಮಣ್ಯೇವಾಧಿಕಾರಃತೇ |**
**ಮಾ ಫಲೇಷು ಕದಾಚನ |**
**ಮಾ ಕರ್ಮ ಫಲಹೇತುಃ ಭೂ |**
**ಮಾತೇ ಸಂಗಃ ಅಸ್ತು ಅಕರ್ಮಣಿ ||** (೪೭)
ಕೃಪಣಾಃ ಫಲಹೇತವಃ | (೪೯)

‘ಕೆಲಸಮಾಡುವುದು ಮನುಷ್ಯನ ಹಕ್ಕು. ಫಲದ ಮೇಲೆ ಎಂದೂ ಆತನ ಅಧಿಕಾರವಿಲ್ಲ. (ಆದುದರಿಂದ) ಆ ಫಲದ ಹಂಬಲಬೇಡ. (ಆದರೆ) ಕೃತ್ಯಗಳನ್ನೂ ಅಗಬೇಡ. ಫಲಕ್ಕೆ ಆಸೆಪಡುವವರು ಕೃಪಣರು.’

ಕೆಲಸಮಾಡುವುದು ಮನುಷ್ಯನಿಗೆ ಬಿಟ್ಟಿದ್ದಲ್ಲ. ಏಕೆಂದರೆ ಯಾವ ಒಂದೂ ಒಗೆಯ ಕೆಲಸಮಾಡದೆ ಇರುವುದೇ ಅವನಿಗೆ ಸಾಧ್ಯವಿಲ್ಲ. ಒಂದಿಲ್ಲೊಂದು ತೆರನಾದ ಕೆಲಸದಲ್ಲಿ ತೊಡಗಿರುವುದು ಮನುಷ್ಯನ ಹುಟ್ಟುಗುಣವಾಗಿದೆ. ಆದುದರಿಂದ ಕೆಲಸಮಾಡುವ ಹಕ್ಕು ಅವನಿಗೆ ಜನ್ಮಸಿದ್ಧ. ಆದರೆ ಆ ಕೆಲಸದ ಫಲವು ಅವನ ಕೈಮೀರಿದ್ದು. ಮಾಡುವ ಕೆಲಸಕ್ಕೆ ಇಂತಹ ಫಲವು ಸಿಕ್ಕಲೇಬೇಕೆಂದು ಪಂಥತೊಟ್ಟು ಕೊನೆಗೆ ನಿರಾಶೆಯಾಗುವ ಹೊತ್ತು ಬರುವುದು. ಏಕೆಂದರೆ ಕೆಲಸವನ್ನು ಮಾಡುವುದು ಮಾತ್ರ ನಮ್ಮ ಕೈಯಲ್ಲಿದೆ. ಅದಕ್ಕೆ ಬರಬೇಕಾದ ಫಲವು ಇನ್ನೂ ಹಲವು ಹೊರಗಿನ ಸಂಗತಿಗಳನ್ನು ಅವಲಂಬಿಸಿದೆ. ಆ ಎಲ್ಲ ಸಂಗತಿಗಳು ಹೊಂದುಗೂಡುವುದು ಬಿಡುವುದು ಆಗಿನ ಪರಿಸ್ಥಿತಿಯ ಮೇಲಿರುತ್ತದೆ. ಆದುದರಿಂದ ಯಾವುದು ತಮ್ಮ ಅಳವು ಮೀರಿದುದೊ ಅದಕ್ಕೆ ಆಸೆಪಡುವುದು ಅಯುಕ್ತವು; ಅವಿಚಾರವು ಅದಕ್ಕಾಗಿ ಫಲವನ್ನೆ ತನ್ನ ಗುರಿಯಾಗಿಟ್ಟುಕೊಳ್ಳುವುದು ತಕ್ಕುದಲ್ಲವೆಂದು ಗೀತೆಯು ಉಪದೇಶಿಸುತ್ತದೆ. ಕರ್ತವ್ಯವನ್ನು ತನ್ನಿಂದ ಶಕ್ಯವಿದ್ದಷ್ಟು ಚೆನ್ನಾಗಿ ನೆರವೇರಿಸುವುದೊಂದೇ ಮನುಷ್ಯನ ಕೆಲಸ,

ಅದು ಸರಿಯಾಗಿ ನೆರವೇರಿದ್ದಾದರೆ ಫಲವು ನೆರಳಿನಂತೆ ತನ್ನತಾನೆ ಬೆಂಬತ್ತಿಬರುವುದು. ಆದರೆ ತಾನೇ ನೆರಳನ್ನು ಬೆನ್ನಟ್ಟಿದಂತೆ ಫಲಕ್ಕೆ ಬಾಯ್ದೆರೆದು ಕುಳ್ಳಿರುವುದು ವಿಪರೀತ. ತಿರುಮುರುವು ರೀತಿ. ಈ ಕಾರಣದಿಂದಲೇ ಫಲದ ಹಂಬಲವಿಲ್ಲದೆ ಕರ್ತವ್ಯಮಾಡು; ಆ ಹಂಬಲವು ಕೃಪಣತನದ ಲಕ್ಷಣವೆಂದು ಗೀತೆಯು ಸೂತ್ರರೂಪದಿಂದ ಲೋಕಕ್ಕೆ ಸಾರುತ್ತಲಿದೆ.

ಫಲೇಚ್ಛೆಯನ್ನೇ ಗುರಿಯಾಗಿ ಇಟ್ಟುಕೊಂಡು ಮಾಡುವ ಕೆಲಸವು, ಸುಖದುಃಖಗಳ ತೊಡಕಿನಲ್ಲಿ ಹಾಕುತ್ತದೆ. ವೈಯಕ್ತಿಕ ಸುಖದ ಹಂಬಲವನ್ನು ತೊರೆದು ಲೋಕಕಲ್ಯಾಣಕ್ಕಾಗಿ ತನುಮನಧನಗಳನ್ನು ಸವೆಯಿಸುವವನಿಂದ ಹೆಚ್ಚು ಯುಕ್ತವಾದ ಕರ್ಮಗಳಾಗುತ್ತವೆ. **ಲೋಕಕಲ್ಯಾಣದ ಕ್ಷೇತ್ರವು ಕೇವಲ ತನ್ನ ಒಂದು ಜಾತಿ ಅಥವಾ ದೇಶವೆಂಬ ಸಂಕುಚಿತ ಭಾವವನ್ನು ಹಿಂದಿಕ್ಕಿ ಆ ಕ್ಷೇತ್ರವು ವಿಸ್ತೃತವಾದಂತೆ ಮಾಡುವ ಕರ್ಮವು ಹೆಚ್ಚು ಹೆಚ್ಚು ನಿರ್ದೋಷವಾಗುತ್ತದೆ.** ಇಂತಹ ಕಾರ್ಯಗಳಲ್ಲಿ ನಿರತರಾದವರಲ್ಲಿ ಆ ಕರ್ಮಫಲವು ತನಗೇ ಲಭಿಸಬೇಕೆಂಬ ಅಳಿವು ಅಳಿದುಹೋಗಿ ಕೇವಲ ಕರ್ತವ್ಯದಲ್ಲಿಯೆ ಆನಂದಹೊಂದುವ ಶ್ರೇಷ್ಠವೃತ್ತಿಯು ನೆಲೆಗೊಳ್ಳುತ್ತದ

ಗೀತೆಯು (ನಿಷ್ಕಾಮ) ಕರ್ಮಮಾಡಲು ಬೋಧಿಸುವುದು; ಷೈಗಳ್ಳನಾಗಲು ಎಂದೂ ಹೇಳಿಲ್ಲ; ಎಲ್ಲಿಯೂ ಹೇಳಿಲ್ಲ. '**ಮಾ ತೇ ಸಂಗೋಽಸ್ತ್ವಕರ್ಮಣಿ.**' 'ಅಕರ್ಮ ಎಂದರೆ ಅಯೋಗ್ಯ ಕರ್ಮದೊಡನೆ ನಿನ್ನ ಸಂಗವು ಇರದಿರಲಿ;' ಅನುಚಿತಕರ್ಮವನ್ನು ಮಾಡಬೇಡ; ಕರ್ಮಗಳನ್ನೂ ತ್ಯಜಿಸಬೇಡ; ಎಂದು ಗೀತೆಯು ಹೇಳುತ್ತದೆ. '**ವ್ಯವಸಾಯಾತ್ಮಿಕಾ ಬುದ್ಧಿಃ ಏಕೇಹ ಕುರುನಂದನ**' | (೪೧) 'ವ್ಯವಸಾಯ ಮಾಡುವ ಬುದ್ಧಿಯೊಂದೇ ಈ ಕರ್ಮಯೋಗದಲ್ಲಿ ಇರಲಿ.' ಅವ್ಯವಸಾಯಿಗಳು ಅಕರ್ಮಗಳಲ್ಲಿ ತಮ್ಮ ಬುದ್ಧಿಯನ್ನು ಹಾಕುವರು. ಅದರಿಂದ ಅವರ ಆಚಾರ ವಿಚಾರಗಳೆಲ್ಲವೂ ಅವರನ್ನು ಕೀಳ್ಮೆಗೆ ಒಯುತ್ತವೆ. ಯೋಗಿಯು ವ್ಯವಸಾಯಿಯಾಗಿರಬೇಕು. ಮತ್ತು ಆತನು ಆತ್ಮವಿಶ್ವಾಸಿಯೂ ಆಗಿರಬೇಕು.

**ನಿರ್ದ್ವಂದ್ವೋ ನಿತ್ಯಸತ್ತ್ವಸ್ಥೋ ನಿರ್ಯೋಗ-**
**ಕ್ಷೇಮ ಆತ್ಮವಾನ್** | (೪೫)

ಮನುಷ್ಯನು ದ್ವಂದ್ವಗಳಲ್ಲಿ ಎಂದರೆ ಎರಡರ ತೊಡಕಿನಲ್ಲಿ ಸಿಲುಕಬಾರದು. ನಿತ್ಯಸತ್ವಗುಣದಲ್ಲಿ ಸ್ಥಿರವಾಗಿರಬೇಕು. ಯಾವುದೊಂದರ ಹೊರಗಿನ ಆಸೆ ಅಳಿವುಗಳು ಆತನಲ್ಲಿರಕೂಡದು. ಆತ್ಮಬಲವುಳ್ಳವನಾಗಬೇಕು.' ಇಂತಹನೇ ನಿಜವಾಗಿ ಯೋಗಮಾರ್ಗದಲ್ಲಿ ಮುಂದುವರಿಯಬಲ್ಲನು. ತನ್ನಲ್ಲಿ ತನಗೆ ನಂಬುಗೆಯಿಲ್ಲದವನು ಹೊರಗಿನ ಆಸೆ ಅಳಿವುಗಳ ಹಂಬಲಿಗನಾಗುತ್ತಾನೆ. ತಾನು ಒಳ್ಳೆಲಸಗಳನ್ನು ಕೈಕೊಂಡು ಅವನ್ನು ನೆರವೇರಿಸಬಲ್ಲೆನೆಂಬ ನೆರೆನಂಬುಗೆಯು ಆತನಲ್ಲಿರಬೇಕು. ತಮ್ಮಲ್ಲಿ ಈ ಬಗೆಯ ನಂಬುಗೆಯಿಲ್ಲದವರು ಹೆರವರ ಕೈಯಾಳು ಕಾಲಾಳುಗಳಾಗಿ ಆಜನ್ಮ ಕುಣಿಯಬೇಕಾಗುವುದು.

**ಸಾಂಖ್ಯ ಮತ್ತು ಯೋಗ**

ಇವೆರಡು ಮಾರ್ಗಗಳಲ್ಲಿ ವ್ಯತ್ಯಾಸವಿಲ್ಲ. ಎರಡರಲ್ಲಿ ಯಾವುದನ್ನು ಅನುಸರಿಸಿದರೂ ಸಿಗುವ ಫಲವು ಒಂದೇ ಬಗೆಯಾಗಿದೆಯೆಂದು ಗೀತೆಯು ಸ್ಪಷ್ಟವಾಗಿ ಹೇಳುತ್ತದೆ.

**ಸಾಂಖ್ಯಯೋಗೌ ಪೃಥಕ್ ಬಾಲಾಃ ಪ್ರವದಂತಿ**
**ನ ಪಂಡಿತಃ |**
**ಏಕಮಪ್ಯಾಸ್ಥಿತಃ ಸಮ್ಯಕ್ ಉಭಯೋರ್ವಿಂದತೇ**
**ಫಲಮ್** || ೪ ||
**ಯತ್ ಸಾಂಖ್ಯೈಃಪ್ರಾಪ್ಯತೇ ಸ್ಥಾನಂತದ್ಯೋಗೈರಪಿ**
**ಗಮ್ಯತೇ |**
**ಏಕಂ ಸಾಂಖ್ಯಂ ಚ ಯೋಗಂ ಚ ಯಃ ಪಶ್ಯತಿ ಸ**
**ಪಶ್ಯತಿ** || ೫ || (ಅ. ೫)

'ಸಾಂಖ್ಯ ಮತ್ತು ಯೋಗಗಳು ಎರಡೂ ಬೇರೆ ಎಂದು ತಿಳಿಗೇಡಿಗಳು ಹೇಳುತ್ತಾರೆ; ತಿಳಿದವರಲ್ಲ. ಇವುಗಳಲ್ಲಿ ಒಂದನ್ನು ಚೆನ್ನಾಗಿ ಅನುಸರಿಸಿದರೆ ಎರಡರ ಫಲವೂ ದೊರೆಯುವುದು. ಸಾಂಖ್ಯರಿಗೆ ದೊರೆಯುವ ಸ್ಥಾನವೇ ಯೋಗಿಗಳಿಗೂ ದೊರೆಯುವದು ಆದುದರಿಂದ ಸಾಂಖ್ಯ ಮತ್ತು ಯೋಗಗಳೆರಡೂ ಒಂದೇ ಆಗಿವೆ, ಎಂದು ಯಾರು ಬಗೆಯುವರೊ ಅವರೇ ನಿಜವಾದ ಬಲ್ಲವರು.'' ಈ ಕಾರಣದಿಂದಲೇ ಈ ಅಧ್ಯಾಯಕ್ಕೆ '**ಸಾಂಖ್ಯಯೋಗ**' ಎಂದು ಸಂಯುಕ್ತ ಹೆಸರನ್ನಿಟ್ಟಿದ್ದಾಗಿದೆ. ಅವು ಒಂದರಿಂದೊಂದು ಬೇರೆಯಾಗಿದ್ದರೆ ಎರಡನ್ನೂ ಬೆರಸಿ ಹೇಳುತ್ತಿದ್ದಿಲ್ಲ.

ಯೋಗವಿಚಾರವು ಇನ್ನೂ ಮುಂದೆ ಬರಲಿದೆ. ಅಲ್ಲಿ ಇದನ್ನು ಕುರಿತು ಹೆಚ್ಚಿನ ವಿವರಣೆ ಮಾಡುವ. ಇಲ್ಲಿ ಇಷ್ಟೆ ಸಾಕು.

ಎರಡನೆಯ ಅಧ್ಯಾಯದ ವಿಚಾರವು ಮುಗಿದುದು.

# ಶ್ರೀಮದ್ಭಗವದ್ಗೀತೆಯ ಎರಡನೆಯ ಅಧ್ಯಾಯದ ಕೆಲವು ಸುಭಾಷಿತಗಳು

(೧)

**ನಪುಂಸಕನಾಗಬೇಡ.**

**ಕ್ಲೈಬ್ಯಂ ಮಾ ಸ್ಮ ಗಮಃ**

'ನಪುಂಸಕತ್ವವನ್ನು ಐದಬೇಡ.' ಮನುಷ್ಯನು ಪುರುಷಾರ್ಥಗಳನ್ನು ಪಡೆಯಬೇಕು. ಹುಮ್ಮಸದವನಾಗಬೇಕು. ಯಶಸ್ಸನ್ನು ಹೊಂದಬೇಕು. ನಿರಾಶೆ ನಿರುತ್ಸಾಹಗಳಿಗೆ ಎಂದೂ ಎಡೆಗೊಡಬಾರದು. (೩)

(೨)

**ಪುಕ್ಕನಾಗದಿರು**

**ಕ್ಷುದ್ರಂ ಹೃದಯದೌರ್ಬಲ್ಯಂ ತ್ಯಕ್ತ್ವೋತ್ತಿಷ್ಠ।**

ಮನಸಿನ ಕಿರಿತನವನ್ನು ತೊಡೆದು ಬಿಡು; ಅಳ್ಳೆದೆತನವನ್ನು ತೊಲಗು; ಪರಮ ಪುರುಷಾರ್ಥಗಳನ್ನು ಹಿರಿಮೆ ಹೆಗ್ಗಳಿಕೆಗಳನ್ನು ಪೊಂದಲು (ಹುಮ್ಮಸದಿಂದ) ಎದ್ದು ನಿಲ್ಲು.' ಕಿರುಕಳತನವನ್ನು ತೊರೆದು ವಿಶಾಲದೃಷ್ಟಿ, ಉದಾತ್ತ ವಿಚಾರ, ಶ್ರೇಷ್ಠ ಸಾಹಸಗಳ ಬಲದಿಂದ ಹಿರಿಗೆಲಸಗಳನ್ನು ನೆರವೇರಿಸಲು ಯಾವಾಗಲೂ ಅಣಿಯಾಗಬೇಕು. (೩)

(೩)

**ಗೆಲುವಿನ ಎಣಿಕೆಯಿರಲಿ**

**ಯದ್ವಾ ಜಯೇಮ, ಯದಿ ವಾ ನೋ ಜಯೇಯುಃ।**

'ತಾವು ಗೆಲ್ಲುವೆವೊ?' ಎಂಬ ಎಣಿಕೆಯಲ್ಲಿವುದು ಅವಶ್ಯ. ಎಂದರೆ ಅನುದಿನವೂ ತಮ್ಮ ಕೆಲಸದ ಲೆಕ್ಕ—ಎಣಿಕೆ ಮಾಡುವುದು ಅವಶ್ಯ. ಇಲ್ಲವಾದರೆ ಕೆಲದಿನಗಳ ಒಳಕ ಆ ಕೆಲಸವು ತಮ್ಮ ಕೈವಿಾರಿಹೋಗುವ ಸಂಭವವಿದೆ. ದಿನಾಲು ಈ ಲೆಕ್ಕದಲ್ಲಿರುವವರಿಗೆ ಸಕಾಲದಲ್ಲಿಯೆ ತಕ್ಕ ಉಪಾಯಗಳನ್ನು ಕೈಕೊಳ್ಳಲು ಶಕ್ಯವಾಗುತ್ತದೆ. (೬)

(೪)

**ಆತ್ಮಕಲ್ಯಾಣ**

**ಯಚ್ಛ್ರೇಯಃ ಸ್ಯಾತ್ ತತ್ ನಿಶ್ಚಿತಂ ಬ್ರೂಹಿ ತತ್ ಮೇ।**

'ಯಾವುದು ನಿಜವಾಗಿಯೂ ಕಲ್ಯಾಣಕರವಾಗಿರುವುದೋ ಅವನ್ನೇ ನನಗೆ ಹೇಳು' ನಿಜವಾದ ಹಿತವು. ಯಾವುದೋ ಅದನ್ನೇ ಲಕ್ಷಿಸಬೇಕು ಉಳಿದುದನ್ನು ಕಡೆಗಣಿಸಿ, ತನ್ನ ದಾರಿಯಲ್ಲಿ ಮುಂದುವರಿಸಬೇಕು. (೭)

(೫)

**ಇಲ್ಲದ ಹೆಮ್ಮೆಯ ಬಾಯ್ಮಾತು ಬೇಡ**

**ಅಶೋಚ್ಯಾನನ್ವಶೋಚಃ ತ್ವಂ, ಪ್ರಜ್ಞಾವಾದಾನ್ ಚ ಭಾಷಸೇ।**

'ಯಾವುದನ್ನು ಕುರಿತು ಮಿಡುಕಬಾರದೋ ಅದರ ಬಗ್ಗೆ ಮಿಡುಕುವುದು; ಮತ್ತು ದೊಡ್ಡ ಹಿರಿಮೆಯ ಹೆಮ್ಮೆಯ ಮಾತನಾಡುವುದು' ಲೇಸಲ್ಲ. ಅದು ಏಳ್ಗೆಗೆ ಕಾರಣವಾಗದು. (೧೧)

(೬)

**ಅಳಲಬೇಡ**

**ಗತಾಸೂನಗತಾಸೂಂಶ್ಚ ನಾನುಶೋಚಂತಿ ಪಂಡಿತಾಃ।**

'ಮಡಿದವರನ್ನು ಕುರಿತು ಮತ್ತು ಬದುಕಿರುವವರ ಕುರಿತು ತಿಳಿದವರು ಮರುಗುವುದಿಲ್ಲ; ಮಿಡುಕುವುದಿಲ್ಲ.' ಕೈಮಿಾರಿದ ಮಾತಿಗಾಗಿ ಮಿಡುಕಾಡುವುದು ತಿಳಿಗೇಡಿತನವು. ಆದುದರಿಂದ ಬಲ್ಲಿದರು ಆದುದನ್ನೆ ನೆನೆಯುತ್ತ ಕುಳ್ಳಿರದೆ ತಮ್ಮ ಮುಂದಿನ ಕರ್ತವ್ಯದಲ್ಲಿ ತೊಡಗುತ್ತಾರೆ. (೧೧)

(೭)

**ಮರುಳಾಗದಿರು**

**ಧೀರಃ ತತ್ರ ನ ಮುಹ್ಯತಿ।**

'ತಿಳಿದ ಎದೆಗಾರರು ಎಂದೂ ಮರುಳಾಗುವುದಿಲ್ಲ.' ಮಂಕಾಗುವುದಿಲ್ಲ. ಇಂತಹರೆ ಎದೆಗಾರರಾದ ಬಲ್ಲಿದರು (೧೩)

(೮)

**ಅಮರತ್ವವು ಯಾರಿಗೆ?**

**ಸಮದುಃಖಸುಖಂ ಧೀರಂ ಸೋಽಮೃತತ್ವಾಯ ಕಲ್ಪತೇ।**

'ಸುಖದುಃಖಗಳನ್ನು ಸಮನಾಗಿ ಭಾವಿಸುವವನು

ಅಮರನಾಗುತ್ತಾನೆ.' ಹೀಗೆ ಸಮಭಾವವಿಲ್ಲದವನು ಸುಖಬಂದಾಗ ಕೊಬ್ಬಿಕೊನೆಯುವನು; ದುಃಖವೊದಗಿದಾಗ ಕುಗ್ಗಿ ಕೊರಗುವನು. ಆದುದರಿಂದ ಕರ್ತವ್ಯಚ್ಯುತನಾಗಿ ಹಾನಿಗೀಡಾಗುವನು. (೧೫)

(೯)

**ಇರವು ಮತ್ತು ಇಲ್ಲವೆ**

**ನಾಸತೋ ವಿದ್ಯತೇ ಭಾವೋ ನಾಭಾವೋ ವಿದ್ಯತೇ ಸತಃ ।**

'ಆವುದು ಇರುವುದೋ ಅದು ಇಲ್ಲದಾಗದು; ಮತ್ತು ಯಾವುದು ಇಲ್ಲವೊ ಅದು ಇರದು.' ಯಾವುದು ಉಂಟೊ ಅದು ಅಳಿಯಲಾರದು; ಇಲ್ಲದುದು ಉಂಟಾಗಲಾರದು. ಇದು ಶಾಸ್ತ್ರದ ಮಹಾಸಿದ್ಧಾಂತವು. (೧೬)

(೧೦)

**ನಿತ್ಯನ ಅನಿತ್ಯದೇಹಗಳು**

**ಅಂತವಂತ ಇಮೇ ದೇಹಾ ನಿತ್ಯಸ್ಯೋಕ್ತಾಃ ಶರೀರಿಣಃ ।**

'ನಿತ್ಯವಾದ ಒಬ್ಬ ಆತ್ಮನ ಅನಿತ್ಯವಾದ ಇವೆಲ್ಲ ದೇಹಗಳುಂಟು.' ಲೋಕದಲ್ಲಿ ಕಾಣಿಸಿಕೊಳ್ಳುವ ಇವೆಲ್ಲ ಕೋಟ್ಯವಧಿ ದೇಹಗಳು ಬೇರೆಯಾದರೂ ಅವುಗಳೊಳಗೆ ಹುದುಗಿಕೊಂಡಿರುವ ಅಖಂಡ ಆತ್ಮನು ಒಬ್ಬನೇ ಆಗಿದ್ದಾನೆ. (೧೮)

(೧೧)

**ಆತ್ಮನ ಸ್ವರೂಪ**

**ಅಜೋ ನಿತ್ಯಃ ಶಾಶ್ವತೋಽಯಂ ಪುರಾಣಃ ।**

'ಈತನಿಗೆ ಹುಟ್ಟು ಇಲ್ಲ; ಅಳಿವು ಇಲ್ಲ. ಈತನು ಎಂದೆಂದೂ ಇರುವವನು; ಅತ್ಯಂತ ಪುರಾತನು.' (೨೦)

**ಅಚ್ಛೇದ್ಯೋಽಯಮದಾಹ್ಯೋಽಯಮಕ್ಲೇದ್ಯೋಽಶೋಷ್ಯ ಏವ ಚ ।**
**ನಿತ್ಯಃ ಸರ್ವಗತಃ ಸ್ಥಾಣುರಚಲೋಽಯಂ ಸನಾತನಃ ॥**
**ಅವ್ಯಕ್ತೋಽಯಮಚಿಂತ್ಯೋಽಯಮವಿಕಾರ್ಯೋಽಯಮುಚ್ಯತೇ ।**

'ಈ ಆತ್ಮವು ತುಂಡಾಗದು; ಬೇಯದು; ನೆನೆಯದು; ಒಣಗದು; ಇದು ನಿತ್ಯವಾಗಿದೆ. ಎಲ್ಲೆಡೆಗೂ ಇದೆ. ಎಲ್ಲರ ಆಧಾರವಾಗಿದೆ. ಅಲೆದಾಡದೆ ನೆಲೆಯಾಗಿ ನಿಂತಿದೆ. ಎಂದೆಂದೂ ಇರುವುದಾದರೂ ಯಾರಿಗೂ ಕಾಣದು; ಅರಿಯಲು ಅರಿದು; ಇದು ಎಂದೂ ಹೆಚ್ಚು ಕಡಿಮೆಯಾಗದಂತಹದು ಆಗಿದೆ.' (೨೪, ೨೫)

(೧೨)

**ಹುಟ್ಟಿದುದಕ್ಕೆ ಸಾವು ತಪ್ಪದು.**

**ಜಾತಸ್ಯ ಹಿ ಧ್ರುವೋ ಮೃತ್ಯುಃ ।**

'ಮೂಡಿದ್ದು ಮುಡಿಯಲೇ ಬೇಕು,' ಆದುದರಿಂದ ಕಳಿದವರಿಗೆ ಅಳಲುವುದು ತಿಳಿಗೇಡಿತನವು. (೨೭)

(೧೩)

**ಮೂಡಿ ಮುಳುಗುವ ವಸ್ತು ಜಾತಗಳು**

**ಅವ್ಯಕ್ತಾದೀನಿ ಭೂತಾನಿ, ವ್ಯಕ್ತಮಧ್ಯಾನಿ ಭಾರತ ।**
**ಅವ್ಯಕ್ತನಿಧನಾನ್ಯೇವ ॥**

'ಮೊದಲು ಇವು ಕಾಣದಂತಿರುತ್ತವೆ; ಮುಂದೆ ಕಾಣಿಸಿಕೊಳ್ಳುತ್ತವೆ; ಕೊನೆಗೆ ಮರಳಿ ಕಾಣೆಯಾಗುತ್ತವೆ' ಈ ಸೃಷ್ಟಿಯೊಳಗಿನ ಎಲ್ಲ ಪದಾರ್ಥಗಳ ರೀತಿಯೆ ಇದು. (೨೮)

(೧೪)

**ಯಾರಿಂದಲೂ ಕೊಲ್ಲಲಿಕ್ಕಾಗದ ಆತ್ಮತತ್ತ್ವವು.**

**ದೇಹೀ ನಿತ್ಯಮವಧ್ಯೋಽಯಂ ದೇಹೇ ಸರ್ವಸ್ಯ ।**

'ಈ ದೇಹಧಾರಿಯಾದ ಆತ್ಮನು ಎಲ್ಲರ ದೇಹಗಳಲ್ಲಿ ಯಾರಿಂದಲೂ ಕೊಲ್ಲಲಿಕ್ಕಾಗದವನಾಗಿದ್ದಾನೆ.' ಆದುದರಿಂದ, ಇದನ್ನರಿತು ಸಾವಿಗಂಜುವ ಕಾರಣವಿಲ್ಲ. ನಿರ್ಭಯರಾಗಿ ಕರ್ತವ್ಯಕ್ಕೆ ತೊಡಗಬೇಕು. (೩೦)

(೧೫)

**ಕ್ಷಾತ್ರಧರ್ಮ**

**ಧರ್ಮ್ಯಾದ್ಧಿ ಯುದ್ಧಾಚ್ಛ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ।**

'ಧರ್ಮದಿಂದ ಪ್ರಾಪ್ತವಾದ ಯುದ್ಧಕ್ಕಿಂತಲೂ ಬೇರೆ ಶ್ರೇಯಸ್ಕರವಾದ ಕಾರ್ಯವೇ ಕ್ಷತ್ರಿಯನಿಗೆ ಇಲ್ಲ.' ಆದುದರಿಂದ ಕ್ಷತ್ರಿಯನು ಯಾವಾಗಲೂ ಧರ್ಮಯುದ್ಧಕ್ಕೆ ಸಜ್ಜಾಗಿರುವುದು ಕರ್ತವ್ಯವಾಗಿದೆ. (೩೧)

(೧೬)

**ಯುದ್ಧವು ಸ್ವರ್ಗದ ಬಾಗಿಲು.**

**ಸ್ವರ್ಗದ್ವಾರಮಪಾವೃತಂ ಯುದ್ಧಂ ।**

'ಯುದ್ಧವೆಂದರೆ, ತೆರೆದ ಸ್ವರ್ಗದ ಬಾಗಿಲು,' ಎಂದು ಕ್ಷತ್ರಿಯನ ನೆರೆನಂಬುಗೆ ಇರಬೇಕು. ಅಸಿಮಿಸಿಗೊಳ್ಳದೆ ಹುಮ್ಮಸದಿಂದ ಕಾಳಗಕ್ಕೆ ಮುನ್ನುಗ್ಗಬೇಕು. (೩೨)

(೧೭)

**ಕಾಳಗ ಮಾಡದಿರುವುದು ಕುಂದುಕ.**

**ಅಥ ಚೇತ್ ತ್ವಮಿಮಂ ಧರ್ಮ್ಯಂ ಸಂಗ್ರಾಮಂ ನ ಕರಿಷ್ಯಸಿ ।**

**ತತಃ ಸ್ವಧರ್ಮಂ ಕೀರ್ತಿಂ ಚ ಹಿತ್ವಾ**
**ಪಾಪಮವಾಪ್ಸ್ಯಸಿ ।**

'ನೀನು ಈ ಧರ್ಮಯುದ್ಧವನ್ನು ಕೈಕೊಳ್ಳದಿದ್ದರೆ ಸ್ವಧರ್ಮವನ್ನು ತೊರೆದಂತಾಗುವುದು. ನಿನ್ನ ಅಪಕೀರ್ತಿಯು ಲೋಕದಲ್ಲಿ ಹಬ್ಬುವುದು. ಮತ್ತು ಸ್ವಧರ್ಮಚ್ಯುತನಾಗಿ ಅಪಕೀರ್ತಿಯನ್ನು ಹೊಂದಿದವನಾದುದರಿಂದ ನಿನ್ನನ್ನು ಪಾಪವು ಆವರಿಸುವುದು.' ಆದುದರಿಂದ ಧರ್ಮಯುದ್ಧವು ನಿನ್ನ ಕರ್ತವ್ಯವಾಗಿದೆ. (೩೩)

( ೧೮ )

**ಮಾನಹಾನಿಗಿಂತ ಮರಣವೇ ಲೇಸು.**

**ಸಂಭಾವಿತಸ್ಯ ಚಾಕೀರ್ತಿಃ ಮರಣಾದತಿರಿಚ್ಯತೇ ।**

'ಸಂಭಾವಿತರು ಮರಣಕ್ಕಿಂತ ಮಾನಹಾನಿಯು ಹೀನವೆಂದು ಬಗೆಯುತ್ತಾರೆ.' ಆದುದರಿಂದ ಸದ್ಗೃಹಸ್ಥರು ತಮ್ಮ ಮರ್ಯಾದೆಗೆ ಕುಂದು ಬಾರದಂತೆ ನಡೆದುಕೊಳ್ಳಬೇಕು (೩೪)

( ೧೯ )

**ಹಳಿವನ್ನು ಕೇಳಬೇಕಾಗುವ ದುರ್ಧರ ಪ್ರಸಂಗ!**

**ನಿಂದಂತಸ್ತವ ಸಾಮರ್ಥ್ಯಂ ತತೋ**
**ದುಃಖತರಂ ನು ಕಿಮ್ ?**

'ನಿನ್ನ ಸಾಮರ್ಥ್ಯವನ್ನು ಜನರು ಹಳಿಯಹತ್ತಿದರೆ ಅದಕ್ಕಿಂತಲೂ ದುಃಖದ ಪ್ರಸಂಗವಾವುದು?' ಆದುದರಿಂದ ಹಳಿವನ್ನು ಕೇಳುವ ಹೊತ್ತು ತಂದುಕೊಳ್ಳಬಾರದು.

( ೨೦ )

**ಕಾದಲಣಿಯಾಗು.**

**ಉತ್ತಿಷ್ಠ, ಯುದ್ಧಾಯ ಕೃತನಿಶ್ಚಯಃ ।**

'ಕಾಳಗಕ್ಕೆ ಸಜ್ಜಾಗಿ ಎದ್ದೇಳು.' ಕಾದದೆ ಬದುಕಲಾರೆ. ಕಾರಣ ಬಾಳಿ ಬದುಕಲು, ಏಳ್ಗೆ ಹೊಂದಲು ಕಾದು. ತಣ್ಣಗಾಗಿರಬೇಡ. (೩೭)

( ೨೧ )

**ಅವ್ಯವಸಾಯಿಯ ಹೊಯ್ದಾಟ.**

**ಬಹುಶಾಖಾಹ್ಯನಂತಾಶ್ಚ ಬುದ್ಧಯೋಽ**
**ವ್ಯವಸಾಯಿನಾಮ್ ।**

'ಕೆಲಸಗೇಡಿ ಅಕೆಲಸಿಗಳ ಬುದ್ಧಿಯ ಹೊಯ್ದಾಟಕ್ಕೆ ಮಿತಿಯಿಲ್ಲ; ಅದಕ್ಕೆ ಬುಡವೂ ಇಲ್ಲ.' ಆದುದರಿಂದ ವ್ಯವಸಾಯಿಯಾಗು. (೪೧)

( ೨೨ )

**ಯಶಸ್ವಿಯಾಗಿ ಕೆಲಸಮಾಡುವ ಗುಟ್ಟು.**

**ಕರ್ಮಣ್ಯೇವಾಧಿಕಾರಸ್ತೇ ಮಾ ಫಲೇಷು**
**ಕದಾಚನ ।**
**ಮಾ ಕರ್ಮಫಲಹೇತುರ್ಭೂರ್ಮಾ ತೇ**
**ಸಂಗೋಽಸ್ತ್ವಕರ್ಮಣಿ ॥**

'ಕೆಲಸಮಾಡುವ ಹಕ್ಕು ನಿನ್ನದು. ಅದರ ಫಲದ ಮೇಲೆ ನಿನ್ನ ಅಧಿಕಾರವಿಲ್ಲ. ಕರ್ಮದ ಫಲದ ಹಂಬಲದಿಂದ ಕೆಲಸಕ್ಕೆ ಹತ್ತಬೇಡ ಅಕರ್ಮದಲ್ಲಿ ನಿನ್ನ ಒಲವು ಇಲ್ಲದಿರಲಿ.' ಯಾವ ಹಂಬಲ ಹರಿದಾಟಗಳಿಲ್ಲದೆ ಕೆಲಸಕ್ಕೆ ತೊಡಗು. ಅದು ನಿನ್ನ ಕರ್ತವ್ಯವೆಂದು ಮಾಡು. ಫಲದಾಸೆಗಾಗಿ ಅಲ್ಲ. ಮೈಗಳ್ಳನಾಗಿ ಅಕೆಲಸಿಯೂ ಆಗಬೇಡ. (೪೭)

( ೨೩ )

**ಕರ್ಮಯೋಗ**

**ಯೋಗಸ್ಥಃ ಕುರು ಕರ್ಮಾಣಿ ।**

'**ಯೋಗಯುಕ್ತನಾಗಿ ಕೆಲಸಮಾಡು**' ಸಿದ್ಧಿ ಅಥವಾ ಅಸಿದ್ಧಿಗಳೆರಡನ್ನೂ ಸಮವೆಂದು ತಿಳಿದು ಕೆಲಸಕ್ಕೆ ತೊಡಗು. ಇದುವೆ ಯೋಗದ ದಾರಿ ( ೨. ೪೮ )

**ಕೃಪಣಾಃ ಫಲಹೇತವಃ ।**

'ಫಲಾಶೆಯಿಂದ ಕೆಲಸಮಾಡುವದು ಕೀಳುತನದ ಕುರುಹು.' ಫಲವು ತನಗೆ ದೊರೆಯಲೇಬೇಕೆಂಬ ಆಗ್ರಹದಿಂದ ಮಾಡುವ ಕೆಲಸವು ಸ್ವಾರ್ಥಯುಕ್ತವಾದುದು. ಆದುದರಿಂದ ಅದು ಕೀಳು. ( ೨. ೪೯ )

**ಸಮತ್ವಂ ಯೋಗ ಉಚ್ಯತೇ ।**
**ಯೋಗಃ ಕರ್ಮಸು ಕೌಶಲಂ ।**

'**ಸಮತೆ ಯೋಗ**' (೨ ೪೮). '**ಕೆಲಸದೊಳಗಿನ ಕೌಶಲವೆ ಯೋಗ**' (೨.೫೦) ಕೆಲಸದ ಹಿತ, ಹೂಕ, ಅಥವಾ ಹದವು ಸಾಧಿಸಬೇಕಾದರೆ ತಲೆಯು ಸಮವಾಗಿರಬೇಕು. ಎಂದರೆ ಸಮತ್ವ ಬುದ್ಧಿಯು ನೆಲೆಗೊಳ್ಳಬೇಕು. ಆದುದರಿಂದ ಸಮತ್ವ-ಸ್ಥಿರಬುದ್ಧಿಯೆಂದರೂ ಯೋಗವೆಂದೇ ಅರ್ಥವು.

( ೨೪ )

**ಸ್ಥಿತಪ್ರಜ್ಞ**

**ಆತ್ಮನ್ಯೇವಾತ್ಮನಾ ತುಷ್ಟಃ ಸ್ಥಿತಪ್ರಜ್ಞಃ ।**

'**ಆತ್ಮನಿಗೆ ಆತ್ಮನಲ್ಲಿ ಸಂತೋಷವುಂಟಾದಾಗಲೆ ಆತನು ಸ್ಥಿತಪ್ರಜ್ಞನಾಗುವನು**' ಆನಂದಕ್ಕಾಗಿ ಹೊರಗೆ ಹರಿದಾಡುವವನು ಯಾವಾಗಲೂ ಪರಾವಲಂಬಿಯು. ಆ

ಆನಂದದ ಉಗಮವನ್ನು ತನ್ನಲ್ಲಿ ಕಂಡುಕೊಂಡಾಗಲೆ ಆತನು ಆತ್ಮಾವಲಂಬಿಯಾಗುವನು. ಹೀಗೆ ಆತ್ಮಾವಲಂಬಿಯಾಗಿ, ಆತ್ಮದಲ್ಲಿ ಸ್ಥಿರವಾದವನೆ ಸ್ಥಿತಪ್ರಜ್ಞನು. (೨-೫೫).

(೨೫)

ಮುನಿ

ವೀತರಾಗ ಭಯಕ್ರೋಧಃ ಸ್ಥಿತಧೀಃ ಮುನಿಃ ಉಚ್ಯತೇ

'ಭೋಗೇಚ್ಛೆ, ಪುಕ್ಕತನ, ಸಿಟ್ಟುಗಳನ್ನು ಬಿಟ್ಟವನೂ ಬುದ್ಧಿಯ ಚಾಂಚಲ್ಯವು ಅಳಿದವನೂ ಮುನಿಯೆಂದೆನಿಸುವನು' (೫೬)

(೨೬)

ವಿಷಯಗಳು ಅಂಟಿಕೊಳ್ಳದಿರುವುದು ಯಾವಾಗ?

ವಿಷಯಾ ವಿನಿವರ್ತಂತೇ ನಿರಾಹಾರಸ್ಯ ದೇಹಿನಃ।

'ಭೋಗೇಚ್ಛೆಯು ನಿರ್ಮೂಲವಾದಾಗಲೆ ಮನುಜನಿಗೆ ವಿಷಯಗಳು ಅಂಟಿಕೊಳ್ಳದೆ ದೂರವಾಗುವುವು' ಮನಸ್ಸಿನಲ್ಲಿ ಬಯಕೆಗಳು ಬಿಡಾರ ಮಾಡಿಕೊಂಡಿರುವವರೆಗೂ ವಿಷಯಗಳು ಆತನನ್ನು ಸೆಳೆಯದೆ ಬಿಡವು. (೫೯)

(೨೭)

ಇಂದ್ರಿಯಗಳ ಪ್ರಾಬಲ್ಯ

ಇಂದ್ರಿಯಾಣಿ ಪ್ರಮಾಥೀನಿ ಹರಂತಿ ಪ್ರಸಭಂ ಮನಃ।

'ಇಂದ್ರಿಯ ಶಕ್ತಿಯು ಅಸಾಮಾನ್ಯವಾಗಿರುವುದರಿಂದ ಅವು ಮನಸ್ಸನ್ನೂ ವಿಷಯಗಳ ಕಡೆಗೆ ಒತ್ತಾಯದಿಂದ ಸೆಳೆದೊಯ್ಯುವುವು' ಆದುದರಿಂದ ಮನುಷ್ಯನು ಎಚ್ಚರಿದ್ದಷ್ಟು ಒಳಿತು. (೬೦)

(೨೮)

ಪ್ರಸನ್ನತೆಯನ್ನು ಪಡೆವ ಹದ.

ಇಂದ್ರಿಯೈಃ ಆತ್ಮವಶ್ಯೈಃ ಪ್ರಸಾದಮ್ ಅಧಿಗಚ್ಛತಿ।

'ಇಂದ್ರಿಯಗಳನ್ನು ಅಂಕೆಯಲ್ಲಿ ಇರಿಸಿಕೊಳ್ಳುವುದರಿಂದ ಪ್ರಸನ್ನತೆಯು ದೊರೆಯುತ್ತದೆ' ಇಂದ್ರಿಯಗಳು ಮನಬಂದಂತೆ ತಮ್ಮನ್ನು ಕುಣಿಸುವವರೆಗೆ ಶಾಂತಿಯೆಲ್ಲಿಯದು? ಆಗ ಅಶಾಂತಿಯೆ. (೬೪)

(೨೯)

ಅಶಾಂತನಿಗೆ ಸೌಖ್ಯವಿಲ್ಲ

ಅಶಾಂತಸ್ಯ ಕುತಃ ಸುಖಮ್?

'ಅಶಾಂತನಿಗೆ ಸೌಖ್ಯವೆಲ್ಲಿಯದು?' ಶಾಂತಿಯೆ ಸುಖ. ಅಶಾಂತಿಯೆ ದುಃಖ. (೬೬)

(೩೦)

ನಿದ್ದೆ ಮತ್ತು ಎಚ್ಚರ

ಯಾ ನಿಶಾ ಸರ್ವಭೂತಾನಾಂ ತಸ್ಯಾಂ ಜಾಗರ್ತಿ ಸಂಯಮೀ।

ಯಸ್ಯಾಂ ಜಾಗ್ರತಿ ಭೂತಾನಿ ಸಾ ನಿಶಾ ಪಶ್ಯತೋ ಮುನೇಃ॥

'ಯಾವ ವಿಷಯದಲ್ಲಿ ಎಲ್ಲ ಪ್ರಾಣಿಗಳು ಕಣ್ಣು ಮುಚ್ಚಿರುವವೊ ಆ ವಿಷಯದಲ್ಲಿ ಸಂಯಮಿಯಾದ ಮುನಿಯು ಎಚ್ಚರಾಗಿರುತ್ತಾನೆ.' ಮತ್ತು ಎಲ್ಲಿ ಎಲ್ಲ ಪ್ರಾಣಿಗಳು ಎಚ್ಚರಾಗಿರುತವೊ ಅಲ್ಲಿ ಬಿಡುಗಣ್ಣನು (ಜ್ಞಾನಿಯು) ನಿದ್ದೆ ಹೋಗುತ್ತಾನೆ. (೬೯)

(೩೧)

ಶಾಂತಿಯ ದಾರಿ

ನಿರ್ಮಮೋ ನಿರಹಂಕಾರಃ ಸ ಶಾಂತಿಮಧಿಗಚ್ಛತಿ।

'ಮಮತ್ವವು ಮತ್ತು ಅಹಂಕಾರಗಳು ಇಲ್ಲದವನು ಶಾಂತಿಯನ್ನು ಹೊಂದುತ್ತಾನೆ.' (೭೧)

(೩೨)

ಮೋಹದಲ್ಲಿ ಸಿಲುಕದ ಬಗೆ

ಏಷಾ ಬ್ರಾಹ್ಮೀ ಸ್ಥಿತಿಃ, ನೈನಾಂ ಪ್ರಾಪ್ಯ ವಿಮುಹ್ಯತಿ।

'ಈ ಬ್ರಾಹ್ಮೀ ಸ್ಥಿತಿಯನ್ನು ಹೊಂದಿದವನು ಮೋಹಜಾಲದಲ್ಲಿ ಸಿಲುಕುವುದಿಲ್ಲ.' ಬ್ರಾಹ್ಮೀ ಸ್ಥಿತಿಯನ್ನು ಹೊಂದುವವರೆಗೇ ಮೋಹವು ಆವರಿಸಬಲ್ಲುದು. (೭೨)



# ಶ್ರೀಮದ್ಭಗವದ್ಗೀತೆ:

## (ಪುರುಷಾರ್ಥಬೋಧಿನೀ ಟೀಕೆಯೊಡನೆ)

## ೨ನೆಯ ಅಧ್ಯಾಯದ ವಿಷಯಸೂಚಿ

# ಮೂರನೆಯ ಅಧ್ಯಾಯವು

## ಕರ್ಮಯೋಗ

### (೧) ಅರ್ಜುನನ ಕೊರೆ.

ಅರ್ಜುನ ಉವಾಚ— ಜ್ಯಾಯಸೀ ಚೇತ್ ಕರ್ಮಣಸ್ತೇ ಮತಾ ಬುದ್ಧಿರ್ಜನಾರ್ದನ ।
ತತ್ ಕಿಂ ಕರ್ಮಣಿ ಘೋರೇ ಮಾಂ ನಿಯೋಜಯಸಿ ಕೇಶವ ॥ ೧ ॥
ವ್ಯಾಮಿಶ್ರೇಣೇವ ವಾಕ್ಯೇನ ಬುದ್ಧಿಂ ಮೋಹಯಸೀವ ಮೇ ।
ತದೇಕಂ ವದ ನಿಶ್ಚಿತ್ಯ ಯೇನ ಶ್ರೇಯೋಽಹಮಾಪ್ನುಯಾಮ್ ॥ ೨ ॥

---

**ಅನ್ವಯಃ:**— ಹೇ ಜನಾರ್ದನ! ಕರ್ಮಣಃ ಬುದ್ಧಿಃ ಜ್ಯಾಯಸೀ ಚೇತ್, ತತ್, ಹೇ ಕೇಶವ! ಮಾಂ ಘೋರೇ ಕರ್ಮಣಿ ಕಿಂ ನಿಯೋಜಯಸಿ? ॥ ೧ ॥ ವ್ಯಾಮಿಶ್ರೇಣ ಇವ ವಾಕ್ಯೇನ ಮೇ ಬುದ್ಧಿಂ ಮೋಹಯಸಿ ಇವ। ತತ್ ನಿಶ್ಚಿತ್ಯ ಏಕಂ ವದ, ಯೇನ ಅಹಂ ಶ್ರೇಯಃ ಆಪ್ನುಯಾಮ್ ॥ ೨ ॥

**ಎಲೈ ಜನಾರ್ದನನೆ! ಕೆಲಸಕ್ಕಿಂತಲೂ (ಸಮ) ಬುದ್ಧಿಯು ಮಿಗಿಲಾದುದು. (ಎಂದು) ನಿಮ್ಮ ಮತವಿದ್ದರೆ, ಎಲೈ ಕೇಶವನೆ! ನನಗೆ (ಈ ಯುದ್ಧದಂತಹ) ಘೋರವಾದ ಕೆಲಸದಲ್ಲಿ ಏಕೆ ತೊಡಗಿಸುವೆ? ॥ ೧ ॥ ಇಂತಹ ಸಂದಿಗ್ಧವಾತುಗಳಿಂದ ನನ್ನ ಬುದ್ಧಿಗೆ ಭ್ರಮೆಯುಂಟಾಗುವಂತೆ ಮಾಡುತ್ತಿರುವೆ. ಆದುದರಿಂದ, ಯಾವುದರಿಂದ ನನಗೆ ಶ್ರೇಯಸ್ಸು ಉಂಟಾಗಬಹುದೊ ಅದೊಂದನ್ನೆ ನನಗೆ ಹೇಳು. ॥ ೨ ॥**

**ಭಾವಾರ್ಥ:**— ಈ ಮೊದಲು ಕರ್ಮಮಾರ್ಗ ಮತ್ತು ಸಮಬುದ್ಧಿಯ ಜ್ಞಾನಮಾರ್ಗ ಎಂಬ ಎರಡು ದಾರಿಗಳನ್ನು ವಿವರಿಸಲಾಗಿದೆ. ಇವುಗಳಲ್ಲಿ ತನಗೆ ಶ್ರೇಯಸ್ಕರವಾದುದು ಯಾವುದೊ ಆ ದಾರಿಯನ್ನು ಹಿಡಿಯುವಲ್ಲಿಯೆ ಹಿತವಿದೆ. ಆಗಾಗ ತನ್ನ ದಾರಿಯನ್ನು ಬದಲಿಸುವುದರಿಂದ ಯಾವ ಲಾಭವೂ ಆಗಲಾರದು.

---

#### ಅರ್ಜುನನ ಕೊರೆ.

(೧-೨) ಹಿಂದಿನ ಅಧ್ಯಾಯದಲ್ಲಿ 'ಕರ್ಮಯೋಗ' ಮತ್ತು 'ಸಮತ್ವ ಬುದ್ಧಿಯೋಗ' ವೆಂಬ ಎರಡು ಯೋಗಗಳನ್ನು ಹೇಳಿದ್ದಾಯ್ತು. ಮತ್ತು ಇವೆರಡರಲ್ಲಿ ಕರ್ಮವು ಕಡಿಮೆ ತರಗತಿಯದೆಂದೂ ಹೇಳಲಾಯ್ತು. (೨-೪೯). ಇಂತು ಬುದ್ಧಿಯೋಗವು ಕರ್ಮಕ್ಕಿಂತ ಮಿಗಿಲಾದುದೆಂದು ಹೇಳಿಯೂ ಶ್ರೀಕೃಷ್ಣನು ಮತ್ತೆ 'ಎಲೈ ಅರ್ಜುನನೇ ನೀನು ಕಾದಲನುವಾಗು; ಏಳು ಕಾಳಗಕ್ಕೆ ತೊಡಗು' (೨,೩೭; ೩೮), ಎಂದು ಆಜ್ಞಾಪಿಸಿದ್ದನ್ನು ಕೇಳಿ ಅರ್ಜುನನು ದಿಗಿಲುಗೊಂಡನು. ಯುದ್ಧವು ಅತ್ಯಂತ ಕ್ರೂರ ಕರ್ಮವಾಗಿದ್ದು ಅದನ್ನು ಮಾಡು, ಎಂದು ಶ್ರೀಕೃಷ್ಣನು ಪ್ರೇರೇಪಿಸುತ್ತಿರುವುದು ಆತನಿಗೆ ವಿಚಿತ್ರವೆನಿಸಿತು. ಸಮತ್ವ ಭಾವವನ್ನು ತಾಳುವುದರಿಂದ ಮಾನವನಿಗೆ ಬ್ರಾಹ್ಮೀಸ್ಥಿತಿಯು ಪರಮಪದವಿಯು ದೊರೆಯುತ್ತಿದ್ದರೆ ಕಾಳಗದಂತಹ ನಿಂದ್ಯವಾದ ಕ್ರೂರ ಕೆಲಸಕ್ಕೆ ಏಕೆ ಮನಸು ಮಾಡಬೇಕು? ಎಂಬುದೇ ಅರ್ಜುನ ಮನಸಿನೊಳಗಿನ ಕೊರೆ–ಸಂದೇಹ.

ಹಿಂದಿನ ಅಧ್ಯಾಯದಲ್ಲಿ (೨·೭೧, ೭೨). ಸಮತ್ವ ಬುದ್ಧಿಯೋಗದಿಂದ ಬ್ರಾಹ್ಮೀಸ್ಥಿತಿಯು ದೊರೆಯುವುದೆಂದು ನಿಶ್ಚಿತವಾಗಿ ಹೇಳಿರುವಂತೆ, ಕರ್ಮಯೋಗದಿಂದ ಆಗುವ ಲಾಭವನ್ನು ಸ್ಪಷ್ಟಪಡಿಸಿಲ್ಲ. ಈ ಕಾರಣದಿಂದಲೂ ಅರ್ಜುನನಲ್ಲಿ ಉಂಟಾದ ಕೊರೆಯು ಸ್ವಾಭಾವಿಕವಾಗಿದೆ. ಕರ್ಮವು ಕನಿಷ್ಠ; ಬುದ್ಧಿಯೋಗವು ಶ್ರೇಷ್ಠವೆಂದು ಮೊದಲು ತಿಳಿಸಿ ಹೇಳಿ, ಮುಂದೆ, ನೀನು ಕನಿಷ್ಠವಾಗಿರುವ ಕರ್ಮದಲ್ಲಿ ತೊಡಗು, ಎಂದು ಆಜ್ಞೆ ಮಾಡಿದರೆ ಅರ್ಜುನನು ಹೀಗೆ ದಿಗಿಲುಗೊಂಡುದರಲ್ಲಿ ಸೋಜಿಗವಿಲ್ಲ.

ಒಬ್ಬ ರೋಗಿಯು ವೈದ್ಯನೆಡೆಗೆ ಹೋಗಿ ಔಷಧ ಕೇಳಿದಾಗ, 'ಈ ಮದ್ದು ಹಾಲಾಹಲದಂತೆ ವಿಷಮಯ-

## (೨) ಇಬ್ಬಗೆಯ ಸಾಧನ ಮಾರ್ಗಗಳು.

**ಶ್ರೀ. ಭಗವಾನುವಾಚ— ಲೋಕೇಽಸ್ಮಿನ್ ದ್ವಿವಿಧಾ ನಿಷ್ಠಾ ಪುರಾ ಪ್ರೋಕ್ತಾ ಮಯಾನಘ ।**
**ಜ್ಞಾನಯೋಗೇನ ಸಾಂಖ್ಯಾನಾಂ ಕರ್ಮಯೋಗೇನ ಯೋಗಿನಾಂ ॥ ೩ ॥**

ಅನ್ವಯ :— ಹೇ ಅನಘ ! ಅಸ್ಮಿನ್ ಲೋಕೇ ಸಾಂಖ್ಯಾನಾಂ ಜ್ಞಾನಯೋಗೇನ, ಯೋಗಿನಾಂ ಕರ್ಮಯೋಗೇನ ದ್ವಿವಿಧಾ ನಿಷ್ಠಾ ಪುರಾ ಮಯಾ ಪ್ರೋಕ್ತಾ ॥ ೩ ॥

**ಎಲೈ ಪಾಪರಹಿತನೆ ! ಈ ಲೋಕದಲ್ಲಿ ಸಾಂಖ್ಯರ ನಿಷ್ಠೆ ಜ್ಞಾನಯೋಗದಲ್ಲಿ ಮತ್ತು ಯೋಗಿಗಳ ನಿಷ್ಠೆ ಕರ್ಮಯೋಗದಲ್ಲಿ ಎಂದು ಇಬ್ಬಗೆಯ ನಿಷ್ಠೆಗಳು ಇರುವುದಾಗಿ ಈ ಮೊದಲೆ ಹೇಳಿದ್ದೇನೆ. ॥ ೩ ॥**

ವಾಗಿದೆ; ಇದು ಇನ್ನೊಂದು ಅಮೃತಸಮಾನ ಪುಷ್ಟಿಕರವಾಗಿದೆ; ಆದರೆ ನೀನು ಎರಡನೆಯದರ ಬದಲು ಮೊದಲನೆಯದನ್ನೇ ಸೇವಿಸು' ಎಂದು ಹೇಳಿದರೆ ಆ ರೋಗಿಯ ಮನಸಿನ ಸ್ಥಿತಿಯು ಹೇಗಾಗಬೇಕೊ, ಹಾಗೆಯೆ ಈಗ ಅರ್ಜುನನ ಪಾಡು ಆಗಿದೆ! 'ಬುದ್ಧಿಯೋಗವು, ಇದು ನೇರವಾದ ದಾರಿಯೆಂಬುದು ನಿಜ; ಆದರೆ ನೀನು ಕರ್ಮದ ಅಡ್ಡದಾರಿಯನ್ನೇ ಹಿಡಿ'ಎಂದು ಉಪದೇಶಿಸಿದಂತಾಗಿದೆ! ಆದುದರಿಂದಲೇ ಅರ್ಜುನನು ಶ್ರೀಕೃಷ್ಣನಿಗೆ ಮೊರೆಯಿಟ್ಟು ಬೇಡಿಕೊಂಡಿದ್ದಾನೆ. ತನಗೆ ಶ್ರೇಯಸ್ಕರವಾದ ಮಾರ್ಗವು ಯಾವುದು ಎಂಬುದನ್ನು ನಿಶ್ಚಿತವಾಗಿ ಹೇಳೆಂದು ಕೇಳಿಕೊಂಡನು.

ಆಗ ಶ್ರೀಕೃಷ್ಣನು ಅರ್ಜುನನ ಮನಸಿನ ಕೊರೆತವನ್ನು ಕಡಿಮೆ ಮಾಡಿ ಸಮಾಧಾನ ಪಡಿಸುವುದಕ್ಕಾಗಿ ಕರ್ಮಯೋಗದ ತತ್ತ್ವವನ್ನು ವಿವರಿಸಿ ಹೇಳಿದ್ದಾನೆ—

### ಎರಡು ಬಗೆಯ ಒಲವುಗಳು.

(೩-೪) ಈ ಲೋಕದಲ್ಲಿ ಉನ್ನತಿಯ ಸಾಧಕರಲ್ಲಿ ಎಂದರೆ ಧರ್ಮನಿಷ್ಠರಲ್ಲಿ ಎರಡು ಬಗೆಯ ಒಲವಿನವರನ್ನು ಕಾಣಬಹುದಾಗಿದೆ. ಈ ಒಲವಿಗೆ ನಿಷ್ಠೆ ಎಂಬ ಹೆಸರು. ನಿ+ಸ್ಥಾ. ಚೆನ್ನಾಗಿ ಬೇರೂರಿರುವುದು ನಿಷ್ಠೆ. ಇದೆ ಪ್ರವೃತ್ತಿ ; ಒಲವು; ಕೆಲವರಿಗೆ ತಿಳಿವಿನತ್ತ ಒಲವು; ಇನ್ನು ಕೆಲರಿಗೆ ಕೆಲಸದತ್ತ ಒಲವು. ಮೊದಲನೆಯದು **ಜ್ಞಾನನಿಷ್ಠೆ**; ಎರಡನೆಯದು **ಕರ್ಮನಿಷ್ಠೆ**. ಮಾನವನ ಏಳ್ಗೆಗೆ ಇವೆರಡೂ ಅತ್ಯವಶ್ಯಕವಾಗಿವೆ. ಆದರೆ ಕೆಲರು ಒಂದನ್ನು ಎತ್ತಿ, ಮತ್ತೊಂದನ್ನು ಕೀಳುಬಗೆಯುತ್ತಾರೆ. ಅವೆರಡೂ ತೀರ ಭಿನ್ನ, ಪರಸ್ಪರ ವಿರುದ್ಧವಾದುವೆಂಬ ಗ್ರಹಿಕೆಯು ಹಲವರಲ್ಲಿ ಮನೆಮಾಡಿಕೊಂಡಿದೆ. ಬೆಳಕು ಕತ್ತಲೆಯಂತೆ ಅವು ವಿಪರೀತ; ಒಂದೆಡೆಯಲ್ಲಿ ಇರಲಾರದವುಗಳೆಂದೂ ಭಾವನೆಯಿದೆ. ಆದುದರಿಂದ ಇದನ್ನು ಸ್ವಲ್ಪ ಹೆಚ್ಚು ವಿಶದ ಪಡಿಸುವುದು ಅವಶ್ಯವಾಗಿದೆ.

### ದೇಹದೊಳಗಿನ ಜ್ಞಾನ ಮತ್ತು ಕರ್ಮಸಾಧನಗಳು.

ನಮ್ಮ ದೇಹದಲ್ಲಿ ಜ್ಞಾನೇಂದ್ರಿಯಗಳು ಮತ್ತು ಕರ್ಮೇಂದ್ರಿಯಗಳು ಬೇರೆ ಬೇರೆ ಯಾಗಿವೆ. ಕಣ್ಣು, ಮೂಗು, ಕಿವಿ, ನಾಲಗೆ, ತೊಗಲು ಮತ್ತು ಮನಸುಗಳು ತಿಳಿವಿನ ಬಾಗಿಲು. ಕೈಕಾಲು, ಬಾಯಿ, ಹುಟ್ಟುಗೆ ಮತ್ತು ಕುಳಿಗಳು ಕೆಲಸದ ಸಾಧನಗಳು. ಇವು ತಮ್ಮ ತಮ್ಮ ಕೆಲಸಗಳಲ್ಲಿಯೆ ತೊಡಗಿರುತ್ತವೆ. ಇನ್ನೊಂದು ಕೆಲಸಕ್ಕೆ ಮನಸು ಮಾಡುವುದಿಲ್ಲ. ಇನ್ನು ಇವುಗಳಲ್ಲಿ ಜ್ಞಾನೇಂದ್ರಿಯಗಳು ಹೆಚ್ಚಿನವೊ ಅಥವಾ ಕರ್ಮೇಂದ್ರಿಯಗಳು ಹೆಚ್ಚಿನವೊ ಎಂಬುದೊಂದು ಪ್ರಶ್ನೆಯಿದೆ. ಕಣ್ಣು ಮೂಗು, ಕಿವಿಗಳು ಕೈಕಾಲುಗಳಿಗಿಂತ ಮಿಗಿಲಾದುವೆಂದು ಬೇರೆ ಹೇಳಬೇಕಾಗಿಲ್ಲ. ಕಣ್ಣು ಸೂರ್ಯನ ಆಚೆಗೂ ನೋಡಬಲ್ಲುದು ಆದರೆ ಕೈಕಾಲುಗಳಿಗೆ ಆ ಅವಧಿಯಲ್ಲಿ ನಾಲ್ಕು ಹರದಾರಿ ನಡೆವುದಕ್ಕೂ ಆಗುವುದಿಲ್ಲ. 'ಶಾರೀರಿಕ ಜ್ಞಾನದೇವ' ಮತ್ತು ಶಾರೀರಿಕ ಕರ್ಮದೇವರಲ್ಲಿ ಇಷ್ಟು ವ್ಯತ್ಯಾಸವಿದೆ. ಈ ಭೇದವು ಯಾವಾಗಲೂ ನಿತ್ಯವಾದುದು

### ಜ್ಞಾನದೇವ ಮತ್ತು ಕರ್ಮದೇವರು.

ಜ್ಞಾನದೇವರಲ್ಲಿ ಮನಸು 'ಇಂದ್ರ' ಮತ್ತು 'ಚಂದ್ರ' ಶಕ್ತಿಯುತವಾದುದು. ಇಂದ್ರನ (ವಿದ್ಯುತ್ತಿನ) ಚಾಂಚಲ್ಯ ಮತ್ತು ಸೋಮನ ಶಾಂತಿಯು ಮನಸಿನಲ್ಲಿದೆ. ಮನಸು ಅರೆಗಳಿಗೆಯಲ್ಲಿ ಮಿಂಚಿನಂತೆ ಎಲ್ಲಿ ಬೇಕಾದಲ್ಲಿಗೆ ಹರಿಯಬಲ್ಲುದು. ಕಣ್ಣು ದೂರದಲ್ಲಿ ಕಾಣಬಲ್ಲುದು : ಕಿವಿಯು ದೂರದ ಅಂತರದ ಶಬ್ದವನ್ನು ಆಲಿಸಬಹುದು. ಮೂಗು ಮೂಸಿಯೆ ವಸ್ತುಗಳನ್ನು ಅರಿಯಬಲ್ಲುದು ಈ ಬಗೆಯ ಸಾಮರ್ಥ್ಯವು ಕರ್ಮದೇವರಲ್ಲಿ ಇಲ್ಲ. ಆದುದರಿಂದ ಕರ್ಮದೇವರಿಗಿಂತ ಜ್ಞಾನದೇವರು ಹೆಚ್ಚಿನವರೆಂದು ಹೇಳದೆ ಗತ್ಯಂತರವಿಲ್ಲ.

**ನ ಕರ್ಮಣಾಮನಾರಂಭಾನ್ನೈಷ್ಕರ್ಮ್ಯಂ ಪುರುಷೋಽಶ್ನುತೇ ।**
**ನ ಚ ಸಂನ್ಯಸನಾದೇವ ಸಿದ್ಧಿಂ ಸಮಧಿಗಚ್ಛತಿ ॥ ೪ ॥**

---

**ಅನ್ವಯಃ—** ಕರ್ಮಣಾಂ ಅನಾರಂಭಾತ್ ಪುರುಷಃ ನೈಷ್ಕರ್ಮ್ಯಂ ನ ಅಶ್ನುತೇ । (ಕರ್ಮಣಾಂ) ಚ ಸನ್ನ್ಯಸನಾತ್ ಏವ ಸಿದ್ಧಿಂ ನ ಸಮಧಿಗಚ್ಛತಿ ॥ ೪ ॥

**ಕೆಲಸಗಳನ್ನು ಕೈಕೊಳ್ಳದಿರುವುದರಿಂದಲೇ ಮನುಷ್ಯನು ಕೆಲಸದಿಂದ ಬಿಡುಗಡೆಹೊಂದಿದವನಾಗಲಿಲ್ಲ. ಮತ್ತು (ಕೆಲಸಗಳನ್ನು) ತೊರೆದು ಸನ್ಯಾಸಗೊಂಡರೂ ಅದರಿಂದ ಸಿದ್ಧಿಯನ್ನು ಪಡೆಯುವುದಿಲ್ಲ. ॥೪॥**

**ಭಾವಾರ್ಥ:—** ಇಬ್ಬಗೆಯ ಒಲವುಗಳಿವೆ. ಕೆಲರಿಗೆ ಸತ್ಯಜ್ಞಾನವನ್ನು ಸಂಪಾದಿಸುವಲ್ಲಿಯೆ ಹಿಗ್ಗು. ಇನ್ನು ಕೆಲರಿಗೆ ಸತ್ಕರ್ಮಗಳನ್ನು ಮಾಡುವಲ್ಲಿಯೆ ಹಿಗ್ಗು. ಕೆಲಸಗಳನ್ನು ಕೈಕೊಳ್ಳದೆ ಸುಮ್ಮನಿರುವುದರಿಂದ ಅದರ ತೊಡಕಿನಿಂದ ತಾವು ಪಾರಾದೆವೆಂದು ಬಗೆಯುವುದಾಗಲಿ, ಕೆಲಸಗಳನ್ನು ತೊರೆದು ಸನ್ಯಸನದಿಂದ ಯಾವುದೊಂದು ಸಿದ್ಧಿಯ ಪಡೆಯಬಹುದೆಂದು ಎಣಿಸುವುದಾಗಲಿ ವ್ಯರ್ಥವಾಗಿದೆ. ಆದುದರಿಂದ ಇವೆರಡೂ ವಿಚಾರದ ರೀತಿಗಳು ತಪ್ಪಾಗಿವೆ.

---

**ಅಥ ಯೇ ಶತಂ ಕರ್ಮದೇವಾನಾಮಾನಂದಾಃ ।**
**ಸ ಏಕ ಆಜಾನ ದೇವಾನಾಮಾನಂದಃ ।**

ಬೃ. ಉ. ೪. ೩. ೩೩;

**ಸ ಏಕೋ ಬ್ರಹ್ಮಣ ಆನಂದಃ ।** ತೈ. ಉ. ೨. ೮;

ಕರ್ಮದೇವರ ನೂರು ಆನಂದಗಳೆಂದರೆ ದೇವರ ಒಂದು ಆನಂದವು. ದೇವರ ಒಂದು ಸಾವಿರ ಆನಂದಗಳೆಂದರೆ ಬ್ರಹ್ಮ (ಜ್ಞಾನ)ದ ಒಂದು ಆನಂದವು ಎಂದು ಉಪನಿಷತ್ತುಗಳಲ್ಲಿ ಹೇಳಿದುದು ಈ ಕಾರಣದಿಂದಲೇ. ಕರ್ಮಸಾಧನಕ್ಕಿಂತ ಜ್ಞಾನಸಾಧನವು ಎಷ್ಟೋ ಪಟ್ಟು ಮಿಗಿಲಾದುದಾಗಿದೆ. ಆದುದರಿಂದ ಅವುಗಳ ಪರಿಣಾಮದಲ್ಲಿಯೂ ಆ ಪ್ರಮಾಣದಿಂದಲೇ ಹೆಚ್ಚುಕಡಿಮೆಯುಂಟು. ಆದರೂ ಎರಡಕ್ಕೂ ಮಿದುಳಿನಿಂದ ಪೂರೈಕೆಯಾಗುವ ಶಕ್ತಿಯು ಒಂದೇ ಆಗಿರುವುದು. ಈ ದೃಷ್ಟಿಯಿಂದ ಇವೆರಡರಲ್ಲಿ ಸಮಾನತೆಯನ್ನೂ ಕಲ್ಪಿಸಬಹುದಾಗಿದೆ.

ನಾವು ಯಾವುವನ್ನು ಜ್ಞಾನೇಂದ್ರಿಯಗಳೆಂದು ಹೇಳುವೆವೊ ಅವು ಕರ್ಮೇಂದ್ರಿಯಗಳೆಂದೂ ಹೇಳಬಹುದಾಗಿದೆ. ಕಣ್ಣು ರೂಪವನ್ನು ನೋಡುವ 'ಕೆಲಸ' ಮಾಡುತ್ತದೆ. ಮನಸು ಅಂತರ್ಜ್ಞಾನದ ಇಂದ್ರಿಯವಾದರೂ ಅದಕ್ಕೂ ಮನನದ 'ಕೆಲಸವು' ತಪ್ಪಿಲ್ಲ. ಆದುದರಿಂದ ಜ್ಞಾನೇಂದ್ರಿಯಗಳೆಲ್ಲವೂ ಕರ್ಮೇಂದ್ರಿಯಗಳೂ ಅಹುದು. ಆತ್ಮನು ಜ್ಞಾನರೂಪನಾಗಿದ್ದರೂ, ಎಲ್ಲಕ್ಕೂ ಅಂತಃಪ್ರೇರಣೆಯನ್ನು ಕೊಡುವ ಕೆಲಸವು ಆತನಿಂದಲೇ ನಡೆದಿರುತ್ತದೆ. ಈ ದೃಷ್ಟಿಯಿಂದ ವಿಚಾರಿಸಿದಲ್ಲಿ ಎಲ್ಲ ಜ್ಞಾನದೇವರೂ ಕರ್ಮಮಾರ್ಗಿಗಳೇ ಆಗಿದ್ದಾರೆ. ಈ ಭೇದಾಭೇದವು ನೆನಪಿಡುವಂತಿದೆ.

### ಮಾನವರೊಳಗಿನ ಪ್ರವೃತ್ತಿಭೇದಗಳು

ಕೆಲವರಿಗೆ ತತ್ವಜ್ಞಾನವು ಪ್ರಿಯವಾಗಿದ್ದರೆ, ಇನ್ನು ಕೆಲರಿಗೆ ಜಪತಪಾದಿ ಅನುಷ್ಠಾನಗಳಲ್ಲಿ ಆಸಕ್ತಿ ವಿಶೇಷ. ಆಚಾರವಿಲ್ಲದ ಬರಿ ವಿಚಾರಕ್ಕೇನು ಬೆಲೆ? ಎಂದು ಜ್ಞಾನಮಾರ್ಗವನ್ನು ಹೀಯಾಳಿಸುವವರು ಕೆಲರು. ಗಾಣದ ಎತ್ತಿನಂತೆ ಕರ್ಮಚಕ್ರದಲ್ಲಿ ತಿರುಗುವುದರಿಂದ ಒಂದ ಲಾಭವೇನು? ಮನಸು ಹಸನಗೊಳಿಸಿರಿ; ನಿಮ್ಮನ್ನು ನೀವು ತಿಳಿದುಕೊಳ್ಳಿರಿ; ಎಂದು ಆಕ್ಷೇಪಿಸಿ ನುಡಿವವರು ಕೆಲರು. ಈ ಬಗೆಯಾದ ಕಾದಾಟವು ಈ ಲೋಕದಲ್ಲಿ ಎಂದಿನಿಂದಲೂ ನಡೆದುಬಂದಿದೆ. ಇವುಗಳ ನಿಜಸ್ವರೂಪವನ್ನು ಶಕ್ಯವಿದ್ದಷ್ಟು ತಿಳಿದುಕೊಳ್ಳುವ ಪ್ರಯತ್ನವನ್ನು ಇಲ್ಲಿ ಮಾಡುವುದು ಅವಶ್ಯವಾಗಿದೆ.

### ಕೆಲಸದೊಡನೆ ಅದರ ಕುಂದುಕೊರತೆಗಳೂ ತಪ್ಪಿಲ್ಲ.

ಕೆಲಸಕ್ಕೆ ಕೈಯಿಕ್ಕಿದೊಡನೆ ಆ ಕೆಲಸದ ಕೆಲವೊಂದು ಕುಂದುಕೊರತೆಗಳೂ ನಮಗೆ ತಪ್ಪಿದುವುಗಳಲ್ಲ. ಮೇಲೆ ಸೂಚಿಸಿರುವಂತೆ ಜ್ಞಾನವೂ ಕರ್ಮರೂಪವೇ ಆಗಿರುವುದರಿಂದ ಬರಿ ಜ್ಞಾನಿಯಾಗುವೆನೆಂಬವನಿಗೂ ಕರ್ಮದೋಷಗಳು ಸೋಂಕದೆ ಹೋಗುವುದಿಲ್ಲ. ಇಂತು ಕರ್ಮದೋಷಗಳು ಒಂದಿಲ್ಲೊಂದು ಬಗೆಯಿಂದ ಅಂಟಿಕೊಳ್ಳದೆ ಬಿಡವೆಂಬುದು ನಿಜವಿದ್ದರೆ, ಅದರೊಳಗಿಂದ ಪಾರಗಲು ಏನಾದರೂ ಹಂಚಿಕೆಗಳು ಇಲ್ಲವೆ?

## (೩) ಪ್ರಕೃತಿಧರ್ಮ.

**ನ ಹಿ ಕಶ್ಚಿತ್ ಕ್ಷಣಮಪಿ ಜಾತು ತಿಷ್ಠತ್ಯಕರ್ಮಕೃತ್ |**
**ಕಾರ್ಯತೇ ಹ್ಯವಶಃ ಕರ್ಮ ಸರ್ವಃ ಪ್ರಕೃತಿಜೈರ್ಗುಣೈಃ ॥ ೫ ॥**

---

**ಅನ್ವಯಃ:—** ಕಶ್ಚಿತ್ ಜಾತು ಕ್ಷಣಮಪಿ ಅಕರ್ಮಕೃತ್ ನಹಿ ತಿಷ್ಠತಿ | ಪ್ರಕೃತಿಜೈಃ ಗುಣೈಃ ಸರ್ವಃ ಹಿ ಅವಶಃ ಕರ್ಮ ಕಾರ್ಯತೇ ॥ ೫ ॥

**ಯಾರೆ ಆಗಲಿ, ಒಂದರಗಳಿಗೆಯಾದರೂ ಕೆಲಸವಮಾಡದೆ (ಸುಮ್ಮನೆ) ಇರಲಾರರು. ಪ್ರಕೃತಿ ಸ್ವಭಾವದಿಂದ ಉಂಟಾದ ಗುಣಗಳು ಎಲ್ಲರನ್ನೂ ಪರತಂತ್ರರನ್ನಾಗಿ ಮಾಡಿ ಅವರಿಂದ ಕೆಲಸ ಮಾಡಿಸುತ್ತವೆ. ॥ ೫ ॥**

**ಭಾವಾರ್ಥ:—** ಪ್ರಾಣಿಮಾತ್ರಗಳ ಹುಟ್ಟುಗುಣವೆ ಆಗಿದೆ. ಅವು ಕೆಲಸವಿಲ್ಲದೆ ಒಂದರಗಳಿಗೆಯೂ ಬದುಕಲಾರವು. ಪ್ರಕೃತಿಗುಣಗಳಿಂದ ಬದ್ಧವಾದ ಪ್ರತಿಯೊಂದು ಪ್ರಾಣಿಯು ಎಡೆಬಿಡದೆ ಒಂದಿಲ್ಲೊಂದು ಕೆಲಸದಲ್ಲಿ ತೊಡಗಿರುವುದೆ ಅವರ ಸ್ವಭಾವವಾಗಿದೆ. ॥ ೫ ॥

---

ಎಂಬ ಪ್ರಶ್ನೆಯು ತಲೆದೋರುತ್ತದೆ. ಆ ಬಗೆಯ ಕೆಲವು ಉಪಾಯುಗಳನ್ನು ಇಲ್ಲಿ ವಿಚಾರಿಸಬಹುದು:

೧. ಕೆಲಸಗಳನ್ನೆ ಕೈಕೊಳ್ಳದಿದ್ದರೆ ಆ ಕೆಲಸದಿಂದ ಬರುವ ಕುಂದುಕೊರತೆಗಳು ತಗಲುವ ಸಂಭವವೇ ಇಲ್ಲ. ಅಥವಾ

೨. ಕೆಲಸವನ್ನು ಆರಂಭಿಸಿದ್ದರೆ ಆ ಕುಂದುಕೊರತೆಗಳು ತಲೆದೋರುವ ಹೊತ್ತಿಗೆ ಅದನ್ನು ಬಿಟ್ಟುಬಿಟ್ಟರೆ (ಸನ್ಯಸನ ಮಾಡಿದರೆ) ಆಯ್ತು. ಆ ದೋಷಗಳು ತಾಗಲಾರವು.

ಆದರೆ ಇವೆರಡೂ ಹಂಚಿಕೆಗಳು ಹುರುಳಿಲ್ಲದುವು-ಗಳೆಂದು ಶ್ರೀಕೃಷ್ಣನು ಮೇಲಣ ಶ್ಲೋಕದಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ. ಕೆಲಸಗಳನ್ನು ಕೈಕೊಳ್ಳದಿರು-ವುದರಿಂದಾಗಲಿ, ನಡುವೆ ಅವನ್ನು ನಡುವೆ ಬಿಡುವುದ-ರಿಂದಾಗಲಿ ಮನುಷ್ಯನು ಕರ್ಮದೋಷದಿಂದ ಮುಕ್ತ-ನಾಗಲಾರನು. ಕೆಲಸಮಾಡದೆ ಕಿಮ್ಮನಿರುವುದು, ಅಥವಾ ಅವನ್ನು ಬಿಟ್ಟುಬಿಡುವುದು ಎರಡೂ ತಪ್ಪುದಾರಿಗಳೆಂದು ಶ್ರೀಕೃಷ್ಣನು ಒತ್ತಿಹೇಳಿದ್ದಾನೆ.

ಏನೂ ಮಾಡದೆ ಸುಮ್ಮನೆ ಕುಳಿತರೆ ನಿಷ್ಕರ್ಮವಾಗ-ಬಹುದೆಂದು ಕೆಲರ ಗ್ರಹಿಕೆಯಿದೆ. ಏನೂ ಮಾಡದೆ ಸುಮ್ಮನೆ ಕುಳ್ಳಿರಲು ಸಾಧ್ಯವೇ? ಎಂಬುದು ಒಂದು ಪ್ರಶ್ನೆ. ಇನ್ನು ಹಾಗೆ ಕಿಮ್ಮನೆ ಕುಳ್ಳಿರಲು ಶಕ್ಯವಿದೆ-ಯೆಂದು ಎಣಿಸಿದರೂ, ಆ ಬಗೆಯಾಗಿ ಸುಮ್ಮನೆ ಕುಳ್ಳಿರುವುದೂ ಒಂದು ಕೆಲಸವೇ ಅಲ್ಲವೊ? ಇನ್ನು ಈ ಕೆಲಸದಿಂದ ಬಿಡುಗಡೆ ಹೇಗೆ? ಆದುದರಿಂದ ಕೆಲಸದಿಂದ ಪಾರಾಗಬೇಕು, ಬಿಡುಗಡೆ ಹೊಂದಬೇಕು ಎಂಬುದೇ ಒಂದು ಭ್ರಮೆಯಾಗಿದೆ.

ಇಲ್ಲಿ ಇನ್ನೂ ಒಂದು ವಿಚಾರ: 'ಕರ್ಮದಿಂದ ದೋಷವು ತಗಲುವುದು' ಎಂಬ ಮಾತಾದರೂ ನಿಜವೆಂದು ಏಕೆ ನಂಬಬೇಕು? ಕರ್ಮದ ಬಗ್ಗೆ ಇಷ್ಟು ಹೆದರಿಕೆ ಏಕೆ? ದೋಷವು ತಗಲುವ ಕಾರಣವೇನು? ದೋಷಹತ್ತುವುದು, ಎಂದರೇನು?

ಯಾವ ಬಗೆಯು ಕೆಲಸಗಳನ್ನೆ ಕೈಕೊಳ್ಳಲಿ; ಅದರಿಂದ ಒಂದಿಲ್ಲೊಂದು ಬಗೆಯ ತಪ್ಪುತಡೆಗಳು ಒದಗಲೇ ಬೇಕು. ಒಬ್ಬನು ಕಿಮ್ಮನೆ ಕುಳಿತನೆಂದು ತಿಳಿಯಿರಿ; ಆತನಿಂದ ಕಾಲದ ಅಪವ್ಯಯುಮಾಡಿದ ಅಪರಾಧವು ಸಂಭವಿಸುವುದು. ಅಲ್ಲದೆ ಮಾಡತಕ್ಕ ಕೆಲಸಗಳನ್ನು, ಮಾಡದೆ ಇರುವ ಅಪಕೃತ್ಯವೆಂದು ಇದ್ದೇ ಇದೆ. ಆ ಕೆಲಸವೆಂಬುದೇ ಒಂದು ಕೆಲಸವು. ಆತನಿಂದ ಸಂಭವಿ-ಸುವದನ್ನು ಆತನು ಎಂದೂ ಹೇಗೂ ತಪ್ಪಿಸಿಕೊಳ್ಳ-ಲಾರನು. ಒಬ್ಬನು ಅನ್ನದಾನಕ್ಕೆ ಅಡುಗೆಮಾಡುತ್ತಿರು-ವನೆಂದು ಬಗೆದರೆ, ಅತನ ಜೀವಸುಡುವ ಕುಚ್ಚುವ ಕೆಲಸದಲ್ಲಿ ಸಾವಿರಾರು ಸೂಕ್ಷ್ಮಜಂತುಗಳ ಸಂಹಾರವು ನಡೆಯುವುದು ಅನಿವಾರ್ಯ. ಒಬ್ಬನು ತನ್ನ ಗುರುವಿನಲ್ಲಿ ಓದುತ್ತಿರುವನೆಂದು ಗ್ರಹಿಸಿದರೆ, ಆತನಿಂದ ಗುರು-ಪೀಡೆಯು ಅಲ್ಪಪ್ರಮಾಣದಿಂದಾದರೂ ಆಗದೆ ಇರದು. ಆದುದರಿಂದ ಇಂತು ಒಂದಿಲ್ಲೊಂದು ಬಗೆಯ ಕುಂದು ಕೊರತೆಗಳಿಂದ ಬೆರೆತಿರದ ಕೆಲಸವೇ ಇಲ್ಲ. ಕೆಲವು ನಮಗೆ ಒಮ್ಮೆಲೆ ಸ್ಪಷ್ಟವಾಗಿ ಕಾಣುವುವು; ಕಾಲಾಂತರ-

ದಿಂದ ಕಾಣಿಸಿಕೊಳ್ಳುವುವು. ಸೂಕ್ಷ್ಮವಿಚಾರದಿಂದ ಕೆಲವನ್ನೂ ಮುಂಗಾಣುವುದೂ ಶಕ್ಯವಾಗಿದೆ. ಆದುದರಿಂದ ದೋಷರಹಿತ ಕರ್ಮವೆಂಬುದು ಅಸಾಧ್ಯವೆ ಆಗಿದೆ.

ಆದರೆ ಕೆಲಸದಿಂದ ಕೇವಲ ಕುಂದುಕೊರತೆಗಳೆ ತಲೆದೋರುವುದಿಲ್ಲ. ಹಲವು ಒಳಿತು, ಲಾಭಗಳೂ ಉಂಟು. ಆದುದರಿಂದ ಪ್ರತಿಯೊಂದು ಕೆಲಸವು ಗುಣ-ದೋಷಗಳಿಂದ ಸಂಮಿಶ್ರವಾಗುತ್ತದೆ. ಗುಣಗಳಿಂದ ಹಿಗ್ಗುವುಂಟಾಗುವುದರಿಂದ ಮನುಷ್ಯನು ಕೇವಲ ಒಳಿತನ್ನೆ ಬಯಸುವನು. ದೋಷಗಳಿಂದ ಹಾನಿಯಾಗುವುದರಿಂದ ಅದನ್ನು ದೂರವಿರಿಸುವುದಕ್ಕೆ ಹವಣಿಸುವನು; ಅದಕ್ಕಾಗಿ ಬಗೆಬಗೆಯ ಹಂಚಿಕೆಗಳನ್ನು ಹುಡುಕುವನು. ಕರ್ಮದೋಷದಿಂದ ಮಾನವನು ತನ್ನನ್ನು ಹೇಗೆ ಕಾಪಾಡಿಕೊಳ್ಳಬೇಕೆಂಬುದನ್ನು ಹೇಳುವ ಉದ್ದೇಶದಿಂದಲೇ ಹಲವು ಶಾಸ್ತ್ರಗಳು ತಲೆದೋರಿವೆ. ಗೀತಾಶಾಸ್ತ್ರದ ಗುರಿಯೂ ಇದುವ ಆಗಿದೆ. ದೋಷವು ಸೋಂಕದಂತೆ ಕರ್ಮವನ್ನು ಹೇಗೆ ಮಾಡಬೇಕೆಂಬುದನ್ನು ಲೋಕಕ್ಕೆ ಬೋಧಿಸುವುದೆ ಗೀತೆಯ ವೈಶಿಷ್ಟ್ಯವಾಗಿದೆ. ಈ ವಿಷಯವಿವೇಚನೆಗೆ ಮೊದಲು ಶ್ರೀಕೃಷ್ಣನು ಶರೀರಧರ್ಮವನ್ನು ವಿವರಿಸಿ ಹೇಳುತ್ತಾನೆ :

೫ ಕೆಲಸದಲ್ಲಿ ತೊಡಗಿರುವುದು ಪ್ರಾಣಿಗಳ ಹುಟ್ಟುಗುಣವಾಗಿರುವುದು ಎಂದು ಈ ಶ್ಲೋಕದಲ್ಲಿ ಹೇಳಿದೆ. ಕೆಲಸವಿಲ್ಲದೆ ಅರಗಳಿಗೆಯನ್ನೂ ಕಳೆಯಲಾರೆವು. ಮನಸಿನಿಂದ ಮಾಡಲಿ ಮನಸಿಲ್ಲದೆ ಒದಗುತ್ತಿರಲಿ, ಅಂತೂ ಕೆಲಸವು ಪ್ರಾಣಿಗಳಿಗೆ ನೆಳಲಿನಂತೆ ಬೆಂಬತ್ತಿದೆ. ಸುಮ್ಮನೆ ಕುಳಿತೆನೆಂಬುದು ಭ್ರಾಂತಿ. ಏಕೆಂದರೆ ಸುಮ್ಮನಿರುವುದಕ್ಕೂ ಪ್ರಯತ್ನಪಡಬೇಕಾಗುತ್ತದೆ. ಪ್ರಯತ್ನವೆಂದರೇ ಕೆಲಸ. ಅಲ್ಲದೆ ದೇಹವನ್ನು ಅಲುಗಾಡಿಸದೆ ಸುಮ್ಮನೆ ಇರಿಸಿದರೂ ಮೂಗು ವಾಸನೆಯನ್ನು ತಕ್ಕೊಳ್ಳುವುದನ್ನು ನಿಲ್ಲಿಸುವುದಿಲ್ಲ. ನೆರೆಹೊರೆಯವರ ಮಾತು ಕಿವಿಗೆ ಕೇಳುವುದು ನಿಲ್ಲುವುದಿಲ್ಲ. ಕಣ್ಣಿಗೆ ಕಾಣುವುದು ಕಾಣುತ್ತಲೆ ಇರುತ್ತದೆ. ಮೈಗೆ ಶಕೆ ಅಥವಾ ತಂಪುತಾಗುವುದರ ಅನುಭವವು ಬರುತ್ತಲೆ ಇರುತ್ತದೆ. ಉಸಿರಾಡುವ ಮೊದಲಾದ ದೇಹಧರ್ಮಗಳನ್ನು ನಿಲ್ಲಿಸುವುದಂತೂ ಸಾಧ್ಯವೆ ಇಲ್ಲ. ಇಂತಿವೆಲ್ಲವೂ ಕೆಲಸಗಳೆ ಅಲ್ಲವೆ? ಮನಸಂತೂ ವಿದ್ಯುತ್‌ಗತಿಯಿಂದ ನಡೆಸಿದ ತ್ರಿಲೋಕಸಂಚಾರವನ್ನು ನಿಲ್ಲಿಸಲು ಸಿದ್ಧವಿರುವುದೆ ಇಲ್ಲ. ನಿದ್ದೆ ಬಂದರೆ ನಿದ್ದೆಗೆಯ್ಯುವುದೂ ಒಂದು ಕೆಲಸವೆ. ಅಷ್ಟರಲ್ಲಿ ಕನಸು ಕಂಡರೆ ಅದೂ ಒಂದು ಮನೋವ್ಯಾಪಾರವಲ್ಲದೆ ಮತ್ತೇನು? ಆದುದರಿಂದ ಕರ್ಮತ್ಯಾಗ ಮಾಡುವೆನೆಂಬ ಮಾತು ಹುರುಳಿಲ್ಲದುದಾಗಿದೆ.

**ಪರಾವಲಂಬನ.**

ಉಳಿದ ಪ್ರಾಣಿಗಳಂತೆ ಮನುಷ್ಯನೂ ಪ್ರಕೃತಿಯ ಕೈಬೊಂಬೆ; ಪರಾಧೀನ. ಪ್ರಕೃತಿಯ ಗುಣಧರ್ಮಗಳು ಹೇಗೆ ಕುಣಿಸುವುವೊ ಹಾಗೆ ಕುಣಿಯುವನು. ಆದುದರಿಂದ ಕೆಲಸಮಾಡದೆ ಅರಗಳಿಗೆಯಾದರೂ ಸುಮ್ಮನಿರುವುದು ಸಾಧ್ಯವಿಲ್ಲ. ಸತ್ವ, ರಜ, ತಮಗಳಲ್ಲಿ ಒಂದಿಲ್ಲೊಂದರ ಅಧೀನನಾಗಿ ಬಾಳಬೇಕಾಗುವುದು. ತಮೋಗುಣಿಯಾಗಿದ್ದರೆ ಪೈಗಳ್ಳತನ, ಜೋಪರ, ಸುಂದುಹಿಡಿದು ಬಿದ್ದುಕೊಂಬ ಸ್ವಭಾವವು ಉಂಟಾಗುವುದು; ರಜೋಗುಣಿಯಾಗಿದ್ದರೆ ಭೋಗವಿಲಾಸಗಳ ಕಡೆಗೆ ಎಳಸುವನು; ಸತ್ವಸ್ಥನಾಗಿದ್ದರೆ ಶಕ್ತಿಯುತನಾಗಿ ಬಾಳುವನು.

ಸತ್ತ್ವಂ ರಜಸ್ತಮ ಇತಿ ಗುಣಾಃ ಪ್ರಕೃತಿ ಸಂಭವಾಃ।
ನಿಬಧ್ನಂತಿ ಮಹಾಬಾಹೋ ದೇಹೇ
ದೇಹಿ ನಮವ್ಯಯಮ್ ॥ (ಗೀ. ೧೪–೫.)

ಗುಣಾನೇತಾನತೀತ್ಯ ತ್ರೀನ್‌ದೇಹೀ
ದೇಹಸಮುದ್ಭವಾನ್ ।
ಜನ್ಮಮೃತ್ಯು ಜರಾದುಃಖೈರ್ವಿಮುಕ್ತೋಽ
ಮೃತಮಶ್ನುತೇ ॥ (ಗೀ. ೧೪–೨೦.)

ಸ ಗುಣಾನ್ ಸಮತೀತ್ಯೈತಾನ್
ಬ್ರಹ್ಮಭೂಯಾಯ ಕಲ್ಪತೇ ॥
(ಗೀ ೧೪–೨೦.)

'ಪ್ರಕೃತಿಯಿಂದ ತಲೆದೋರಿದ ಸತ್ವ, ರಜ, ತಮಗಳೆಂಬ ಗುಣಗಳು, ಅವಿನಾಶಿಯಾದ ಆತ್ಮನನ್ನು ಈ ದೇಹದಲ್ಲಿ ಬಂಧಿಸಿ ಇಡುತ್ತವೆ ದೇಹದಿಂದ ಮೊಳೆತು ಮೂಡುವ ಈ ಮೂರು ಗುಣಗಳನ್ನು ಮೀರಿ, ಈ ಜೀವವು ಹುಟ್ಟು, ಮುಪ್ಪು, ಮತ್ತು ಸಾವುಗಳ ಗೋಳಾಟದಿಂದ ಪಾರಾಗಿ ಅಮೃತವನ್ನು ಉಣ್ಣುತ್ತಾನೆ; ಮತ್ತು ಕೊನೆಗೆ ಬ್ರಹ್ಮರೂಪನಾಗಲು ತಕ್ಕವನಾಗುತ್ತಾನೆ."

ತ್ರಿವಿಧಾ ಭಕ್ತಿಶ್ರದ್ಧಾ ದೇಹಿನಾಂ ಸಾ ಸ್ವಭಾವಜಾ।
ಸಾತ್ವಿಕೀ ರಾಜಸೀ ಚೈವ ತಾಮಸೀ ಚೇತಿ ತಾಂ
ಶೃಣು ॥
ಸತ್ವಾನುರೂಪಾ ಸರ್ವಸ್ಯ ಶ್ರದ್ಧಾ ಭವತಿ ಭಾರತ।
ಶ್ರದ್ಧಾಮಯೋಽಯಂ ಪುರುಷೋ ಯೋ
ಯಚ್ಛ್ರದ್ಧಃ ಸ ಏವ ಸಃ ॥
(೧೭, ೨, ೩)

## (೪) ಮಿಥ್ಯಾಚಾರಿಗಳು.

**ಕರ್ಮೇಂದ್ರಿಯಾಣಿ ಸಂಯಮ್ಯ ಯ ಆಸ್ತೇ ಮನಸಾ ಸ್ಮರನ್ ।
ಇಂದ್ರಿಯಾರ್ಥಾನ್ ವಿಮೂಢಾತ್ಮಾ ಮಿಥ್ಯಾಚಾರಃ ಸ ಉಚ್ಯತೇ ॥ ೬ ॥**

**ಅನ್ವಯ :—** ಯಃ ಕರ್ಮೇಂದ್ರಿಯಾಣಿ ಸಂಯಮ್ಯ ಮನಸಾ ಇಂದ್ರಿಯಾರ್ಥಾನ್ ಸ್ಮರನ್ ಆಸ್ತೇ, ಸಃ ವಿಮೂಢಾತ್ಮಾ ಮಿಥ್ಯಾಚಾರಃ ಉಚ್ಯತೇ ॥ ೬ ॥

**ಯಾವನು ಕರ್ಮೇಂದ್ರಿಯಗಳನ್ನು ಒತ್ತಾಯದಿಂದ ಬಿಗಿಹಿಡಿದು, (ಒಳಗೊಳಗೆ) ಮನಸಿನಿಂದ ವಿಷಯಭೋಗಗಳನ್ನು ನೆನೆದುಕೊಳ್ಳುವನೊ, ಆ ತಿಳಿಗೇಡಿಗೆ ಮಿಥ್ಯಾಚಾರಿ ಎಂದು ಹೆಸರು.**

**ಭಾವಾರ್ಥ :—** ಒತ್ತಾಯದಿಂದ ಇಂದ್ರಿಯಗಳನ್ನು ತಡೆದು ಹಿಡಿವವರು ಹಲವರುಂಟು. ಆದರೆ ಇವರ ಮನಸು ಮಾತ್ರ ಮಾಡಬಾರದ್ದನ್ನೆಲ್ಲ ಮಾಡಿಬಿಡುತ್ತಿರುತ್ತದೆ. ಒಳಗೊಳಗೇ ಇಂದ್ರಿಯ ಸುಖದ ಚಿಂತನೆ ನಡೆದಿರುತ್ತದೆ. ಇಂತಹರಿಗೆ ಮಿಥ್ಯಾಚಾರಿಗಳು ಇಲ್ಲವೆ ದಾಂಭಿಕರೆಂದು ಹೆಸರು.

"ಮನುಷ್ಯನಲ್ಲಿ ಸಾತ್ವಿಕ, ರಾಜಸ, ಮತ್ತು ತಾಮಸಗಳೆಂದು ಮೂರು ಬಗೆಯ ಶ್ರದ್ಧೆಯಿರುತ್ತದೆ. ಅವರವರ ಹುಟ್ಟುಗುಣಕ್ಕನುಸರಿಸಿ ಅವರವರ ಶ್ರದ್ಧೆಯೆಂದರೆ ನಂಬುಗೆಯಿರುತ್ತದೆ. ಪ್ರತಿಯೊಬ್ಬರಲ್ಲಿಯೂ ಒಂದಿಲ್ಲೊಂದು ಬಗೆಯ ಶ್ರದ್ಧೆಯು ಇದ್ದೇ ಇರುತ್ತದೆ. ಯಾರ ಶ್ರದ್ಧೆಯು ಹೇಗೆಯೊ ಹಾಗೆಯೆ ಆ ಮನುಷ್ಯನ ಬಾಳು."

ಇದೇ ವಿಚಾರವು ವೇದದಲ್ಲಿಯೂ ಇದೆ.

**ತ್ರಿಧಾ ಬದ್ಧೋ ವೃಷಭೋ ರೋರವೀತಿ ಮಹೋ ದೇವೋ ಮರ್ತ್ಯಾಂ ಆವಿವೇಶ ॥ ತ್ರಿಧಾ ಹಿತಂ ಪಣಿಭಿರ್ಗುಹ್ಯಮಾನಂ ಗವಿ ದೇವಾಸೋ ಘೃತ ಮನ್ವವಿಂದನ್ ॥** ಋಕ್. ೪–೫೮, ೩–೪.

'ಮೂರು ಕಡೆಗಳಲ್ಲಿ ಕಟ್ಟಲ್ಪಟ್ಟ ಬಲವಂತನಾದ ಈ ಆತ್ಮನು ಗುಡುಗುತ್ತಲಿದ್ದಾನೆ. ಈ ಮಹಾದೇವನು ಮರ್ತ್ಯಶರೀರದಲ್ಲಿ ಪ್ರವಿಷ್ಟನಾಗಿ ಆವೇಶವನ್ನುಂಟು ಮಾಡುವನು. ಪಣಿಗಳಾದ ಎಂದರೆ ವ್ಯವಹಾರ ಮಾಡತಕ್ಕ ಇಂದ್ರಿಯಗಳಿಂದ ತ್ರಿವಿಧ ಪ್ರಕೃತಿಯ ಗುಹೆಯಲ್ಲಿ ಈತನು (ಆತ್ಮನು) ಅಡಗಿಸಲ್ಪಟ್ಟಿದ್ದಾನೆ. ಈ ಸ್ನೇಹಪೂರ್ಣ (ಘೃತಂ) ತೇಜಸ್ವಿಯಾದ ಆತ್ಮನನ್ನು ದಿವ್ಯ ಗುಣಗಳಾದ ಜನರೇ ಅರಿಯಬಲ್ಲರು; ಪಡೆಯಬಲ್ಲರು."

ಈ ತ್ರಿವಿಧಗುಣಗಳ ಬಲೆಯಲ್ಲಿ ಸಿಲುಕಿ ಒದ್ದಾಡುವವರು ಯಾವಾಗಲೂ ಪರತಂತ್ರರೇ. ಅವರಿಗೆ ಸ್ವಾತಂತ್ರವು ಲಭಿಸಲಾರದು. ಈ ಗುಣಗಳ ಬಂಧನವನ್ನು ಕತ್ತರಿಸಿ ಅದರಾಚೆಗೆ ಹೋದವರು ಸ್ವತಂತ್ರ (ಮುಕ್ತ) ರಾಗಿ, ಸ್ವಾನಂದ ಸುಖವನ್ನು ಅನುಭವಿಸುವರು.

ಮೂರು ಗುಣಗಳ ತಿರುಗಣಿಯಲ್ಲಿ ಸಿಕ್ಕದಿರುವುದೆಂದರೆ ಎಲ್ಲ ಕರ್ಮಗಳನ್ನೆ ತೊರೆಯುವುದೆಂದು ಕೆಲರು ತಪ್ಪು ತಿಳಿದುಕೊಂಡಿದ್ದಾರೆ. ಅಂತರಂಗದಲ್ಲಿ ಅದನ್ನು ಮಾಡಬೇಕು, ಇದನ್ನು ಮಾಡಬೇಕೆಂಬ ಹಂಬಲವು ಬೇಕಾದಷ್ಟು ಇದ್ದರೂ ಅದೆಲ್ಲವನ್ನೂ ಕೃತ್ರಿಮವಾಗಿ ಬಲವಂತದಿಂದ ಹತ್ತಿಕ್ಕಿ ನಿಷ್ಕರ್ಮಿಗಳಾಗಲು ಹೆಣಗಾಡುವರು. ಇದು ಒಂದು ಬಗೆಯ ಅನಾಚಾರ ದಾಂಭಿಕ ವೃತ್ತಿ.

### ದಾಂಭಿಕರು.

(೬) ಇದರಲ್ಲಿ ದಾಂಭಿಕರ ತಿಳಿಗೇಡಿತನದ ನಡೆವಳಿಯನ್ನು ಬಣ್ಣಿಸಲಾಗಿದೆ. ಇವರು ಇಂದ್ರಿಯಗಳ ಹೊರವ್ಯಾಪಾರಗಳನ್ನು ತಡೆದು ಹಿಡಿದು, ತಾವು ಸಾಧುಗಳಂತೆ ತೋರಿಸಿಕೊಳ್ಳುತ್ತಿರುತ್ತಾರೆ. ಆದರೆ ಮನಸಿನಿಂದ ಎಡೆಬಿಡದೆ ವಿಷಯೋಪಭೋಗದ ವಿಚಾರಗಳಲ್ಲಿಯೆ ತೊಡಗಿರುತ್ತಾರೆ. ಅಥವಾ ಇವರ ಮನಸು ಇವರನ್ನು ಲೆಕ್ಕಿಸದೆ ವಿಷಯಗಳ ಕಡೆಗೇ ಓಡುತ್ತಿರುತ್ತದೆ. ಇಂತಹರು ತಾವು ಸಂಯಮಿಗಳೆಂದು ಭ್ರಮಿಸಿ, ಹೆರವರನ್ನೂ ಭ್ರಮೆಯಲ್ಲಿಡಲು ಹವಣಿಸುತ್ತಾರೆ. ಆದರೆ ಇದು ಕೇವಲ ಆತ್ಮವಂಚನೆ; ಲೋಕವಂಚನೆ.

ಆದುದರಿಂದ ಈ ಬಗೆಯ ಸಂಯಮವು ಸಂಯಮವಲ್ಲ. ದಾಂಭಿಕ, ಮಿಥ್ಯಾಚಾರ, ಮೋಸದ ವ್ಯಾಪಾರ. ಹೊರಗೆ ವಿರಕ್ತರಂತೆ ನಟಿಸಿ ಒಳಗೊಳಗೇ ಸುಂದರಿಯರನ್ನು ನೆನೆಯುವವರ ವಿರಕ್ತಿಯು ವಿರಕ್ತಿಯೆ? ಶರೀರದಿಂದ ತಾವು ಪತಿತರಾಗಿಲ್ಲವೆಂದು ಇಂತಹರು ಹೆಮ್ಮೆಬಡಬಹುದು. ಶರೀರವು ವಿಷಯದಿಂದ ದೂರವಿರ-

## (೫) ಅನಾಸಕ್ತಿಯೋಗ.

ಯಸ್ತ್ವಿಂದ್ರಿಯಾಣಿ ಮನಸಾ ನಿಯಮ್ಯಾರಭತೇಽರ್ಜುನ ।
ಕರ್ಮೇಂದ್ರಿಯೈಃ ಕರ್ಮಯೋಗಮಸಕ್ತಃ ಸ ವಿಶಿಷ್ಯತೇ ॥ ೭ ॥

ನಿಯತಂ ಕುರು ಕರ್ಮ ತ್ವಂ ಕರ್ಮ ಜ್ಯಾಯೋ ಹ್ಯಕರ್ಮಣಃ ।
ಶರೀರಯಾತ್ರಾಽಪಿ ಚ ತೇ ನ ಪ್ರಸಿದ್ಧ್ಯೇದಕರ್ಮಣಃ ॥ ೮ ॥

ಯಜ್ಞಾರ್ಥಾತ್ ಕರ್ಮಣೋಽನ್ಯತ್ರ ಲೋಕೋಽಯಂ ಕರ್ಮಬಂಧನಃ ।
ತದರ್ಥಂ ಕರ್ಮ ಕೌಂತೇಯ ಮುಕ್ತಸಂಗಃ ಸಮಾಚರ ॥ ೯ ॥

---

**ಅನ್ವಯ:**—ಹೇ ಅರ್ಜುನ! ಯಃ ತು ಮನಸಾ ಇಂದ್ರಿಯಾಣಿ ಸಂಯಮ್ಯ, ಅಸಕ್ತಃ ಕರ್ಮೇಂದ್ರಿಯೈಃ ಕರ್ಮಯೋಗಂ ಆರಭತೇ, ಸಃ ವಿಶಿಷ್ಯತೇ ॥ ೭ ॥ ತ್ವಂ ನಿಯತಂ ಕರ್ಮ ಕುರು, ಅಕರ್ಮಣಃ ಕರ್ಮ ಜ್ಯಾಯಃ । ತೇ ಶರೀರಯಾತ್ರಾ ಚ ಅಪಿ ಅಕರ್ಮಣಃ ನ ಪ್ರಸಿದ್ಧ್ಯೇತ್ ॥ ೮ ॥ ಯಜ್ಞಾರ್ಥಾತ್ ಕರ್ಮಣಃ ಅನ್ಯತ್ರ ಅಯಂ ಲೋಕಃ ಕರ್ಮಬಂಧನಃ । ಹೇ ಕೌಂತೇಯ! ಮುಕ್ತಸಂಗಃ ಸಮಾಚರ ॥ ೯ ॥

ಎಲೈ ಅರ್ಜುನನೆ! ಮನಸಿನಿಂದ ಇಂದ್ರಿಯಗಳನ್ನು ಅಂಕೆಯಲ್ಲಿ ಇಟ್ಟುಕೊಂಡು ಆಸಕ್ತಿಯಿಲ್ಲದೆ ಕರ್ಮೇಂದ್ರಿಯಗಳಿಂದ ಕರ್ಮಯೋಗವನ್ನು ಆಚರಿಸುವವನು ಶ್ರೇಷ್ಠನೆನಿಸುತ್ತಾನೆ. ॥ ೭ ॥ ಆದುದರಿಂದ ನೀನು ನಿಯತ ಕರ್ಮವನ್ನು ಮಾಡುತ್ತಿರು. ಕರ್ಮಮಾಡದಿರುವುದಕ್ಕಿಂತ, ಕರ್ಮಮಾಡುತ್ತಿರುವುದು ಹೆಚ್ಚು ಲೇಸು. ಕರ್ಮಮಾಡದೆ ನಿನ್ನ ದೇಹವೆ ಬದುಕದು. ॥ ೮ ॥ ಯಜ್ಞಕ್ಕಾಗಿಯಲ್ಲದ ಇನ್ನುಳಿದ ಕರ್ಮಗಳು ಈ ಲೋಕವನ್ನು ಬಂಧಿಸುವುದಕ್ಕೆ ಕಾರಣವಾಗುತ್ತವೆ. ಆದುದರಿಂದ ಎಲೈ ಕುಂತೀಕುಮಾರನೆ! ಆಸಕ್ತಿರಹಿತನಾಗಿ ಯಜ್ಞಕ್ಕಾಗಿ ದುಡಿವವನಾಗು. ॥ ೯ ॥

**ಭಾವಾರ್ಥ:**— ಇಂದ್ರಿಯಗಳನ್ನು ಸ್ವಾಧೀನದಲ್ಲಿರಿಸಿಕೊಂಡು ಕೆಲಸಮಾಡುತ್ತಿರಬೇಕು. ಕರ್ತವ್ಯ (ಕರ್ಮ)ವು ಯಾರಿಗೂ ಬಿಟ್ಟದ್ದಲ್ಲ. ಕೆಲಸಮಾಡದಿರುವುದಕ್ಕಿಂತ ಮಾಡುತ್ತಿರುವುದೇ ಹೆಚ್ಚು ಹಿತಕರ. ಕೆಲಸವಿಲ್ಲದೆ ಯಾರೂ ಬಾಳಲಾರರು. ಯಜ್ಞಕ್ಕಾಗಿ ಮಾಡುವ ಕೆಲಸದಿಂದ ಬಂಧನವಿಲ್ಲ. ಯಜ್ಞಕ್ಕಲ್ಲದ ಕೆಲಸ ತೊಂದರೆಗೆ ಈಡುಮಾಡುವುದು. ಆದುದರಿಂದ ಮನುಷ್ಯನು ಆಸಕ್ತಿರಹಿತನಾಗಿ ಯಜ್ಞಕ್ಕಾಗಿ ಕೆಲಸಮಾಡುತ್ತಿರುವುದೇ ಮೇಲು. ॥ ೭-೯ ॥

---

ಬಹುದು ಆದರೆ ಮನಸಿನಲ್ಲಿಯ ಕಾಮವು ದೇಹದ ಮೇಲೆಯೂ ಎಷ್ಟು ಪರಿಣಾಮವನ್ನು ಮಾಡಬಲ್ಲದೆಂದು ಬೇರೆ ಹೇಳಬೇಕೆ? ಇಂತಹರು ಕನಸಿನಲ್ಲಿಯೆ ತಮ್ಮ ಕಾಮನೆಗಳನ್ನೆಲ್ಲ ತಣಿಸಿಕೊಳ್ಳುವುದುಂಟು! ಇದೇನು ಸಂಯಮವೆ? ಸಂಯಮದ ವಿಡಂಬನೆ ನಿಜವಾದ ಸಂಯಮದಿಂದ ಮನಸು ಪ್ರಸನ್ನವಾಗಬೇಕು. ಚಿತ್ತದಲ್ಲಿ ಅನನುಭೂತ ಶಾಂತಿಯು ತಲೆದೋರಬೇಕು.

### ಇಂದ್ರಿಯ ನಿಗ್ರಹ.

ಹಾಗಾದರೆ, ಪ್ರಯತ್ನದಿಂದ ಇಂದ್ರಿಯಗಳ ನಿಗ್ರಹವನ್ನೇ ಮಾಡಲಾಗದೆ? ಎಂದು ಯಾರಾದರೂ ಪ್ರಶ್ನೆ ಕೇಳಬಹುದು. ಪ್ರಯತ್ನಪೂರ್ವಕವಾಗಿ ಇಂದ್ರಿಯಗಳನ್ನು ಹೇಗೆ ಅಂಕೆಯಲ್ಲಿ ತರಬೇಕೆಂಬುದನ್ನು ಕಲಿಸುವುದೇ ಯೋಗದ ಗುರಿಯಾಗಿದೆ. ಸಿಂಹಾಸನದಲ್ಲಿ ಕುಳ್ಳಿರುವುದು ಮನಸಿನ ಏಕಾಗ್ರತೆಗೆ, ಧ್ಯಾನಧಾರಣೆಗೆ ಅತ್ಯಂತ ಅವಶ್ಯಕವೆಂಬುದನ್ನು ಯಾರೂ ಅಲ್ಲಗಳೆಯಲಾರರು ಆದರೆ ಇದೆಲ್ಲವೂ ಬಾಹ್ಯಕ್ರಿಯೆ. ಹೊರಗಿನ ಹೆಣಗಾಟ. ಒಳಗಣಿಂದ, ಎಂದರೆ ಮನಸಿನಿಂದ ಆರಂಭವಾಗದಿದ್ದರೆ ಇದೆಲ್ಲವೂ ಹುಸಿಯಾಗುವುದು. ಆದುದರಿಂದ ಹೊರಗಿನ ಸಂಯಮದೊಡನೆ ಚಿತ್ತಶುದ್ಧಿಯ ಪ್ರಯತ್ನಗಳೂ ನಡೆಯಬೇಕು.

ಹಠಯೋಗದಿಂದ ದೇಹಶುದ್ಧಿಯಾಗುವಂತೆ, ರಾಜಯೋಗದಿಂದ ಚಿತ್ತಶಾಂತಿಯು ದೊರೆಯುತ್ತದೆ. ಹಠಯೋಗಿಯು ದೇಹದಿಂದ ಮನಸಿನಕಡೆಗೆ ಸಾಗುವನು; ರಾಜಯೋಗಿಯು ಮನಸಿನಿಂದ ದೇಹವನ್ನು ಅಂಕೆ-

ಯಲ್ಲಿಡುವನು. ಚಿತ್ತವು ಪ್ರಸನ್ನ ಗಂಭೀರವಾಗದೆ, ಕೇವಲ ಹೊರಗಿನ ಇಂದ್ರಿಯಗಳನ್ನು ಬಿಗಿದಿಟ್ಟು ಜನರಿಂದ ಸಾಧು-ಸತ್ಪುರುಷರೆಂದು ಹೊಗಳಿಸಿಕೊಳ್ಳುವವರು ಡೊಂಬರಾಟದ ದಾಂಭಿಕರು. ಯಾವ ಕೆಲಸದಲ್ಲಿಯೆ ತೊಡಗಿರಲಿ ಮನಸು ಸುಸ್ಥಿರವಾಗಿರಬೇಕು; ಶಾಂತವಾಗಿರಬೇಕು. ಇದನ್ನು ಸಾಧಿಸಲು ಏನು ಮಾಡಬೇಕೆಂಬುದನ್ನು ಮುಂದಿನ ಶ್ಲೋಕಗಳಲ್ಲಿ ಹೇಳಿದೆ.

### ಕರ್ಮಯೋಗ.

(೭-೯) ಈ ಶ್ಲೋಕಗಳಲ್ಲಿ ಕರ್ಮಯೋಗದ ಮಹತ್ವದ ಕೆಲವು ಸಿದ್ಧಾಂತಗಳ ಉಲ್ಲೇಖವು ಬಂದಿದೆ. ಕರ್ಮಯೋಗದ ಆಚರಣಮಾಡಲಿಚ್ಛಿಸುವವರು ಅವುಗಳನ್ನು ಚೆನ್ನಾಗಿ ಪರ್ಯಾಲೋಚಿಸುವುದರಿಂದ ಆ ದಾರಿಯನ್ನು ಹೇಗೆ ಅನುಸರಿಸಬೇಕೆಂಬುದು ಸರಿಯಾಗಿ ತಿಳಿಯಬಹುದಾಗಿದೆ.

### ನಿಯತಕರ್ಮ.

ಇದಕ್ಕೆ ಎರಡು ಅರ್ಥಗಳಿವೆ: (೧) ಮೊದಲನೆಯ ತೆರನಾಗಿ 'ನಿಯತ' ಶಬ್ದವನ್ನು 'ಕರ್ಮ' ಶಬ್ದದ ವಿಶೇಷಣವೆಂದು ಗ್ರಹಿಸಬಹುದಾಗಿದೆ. (೨) ಅಥವಾ 'ನಿಯತ' ಶಬ್ದವನ್ನು ಕಾಲವಾಚಕವೆಂದು ಇನ್ನೊಂದು ಬಗೆಯಾಗಿ ಅರ್ಥಮಾಡಬಹುದಾಗಿದೆ. ಆ ರೀತಿಯಿಂದ (೧) 'ತ್ವಂ ನಿಯತಂ ಕರ್ಮ ಕುರು' ಎಂದರೆ ನೀನು (ನಿನ್ನ ಸ್ವಭಾವಧರ್ಮಕ್ಕನುಸರಿಸಿ, ನಿನ್ನ ಕರ್ತವ್ಯವಾದ) ಕರ್ಮವನ್ನು ಮಾಡು; ಅಥವಾ (೨) 'ನೀನು ಯಾವಾಗಲೂ ಕರ್ಮಮಾಡುತ್ತಿರು; ಹೀಗೆ ಅರ್ಥಹೇಳಬಹುದು. ಆದರೆ ಇಷ್ಟರಿಂದಲೆ 'ನಿಯತ' ಶಬ್ದದ ಸಂಪೂರ್ಣ ಸ್ವಾರಸ್ಯವು ಗೊತ್ತಾಗದು. ಆದುದರಿಂದ ಇದನ್ನು ಕುರಿತು ಇನ್ನಿಷ್ಟು ವಿವರಣವು ಅವಶ್ಯವಾಗಿದೆ.

**ನಿಯತ—** (೧) ನಿಯತವಾದುದು ಎಂದರೆ ಮೇರೆಯುಳ್ಳದು, ಮರ್ಯಾದಿತವಾಗಿರುವುದು; ತನ್ನ ಕರ್ತವ್ಯವಾಗಿ ಮಾಡಬೇಕಾದುದು; ಬೇಡವೆಂದರೂ ಬಿಟ್ಟುದಲ್ಲ-ತಪ್ಪಿಸಲಿಕ್ಕಾಗುವಂತಹದಲ್ಲ ಬಗೆಯ ಕೆಲಸ; ಆತ್ಮ-ಸಂಯಮದಿಂದ ನಿಶ್ಚಿತವಾಗಿರುವ, ಮೇರೆಯನ್ನು ಮೀರಲಿಕ್ಕೆ ಆಗದ, ಬೆಂಬತ್ತಿರುವ, ವಿಧಿಲಿಖಿತವಾಗಿರುವ, ನಿತ್ಯ, ಸನಾತನ, ಸ್ಥಿರ, ನಿತ್ಯಪ್ರಾಪ್ತ, ಬಿಡಲಿಕ್ಕಾಗದ, ಕಟ್ಟಳೆಗೆ ಅನುಸರಿಸಿದ, ವ್ರತದಂತೆ ಇರುವ ಕೆಲಸ. (೨) ಇನ್ನೊಂದು ತೆರನಾಗಿ ಇದಕ್ಕೆ ಹೀಗೆ ಅರ್ಥವಿದೆ: ಯಾವಾಗಲೂ, ಎಡೆಬಿಡದೆ, ನಿಶ್ಚಯದಿಂದ, ತಪ್ಪದೆ, ಸ್ಥಿರವಾಗಿ, ದೃಢವಾಗಿ, ಅಗತ್ಯವಾಗಿ.

ಎರಡನೆಯ ಅರ್ಥದಂತೆ; ಆನೆಯ ಶ್ಲೋಕದ ಭಾವವು ಹೀಗಿದೆ; (ತ್ವಂ ಕರ್ಮ ನಿಯತಂ ಕುರು) ನೀನು ಎಡೆಬಿಡದೆ ಕೆಲಸಮಾಡುತ್ತಿರು. ಏಕೆಂದರೆ (ಹಿ ಅಕರ್ಮಣಃ ಕರ್ಮ ಜ್ಯಾಯಃ) ಕೆಲಸಮಾಡದೆ ಇರುವುದಕ್ಕಿಂತ ಮಾಡುತ್ತಿರುವುದು ಲೇಸು. ಮೈಗಳ್ಳನಾಗಿರುವುದಕ್ಕಿಂತ ಯಾವಾಗಲೂ ಒಂದಿಲ್ಲೊಂದು ಬಗೆಯ ಕೆಲಸದಲ್ಲಿ ತೊಡಗಿರುವುದು ಹಿತಕರ. (ಅಕರ್ಮಣಃ ತೇ ಶರೀರಯಾತ್ರಾ ಅಪಿ ನ ಪ್ರಸಿದ್ಧ್ಯೇತ್ ೩. ೮.) ಅಕೆಲಸಿಯಾಗಿ ಕುಳಿತರೆ ನಿನ್ನ ಒಡಲು ಅಳಿಯದೆ ಉಳಿಯದು. ನಿನ್ನ ಆರೋಗ್ಯವು ಹಾಳಾಗುವುದು. ಆರೋಗ್ಯವು ಸರಿಯಾಗಿ ಉಳಿಯಬೇಕಾದರೆ ಎಲ್ಲ ಅವಯವಗಳನ್ನೂ ದುಡಿಸಿ ಬಲಪಡಿಸಬೇಕು ಇಲ್ಲವಾದರೆ ಮೈಗಳ್ಳತನದ ಚಟವು ಅಂಟಿಕೊಂಡು ಶಾರೀರಿಕ, ಮಾನಸಿಕ, ಆರ್ಥಿಕ ಹಾನಿಗಳಿಗೆ ಒಳಗಾಗಬೇಕಾಗುವುದು. ಕೆಲಸದಲ್ಲಿ ತೊಡಗಿದ್ದರೆ ಕನಿಷ್ಠ ಒಡಲಚಿಂತೆ (ಶರೀರಯಾತ್ರಾ) ಆದರೂ ತಪ್ಪುವುದು. ಆದುದರಿಂದ ಪ್ರಯತ್ನಶೂನ್ಯನಿಗಿಂತಲೂ ಪ್ರಯತ್ನಶೀಲನು ಮೇಲಾದವನು (ಕರ್ಮ ಜ್ಯಾಯೋಽಹ್ಯಕರ್ಮಣಃ).

### ಐಚ್ಛಿಕ ಮತ್ತು ಸ್ವಾಭಾವಿಕ ಕೆಲಸ.

ಐದನೆಯ ಮಂತ್ರದಲ್ಲಿ ಹೇಳಿರುವುದೇನೆಂದರೆ "ಒಂದರಗಳಿಗೆಯಾದರೂ ಯಾರೂ ಕೆಲಸವಿಲ್ಲದೆ ಇರುವುದು ಸಾಧ್ಯವಿಲ್ಲ. ದೇಹಧರ್ಮವು ಆತನನ್ನು ಒತ್ತಾಯಪಡಿಸಿ ಆವನಿಂದ ಕೆಲಸವನ್ನು ತಕ್ಕೊಳ್ಳುವುದು." ಆದರೆ ಈ ಬಗೆಯಾಗಿ ಒತ್ತಾಯದಿಂದ ಮಾಡುವ ಕೆಲಸದಿಂದ ಅಷ್ಟು ಲಾಭವಿಲ್ಲ. ಸ್ವೇಚ್ಛೆಯಿಂದ ಮಾಡುವ ಕೆಲಸದಿಂದ ಆಗುವ ಆನಂದಾದಿ ಲಾಭಗಳಂತೆ ಒತ್ತಾಯದಿಂದ ಆಗುವ ಕೆಲಸದಲ್ಲಿ ಅಷ್ಟು ಲಾಭವಿಲ್ಲ. ರೈಲಿನಲ್ಲಿ ಕುಳಿತತಪ್ಪಿಗಾಗಿ ಉಗಿಬಂಡಿಯ ಸ್ವಭಾವಧರ್ಮಕ್ಕೆ ಒಳಗಾಗಿ ಒಬ್ಬನು ಕೆಲವೊಂದು ಪ್ರವಾಸಮಾಡಿದ ಲಾಭವನ್ನು ಪಡೆಯುವನು. ಆದರೆ ಅದೇ ಪ್ರವಾಸವನ್ನು ತನ್ನ ಸ್ವೇಚ್ಛೆಯಿಂದ ಮಾಡಿದರೆ! ತಾನೇ ನಡೆದು ನೋಡಿದರೆ! ಒತ್ತಾಯದ ಮೂಲಕ ಆಗುವ ಪ್ರವಾಸಕ್ಕಿಂತಲೂ ಎಷ್ಟೋಪಟ್ಟು ಹೆಚ್ಚಿನ ಲಾಭವನ್ನು ಹೊಂದುವನೆಂಬಲ್ಲಿ ಸಂದೇಹವೆ ಇಲ್ಲ.

ಐದನೆಯ ಮಂತ್ರದಲ್ಲಿ ಶರೀರಧರ್ಮಕ್ಕನುಸರಿಸಿ ಆಗುವ ಕರ್ಮಗಳ ವರ್ಣನೆಯಿದೆ. ಒತ್ತಾಯದ ಕೆಲಸದಕಿಂತಲೂ ಒಲವಿನಿಂದ ಮಾಡುವ ಕೆಲಸವು ಮಿಗಿಲಾದುದೆಂದು ಬೇರೆ ಹೇಳಬೇಕಾಗಿಲ್ಲ. ಯಾವುದೇ

ಕೆಲಸವಾಗಲಿ ಅದರಲ್ಲಿ ಗುಣದೊಡನೆ ಕೆಲವೊಂದು ದೋಷವೂ ಸೇರಿಕೊಂಡಿರುತ್ತದೆ. (ಮೂರನೆಯ ಅ. ೩-೪ ಶ್ಲೋ. ವಿವರಣ ನೋಡು). ಆದುದರಿಂದ ಇನ್ನು ಕೆಲವರು ಯಾವ ಬಗೆಯ ಕರ್ಮವೇ ಬೇಡವೆಂದು ಫಲವನ್ನು ಹೇಳುತ್ತಾರೆ. ಇಂತಹರಿಗೆ ಅವರ ತಿಳಿಗೇಡಿತನದಿಂದ ಎಚ್ಚರಿಸುವುದಕ್ಕಾಗಿ ೬ನೆಯ ಅಧ್ಯಾಯದಲ್ಲಿ ಶ್ರೀಕೃಷ್ಣನು ಒಂದು ಮಾತನ್ನು ಹೇಳಿದ್ದಾನೆ. ಸುಮ್ಮನೆ ಬಾಹ್ಯೇಂದ್ರಿಯಗಳನ್ನು ಬಿಗಿಹಿಡಿದಿಟ್ಟರೆ ಅದು ಸಂಯಮವು ಆಗಲಿಲ್ಲ. ಅದು ಒಂದು ಡೊಂಬವಿದ್ದೆ. 'ಯಾರು ಹೊರಗೆ ಇಂದ್ರಿಯಗಳನ್ನು ಒತ್ತಾಯದಿಂದ ಹಿಡಿದಿಟ್ಟು ಒಳಗೊಳಗೆ ವಿಷಯಸುಖಗಳನ್ನು ಮನಸ್ಸಿನಿಂದ ಧ್ಯಾನಿಸುತ್ತಾರೊ ಅವರಲ್ಲ ಮಿಥ್ಯಾಚಾರಿಗಳೇ ಸರಿ' ಎಂದು ಶ್ರೀಕೃಷ್ಣನು ಸ್ಪಷ್ಟವಾಗಿ ಹೇಳಿದ್ದಾನೆ ಆದುದರಿಂದ. ಕರ್ಮದಿಂದ ಬಿಡುಗಡೆಹೊಂದಬೇಕೆಂಬ ಹುಚ್ಚುಹಂಬಲದಿಂದ ಯಾವದೇ ಬಗೆಯ ಕೆಲಸಮಾಡದೆ ಸುಮ್ಮನೆ ಬಿದ್ದುಕೊಂಡಿರುವ ಫಲವಾದವು ಆತ್ಮಹಾನಿಗೆ ಕಾರಣವಾಗುವುದಲ್ಲದೆ ಸಾಮಾಜಿಕ— ರಾಷ್ಟ್ರೀಯ ಅವನತಿಗೂ ಸಹಾಯಕವಾಗಿದೆ. ಆದಕಾರಣ ಈ ಬಗೆಯ ಮೈಗಳ್ಳತನಕ್ಕಿಂತಲೂ ಒಳ್ಳೆಯ ಕೆಲಸಗಳಲ್ಲಿ ಯಾವಾಗಲೂ ತೊಡಗಿರುವುದು ಸ್ವ-ಪರ ಹಿತಕಾರಿಯಾಗಿದೆ.

ಆದರೆ (**ತ್ವಂ ಕರ್ಮ ನಿಯತಂ ಕುರು**) 'ನೀನು ಯಾವಾಗಲೂ ಕೆಲಸಮಾಡುತ್ತಿರು,' ಎಂದು ಅರ್ಥ ಮಾಡುವುದಕ್ಕಿಂತ 'ನಿಯತ' ಶಬ್ದಕ್ಕೆ ಆ ಮೊದಲು ಸೂಚಿಸಿದ ಅರ್ಥವನ್ನೆ ಗ್ರಹಿಸಿ (ತ್ವಂ ನಿಯತಂ ಕರ್ಮ ಕುರು) "ನೀನು [ಧರ್ಮಶಾಸ್ತ್ರದಂತೆ ನಿನ್ನ ಸಲುವಾಗಿ] ನಿಶ್ಚಿತವಾದ ಕೆಲಸ ಮಾಡು'' ಎಂದು ಹೇಳುವುದೇ ಉಚಿತವಾಗಿದೆ ಇದರಲ್ಲಿ ಎರಡನೆಯ ಅರ್ಥವೂ ಒಳಗೊಳ್ಳುತ್ತದೆ. ಮನುಷ್ಯನಿಗೆ ಕೆಲಸವು ಅತ್ಯವಶ್ಯಕವಾದುದು ಆದುದರಿಂದ ಆತನು ತನ್ನ ನಿಯತ (ಪಾಲಿಗೆ ಬಂದ ನಿಶ್ಚಿತ) ಕೆಲಸವನ್ನು ಜರುಗಿಸಲು ಎಂದೂ ಹಿಂಜರಿಯತಕ್ಕದಲ್ಲ. ಇನ್ನು ನಿಯತ ಕರ್ಮವು ಎಂದರೆ ಯಾವುದು ಎಂಬುದನ್ನು ಸ್ವಲ್ಪ ವಿಚಾರಿಸುವ.

**ನಿಯತ ಕರ್ಮ.**

**'ನಿಯತ ಕರ್ಮ'** ವೆಂಬುದಕ್ಕೆ ಎರಡು ಬಗೆಯಾಗಿ ಅರ್ಥ ಹೇಳಬಹುದು. ಧರ್ಮಶಾಸ್ತ್ರವು ವಿಧಿಸುವ ವರ್ಣಾಶ್ರಮಕ್ಕನುಸರಿಸಿದ ಕರ್ಮವ ಒಂದು ಬಗೆ. ಶಮ, ದಮ, ತಪಾದಿಗಳು ಬ್ರಾಹ್ಮಣನಿಗೆ; ಕಾಳಗದಿಂದ ಓಡಿ ಹೋಗದಿರುವುದೇ ಮೊದಲಾದುದು ಕ್ಷತ್ರಿಯರಿಗೆ; ಕೃಷಿ ಗೋರಕ್ಷಣಾದಿ ವ್ಯಾಪಾರಗಳು ವೈಶ್ಯರಿಗೆ; ಸೇವೆ ಆತ್ತಸವು ಶೂದ್ರರಿಗೆ ಈ ದೃಷ್ಟಿಯಿಂದಲೇ ಶ್ರೀಭಗವದ್ಗೀತೆಯಲ್ಲಿ ಶಾಸ್ತ್ರಪ್ರಮಾಣವನ್ನು ಹೇಳಲಾಗಿದೆ.

**ತಸ್ಮಾತ್ ಶಾಸ್ತ್ರಂ ಪ್ರಮಾಣಂ ತೇ**
**ಕಾರ್ಯಾಕಾರ್ಯವ್ಯವಸ್ಥಿತೌ |**
**ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮ**
**ಕರ್ತುಮಿಹಾರ್ಹಸಿ ||** (೧೬ ೨೪)

ಯಾವುದನ್ನು ಮಾಡಬೇಕು, ಯಾವುದನ್ನು ಬಿಡಬೇಕು ಎಂಬುದು ಸಂದೇಹವುಂಟಾದಾಗ ಶಾಸ್ತ್ರದಲ್ಲಿ ಹೇಳಿದುದನ್ನು ಅನುಸರಿಸಬೇಕು ಅದೇ ಯೋಗ್ಯ. ಇಲ್ಲಿ 'ಶಾಸ್ತ್ರ' ವೆಂದರೆ ಜ್ಞಾನಿಗಳು ಬರೆದ ಧರ್ಮಶಾಸ್ತ್ರ ಗ್ರಂಥಗಳು ಎಂದು ಅರ್ಥವಿದೆ. ಸಾಮಾಜಿಕ ಪರಿಸ್ಥಿತಿಯು ಬದಲಾದಲ್ಲಿ ಆಯಾ ಕಾಲಕ್ಕೆ ಜ್ಞಾನಿಗಳು ತಲೆದೋರಿ ಅವರು ಆ ಕಾಲಕ್ಕೆ ಅನುಗುಣವಾದ ಬದಲಾವಣೆಗಳನ್ನು ಮಾಡುವರು. ಮನಬಂದವರೆಲ್ಲ ತಮಗೆ ತಿಳಿದಂತೆ ಆ ಹೆಚ್ಚುಕಡಿಮೆಗಳನ್ನು ಮಾಡಿಕೊಳ್ಳಲಾಗದು. ಹಾಗಾದಲ್ಲಿ ಸಮಾಜದಲ್ಲಿ ಅವ್ಯವಸ್ಥೆಯು ತಲೆದೋರಿ ಅನಾಚಾರಗಳಿಗೆ ಇಂಬು ದೊರೆಯುವುದು ಜ್ಞಾನಿಗಳು ಹೀಗೆ ಕಾಲಕಾಲಕ್ಕೆ ಸರಿಯಾದ ದಾರಿಯನ್ನು ತೋರಿಸುತ್ತಿರುವ ಸಮಾಜವು ಅವನತಿಗೆ ಹೋಗುವ ಹೆದರಿಕೆಯೆ ಇಲ್ಲ.

ಅರ್ಜುನನಿಗೆ ಶ್ರೀಕೃಷ್ಣನು 'ನಿನಗೆ ಕಾರ್ಯಾಕಾರ್ಯ ವಿಚಾರದಲ್ಲಿ ಶಾಸ್ತ್ರವೇ ಪ್ರಮಾಣವಾಗಿದೆ' ಎಂದು ಹೇಳಿರುವನಷ್ಟೆ. ಅದರ ಅರ್ಥವೇನು? 'ಅರ್ಜುನಾ! ನೀನು ಕ್ಷತ್ರಿಯನು, ಶೌರ್ಯ, ತೇಜ ಧೈರ್ಯ, ದಕ್ಷತೆಗಳನ್ನು ಸಂಪಾದಿಸು. ಧರ್ಮಯುದ್ಧಕ್ಕೆ ಹಿಂಜರಿಯಬೇಡ. ದಾನಿಯಾಗು; ಪ್ರಭುತ್ವವನ್ನು ಪಡೆ" (೧೮. ೪೩), ಎಂಬ ಅದರರ್ಥವು ಇದೆ. ಇವೆಲ್ಲವೂ ಕ್ಷತ್ರಿಯನ 'ನಿಯತ' ಕರ್ಮಗಳು.

**ಶೌರ್ಯಂ ತೇಜೋ ಧೃತಿರ್ದಾಕ್ಷ್ಯಂ**
**ಯುದ್ಧೇ ಚಾಪ್ಯಪಲಾಯನಮ್ |**
**ದಾನಮೀಶ್ವರಭಾವಶ್ಚ ಕ್ಷಾತ್ರಂ ಕರ್ಮ**
**ಸ್ವಭಾವಜಮ್ ||** ೧೮. ೪೩

ವೇದ. ಶಾಸ್ತ್ರಗಳಲ್ಲಿಯೂ ಇದೇ ಬಗೆಯಾದ ವಚನಗಳಿವೆ ವೇದಮಂತ್ರಗಳು ಇಂದ್ರ, ಮರುತ್ ರುದ್ರ ಮೊದಲಾದ ಕ್ಷಾತ್ರದೇವತೆಗಳ ಮಂತ್ರಗಳಲ್ಲಿ ಕ್ಷತ್ರಿಯರ ಕೆಲಸಗಳನ್ನು ಅವರ ನಡೆವಳಿಯ ಬಗೆಯನ್ನು ವಿವರಿಸಿದ್ದಾಗಿವೆ. **ಪುರಾಣಗಳಲ್ಲಿ ಕ್ಷತ್ರಿಯರ ಉಜ್ವಲ**

ಕತೆಗಳಿವೆ. ಅವುಗಳಿಂದಲೂ ಕ್ಷತ್ರಿಯರ ಧರ್ಮವೇನೆಂಬುದು ಗೊತ್ತಾಗುವುದು. ಆಧುನಿಕ ಲೋಕದೊಳಗಿನ ಶ್ರೇಷ್ಠ-ಕ್ಷತ್ರಿಯ ಜೀವನ ಚರಿತೆಗಳನ್ನೂ, ಬಲ್ಲಿದರ ಸದ್ವಿಚಾರಗಳನ್ನೂ ಇವುಗಳೊಡನೆ ಅರಿತುಕೊಳ್ಳಬಹುದು. ಶ್ರುತಿ, ಸ್ಮೃತಿ, ಸದಾಚಾರ, ಮತ್ತು ಆತ್ಮತುಷ್ಟಿ ಇವು ನಾಲ್ಕು ಧರ್ಮದ ಒರೆಗಲ್ಲುಗಳಿವೆ. ಇವುಗಳ ನೆರವಿನಿಂದ ಮನುಷ್ಯನು ತನ್ನ ನಿಯತ ಕರ್ಮವನ್ನು ನಿರ್ಧರಿಸಿಕೊಳ್ಳಬಹುದು.

ಅರ್ಜುನನು ಕ್ಷತ್ರಿಯನು. ಆದುದರಿಂದ ಯುದ್ಧದಿಂದ ಹಿಂದೆಗೆಯದೆ, ಹಗೆಗಳನ್ನು ಎದುರಿಸುವುದೇ ಅವನ ಕರ್ತವ್ಯ; ಎಂದು ಧರ್ಮಶಾಸ್ತ್ರವು ಹೇಳುತ್ತದೆ. ಇದಕ್ಕೆ ವಿಪರೀತವಾಗಿ ನಡೆಯುವುದರಿಂದ ನಿಯತ ಕರ್ಮತ್ಯಾಗ ಮಾಡಿದಂತಾಗಿ ಆತನು ಭಯಂಕರ ಪಾಪಕ್ಕೆ ಗುರಿಯಾಗುತ್ತಿದ್ದಾನೆ. ಈ ಪಾಪದೊಳಗಿಂದ ಆತನು ಮುಕ್ತನಾಗಬೇಕೆಂದೇ ಭಗವಾನ್ ಶ್ರೀಕೃಷ್ಣನು "ಎಲಾ, ಅರ್ಜುನಾ! ನಿಯತ ಕರ್ಮಮಾಡು. ಬೇರೆ ಹೀನ ಕಾರ್ಯಕ್ಕಿಂತ, ಅಥವಾ ನೈಗಳನಾಗಿರುವುದಕ್ಕಿಂತ ನಿಯತ ಕರ್ಮವು ಹಿತಕರ" ಎಂದು ಆಜ್ಞಾಪಿಸಿದ್ದಾನೆ.

ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ
ಕಾಮಕಾರತಃ।
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ
ಪರಾಂಗತಿಂ॥ (೧೬. ೨೩)

ಶಾಸ್ತ್ರವಿಧಿಗಳನ್ನು ಮೀರಿ ಮನಬಂದತೆ, ನಡೆಯುವವರು ಎಂದೂ ಸಿದ್ಧಿಯನ್ನು ಹೊಂದುವುದಿಲ್ಲ. ಅವರಿಗೆ ಸುಖವಿಲ್ಲ ಶ್ರೇಷ್ಠಗತಿ ಇಲ್ಲ, ಎಂದು ನಿಯತ ಕರ್ಮವಿಹೀನರ ಅವಸ್ಥೆಯನ್ನು ವರ್ಣಿಸಿದ್ದಾಗಿದೆ.

ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ
ಲಭತೇ ನರಃ॥ (೪೫)
ಯತಃ ಪ್ರವೃತ್ತಿರ್ಭೂತಾನಾಂ ಯೇನ
ಸರ್ವಮಿದಂ ತತಂ।
ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ
ಮಾನವಃ॥ (೪೬)
ಶ್ರೇಯಾನ್ ಸ್ವಧರ್ಮೋ ವಿಗುಣಃ
ಪರಧರ್ಮಾತ್ ಸ್ವನುಷ್ಠಿತಾತ್।
ಸ್ವಭಾವ ನಿಯತಂ ಕರ್ಮ ಕುರ್ವನ್
ನಾಪ್ನೋತಿ ಕಿಲ್ಬಿಷಂ॥ ೪೭
ಸಹಜಂ ಕರ್ಮ ಕೌಂತೇಯ ಸದೋಷಮಪಿ
ನ ತ್ಯಜೇತ್।
ಸರ್ವಾರಂಭಾ ಹಿ ದೋಷೇಣ
ಧೂಮೇನಾಗ್ನಿರಿವಾವೃತಾಃ॥ ೪೮
ಭ. ಗೀ. ಅಧ್ಯಾ. ೧೮

ತನ್ನ ನಿಯತಕರ್ಮ ಮಾಡುವುದರಿಂದಲೇ ಮನುಷ್ಯನು ಸಿದ್ಧಿಯನ್ನು ಹೊಂದುತ್ತಾನೆ. ಯಾವನಿಂದ ಈ ವಿಶ್ವವು ನಿಂತಿದೆಯೊ, ಮುಂದೆ ಸಾಗಿದೆಯೊ ಆತನನ್ನು ಯಾವನು ತನ್ನ ಕರ್ಮ-ಸುಮನಗಳಿಂದ ಪೂಜಿಸುವನೊ ಅವನೇ ಸಿದ್ಧಿಯನ್ನು ಪಡೆಯುತ್ತಾನೆ. ಪರಧರ್ಮವು ಹಿರಿದೆನಿಸಿದರೂ ಅದಕ್ಕಿಂತಲೂ ಕಡಿಮೆಯೆನಿಸುವ ತನ್ನ ಧರ್ಮವು ಮಿಗಿಲಾದುದು. ಕಲ್ಯಾಣಕಾರಿಯಾದುದು. ತನ್ನ ಸ್ವಭಾವ ಸಹಜವಾದ ಕರ್ಮವನ್ನು ಮಾಡುವ ಮನುಷ್ಯನಿಗೆ ಆ ಕರ್ಮದ ದೋಷವು ತಗಲುವುದಿಲ್ಲ. ಸಹಜಕರ್ಮವು ಸದೋಷವಾಗಿದ್ದರೂ ಅದನ್ನು ತೊರೆಯಲಾಗದು. ಏಕೆಂದರೆ ದೋಷವು ಸೋಂಕದಿರುವ ಕರ್ಮವೇ ಇಲ್ಲ.

### ಸಹಜ ಕರ್ಮ.

"ಸ್ವಕರ್ಮ, ಸ್ವಧರ್ಮ, ಸ್ವಭಾವ-ನಿಯತಕರ್ಮ, ಸಹಜಕರ್ಮ" ಈ ಶಬ್ದಗಳು ನಿಯತ ಕರ್ಮದ ಅರ್ಥವನ್ನು ನಿರ್ಧರಿಸುವದಕ್ಕೆ ಅವಶ್ಯಕವಾದ ಮಾತುಗಳಾಗಿವೆ 'ಹುಟ್ಟಿನೊಡನೆ ಬಂದ ಕರ್ಮ' 'ಸಹಜ-ಕರ್ಮ' 'ಸ-ಭಾವನಿಯತ ಕರ್ಮ' ಎಂದರೂ ಹುಟ್ಟಿನೊಡನೆ ಬಂದ ಕರ್ಮವೇ. ಇವೆರಡೂ ಶಬ್ದಗಳ ಅರ್ಥವು ಸುಮಾರಾಗಿ ಒಂದೇ ಬಗೆಯಾಗಿದೆ ಇಲ್ಲಿ 'ಸ್ವ-ಭಾವ' ಎಂದರೆ ಶೀಲವಲ್ಲ; 'ಸ್ವ-ಜನ್ಮ' ಎಂದಿದೆ. ನಾಲ್ಕೂ ವರ್ಣಗಳಲ್ಲಿ ಹುಟ್ಟಿದವರಿಗೆ ಅವರ ಜನ್ಮದಿಂದ ಪ್ರಾಪ್ತವಾದ ಕರ್ಮವು ಇದೇ ಸ್ವ-ಭಾವ ನಿಯತ ಕರ್ಮವು. ಅರ್ಜುನನಿಗೆ ಕೃಷ್ಣನು ಅನುಸರಿಸಹೇಳಿದ ಸ್ವ-ಧರ್ಮವು ಇದೇ 'ಯುದ್ಧದಲ್ಲಿ ಸ್ಥಿರವಾಗಿ ನಿಂತು ಕಾದು' ಎಂದು ಕೃಷ್ಣನು ಆತನಿಗೆ ಉಪದೇಶಿಸಿದ ಕಾರಣವು ಇದೇ. ಈ ಕರ್ಮವು (ಸದೋಷಂ) ಹಿಂಸಾರೂಪ ದೋಷದಿಂದ ಕೂಡಿದ್ದಾಗಿದ್ದರೂ ಗುಣರಹಿತ (ವಿಗುಣ)ವಾಗಿದ್ದರೂ ಅಥವಾ ಬ್ರಾಹ್ಮಣಾದಿಗಳ ಶಮದಮಾದಿ (ಪರ)ಧರ್ಮದ ಆಚರಣೆಯು ಅನುಸರಿಸಲು ಎಷ್ಟೇ ಸುಕರವಾಗಿದ್ದರೂ ಈತನು (ಅರ್ಜುನನು) ತನ್ನ ಸ್ವಧರ್ಮವನ್ನು ಬಿಡಲಾಗದು. ಆತನು ಯುದ್ಧರೂಪಿಯಾದ ಸ್ವಕರ್ಮದಿಂದಲೇ ಪರಮೇಶ್ವರನನ್ನು ಪೂಜಿಸತಕ್ಕದ್ದು; (ಸ್ವಕರ್ಮಣಾ ತಂ ಅಭ್ಯರ್ಚ್ಯ) ಕರ್ತವ್ಯವಾಗಿದೆ. ಇದರಿಂದಲೇ ಅವನಿಗೆ ಪರಮಸಿದ್ಧಿಯು ಪ್ರಾಪ್ತವಾಗುತ್ತದೆ. ಯುದ್ಧದಿಂದ ದೂರ.

ವಿರುವುದು ಬ್ರಾಹ್ಮಣ ಮತ್ತು ವೈಶ್ಯರಿಗೆ ಅಧರ್ಮ-ವಾಗಲಿಕ್ಕಿಲ್ಲ. ಆದರೆ ಕ್ಷತ್ರಿಯರಿಗೆ ಅದು ಅಧರ್ಮ, ಕರ್ತವ್ಯ-ಚ್ಯುತಿಯೇ ಸರಿ.

'ನಿಯತ ಕರ್ಮ' ಎಂದರೆ 'ಇಂದ್ರಿಯ ಸಂಯಮ' ಪೂರ್ವಕವಾದ ಕರ್ಮ ಎಂದೂ ಆಗಬಹುದು. ಹಾಗಾ-ದಲ್ಲಿ ಈ ಶ್ಲೋಕದ ಅರ್ಥವು ಕೆಳಗಿನಂತಾಗುವುದು.

"ಎಲೈ ಅರ್ಜುನನೇ! ನೀನು (ನಿಯತಂ ಕರ್ಮ ಕುರು) ನಿನ್ನ ಇಂದ್ರಿಯಗಳನ್ನು ಅಂಕೆಯಲ್ಲಿ ಇಟ್ಟು-ಕೊಂಡು ಕೆಲಸ ಮಾಡು. (ಅಕರ್ಮಣಃ ಕರ್ಮ ಜ್ಯಾಯಃ) ಏಕೆಂದರೆ ಅ-ಕೆಲಸಕ್ಕಿಂತಲೂ ಕೆಲಸ ಮಾಡುವುದು ಶ್ರೇಷ್ಠ. ಈ ಅರ್ಥವು ಇಲ್ಲಿ ಸರಿ ಹೋಗುವುದೇ ಎಂಬ ಬಗ್ಗೆ ಸಂದೇಹವಿದೆ. ಏಕೆಂದರೆ ಅರ್ಜುನನು ವನವಾಸಿಯಾಗಿ, ಗಡ್ಡೆ, ಗೆಣಸು ತಿಂದು, ಭಿಕ್ಷಾವೃತ್ತಿಯಿಂದಲೂ ಇದ್ದು, ಶಮದಮಾದಿ ಮಾರ್ಗ-ದಿಂದ ಜೀವಿಸಬೇಕೆಂದು ಹಾರೈಸುತ್ತಿದ್ದನು. ಶ್ರೀ ಕೃಷ್ಣನಿಗೆ ಅರ್ಜುನನ ಈ ಬಗೆಯ ಇಂದ್ರಿಯ ಸಂಯಮ ಪೂರ್ವಕವಾದ ಕರ್ಮವು ಬೇಡವಾಗಿತ್ತು. ಅರ್ಜುನನ ಈ ಬಗೆಯ ಅಪೇಕ್ಷೆಗೆ ವಿರೋಧಿಸಿ, ಇದು ಅವಿಚಾರ, ಅನಾಚಾರ, ಅಧರ್ಮ ಎಂದೇ ಹೇಳಿದನು. ಸ್ವಧರ್ಮ-ವನ್ನು ಅನುಸರಿಸಲು ಒತ್ತಾಯ ಪಡಿಸಿದನು.

### ಪರಿಸ್ಥಿತಿಯಿಂದ ಪ್ರಾಪ್ತವಾದ ಕರ್ತವ್ಯ.

'ನಿಯತ ಕರ್ಮವೆಂದರೆ ಪರಿಸ್ಥಿತಿಯಿಂದ ಪ್ರಾಪ್ತ-ವಾದ ಕರ್ಮವೆಂದೂ ಅರ್ಥವಾಗುವಂತಿದೆ. ರಾಷ್ಟ್ರದ ಪರಿಸ್ಥಿತಿಯು ಬದಲಾದಾಗ ದೇಶಕಾಲವಾನಸಕ್ಕನು-ಸರಿಸಿ ಕೆಲವೊಂದು ವಿಶೇಷ ಕರ್ತವ್ಯವು ಪ್ರತಿಯೊಬ್ಬರ ಪಾಲಿಗೆ ಬರುತ್ತದೆ. ದೇಶವು ಪರಕೀಯರ ಅಂಕೆಯಲ್ಲಿ ಸಿಕ್ಕು ಕುತ್ತಿಗೆ ಈಡಾದಾಗ ಅದನ್ನು ಉದ್ಧರಿಸುವ ಕೆಲಸವು ಕ್ಷತ್ರಿಯರೊಬ್ಬರದೇ ಆಗುವದಿಲ್ಲ. ಉಳಿ-ದವರೂ, ಸ್ವಯಂಸೇವಕರಾಗಿ ಸ್ವಯಂಪ್ರೇರಣೆಯಿಂದ ರಾಷ್ಟ್ರೋದ್ಧಾರಕ್ಕೆ ಮುಂದುವರಿಕೆಯಾಗಬೇಕಾಗು-ತ್ತದೆ. ಮನುವು ಈ ಮಾತನ್ನೇ ಹೇಳಿದ್ದಾನೆ.

ಶಸ್ತ್ರಂ ದ್ವಿಜಾತಿಭಿರ್ಗ್ರಾಹ್ಯಂ ಧರ್ಮೋ
ಯತ್ರೋಪರುಧ್ಯತೇ ।
ದ್ವಿಜಾತೀನಾಂ ಚ ವರ್ಣಾನಾಂ ವಿಪ್ಲವೇ
ಕಾಲಕಾರಿತೇ ॥ ೩೪೮
ಆತ್ಮನಶ್ಚ ಪರಿತ್ರಾಣೇ ದಕ್ಷಿಣಾನಾಂ ಚ
ಸಂಗರೇ ।
ಸ್ತ್ರೀ ವಿಪ್ರಾಭ್ಯುಪಪತ್ತೌ ಚ ಘ್ನಂಧರ್ಮೇಣ
ನದುಷ್ಯತಿ ॥ ೩೪೯
ಆತತಾಯಿ ನ ಮಾಯಾಂತಂ
ಹನ್ಯಾದೇವಾವಿಚಾರಯನ್ ।
ನಾತತಾಯಿವಧೇ ದೋಷೋ ಹಂತುರ್ಭವತಿ
ಕಶ್ಚನ ॥ ೩೫೦

"ಧರ್ಮವು ಗಂಡಾಂತರದಲ್ಲಿದ್ದಾಗ ದ್ವಿಜರೆಲ್ಲರು ಶಸ್ತ್ರಧಾರಿಗಳಾಗಿ ಯುದ್ಧಕ್ಕೆ ಅನುವಾಗಬೇಕು. ಲೋಕವು ವಿಪತ್ತಿಗೀಡಾದಾಗ, ಬದುಕಬಹುದೋ ಇಲ್ಲವೊ ಎಂಬ ಸಂದೇಹವುಂಟಾದಾಗ, ಎದುರಿಸಿ, ಹೋರಾಡುವದು ಪ್ರತಿಯೊಬ್ಬರ ಕರ್ತವ್ಯವಾಗಿದೆ. ಹೆಣ್ಣುಮಕ್ಕಳು ಮತ್ತು ವಿದ್ವಾಂಸರು ಪೀಡೆಗೆ ಗುರಿಯಾಗುತ್ತಿದ್ದರೆ ಅವರನ್ನು ಕಾಪಾಡಲು ಪ್ರತಿ-ಯೊಬ್ಬರು ಶಸ್ತ್ರವನ್ನು ಹಿಡಿಯಲೇಬೇಕು. ಆತತಾಯಿ-ಗಳ ಕೊಲೆಮಾಡಲು ಪ್ರತಿಯೊಬ್ಬರಿಗೆ ಅಧಿಕಾರವಿದೆ. ಆತತಾಯಿಗಳನ್ನು ಕೊಲ್ಲುವುದರಿಂದ ಪಾಪವಿಲ್ಲ. ರಾಷ್ಟ್ರವು ಸಂಕಟದಲ್ಲಿದ್ದಾಗ ಅದಕ್ಕಾಗಿ ಕಾದಲು ಪ್ರತಿಯೊಬ್ಬನು ಸಿದ್ಧನಾಗಬೇಕಾಗುತ್ತದೆ. ಇದು ವಿಶಿಷ್ಟ ಪರಿಸ್ಥಿತಿಯ ಮೂಲಕ ಪ್ರಾಪ್ತವಾದ "ನಿಯತ-ಕರ್ಮವು"

ಆದರೆ ಅರ್ಜುನನಿಗೆ ಈ ಬಗೆಯ ಯಾವ ಪರಿಸ್ಥಿತಿಯು ಪ್ರಾಪ್ತವಾಗಿದ್ದಿಲ್ಲ. ಇದು ಅವನ ಕೈಕೊಂಡ ಕ್ಷತ್ರಿಯ ವೃತ್ತಿಗೆ ಅನುಗುಣವಾದ ಪ್ರಾಪ್ತ ಕರ್ಮವು. ಆದುದ-ರಿಂದ ಅರ್ಜುನನ ಮಟ್ಟಿಗೆ ಇದು ಸಹಜಕರ್ಮವು.

ಒಬ್ಬನು ಯಾವುದೊಂದು ವಿಶಿಷ್ಟ ಅಧಿಕಾರಸ್ಥಾನದಲ್ಲಿ ಇದ್ದರೆ ಆ ಸ್ಥಾನದ ಮೂಲಕವಾಗಿ ಆತನಿಗೆ ಕೆಲವೊಂದು ವಿಶೇಷ ಕೆಲಸಗಳನ್ನು ಮಾಡಲೇಬೇಕಾತ್ತದೆ. ಅವನ್ನು ಬಿಡಲು ಬರುವದಿಲ್ಲ. ಇವು ಇಂತಹರ 'ನಿಯತ ಕರ್ಮವು.'

### ಕೆಲಸಿಗ ಮತ್ತು ಕೆಲಸಾಳಿ

'ಕೆಲಸಿಗನಾಗುವುದಕ್ಕಿಂತ ಕೆಲಸಾಳಿಯಾಗುವುದು ಮಿಗಿಲು' (ಅಕರ್ಮಣಃ ಕರ್ಮ ಜ್ಯಾಯಃ) ಮೈಗಳ್ಳ-ತನಕ್ಕಿಂತ ಮೈಮುರಿದು ದುಡಿಯುವದು ಹಿತಕರ, ಅಕೆಲಸಿಯಾಗುವದಕ್ಕಿಂತ ಕೆಲಸಾಳಿಯಾಗಿರುವುದು ಒಳಿತು. ಇಲ್ಲಿ 'ಅಕರ್ಮ' ಎಂದರೆ ಕೆಲಸಮಾಡದೆ ಇರುವುದು, ಮೈಗಳ್ಳತನಮಾಡುವದು. ಇನ್ನೊಂದೆಡೆಗೆ ಅಕರ್ಮವೆಂದರೆ ದೋಷರಹಿತವಾದ ಕರ್ಮ ಎಂಬ ಅರ್ಥವು ಉಂಟು. ಆ ವಿಚಾರವಾಗಿ ಮುಂದೆ ವಿವರಿ-ಸುವೆವು. ಇಲ್ಲಿ ಮೈಗಳ್ಳತನ ಎಂದಿಷ್ಟೇ ಅರ್ಥವುಂಟು. ಈ ಶ್ಲೋಕದಲ್ಲಿಯೇ (ಶರೀರಯಾತ್ರಾಪಿ ಚ ತೇ ನ ಪ್ರಸಿಧ್ಯೇದಕರ್ಮಣಃ) ಮೈಗಳ್ಳತನದಿಂದ ನಿನ್ನ ಶರೀರ ಧಾರಣೆಯು ಆಗಲಾರದು. ಹೊಟ್ಟೆ ಹೊರಕೊಳ್ಳುವುದ-

ಕ್ಕಾದರೂ ಮನುಷ್ಯನು ದುಡಿಯಲೇಬೇಕು. ಆದುದರಿಂದಲೇ ಮೈಗಳ್ಳತನವೆಂಬುದು ಮಹಾರೋಗ. ದುಡಿಯುವ ಹುಮ್ಮಸವು ಕಡಿಮೆಯಾದಾಗ ಮನುಷ್ಯನಿಗೆ ಅನಾರೋಗ್ಯವುಂಟಾಗಿದೆ ಎಂದು ತಿಳಿಯಬೇಕು. ಹುಮ್ಮಸವುಳ್ಳವನು ಆರೋಗ್ಯವಂತನಾಗಿದ್ದು ಕೆಲಸದ ಹಂಬಲವು ಅವನಿಗೆ ಯಾವಾಗಲೂ ಇರುತ್ತದೆ. ಇನ್ನು ಈ ಕೆಲಸವನ್ನು ಹೇಗೆ ಮಾಡಬೇಕು ಎಂಬುದು ಒಂದು ಮಹತ್ವದ ವಿಷಯ. ಅದನ್ನು ಗೀತೆಯ ಏಳನೆಯ ಶ್ಲೋಕದಲ್ಲಿ ಹೇಳಿದೆ.

### ಶ್ರೇಷ್ಠರ ರೀತಿ

೧. "ಮನಸಾ ಇಂದ್ರಿಯಾಣಿ ಸಂಯಮ್ಯ" ಮನಸಿನಿಂದ ಇಂದ್ರಿಯಗಳ ಸಂಯಮಮಾಡಬೇಕು. ಮತ್ತು

೨. "ಅಸಕ್ತಃ ಕರ್ಮೇಂದ್ರಿಯೈಃ ಕರ್ಮಯೋಗಂ ಆರಭತೇ" ಆಸಕ್ತಿ ಇಲ್ಲದೆ ಕರ್ಮೇಂದ್ರಿಯಗಳಿಂದ ಕರ್ಮಯೋಗವನ್ನು ಆಚರಿಸಬೇಕು.

೩. "ಸಃ ವಿಶಿಷ್ಯತೇ" ಹೀಗೆ ಕರ್ಮಯೋಗಿಯಾದವನು ಶ್ರೇಷ್ಠ ಮನುಷ್ಯನು

ಇಲ್ಲಿ ಶ್ರೇಷ್ಠ ಮನುಷ್ಯನ ಕೆಲಸದ ಬಗೆಯನ್ನು ವಿವರಿಸಿದ್ದಾಗಿದೆ. ಈ ಲೋಕದಲ್ಲಿ ನಮಗೆ ಮೂರು ಬಗೆಯ ಜನರು ಕಾಣಿಸಿಕೊಳ್ಳುತ್ತಾರೆ.

(೧) ಶ್ರೇಷ್ಠರು— ತಮ್ಮ ಇಂದ್ರಿಯಗಳನ್ನು ಅಂಕೆಯಲ್ಲಿ ಇಟ್ಟುಕೊಂಡು ಆಸಕ್ತಿರಹಿತರಾಗಿ ತಮ್ಮ ಪಾಲಿನ ಕರ್ತವ್ಯವನ್ನು ಉತ್ತಮ ರೀತಿಯಿಂದ ಕೊನೆಗಾಣಿಸಲು ಹವಣಿಸುತ್ತಾರೆ.

(೨) ಮಧ್ಯಮರು— ಇಂದ್ರಿಯ ದಮನವು ವಿಶೇಷವಾಗಿರುವುದಿಲ್ಲ. ಆದರೂ ಧರ್ಮಾನುಕೂಲವಾದ ಸಕಾಮಕರ್ಮಿಗಳು.

(೩) ಕಿರುಕುಳರು— ವಿಷಯವಾಸನೆಯಲ್ಲಿ ಇವರ ಮನಸ್ಸು ಯಾವಾಗಲೂ ತೊಡಕಿಕೊಂಡಿರುತ್ತದೆ. ಭ್ರಂಗವೃತ್ತಿಯವರಾಗಿ ನಾನಾಭೋಗಗಳ ಆಶೆಯಿಂದ ಸ್ವೈರಾಚಾರಿಗಳಾಗಿರುತ್ತಾರೆ. ಇಲ್ಲವೆ ತೀರ ಮೈಗಳ್ಳರಾಗ ಏನನ್ನೂ ಮಾಡದೆ ಸುಮ್ಮನೆ ಬಿದ್ದುಕೊಳ್ಳುವುದರಲ್ಲಿಯೇ ಸಂತುಷ್ಟರಾಗಿರುತ್ತಾರೆ.

ಮನುಷ್ಯನು ತನಗೆ ಇದ್ದುದರಲ್ಲಿಯೇ ಸಮಾಧಾನ ಹಚ್ಚಿಕೊಂಡು, ಮಧ್ಯಮ ತರಗತಿಯ ಅಥವಾ ಕಿರುಕುಳದ ವರ್ಗದಲ್ಲಿ ಸೇರುವುದು ಆತನೊಳಗಿನ ಆತ್ಮಶಕ್ತಿಗೆ ಅಪಮಾನವು. ಪ್ರಯತ್ನಪೂರ್ವಕವಾಗಿ, ದುಡಿದು ತನ್ನ ಆತ್ಮತೇಜಸ್ಸನ್ನು ವಿಕಸನಗೊಳಿಸುವ ಯಾವುದೊಂದು ಕಾರ್ಯದಲ್ಲಿ ನಿರತನಾಗಿರುವುದು ಲೇಸು. ಇದರಿಂದಲೇ ಆತನಿಗೆ ಪರಮ ಪದವಿಯು ದೊರೆಯುವುದು; ಶ್ರೇಷ್ಠನೆನಿಸುವನು. ಅವನನ್ನು ಈ ಪದಕ್ಕೆ ಒಯ್ಯುವ ದಾರಿಯ ಹೆಸರೇ ಅನಾಸಕ್ತಿಯೋಗ ಅಥವಾ ಕರ್ಮಯೋಗ.

### ಸಂಯಮ ಶಕ್ತಿ.

ಈ ಅನಾಸಕ್ತ ಕರ್ಮಯೋಗವನ್ನು ಆಚರಿಸುವಾಗ ಇಂದ್ರಿಯಗಳ ಸಂಯಮವು ಮೊದಲನೆಯ ಅವಶ್ಯಕ ಸಂಗತಿ. ಎಲ್ಲ ಇಂದ್ರಿಯಗಳನ್ನು ಮನಸಿನಿಂದ ಅಂಕೆಯಲ್ಲಿ ಇರಿಸಿಕೊಳ್ಳಬೇಕು. (ಮನಸಾ ಇಂದ್ರಿಯಾಣಿ ಸಂಯಮ್ಯ). ಮತ್ತು ಕರ್ಮೇಂದ್ರಿಯಗಳಿಂದ ಆಸಕ್ತಿರಹಿತನಾಗಿ ಕೆಲಸಗಳನ್ನು ಮಾಡಿಸಿಕೊಳ್ಳಬೇಕು. (ಇದರ ವಿವರಣೆಯು ೨ನೆಯ ಅಧ್ಯಾಯದ ೪೭-೫೧ ವರೆಗಿನ ಶ್ಲೋಕಗಳಲ್ಲಿ ಬಂದಿದೆ). ಆಸಕ್ತಿ ಇಲ್ಲದೆ ಸಿದ್ಧಿ ಅಥವಾ ಅಸಿದ್ಧಿಯ ವಿಷಯದಲ್ಲಿ ಸಮಬುದ್ಧಿಯನ್ನಿಟ್ಟು ಸ್ಥಿರವಾಗಿ ಕಾರ್ಯರತನಾಗುವುದೇ ಸಮತ್ವಯೋಗವೆಂದೆನಿಸುತ್ತದೆ ಕರ್ಮದಲ್ಲಿಯ ಕೌಶಲ್ಯವೆಂದರೆ ಇದೇ. ತಿಳಿದವರು ಕರ್ತವ್ಯ ಬುದ್ಧಿಯಿಂದ ಗೆಲವು ಸೋಲುಗಳ ಆಸೆ ಇಲ್ಲದೆ ತಮ್ಮ ಕೆಲಸಗಳನ್ನು ನೆರವೇರಿಸುತ್ತಾರೆ. ಫಲದ ಆಶೆಯನ್ನು ಬಿಟ್ಟು ಅದನ್ನು (ಫಲವನ್ನು) ಸರ್ವಗತ ಪರಮಾತ್ಮನಿಗೆ ಅರ್ಪಿಸುತ್ತಾರೆ. ಅದರಿಂದ, ಇಂತಹರು ಸುಖದುಃಖಗಳ ಬಲೆಯಲ್ಲಿ ಸಿಲುಕುವುದಿಲ್ಲ.

ಕರ್ಮದ ಫಲವನ್ನು ತನ್ನ ಉಪಭೋಗಕ್ಕಾಗಿಯೇ ಆಶಿಸುವುದು ಕ್ಷುಲ್ಲಕಸ್ವಾರ್ಥವು. ಆದುದರಿಂದ ಅದನ್ನು ಹೆಚ್ಚಿನದರಲ್ಲಿ ಹೆಚ್ಚು ಜನರಿಗೆ ಅರ್ಪಿಸುವುದೇ ಪರಮಾರ್ಥವು ಇದಕ್ಕೆ ಕರ್ಮಫಲದ ದಾನವೆಂದು ಹೆಸರು. 'ಅನಾಸಕ್ತಿ' ಅಥವಾ 'ನಿಷ್ಕಾಮ ಕರ್ಮಯೋಗ' ವೆಂದರೂ ಇದೇ. ಮನುಷ್ಯನನ್ನು ಉನ್ನತಸ್ಥಿತಿಗೆ ಒಯ್ಯುವ ಪರಮ ಪದವನ್ನು ಕೊಡುವ ಕರ್ಮಯೋಗವು ಇದೇ ಆಗಿದೆ.

### ಕರ್ಮಯೋಗ

(ಯಜ್ಞಾರ್ಥಾತ್ ಕರ್ಮಣಃ ಅನ್ಯತ್ರ ಅಯಂ ಲೋಕಃ ಕರ್ಮ ಬಂಧನಃ) ಯಜ್ಞಕ್ಕಾಗಿ ಮಾಡಿದ ಕೆಲಸದ ಬಂಧನವು ಮನುಷ್ಯನಿಗೆ ಇಲ್ಲ. ಉಳಿದವುಗಳು ಅವನ ಪ್ರಗತಿಗೆ ಕಾಲ್ತೊಡಕಾಗುವುವು. ಆದ್ದರಿಂದ (ತದರ್ಥಂ ಕರ್ಮ ಮುಕ್ತ ಸಂಗಃ ಸಮಾಚರ) ಆಸಕ್ತಿರಹಿತನಾಗಿ ಯಜ್ಞಕ್ಕಾಗಿ ಕರ್ಮಮಾಡು. ಏಕೆಂದರೆ ಅದು ಬಂಧನಕಾರವಲ್ಲ. ನೀನು ಬಂಧ-

## (೬) ಸಹಯಜ್ಞ.

ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ ಪುರೋವಾಚ ಪ್ರಜಾಪತಿಃ ।
ಅನೇನ ಪ್ರಸವಿಷ್ಯಧ್ವಮೇಷ ವೋಽಸ್ತ್ವಿಷ್ಟಕಾಮಧುಕ್ ॥ ೧೦ ॥
ದೇವಾನ್ ಭಾವಯತಾನೇನ ತೇ ದೇವಾ ಭಾವಯಂತು ವಃ ।
ಪರಸ್ಪರಂ ಭಾವಯಂತಃ ಶ್ರೇಯಃ ಪರಮವಾಪ್ಸ್ಯಥ ॥ ೧೧ ॥
ಇಷ್ಟಾನ್ ಭೋಗಾನ್ ಹಿ ವೋ ದೇವಾ ದಾಸ್ಯಂತೇ ಯಜ್ಞಭಾವಿತಾಃ ।
ತೈರ್ದತ್ತಾನಪ್ರದಾಯೈಭ್ಯೋ ಯೋ ಭುಂಕ್ತೇ ಸ್ತೇನ ಏವ ಸಃ ॥ ೧೨ ॥
ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ ಸರ್ವಕಿಲ್ಬಿಷೈಃ ।
ಭುಂಜತೇ ತೇ ತ್ವಘಂ ಪಾಪಾ ಯೇ ಪಚಂತ್ಯಾತ್ಮಕಾರಣಾತ್ ॥ ೧೩ ॥

**ಅನ್ವಯ :—** ಪುರಾ ಪ್ರಜಾಪತಿಃ ಸಹಯಜ್ಞಾಃ ಪ್ರಜಾಃ ಸೃಷ್ಟ್ವಾ "ಅನೇನ ಯೂಯಂ ಪ್ರಸವಿಷ್ಯಧ್ವಂ; ಏಷಃ ವಃ ಇಷ್ಟಕಾಮಧುಕ್ ಅಸ್ತು" ಇತಿ ಉವಾಚ ॥ ೧೦ ॥ ಅನೇನ (ಯೂಯಂ) ದೇವಾನ್ ಭಾವಯತ; ತೇ ದೇವಾಃ ವಃ ಭಾವಯಂತು; (ಏವಂ) ಪರಸ್ಪರಂ ಭಾವಯಂತಃ ಪರಂ ಶ್ರೇಯಃ ಅವಾಪ್ಸ್ಯಥ ॥ ೧೧ ॥ ಯಜ್ಞಭಾವಿತಾಃ ದೇವಾಃ ವಃ ಇಷ್ಟಾನ್ ಭೋಗಾನ್ ದಾಸ್ಯಂತೇ । ತೈಃ ದತ್ತಾನ್ ಏಭ್ಯಃ ಅಪ್ರದಾಯ, ಯಃ ಭುಂಕ್ತೇ, ಸಃ ಸ್ತೇನಃ ಏವ ॥ ೧೨ ॥ ಯಜ್ಞಶಿಷ್ಟಾಶಿನಃ ಸಂತಃ ಸರ್ವಕಿಲ್ಬಿಷೈಃ ಮುಚ್ಯಂತೇ । ಯೇ ತು ಆತ್ಮಕಾರಣಾತ್ ಪಚಂತಿ, ತೇ ಪಾಪಾಃ ಅಘಂ ಭುಂಜತೇ ॥ ೧೩ ॥

ಸೃಷ್ಟಿಯ ಮೊದಲಲ್ಲಿ ಪ್ರಜಾಪತಿ ಬ್ರಹ್ಮದೇವನು ಯಜ್ಞದೊಡನೆ ಲೋಕವನ್ನು ಹುಟ್ಟಿಸಿದನು. "ಈ ಯಜ್ಞದಿಂದ ನಿಮ್ಮ ಏಳ್ಗೆಯಾಗಲಿ ಈ ಯಜ್ಞವು (ಬೇಳ್ವೆಯು) ನಿಮ್ಮ ಬೇಡಿಕೆಗಳನ್ನು ಪೂರ್ಣ ಮಾಡಲಿ" ಎಂದನು ॥ ೧೦ ॥ ಈ ಯಜ್ಞದಿಂದ ನೀವು ದೇವರನ್ನು ಸಂತೋಷಗೊಳಿಸಿರಿ, ದೇವರು ನಿಮ್ಮನ್ನು ಸಂತೋಷಗೊಳಿಸಲಿ. ಹೀಗೆ ಒಬ್ಬರು ಒಬ್ಬರನ್ನು ಸಂತೋಷಗೊಳಿಸಿ, ಪರಮ ಶ್ರೇಷ್ಠತೆಯನ್ನು ಪಡೆಯಿರಿ. ॥ ೧೧ ॥ ಯಜ್ಞದಿಂದ ಸಂತುಷ್ಟರಾದ ದೇವರು ನಿಮಗೆ ಬೇಡಿದುದನ್ನು ಕೊಡುವರು. ದೇವರು ಕೊಟ್ಟದ್ದರಲ್ಲಿ ಅವರಿಗೆ ಏನೂ ಕೊಡದೆ, ತಾನೆ ಉಪಭೋಗಿಸುವವನು ನಿಜವಾಗಿಯೂ ಕಳ್ಳನೇ ಸರಿ. ॥ ೧೨ ॥ ಯಜ್ಞಮಾಡಿ ಉಳಿದ ಅಂಶವನ್ನು ಉಪಭೋಗಿಸುವ ಸಜ್ಜನರು ಎಲ್ಲ ಪಾಪಗಳಿಂದಲೂ ಮುಕ್ತರಾಗುತ್ತಾರೆ. ಆದರೆ ಕೇವಲ ತನ್ನ ಸಲುವಾಗಿಯೇ ಅನ್ನವನ್ನು ಬೇಯಿಸುವ ಪಾಪಿಯು ಪಾಪವನ್ನೇ ತಿನ್ನುತ್ತಾನೆ ॥ ೧೩ ॥

**ಭಾವಾರ್ಥ :—** ದೇವರು ಪ್ರಜೆಗಳನ್ನು ಯಜ್ಞದೊಡನೆಯೆ ಹುಟ್ಟಿಸಿದನು. ಮತ್ತು ಯಜ್ಞ ಮಾಡುವವರೇ ಎಂದರೆ ಬೇಳ್ವೆಯುವವರೇ ಪಡೆಯಬೇಕು ಏಳ್ಗೆ ಹೊಂದಬೇಕು ಎಂಬುವಂತೆ ಈ ಲೋಕವನ್ನು ವಿರಚಿಸಿದ್ದಾನೆ. ಯಜ್ಞ ಮಾಡದವರು ಏಳ್ಗೆಹೊಂದಲಾರರು. ಯಜ್ಞದಿಂದ ದೇವರು ಸಂತುಷ್ಟನಾಗಿ ಮರಳಿ ಮನುಷ್ಯರಿಗೆ ಸಂತೋಷವನ್ನೀಯುತ್ತಾನೆ ಹೀಗೆ, ಒಬ್ಬರು ಇನ್ನೊಬ್ಬರಿಗೆ ನೆರವಾದಲ್ಲಿ ಎಲ್ಲರ ಏಳ್ಗೆಯಾಗುವದರಲ್ಲಿ ಸಂದೇಹವಿಲ್ಲ. ಯಜ್ಞದಿಂದ ಸಂತುಷ್ಟನಾದ ದೇವರು ಮನುಷ್ಯರಿಗೆ ಸುಖೋಪಭೋಗಗಳನ್ನು ದಯಪಾಲಿಸುವದು ನಿಜ. ಆದರೆ ಆ ಸುಖೋಪಭೋಗದ ಕೆಲವೊಂದು ಅಂಶವನ್ನಾದರೂ ಮತ್ತೆ ಆತನು ಶ್ರದ್ಧೆಯಿಂದ ದೇವರಿಗೆ ಅರ್ಪಿಸದಿದ್ದರೆ, ಹಾಗೂ ತನ್ನ ಸಲುವಾಗಿಯೇ ಎಲ್ಲವನ್ನು ಸಂಗ್ರಹಿಸಿದರೆ ಆವನು ಕಳ್ಳನೆನಿಸುವನು. ಯಜ್ಞಮಾಡಿ ಉಳಿದುದನ್ನು ಉಪಭೋಗಿಸುವವರು ಪುಣ್ಯವಂತರಾಗುತ್ತಾರೆ. ಆದರೆ ತಮ್ಮ ಸ್ವಂತದ ಸುಖೋಪಭೋಗಗಳಿಗೆ ಎಲ್ಲವನ್ನೂ ಬಳಸುವವರು ಪಾಪಭಾಜನರಾಗಿ ಅವನತಿಯನ್ನು ಹೊಂದುತ್ತಾರೆ. (೧೦-೧೩)

ವಮುಕ್ತನಾಗುವೆ. ಯಜ್ಞಕ್ಕಲ್ಲದ ಬೇರೆ ಸ್ವಾರ್ಥಯುಕ್ತ ಕರ್ಮವು ಮನುಷ್ಯನ ಹಾನಿಗೆ ಕಾರಣವಾಗುತ್ತದೆ. ಇಲ್ಲಿ ಯಜ್ಞವೆಂದರೆ ಕೇವಲ ಹೋಮ ಹವನವಲ್ಲ. (ಭಗೀ. ಅಧ್ಯಾಯಗಳು ಶ್ಲೋ. ೨೫. ೩೨). ಯಜ್ಞಗಳು ಹಲವು ವಿಧವಾಗಿವೆ. ಇಂದ್ರಿಯ ದಮನ ಯಜ್ಞ, ದ್ರವ್ಯಯಜ್ಞ, ತಪೋಯಜ್ಞ, ಯೋಗಯಜ್ಞ, ಸ್ವಾಧ್ಯಾಯ ಯಜ್ಞ, ಜ್ಞಾನಯಜ್ಞ ಮೊದಲಾದವು ಯಜ್ಞದ ಪ್ರಕಾರಗಳು. ಹೋಮ ಹವನಗಳು ಯಜ್ಞದ, ಒಂದು ಪ್ರಕಾರ ನಿಜವಾಗಿ ನೋಡಿದರೆ, ಮಾನವ ಇಡೀ ಜೀವನವೇ ಒಂದು ಯಜ್ಞಮಯವಾಗಿದೆ. ಊಟ ಉಡಿಗೆ, ಮಾತು ಕತೆ, ಮಲಗುವುದು, ಏಳುವದು ಇವೆಲ್ಲವೂ ಯಜ್ಞರೂಪವೇ. ಎಂದು ಗೀತೆಯ ಆಶಯವಾಗಿದೆ.

'ಯಜ್'' ಧಾತುವಿಗೆ ಮೂರು ಅರ್ಥಗಳುಂಟು. ದೇವಪೂಜೆ, ಸಂಗತಿಕರಣ, ಮತ್ತು ದಾನ. ಅಭಯ, ಸಾವಿತ್ರ್ಯ, ಜ್ಞಾನನಿಷ್ಠೆ, ದಾನ, ಶಮ, ದಮ, ಸ್ವಾಧ್ಯಾಯ, ತಪ, ಸರಲತೆ, ಅಹಿಂಸೆ, ಸತ್ಯ, ಅಕ್ರೋಧ, ಶಾಂತಿ, ಭೂತದಯೆ, ನಿರ್ಲೋಭವೃತ್ತಿ ಮೊದಲಾದ ದಿವ್ಯವಾದ ಗುಣಗಳ ಆರಾಧನೆಯೇ ದೇವಪೂಜೆ. ಇಂತಹ ಗುಣಗಳ ಸಂಗ್ರಹಮಾಡುವುದು ಮತ್ತು ಆತ್ಮಾರ್ಪಣಪೂರ್ವಕವಾಗಿ ಕಾರ್ಯಮಾಡುವುದು ಇದೇ 'ಯಜ್ಞ'ವೆನಿಸುತ್ತದೆ. ಲೋಕಾಂತರ್ಯಾಮಿಯಾದ ಪರಮಾತ್ಮನ ಸತ್ಕಾರಮಾಡುವುದು ಎಂದರೆ ತಮ್ಮ ಕೆಲಸಗಳಿಂದ ಜನಸಾಮಾನ್ಯರಿಗೆ ಆನಂದವನ್ನುಂಟುಮಾಡುವುದು ಇದೇ ದೇವಪೂಜೆ. (ಸಂತೋಷಂ ಜನಯೇತ್ ಪ್ರಾಜ್ಞಃ ತದೇವ ಈಶ್ವರ ಪೂಜನಂ). ಲೋಕಸಂಘಟನೆಯನ್ನುಂಟುಮಾಡಿ, ಪರಸ್ಪರರಲ್ಲಿ ಐಕ್ಯಪ್ರೀತಿಗಳು ಉಂಟಾಗುವಂತೆ ಮಾಡುವುದು, ಇದೇ ನಿಜವಾದ ಯಜ್ಞವಾಗಿದೆ. ತಮ್ಮ ಕರ್ಮಫಲವನ್ನು ಲೋಕಕಲ್ಯಾಣಕ್ಕಾಗಿ ಅರ್ಪಿಸುವ ಸಿದ್ಧತೆ ಇಲ್ಲದವನು ಯಾವ ಯಜ್ಞವನ್ನು ಮಾಡಲೂ ಅನರ್ಹನಾಗಿದ್ದಾನೆ. ಮಾನವನನ್ನು ಉನ್ನತಸ್ಥಿತಿಗೆ ಒಯ್ಯುವ ಯಜ್ಞವು ಇದೇ ಆಗಿದೆ. ಈ ವರೆಗೆ ಲೋಕಪೂಜ್ಯರಾದ ಮಹಾತ್ಮರು ಒಂದಿಲ್ಲೊಂದು ಬಗೆಯಾಗಿ ಇಂತಹ ಯಜ್ಞಗಳನ್ನೇ ನೆರವೇರಿಸಿದ್ದಾರೆ. ಅವರ ಇಡೀ ಜೀವನವೇ ಯಜ್ಞಮಯವಾಗಿದ್ದುದು ನಮಗೆ ಕಂಡ ಬರದೆ ಇರಲಾರದು.

ಈ ಬಗೆಯಾಗಿ ಯಜ್ಞಕ್ಕಾಗಿ ಮಾಡಿದ ಕರ್ಮದಿಂದ ಯಾವ ಬಗೆಯ ದೋಷವು ಸೋಂಕದೆ ಆ ಮನುಷ್ಯನು ಏಳ್ಗೆಯನ್ನೇ ಹೊಂದುತ್ತಾನೆ. ಆದರೆ ತನ್ನ ಸ್ವಾರ್ಥಕ್ಕಾಗಿ ಭೋಗವಿಲಾಸಕ್ಕಾಗಿ ಮಾಡುವ ಕರ್ಮವು ದುಷ್ಕರ್ಮವೆನಿಸಿ ಅವನ ಅಧಃಪತನಕ್ಕೆ ಕಾರಣವಾಗುತ್ತದೆ. ಆದುದರಿಂದಲೇ ಯಜ್ಞಕ್ಕಾಗಿ ನೀನು ಕರ್ಮಮಾಡು ಎಂದು ಗೀತೆಯು ಉಪದೇಶಿಸುತ್ತದೆ. ಅನಾಸಕ್ತ ಯೋಗಿಯು ತನ್ನ ಸಾಧನದಲ್ಲಿ ೧. ಇಂದ್ರಿಯ ದಮನ ೨. ಮನಸ್ಸಂಯಮ ೩. ಫಲನಿರಪೇಕ್ಷತೆ ೪. ಯಜ್ಞಕ್ಕಾಗಿ ಕರ್ಮ, ಇವುಗಳನ್ನು ಆಚರಿಸುತ್ತಿರಬೇಕು. ಶ್ರೀಕೃಷ್ಣನು ಯಜ್ಞದ ಮಹತ್ವವನ್ನು ಸ್ಪಷ್ಟೀಕರಿಸುವದಕ್ಕೆ ಮುಂದೆ ಹೇಳಿದ್ದೇನೆಂದರೆ—

### ಸಹಜಯಜ್ಞ

(೧೦-೧೩) ಇಲ್ಲಿ ಹೇಳಿದ ಮುಖ್ಯ ತತ್ವವೆಂದರೆ— ಪ್ರಜೆಗಳೊಡನೆಯೆ ಯಜ್ಞವು ತಲೆದೋರಿದೆ. ಮಾನವನಷ್ಟೇ ಅಲ್ಲ; ಉಳಿದ ಪ್ರಾಣಿವೃಕ್ಷಾದಿಗಳೊಡನೆಯೂ ಹುಟ್ಟಿದೆ. ಮಾನವನು ಅರಿವು ಉಳ್ಳವನು. ಆದುದರಿಂದ ಆತನು ಅದನ್ನು ಅರಿತು ಆಚರಿಸಬೇಕು. ಉಳಿದುವುಗಳಿಗೆ ಇದು ಗೊತ್ತಾಗದೆಯೆ ಅವು ಅದನ್ನು ಸಾಗಿಸುವುವು. ಅದು ಅವುಗಳ ಸ್ವಭಾವವೆ ಆಗಿದೆ.

### ಲೋಕದೊಳಗಿನ ಸಹಜಯಜ್ಞ

ಯಜ್ಞವೆಂದರೆ ತ್ಯಾಗ; ಸಮರ್ಪಣಯೋಗ. ಲೋಕದಲ್ಲ ನಡೆದಿರುವುದೆಲ್ಲವೂ ಒಂದು ಮಹಾಯಜ್ಞ. ಸೂರ್ಯನನ್ನೆ ತಕ್ಕೊಳ್ಳಿ. ಭಗವಾನ್ ಸೂರ್ಯನಾರಾಯಣನು ಲೋಕಕ್ಕೆಲ್ಲ ತನ್ನ ಕಲ್ಯಾಣಕಾರಕ ತೇಜಸ್ಸನ್ನು ಕೊಡುತ್ತಲಿದ್ದಾನೆ. ಲೋಕಕ್ಕೆಲ್ಲ ಜೀವನಶಕ್ತಿಯು— ಚೈತನ್ಯಶಕ್ತಿಯು ದೊರೆಯುತ್ತಿರುವುದು ಆತನಿಂದಲೇ. ಇದು ಸೂರ್ಯನು ಕೈಕೊಂಡ ಯಜ್ಞವು.

ವಾಯುವನ್ನು ನೋಡಿ. ಇವನಂತೂ ಲೋಕಕ್ಕೆಲ್ಲ ಪ್ರಾಣಸ್ವರೂಪನು. ಈತನು ತನ್ನ ಕೆಲಸವನ್ನು ನಿಲ್ಲಿಸಿದರೆ ಆಯ್ತು ಲೋಕದ ಉಸಿರೇ ಕಟ್ಟಾಗುವುದು!

ಅಂತರಾಳದೊಳಗಣ ಮುಗಿಲುಗಳನ್ನು ನಿರೀಕ್ಷಿಸಿರಿ. ಮುಗಿಲಿಗೆ ಪ್ರಜಾಪತಿಯೆಂದು ವೈದಿಕಸಾಹಿತ್ಯದಲ್ಲಿ ಹೆಸರಿದೆ. ಮೋಡಗಳು ಪರೋಪಕಾರಕ್ಕೆ ಲೋಕಕ್ಕೆಲ್ಲ ಮೇಲ್ಪಂಕ್ತಿ. ತಮಗಾಗಿ ಏನನ್ನೂ ಇಟ್ಟುಕೊಳ್ಳದೆ ಪಡೆದುದನ್ನೆಲ್ಲ ಜನಗಳಿಗೆ ಮರಳಿ ಕೊಡುವುದೇ ಜೀವನವ್ರತವಾಗಿದೆ ಈ ಮುಗಿಲುಗಳಿಗೆ! ಆತ್ಮಸಮರ್ಪಣೆಯಲ್ಲಿ ಮೋಡಗಳಿಗೆ ಸರಿಗಟ್ಟುವವರು ಯಾರೂ ಇಲ್ಲ.

ಲೋಕಮಾತೆ ಪೃಥಿವೀದೇವಿಯು! ಎಲ್ಲರನ್ನೂ ಹೊತ್ತು ಪೊರೆಯುವವಳು. ತಾಳ್ಮೆಯಲ್ಲಿ ಇವಳಂತಹಳು

ಇವಳೇ. ವೇದದಲ್ಲಿ ಇವಳನ್ನು ಕುರಿತು ಒಂದು ಮಂತ್ರದಲ್ಲಿ ಹೀಗೆ ಹೇಳಿದೆ :

**ಉದೀರಾಣಾ ಉತಾಸೀನಾಸ್ತಿಷ್ಠಂತಃ**
**ಪ್ರಕ್ರಾಮಂತಃ ।**
**ಪದ್ಭ್ಯಾಂ ದಕ್ಷಿಣ ಸವ್ಯಾಭ್ಯಾಂ ಮಾವ್ಯಥಿಷ್ಮಹಿ**
**ಭೂಮ್ಯಾಂ ॥** ಅಥರ್ವ ೧೨-೧-೨೮.

'ಏಳುವ ನಿಲ್ಲುವ ನಡೆವ ನಾವು ಎಡಬಲಗಾಲುಗಳಿಂದ ನೆಲತಾಯಿಗೆ ಹೆಚ್ಚು ನೋಯಿಸಬಾರದು.'

**ಊರ್ಜಂ ಪುಷ್ಟಂ ಬಿಭ್ರತೀಮನ್ನಭಾಗಂ**
**ಘೃತಂ ತ್ವಾಭಿ ನಿಷೀದೇಮ ಭೂಮೇ ॥**
ಅಥರ್ವ. ೧೨-೧-೨೯.

'ಈ ಭೂತಾಯಿಯು ಪುಷ್ಟಿದಾಯಕವಾದ ಅನ್ನಭಾಗವನ್ನು ನಮಗೆ ಕೊಡುವದಕ್ಕಾಗಿ ಮೇಲೆತ್ತಿ ಇಡುವಳು' ಇಂತು ನಮ್ಮನ್ನು ಸಲಹುವುದಕ್ಕಾಗಿ ನೆಲದ ಕೊಡುಗೆ ಇದು.

ನೀರು, ಜಲದೇವರು; ನೀರ-ನೀರೆಯರ ಸಾರ ಸರ್ವಸ್ವ. ಜೀವನವೆಂದು ನೀರಿಗೆ ಅತ್ಯಂತ ಸಾರ್ಥಕವಾದ ಹೆಸರಿದೆ. ನೀರು ಲೋಕಕ್ಕಾಗಿ, ತೊರೆಯಾಗಿ ತ್ವರೆಯಾಗಿ ಎಲ್ಲೆಡೆಗೂ ಹರಿಯುವುದು. ಕೊಡುಗೆಯಲ್ಲಿ ತೊರೆ—ಹೊಳೆಯು ಎಲ್ಲರನ್ನೂ ಮೀರಿಸಿ ಹೊಳೆದು ಮೆರೆಯುತ್ತಲಿದೆ.

ವನಸ್ಪತಿಗಳು ಲೋಕಕಲ್ಯಾಣಕ್ಕಾಗಿಯೆ ಜನ್ಮವೆತ್ತಿವೆ. ಹುಲ್ಲು ದನಕರುಗಳಿಗೆ ಆಹಾರವಾಗುವುದು. ಔಷಧಿ ವನಸ್ಪತಿಗಳು ರೋಗರುಜನಗಳನ್ನು ಹೋಗಲಾಡಿಸಲು ಸಿದ್ಧವಾಗಿವೆ.

ಇಂತು ನಡೆದ ಮಹಾಯಜ್ಞದ ಮೂಲಕವಾಗಿಯೇ ಲೋಕವೆಲ್ಲವೂ ಸುಸೂತ್ರವಾಗಿ ಸಾಗಿದೆ. ಯಜ್ಞವೆಂದರೆ ಕೊಡುಗೆ. ಆದಕಾರಣ ಇನ್ನೊಬ್ಬರಿಗೆ ಕೊಡದ ತಾನೇ ತಕ್ಕೊಳ್ಳುವವನು ತುಡುಗನು. ಕೊಟ್ಟು ಉಣ್ಣುವವನೇ ಕಲ್ಯಾಣಿ. ಕಲ್ಯಾಣವಂತ. ತನಗಾಗಿಯೇ ಕೂಡಿಡುವವನು ಕಳ್ಳನು; ಪಾಪಭುಂಜಕನು.

### ದೇಹದಲ್ಲಿ ನಡೆವ ಯಜ್ಞ

ನಮ್ಮ ಇಂದ್ರಿಯಗಳು ತಾವು ಪಡೆವುದನ್ನು ತಮ್ಮ ಹೊಟ್ಟೆಗೇ ಇಟ್ಟುಕೊಳ್ಳದೆ ಒಟ್ಟಿನ ದೇಹಸೌಖ್ಯಕ್ಕಾಗಿ ಅದನ್ನು ಸಲ್ಲಿಸುತ್ತವೆ. ಹೀಗೆ ಮಾಡದೆ ಕಣ್ಣು ನೋಡಿದುದನ್ನು ಮುಂದೆ ಸಲ್ಲಿಸದೆ ಹೋದರೆ! ಕಿವಿಯು ಕೇಳಿದುದನ್ನು ಅಲ್ಲಿಯೆ ಇಟ್ಟುಕೊಂಡರೆ! ಅನ್ನಾಶಯವು ತನ್ನಲ್ಲಿ ಬಂದುದನ್ನು ತಾನೇ ಹಿಡಿದಿಟ್ಟರೆ! ಆಯ್ತು; ಮಾನವನು ಅರಗಳಿಗೆಯೂ ಬದುಕಿರಲಾರನು. ಪ್ರತಿಯೊಂದು ಇಂದ್ರಿಯವು ತನ್ನ ಅಳವು ಮೀರಿ ಹೆಣಗಾಡಿ ಪಡೆದುಕೊಂಡುದನ್ನು ಇಡಿ ದೇಹದ ಉಳಿವು ಬೆಳವಿಗಾಗಿ ಸಲ್ಲಿಸುವುದು. ಅದರಿಂದಲೇ ಮನುಷ್ಯನು ಸುಖಿಯಾಗಿ ಬಾಳುವನು. ಇದುವೆ ಯಜ್ಞದ ಮಹಿಮೆ. ಈ ಯಜ್ಞವಿಧಾನವು ನಿಂತೊಡನೆಯೆ ಬಾಳು ಹಾಳಾಗುವುದು. ಆದುದರಿಂದಲೇ ಯಜ್ಞದಿಂದಲೇ ಸೃಷ್ಟಿಯು ಹುಟ್ಟಿದೆ; ನಡೆದಿದೆ.

ಈ ಯಜ್ಞವಿರೋಧಿಗಳೆಂದರೇ ಅಸುರರು; ಲೋಕವಿಘಾತಕರು. ದೇಹದಲ್ಲಿ ಇಂದ್ರಿಯಗಳು ಸಹಜಯಜ್ಞದಲ್ಲಿ ತೊಡಗಿವೆ. ಆದರೆ ಯಾವುದೊಂದು ಅಂಗವು 'ಉಳಿದವರ ಗೊಡವೆ ನನಗೇನು? ನನ್ನಷ್ಟಕ್ಕೆ ನಾನು.' ಎಂದು ತನ್ನ ವಿಲಾಸಭೋಗಗಳಲ್ಲಿಯೇ ಮೈಮರೆತರೆ, ಅಲ್ಲಿ ಪ್ರಲಯವು ಎಂದರೆ ವಿನಾಶಕಾಲವು ಸಮೀಪಿಸಿತೆಂದೇ ನಿಶ್ಚಿತವಾಗಿ ತಿಳಿಯಬೇಕು.

### ರಾಷ್ಟ್ರೀಯ ಯಜ್ಞ

ದೇಹದ ಉಪಮೇಯೇ ರಾಷ್ಟ್ರಕ್ಕೂ ಸರಿಹೋಗುವುದು. ರಾಷ್ಟ್ರದ ಎಲ್ಲ ಘಟಕಗಳೂ ತಮ್ಮ ದುಡಿಮೆಯ ಶ್ರೇಯಸ್ಸನ್ನು ತಮ್ಮ ನಾಡಿಗಾಗಿ ಕೊಡದೆ ಇದ್ದರೆ ಆ ನಾಡು ಕಾಡಾಡಿಗಳ ಬೀಡಾಗುವಲ್ಲಿ ಸಂದೇಹವಿಲ್ಲ.

ಯಾವುದೊಂದು ಜಾತಿವರ್ಗ ಸಂಘ, ಗುಂಪು, ಬಣದವರು ತಮ್ಮ ಸ್ವಾರ್ಥಕ್ಕಾಗಿ ಉಳಿದವರೊಡಗೂಡಿ ನಡೆವುದನ್ನು ಬಿಡುವರೊ ತಮ್ಮದನ್ನು ಇನ್ನುಳಿದವರಿಗಾಗಿ ಏಕೆ ಕೊಡಬೇಕೆಂದು 'ಕೊಡುಗೆ'ಯನ್ನು ನಿಲ್ಲಿಸುವರೊ ಆಗ ಆ ರಾಷ್ಟ್ರದ ಇಳಿಗಾಲಕ್ಕೆ ಆರಂಭವಾಯಿತೆಂದು ತಿಳಿಯತಕ್ಕದ್ದು. ಯಜ್ಞವೆಂದರೆ ಕೊಡುಗೆ. ಕೊಡುಗೆಯಿಂದಲೇ ಏಳಿಗೆ. ಯಜ್ಞವನ್ನು ನಿಲ್ಲಿಸುವುದರಿಂದಲೇ ಇಳಿಗೆ.

**ನಾಯಂ ಲೋಕೋಽಸ್ತ್ಯಯಜ್ಞಸ್ಯ**
**ಕುತೋಽನ್ಯಃ ಕುರುಸತ್ತಮ ।**
ಗೀತಾ. ೪. ೩೧

'ಯಜ್ಞಮಾಡದವರಿಗೆ ಈ ಲೋಕವೇ ಇಲ್ಲ. ಎಂದ ಮೇಲೆ ಪರಲೋಕದ ಮಾತೇಕೆ?' ಯಜ್ಞಮಾಡದವರಿಗೆ ಈ ಲೋಕದಲ್ಲಿ ದುರ್ಗತಿಯಲು ನಿಶ್ಚಿತ. ವೇದಗಳಲ್ಲಿಯೂ ಇದೇ ಮಾತನ್ನು ಮತ್ತೆ ಮತ್ತೆ ಹೇಳಿದೆ.

೧. **ಅಯಜ್ವಾನಃ ಸನಕಾ ಪ್ರೇತಿಮೀಯುಃ ।**
**ಋ. ೧, ೩೩. ೪**

೨. ಪರಾ ಚಿಚ್ಛೀರ್ಷಾ ವವೃಜುಸ್ತ ಇಂದ್ರಾऽಯಜ್ವಾನೋ ಯಜ್ವಭಿಃ ಸ್ಪರ್ಧಮಾನಾಃ । ಪ್ರಯದ್ದಿವೋ ಹರಿವಃ ಸ್ಥಾತರುಗ್ರ ನಿರವ್ರತಾಂ ಅಧಮೋ ರೋದಸ್ಯೋಃ ॥ ೧. ೩೩. ೫

೩. ಪ್ರಾಸ್ಯ ಪಾರಂ ನವತಿಂ ನಾವ್ಯಾನಾಮಪಿ ಕರ್ತಮ ವರ್ತಯೋऽಯಜ್ಯೂನ್ ॥ ೧. ೧೨೧. ೧೩

೪. ಶಾಸಸ್ತಮಿಂದ್ರ ಮರ್ತ್ಯಮಯಜ್ಯುಂ ಶವಸಸ್ಪತೇ ।

ಋ. ೧. ೧೩೧. ೪ ; ಅಥರ್ವ ೨೦. ೭೫. ೨

೧. [ ಅ-ಯಜ್ವಾನಃ ಸನಕಾಃ ] ಯಜ್ಞ ಮಾಡದ ಜನಗಳು ಉದಾರರಾಗಿದ್ದರೂ ಅವರು [ ಪ್ರೇತಿಂ ಈಯುರ್ಃ ] ನಾಶವನ್ನು ಹೊಂದುತ್ತಾರೆ.

೨. [ ಅ-ಯಜ್ವಾನಃ ಯಜ್ವಭಿಃ ಸ್ಪರ್ಧಮಾನಾಃ ] ಯಜ್ಞ ಮಾಡದವರು ಯಜ್ಞ ಮಾಡುವವರೊಡನೆ ಸ್ಪರ್ಧಿಸಿದರೆ [ ಶೀರ್ಷಾಪರಾ ವವೃಜುಃ ] ಅವರು ತಲೆಬಾಗಬೇಕಾಗುತ್ತದೆ. ಮತ್ತು ಅವರಿಗೆ ಹಿಂಜರಿಯಬೇಕಾಗುತ್ತದೆ. ಎಲೈ ತೇಜಸ್ವಿಯಾದ ಪ್ರಭುವೇ, ನೀನು [ ರೋದಸ್ಯೋಃ ] ದ್ಯಾವಾಪೃಥಿವಿಗಳ ನಡುವೆ [ ಅ-ವ್ರತನ್ ಅಧಮಃ ] ಅವ್ರತಿಗಳನ್ನು ನಿಲ್ಲಗೊಡದೆ ಕೆಳಗೆ ನೂಕುವೆ.

೩. ಅಯಜ್ಞಿಗಳನ್ನು ನೀನು ೯೯ ನದಿಗಳನ್ನು ದಾಟಿ ದೂರ ಎಸೆದುಬಿಟ್ಟೆ !

೪. ಸಮರ್ಥನಾದ ಒಡೆಯನೆ ! ನೀನು ಯಜ್ಞ ಮಾಡದವರನ್ನು ಶಿಕ್ಷಿಸುವೆ.

ಯಜ್ಞ ಮಾಡದವರ ಪಾಡನ್ನು ವೇದದಲ್ಲಿ ಹೀಗೆ ವರ್ಣಿಸಿದೆ. ಋಜುರಿಚ್ಛಂಸೋ ವನವದ್ವನುಷ್ಯತೋ ದೇವಯನ್ನಿದದೇವಯಂತಮಭ್ಯಸತ್ । ಸುಪ್ರಾವೀರಿದ್ವನವತ್ಪೃತ್ಸು ದುಷ್ಟರಂ ಯಜ್ವೇದಯಜ್ಯೋರ್ವಿಭಜಾತಿ ಭೋಜನಮ್ ॥ ಋ. ೨೬. ೧.

“ ( ಋಜುಃ ಶಂಸಃ ಇತ್ ) ಸರಲವಾದ ಆಚರಣೆವುಳ್ಳ ಭಕ್ತನೇ ( ವನುಷ್ಯತಃ ವನವತ್ ) ಘಾತಕರಾದ ಹಗೆಗಳನ್ನು ನಾಶಮಾಡಬಲ್ಲನು. ( ದೇವಯನ್ ಇತ್ ) ದೇವರಲ್ಲಿ ಶ್ರದ್ಧೆ ಇದ್ದವನೆ ( ಅದೇವಯಂತಂ ಅಭ್ಯಸತ್ ) ದೇವವಿರೋಧಿಗಳನ್ನು ನಾಶಮಾಡುತ್ತಾನೆ. ( ಸು-ಪ್ರ-ಅವೀಂ ಇತ್ ) ಚೆನ್ನಾಗಿ ಕಾಪಾಡಬಲ್ಲ ಬಂಟರೇ ( ಪೃತ್ಸು ದುಷ್ಟರಂ ವನವತ್ ) ಕಾಳಗದಲ್ಲ ಕ್ರೂರ ಹಗೆಗಳನ್ನು ಕೊಲ್ಲಬಲ್ಲರು. ಮತ್ತು ( ಯಜ್ವಾ ಇತ್ ) ಯಜ್ಞ ಮಾಡುವವರೇ ( ಅಯಜ್ಯೋಃ ) ಅಯಜ್ಞಿಗಳ ಭೋಗಗಳನ್ನು ಸಂಪಾದಿಸುತ್ತಾರೆ.

ಸರಳನು ಕುಟಿಲನನ್ನೂ ಆಸ್ತಿಕನನ್ನೂ ಯಜ್ಞಿಕನು ಅಯಜ್ಞಿಯನ್ನೂ ಹೇಗೆ ಹೊರ ಹರೆಯುವನೆಂಬುದನ್ನು ಮೇಲಣ ವೇದಮಂತ್ರವು ಹೇಳುತ್ತದೆ. ಇದೇ ಬಗೆಯಾಗಿ ಇನ್ನೊಂದು ಮಂತ್ರದಲ್ಲಿ ಹೇಳಿರುವುದೇನಂದರೆ,

ನ್ಯಕ್ರತೂನ್ ಗ್ರಂಥಿನೋ ಮೃಧ್ರವಾಚಃ ಪಣೀನ್ ಅಶ್ರದ್ಧಾನ್ ಅವೃಧಾನ್ ಅಯಜ್ಞಾನ್ । ಪ್ರ ಪ್ರ ತಾನ್ ದಸ್ಯೂನ್ ಅಗ್ನಿರ್ವಿವಾಯ ಪೂರ್ವಶ್ಚಕಾರಾಪರಾನ್ ಅಯಜ್ಯೂನ್ ॥

‘ ( ಅಕ್ರತೂನ್ ) ಸಂಕಲ್ಪಶಕ್ತಿಯಿಲ್ಲದ ಹೇಡಿ ಪೈಗಳರು, ( ಗ್ರಂಥಿನಃ ) ಒರಿಗಳಿಯೋದಿನವರು, ( ಮೃಧ್ರವಾಚಃ ) ತೊದಲ್ನುಡಿ-ಸುಳ್ಳಿಗರು, ( ಪಣೀನ್ ) ಒಡ್ಡಿ ವ್ಯವಹಾರಿಗಳು, ( ಅಶ್ರದ್ಧಾನ್ ) ಶ್ರದ್ಧಾವಿಹೀನರು, ( ಅವೃಧಾನ್ ) ಏಳ್ಗೆಗಾಗಿ ಹೆಣಗಾಟ, ಹೋರಾಟ-ವಿಲ್ಲದವರು, ( ಅಯಜ್ಞಾನ್, ಅಯಜ್ಯೂನ್ ) ಕೊಡಿಗೆ ಪರೋಪಕಾರವಿಲ್ಲದವರು ಇವರೆಲ್ಲ ( ದಸ್ಯೂನ್ ) ಸಮಾಜದ ಶತ್ರುಗಳಾಗಿದ್ದಾರೆ. ಆದುದರಿಂದ ಭಗವಂತನು ಇವರನ್ನು ( ಪ್ರ ಪ್ರ ವಿವಾಯ ) ಸಂಪೂರ್ಣವಾಗಿ ನೆಲಕ್ಕುರುಳಿಸುತ್ತಾನೆ. ಆದುದರಿಂದ ಅವರ ಏಳ್ಗೆಯಾಗುವುದಿಲ್ಲ.”

ಮೇಲಿನದರಲ್ಲಿ ಸಮಾಜಕಂಟಕರು ಯಾರು ಯಾರು ಎಂಬುದನ್ನು ವಿವರವಾಗಿ ಹೇಳಿದೆ. ಇದರಂತೆ ಇನ್ನೊಂದೆಡೆಯಲ್ಲಿ ಒರೆದಿರುವುದೇನೆಂದರೆ:

ಅನ್ಯವ್ರತಮಮಾನುಷಮಯಜ್ವಾನಮದೇವಯುಮ್ ।
ಅವ ಸ್ವಃ ಸಖಾ ದುಧುವೀತ ಪರ್ವತಃ ಸುಘ್ನಾಯ ದಸ್ಯುಂ ಪರ್ವತಃ ॥

ಋ. ೮. ೭೦. ೧೧.

“ ( ಅನ್ಯವ್ರತಂ ) ತನ್ನ ಕರ್ತವ್ಯವನ್ನು ಬಿಟ್ಟು ಬೇರೊಂದರಲ್ಲಿ ತೊಡಗಿದವನು, ( ಅಮಾನುಷಂ ) ಮನುಷ್ಯರು ಮಾಡದಂತಹ ಹೀನ ಕೃತ್ಯವನ್ನೆಸಗುವವನು, ( ಅಯಜ್ವಾನಂ ) ಯಜ್ಞ ಮಾಡದವನು, ( ಅದೇವಯುಂ ) ದೇವರ ಸೇವೆಗೆಯ್ಯದವನು, ( ದಸ್ಯುಂ ) ಇಂತಹ ಹಗೆಯನ್ನು ( ಪರ್ವತಃ ಸಖಾ ಸ್ವಃ ದಧುವೀತ ) ಪರ್ವತವಾಸಿಯಾದ ಗೆಳೆಯನು ಸ್ವರ್ಗದಿಂದ ದೂರಮಾಡುವನು.”

ಮೇಲಣ ಮಂತ್ರದಲ್ಲಿ ಸಮಾಜದ್ರೋಹಿಗಳ ಇನ್ನೂ ಕೆಲವು ಪ್ರಕಾರಗಳನ್ನೂ ಹೇಳಿದ್ದಾಗಿದೆ. ಈ ಬಗೆಯ ನಿರ್ಗ್ಯರ ಪಾಡು ಏನಾಗುವುದೆಂಬುದನ್ನು ಹೀಗೆ ಹೇಳಲಾಗಿದೆ:

**ಅಯಜ್ಞಿಯೋ ಹತವರ್ಚಾ ಭವತಿ ।**

ಅಥರ್ವ ೧೨. ೨. ೩೭

'ಯಜ್ಞಮಾಡದವನ (ಎಂದರೆ ಒಂದಿಲ್ಲೊಂದು ಬಗೆಯಾಗಿ ತನ್ನಲ್ಲಿದ್ದುದನ್ನು ಸಮಾಜಕ್ಕಾಗಿ ರಾಷ್ಟ್ರಕ್ಕಾಗಿ ಕೊಡದೆ ಇರುವವನ) ತೇಜಸ್ಸು ನಷ್ಟವಾಗುತ್ತದೆ.'

**ಯೋ ಅಂತರಿಕ್ಷೇ ತಿಷ್ಠತಿ ವಿಷ್ಟಭಿತೋಽಯಜ್ವನಃ**
**ಪ್ರಮೃಣನ್ ದೇವಪೀಯೂನ್ ।**
**ತಸ್ಮೈ ನಮೋ ದಶಭಿಃ ಶಕ್ವರೀಭಿಃ ॥**

ಅಥರ್ವ ೧೧. ೨. ೨೩

'ಅಂತರಿಕ್ಷದಲ್ಲಿರುವ ದೇವತೆಯು ಅಯಜ್ಞಿಗಳನ್ನೂ ಯಜ್ಞವಿರೋಧಿಗಳನ್ನೂ ನಾಶಮಾಡುತ್ತಾನೆ. ಆದುದರಿಂದ ಆ ದೇವರಿಗೆ ನಾವು ನಮ್ಮ ಹತ್ತುಶಕ್ತಿಗಳೊಡನೆ ನಮಸ್ಕರಿಸುತ್ತೇವೆ.'

ಈ ವೇದವಚನಗಳಿಗೆ ಅನುಸರಿಸಿಯೇ ಗೀತೆಯಲ್ಲಿಯೂ 'ಯಜ್ಞಮಾಡದವರಿಗೆ ಇಹವೂ ಇಲ್ಲ; ಪರವೂ ಇಲ್ಲ'ವೆಂದು ವರ್ಣಿಸಿದೆ (೪. ೩೧). ಯಜ್ಞವು ಮನುಷ್ಯನೊಡನೆಯೆ ಹುಟ್ಟಿದೆ. ಆತನು ಯಜ್ಞದಿಂದ ಹುಟ್ಟಿದ್ದಾನೆ; ಯಜ್ಞಕ್ಕಾಗಿ ಹುಟ್ಟಿದ್ದಾನೆ ಆದುದರಿಂದ ಯಜ್ಞ ಎಂದರೆ ಕೊಡುವುದು. ಇದು ಮಾನವನ ಸಹಜ ಧರ್ಮವಾಗಿರಬೇಕು ಇದಕ್ಕೆ ತಪ್ಪುವವನು ಅಧರ್ಮಿ; ಪಾಪಿಯು.

ಮನುಷ್ಯನಿಗೆ ಸುಮಾರು ೧೨೦ ವರುಷ ಆಯುಸ್ಸು ಇದರಲ್ಲಿ ೨೦ ವರುಷ ಚಿಕ್ಕತನದಲ್ಲಿ ಹೋಯಿತು. ಇನ್ನುಳಿದ ೧೦೦ ವರುಷ ಆತನು ಯಜ್ಞದಲ್ಲಿ ಕಳೆಯಬೇಕೆಂದು ಛಾಂದೋಗ್ಯವು ಹೇಳುತ್ತದೆ.

**ಪುರುಷೋ ವಾವ ಯಜ್ಞಃ; ತಸ್ಯ ಯಾನಿ ಚತುರ್ವಿಂಶತಿ ವರ್ಷಾಣಿ ತತ್ಪ್ರಾತಃ ಸವನಂ.... । ಅಥ ಯಾನಿ ಚತುಶ್ಚತ್ವಾರಿಂಶದ್ವರ್ಷಾಣಿ ತನ್ಮಾಧ್ಯಂದಿನಂ ಸವನಂ.... । ಅಥ ಯಾನ್ಯಷ್ಟಾಚತ್ವಾರಿಂಶದ್ವರ್ಷಾಣಿ ತೃತೀಯಸವನಂ.... । ಸ ಹ ಷೋಡಶಂ ವರ್ಷ ಶತಮಜೀವತ್ ಪ್ರ ಹ ಷೋಡಶಂ ವರ್ಷಶತಂ ಜೀವತಿ ಯ ಏವಂ ವೇದ ॥**

ಛಾಂ. ಉ. ೩. ೧೬. ೧. ೭

'ಮಾನವನ ಬಾಳುವೆಯು ಒಂದು ಯಜ್ಞವಾಗಿದೆ. ಅದರಲ್ಲಿ ೨೪ ವರುಷಗಳು ೧ನೇ ಪ್ರಾತಃ ಸವನ; ೪೪ ವರುಷಗಳು ಮಾಧ್ಯಂದಿನ ಸವನ; ಮತ್ತು ೪೮ ವರುಷಗಳು ಸಾಯಂ ಸವನವೆಂದು ಕ್ರಮವಾಗಿವೆ. ಈ ಬಗೆಯಾಗಿ ಯಾವನು ಯಜ್ಞಮಾಡುವನೊ ಅವನು ೧೧೬ ವರುಷ ಬಾಳುವನು.' ಈ ತುಂಬು ಜೀವನದಲ್ಲಿ ಮೊದಲಿನ ೧೬ ವರುಷ ಚಿಕ್ಕತನದಲ್ಲಿ ಹೋಗುತ್ತವೆ. ಉಳಿದ ೧೦೦ ವರುಷಗಳಲ್ಲಿ ಆತನು ೧೦೦ ಯಜ್ಞಗಳನ್ನು ನೆರವೇರಿಸಬೇಕು, ಆದುದರಿಂದಲೇ ಈ ಜೀವಾತ್ಮನಿಗೆ 'ಶತ-ಕ್ರತು' ಎಂದು ವೇದಗಳಲ್ಲಿ ಹೇಳಿದೆ.

## ಗೃಹಯಜ್ಞ.

ಯಜ್ಞವೆಂದರೆ ತ್ಯಾಗ; ಕೊಡುಗೆ. ಮನೆಯಲ್ಲಿ ಕೌಟುಂಬಿಕ ಸುಖವನ್ನು ಹಾರಯಿಸುವವನೂ 'ಯಜ್ಞ'ವನ್ನು ಮಾಡಲೇಬೇಕು. ತಾಯಿತಂದೆಗಳು ಮಕ್ಕಳಿಗಾಗಿ ತ್ಯಾಗಮಾಡಬೇಕು. ನಲ್ಲನಲ್ಲೆಯರು, ಒಬ್ಬರೊಬ್ಬರಿಗಾಗಿ ಆತ್ಮಸಮರ್ಪಣಮಾಡಿದಾಗಲೆ ಸಂಸಾರಸೌಖ್ಯವು ದೊರೆಯುವುದು. ತ್ಯಾಗಿಯಲ್ಲದವನು ಭೋಗಿಸಲಾರನು. ವೇದದಲ್ಲಿ ಹೇಳಿರುವುದೇನೆಂದರೆ:

**ಸಹೃದಯಂ ಸಾಂಮನಸ್ಯಮವಿದ್ವೇಷಂ**
**ಕೃಣೋಮಿ ವಃ ।**
**ಅನ್ಯೋ ಅನ್ಯಮಭಿ ಹರ್ಯತ ವತ್ಸಂ**
**ಜಾತಮಿವಾಘ್ನ್ಯಾ ॥ ೧ ॥**
**ಅನುವ್ರತಃ ಪಿತುಃ ಪುತ್ರೋ ಮಾತ್ರಾ ಭವತು**
**ಸಂಮನಾಃ ।**
**ಜಾಯಾ ಪತ್ಯೇ ಮಧುಮತೀಂ ವಾಚಂ ವದತು**
**ಶಾಂತಿವಾಮ್ ॥ ೨ ॥**
**ಮಾ ಭ್ರಾತಾ ಭ್ರಾತರಂ ದ್ವಿಕ್ಷನ್ಮಾ ಸ್ವಸಾರಮುತ**
**ಸ್ವಸಾ ।**
**ಸಮ್ಯಂಚಃ ಸವ್ರತಾ ಭೂತ್ವಾ ವಾಚಂ**
**ವದತ ಭದ್ರಯಾ ॥ ೩ ॥**

ಅಥರ್ವ ೩. ೩೦.

"ಪ್ರೀತಿಯಿಂದ ಕೂಡಿದ ಅಂತಃಕರಣ, ಕಲ್ಯಾಣಕಾರಕ ವಿಚಾರಗಳಿಂದ ಯುಕ್ತವಾದ ಮನಸು, ಮತ್ತು ಒಬ್ಬರೊಬ್ಬರ ಬಗ್ಗೆ ಹಗೆತನವಿಲ್ಲದ ನಡೆವಳಿ ನಿಮ್ಮಲ್ಲಿರಲಿ. ಹುಟ್ಟಿದ ಕರುವಿನಲ್ಲಿ ಆವು ತೋರುವ ಆತ್ಮೀಯತೆ ಪ್ರೀತಿ ನಿಮ್ಮೊಳಗಿರಲಿ. ಮಗನು ತಂದೆಗೆ ಅನುಕೂಲ ಕೆಲಸಗಳನ್ನು ಮಾಡಲಿ. ಅವನು ತಾಯೊಡನೆ ಮರ್ಯಾದೆಯಿಂದ ನಡೆಯಲಿ. ಹೆಂಡತಿ ಗಂಡನೊಡನೆ ಮಧುರವಚನಗಳಿಂದ ಶಾಂತಿಸೌಖ್ಯದಾಯಕ ಮಾತುಗಳನ್ನಾಡಲಿ ಅಣ್ಣತಮ್ಮಂದಿರು- ಅಕ್ಕತಂಗೆಯರು ಹಗೆತನಮಾಡದೆ ಇರಲಿ. ಎಲ್ಲರೂ ಒಂದೇ ಕೆಲಸದಲ್ಲಿ ಮನಸಿಟ್ಟು ಒಬ್ಬರೊಬ್ಬರೊಡನೆ ಪ್ರೀತಿಯಿಂದ ಕೂಡಿ ನಡೆಯಲಿ."

ಇಂತೀಬಗೆಯಾಗಿ ಮನೆಯಲ್ಲಿ ಒಬ್ಬರೊಬ್ಬರೊಡನೆ ಯಜ್ಞ-ಭಾವದಿಂದ ನಡೆದುಕೊಂಡರೆ ಈ ಗೃಹಸೌಖ್ಯದ ಮುಂದೆ ಸ್ವರ್ಗದ ಬೆಲೆಯೇನು? ಕುಟುಂಬದಲ್ಲಿ, ಸಮಾಜದಲ್ಲಿ, ರಾಜ್ಯದಲ್ಲಿ ಒಂದು ಪಂಗಡದವರು ಇನ್ನೊಬ್ಬರಲ್ಲಿ ಅವರ ಅಂತರಾತ್ಮನೂ ದೇವಾಂಶವೆಂದರಿತು ಪ್ರೀತಿ ವಿಶ್ವಾಸಗಳನ್ನು ಇಟ್ಟು ನಡೆದರೆ ಆ ಜನಾಂಗದ ಏಳ್ಗೆಯಾಗದ ಹೇಗೆ ಇದ್ದೀತು?

ಯಜ್ಞವನ್ನು ಕುರಿತು ಉಪನಿಷತ್ತುಗಳಲ್ಲಿ ಹೀಗೆ ಹೇಳಿದೆ;

೧. ತ್ರಯೋ ಧರ್ಮಸ್ಕಂಧಾ ಯಜ್ಞೋಽ,
ಧ್ಯಯನಂ ದಾನಮಿತಿ | ಛಾಂ. ೨ ೨೩·೧
೨. ಯದೇಷ ಯನ್ನಿದಂ ಸರ್ವಂ ಪುನಾತಿ
ತಸ್ಮಾದೇಷ ಏವ ಯಜ್ಞಃ| ಛಾಂ. ೪ ೧೬·೧
೩. ಯದ್ಯಜ್ಞ ಇತ್ಯಾಚಕ್ಷತೇ ಬ್ರಹ್ಮಚರ್ಯಮೇವ
ತತ್ | ಛಾ. ೮ ೫ ೧
೪. ತ್ವಂ ಬ್ರಹ್ಮ; ತ್ವಂ ಯಜ್ಞಃ | ಬೃ ೧·೫ ೧೬
೫. ಅಹಂ ಬ್ರಹ್ಮಾ, ಅಹಂ ಯಜ್ಞಃ| ಕಠಶ್ರು. ೨
೬. ಅಹಂಕ್ರತುಃ ಅಹಂಯಜ್ಞಃ | ಗೀತಾ. ೯ ೧೬
೭. ವಿಜ್ಞಾನಂ ಯಜ್ಞಂ ತನುತೇ| ತೈ.ಉ ೨ ೫·೧
೮. ಯಜ್ಞೋ ವಿಷ್ಣುಃ ಪ್ರಜಾಪತಿಃ |
ಮೈತ್ರೀ. ೬.೧೬
೯. ಯಜ್ಞೇನ ದೇವಾಃ ದಿವಂ ಗತಾಃ |
ಮಹಾನಾ. ೩೧·೨

"ಯಜ್ಞ, ಸ್ವಾಧ್ಯಾಯ, ಮತ್ತು ದಾನ ಇವು ಮೂರು ಧರ್ಮದ ತೋಳುಗಳು. ಎಲ್ಲರನ್ನೂ ಪಾವನವಾಡುವ ಕರ್ಮಕ್ಕೇ ಯಜ್ಞವೆಂಬ ಹೆಸರು. ಬ್ರಹ್ಮಚರ್ಯವೇ ಯಜ್ಞವು. ನೀನು ಬ್ರಹ್ಮ; ನೀನು ಯಜ್ಞ. ನಾನು ಬ್ರಹ್ಮ. ನಾನು ಯಜ್ಞವಾಗಿದ್ದೇನೆ. ನಾನು ಕ್ರತುವು; ನಾನು ಯಜ್ಞ. ವಿಜ್ಞಾನರೂಪಿಯಾದ ಯಜ್ಞವು ಎಲ್ಲೆಡೆಗೂ ಹಬ್ಬುತ್ತಲಿದೆ. ಯಜ್ಞವು ಕಾಪಾಡುವುದು; ಪ್ರಜಗಳನ್ನು ಹುಟ್ಟಿಸುವುದು. ಯಜ್ಞದಿಂದ ದೇವರಿಗೆ ಸ್ವರ್ಗವು ದೊರೆತಿದೆ."

ನಮ್ಮ ದೇಹದಲ್ಲಿ ಯಜ್ಞವು ನಡೆದಿದೆ. ಅದನ್ನು ನಿರೀಕ್ಷಿಸಬೇಕೆಂದು ಉಪನಿಷತ್ತಿನಲ್ಲಿ ಹೇಳಿದೆ.

೧. ಸ್ವೇಶರೀರೇ ಯಜ್ಞಂ ಪರಿವರ್ತಯಾಮಿ |
ಪ್ರಾಣಾಗ್ನಿ. ೨
೨. ಶರೀರಂ ಯಜ್ಞಃ | ಮಹಾನಾ. ೨೦ ೧೨
೩. ವಾಗ್ವೈ ಯಜ್ಞಸ್ಯ ಹೋತಾ ಚಕ್ಷುರ್ವೈ
ಯಜ್ಞಸ್ಯಾಧ್ವರ್ಯುಃ| ಪ್ರಾಣೋವೈ ಯಜ್ಞಸ್ಯೋದ್ಗಾತಾ | ಮನೋ ವೈ ಯಜ್ಞಸ್ಯ
ಬ್ರಹ್ಮಾ | ಬೃ. ೩·೧೧ ೬
೪. ತಸ್ಯೈವಂ ವಿದುಷೋ ಯಜ್ಞಸ್ಯಾತ್ಮಾ ಯಜಮಾನಃ; ಶ್ರದ್ಧಾ ಪತ್ನೀ; ಶರೀರಮಿಧ್ಮ, ಮುರೊ ವೇದಿಲೋಮಾನಿ ಬರ್ಹಿರ್ವೇದಃ ಶಿಖಾ ಹೃದಯ ಯೂಪಃ, ಕಾಮ ಆಜ್ಯಂ, ಮನ್ಯುಃ ಪಶುಃ, ತಪೋಽಗ್ನಿರ್ದಮಃ ಶಮಯಿತಾ. ದಕ್ಷಿಣಾ ವಾಕ್ ಹೋತಾ, ಪ್ರಾಣ ಉದ್ಗಾತಾ, ಚಕ್ಷುರಧ್ವರ್ಯುರ್ಮನೋ ಬ್ರಹ್ಮಾ. ಶ್ರೋತ್ರಮಗ್ನೀಧ್ರಾವದ್ಧ್ರಿಯತೆ ಸಾ ದೀಕ್ಷಾ ಯದಶ್ನಾತಿ ತದ್ಧವಿಃ, ಯತ್ಪಿಬತಿ ತದಸ್ಯ ಸೋಮಪಾನಂ || ಮಹಾನಾ. ೮೦

ಬಲ್ಲವನು ತನ್ನ ಒಡಲಲ್ಲಿಯ ಯಜ್ಞವನ್ನು ಏರ್ಪಡಿಸಿಕೊಳ್ಳುವನು. ಒಡಲೇ ಯಜ್ಞ. ಈ ಯಜ್ಞದಲ್ಲಿ ಮಾತು, ಕಣ್ಣು, ಪ್ರಾಣ ಮತ್ತು ಮನಸು ಇವುಗಳು ಪರಿವಿಡಿಯಿಂದ ಅಧ್ವರ್ಯು, ಉದ್ಗಾತಾ, ಮತ್ತು ಬ್ರಹ್ಮಾ ಆಗಿದ್ದಾರೆ. ಈ ದೇಹದೊಳಗಿನ ಯಜ್ಞಕ್ಕೆ ಆತ್ಮನೆ ಯಜಮಾನನು. ಶ್ರದ್ಧೆಯೆ ಪತ್ನಿ. ಶರೀರವೇ ಇಧ್ಮವು. ಎದೆಯು ವೇದಿಕೆ; ಕೂದಲುಗಳೆ ಬರ್ಹಿದರ್ಭೆಗಳು; ವೇದಗಳೆ ಶಿಖೆ; ಹೃದಯವು ಯೂಪ. ಕಾಮವು ಘೃತ; ಸಿಟ್ಟೆಂಬುದು ಪಶು; ತಪಸ್ಸೆ ಅಗ್ನಿ; ದಮನಶಕ್ತಿಯು ಶಮಯಿತೃವು (ಶಾಂತಿಹೇಳುವವನು.) ದಕ್ಷಿಣವು ವಾಕ್‌ಹೋತೃವು; ಪ್ರಾಣವು ಉದ್ಗಾತೃವು; ಕಣ್ಣು ಅಧ್ವರ್ಯುವು; ಮನಸು ಬ್ರಹ್ಮಾ: ಕಿವಿ ಅಗ್ನೀಪ್ರದೀಪಕನು; ಈ ಬಗೆಯಾಗಿ ಮರಣಪರ್ಯಂತರವೂ ಈ ಯಜ್ಞದ ದೀಕ್ಷೆಯಾಗಿದೆ. ತಿಂದುದೆಲ್ಲವೂ ಹವಿಸ್ಸು; ಕುಡಿದುದೆ ಸೋಮವಾಗಿದೆ.

ಈ ಶರೀರವೆಂದರೆ ಅದೊಂದು ಸಪ್ತಋಷಿಗಳ ಪವಿತ್ರವಾದ ಆಶ್ರಯವೆ ಆಗಿದೆ.

ಸಪ್ತ ಋಷಯಃ ಪ್ರತಿ ಹಿತಾಃ ಶರೀರೇ ಸಪ್ತ
ರಕ್ಷಂತಿ ಸದಮಪ್ರ ಮಾದಮ್ | ಯಜು. ೩೪. ೫೫

"ಸಪ್ತಋಷಿಗಳು ಪ್ರತಿಯೊಂದು ದೇಹದಲ್ಲಿಯೂ ಇರುವರು. ಅವರು ಯಜ್ಞಸ್ಥಾನಗಳನ್ನು ಚೆನ್ನಾಗಿ ಕಾಪಾಡುತ್ತಿರುವರು" ಇಂದ್ರಿಯಗಳೇ ಸಪ್ತಋಷಿಗಳು ಇಂದ್ರಿಯಗಳನ್ನು ಸಂಯಮಿಗಳಾಗಿ ಮಾಡಿದಾಗ ಅವು ಯೋಗಸಿದ್ಧ ತಪಸ್ವಿಗಳಾಗುವುವು. ದೇಹದೊಳಗಿನ ಯಜ್ಞವಿಧಾನವು ಸರಿಯಾಗಿ ನಡೆದುದಾದರೆ ಈ ತಪಸಿದ್ಧಿಯು ದೊರೆಯುವುದು ಆಗ ಗೀತೆಯಲ್ಲಿ ಹೇಳಿದ 'ಅಹಂ ಯಜ್ಞಃ (೯. ೧೬) ಎಂಬ ಉಕ್ತಿಯು ಮನವರಿಕೆಯಾಗುವುದು.

ಅನೇನ ಪ್ರಸವಿಷ್ಯಧ್ವಮ್ ।
ಏಷವೋಽಸ್ತ್ವಿಷ್ಟಕಾಮಧುಕ್ । ಗೀ. ೩. ೧೦

'ಈ ಯಜ್ಞದಿಂದ ನಿಮ್ಮ ಏಳ್ಗೆಯಾದೀತು; ಮತ್ತು ಈ ಯಜ್ಞದಿಂದ ನೀವು ಬಯಸಿದುದು ನಿಮಗೆ ದೊರೆತೀತು.' ಇದನ್ನು ಕುರಿತು ವೇದ ಮತ್ತು ಬ್ರಾಹ್ಮಣದಲ್ಲಿ ಹೀಗೆ ಹೇಳಿದೆ:

೧. ಅಧ್ವರೋ ವೈ ಯಜ್ಞಃ ।
ಶ. ಬ್ರಾ. ೧. ೨. ೪. ೫ ; ೧. ೪. ೧. ೩೮

೨. ಯಜ್ಞೋ ವೈ ನಮಃ ।
ಯಜು. ೧೩. ೮ ; ೭. ೪. ೧. ೩೦

೩. ಯಜ್ಞೋ ವೈ ಭುಜ್ಯುಃ । ಯಜು. ೧೧. ೬

೪. ಯಜ್ಞೋ ಹಿ ಸರ್ವಾಣಿ ಭೂತಾನಿ ಭುನಕ್ತಿ ।
ಶ. ಬ್ರಾ. ೯. ೪. ೧೧

೫. ಯಜ್ಞೋ ಭಗಃ । ಯಜು ೧೦ ೭ ;
ಶ. ಬ್ರಾ. ೬. ೩. ೧. ೧೯

೬. ಯಜ್ಞೋ ವಾ ಋತಸ್ಯ ಯೋನಿಃ ।
ಯಜು. ೧೧. ೬

೭. ಯಜ್ಞೋ ವಾ ಮಧುಸಾರಘಂ ।
ಶ. ಬ್ರಾ. ೩. ೪. ೩. ೧೯

೮. ಯಜ್ಞೋ ವೈ ಮಹಿಮಾ ।
ಯಜು. ೧೧. ೬ ; ಶ. ಬ್ರಾ. ೬ ೩ ೧. ೧೮

೯. ಯಜ್ಞೋ ವೈ ಸ್ವಃ । ಯಜು. ೧. ೧೧

೧೦. ಯಜ್ಞೋ ವೈ ಸುಮ್ನಮ್ ।
ಯಜು ೧೨. ೬೭ ; ಶ ಬ್ರಾ ೭ ೨ ೨. ೪

೧೧. ಯಜ್ಞೋ ವೈ ಶ್ರೇಷ್ಠತಮಂ ಕರ್ಮ ।
ಯಜು. ೧. ೧ ; ಶ. ಬ್ರಾ. ೧. ೭. ೧. ೫

೧೨ ಯಜ್ಞೋ ವೈ ವಿಶೋ ಯಜ್ಞೇ ಹಿ
ಸರ್ವಾಣಿ ಭೂತಾನಿ ವಿಷ್ಟಾನಿ ।
ಶ. ಬ್ರಾ ೮. ೭. ೩

೧೩. ಬ್ರಹ್ಮ ಹಿ ಯಜ್ಞಃ । ಶ. ಬ್ರಾ. ೩. ೧. ೪. ೧೫

೧೪. ಯಜ್ಞೋ ವೈ ಭುವನಜ್ಯೇಷ್ಠಃ ।
ಕೌ. ಬ್ರಾ. ೨೫. ೧೧

೧೫. ಯಜ್ಞೋ ವೈ ಭುವನಸ್ಯ ನಾಭಿಃ ।
ತೈ. ಬ್ರಾ. ೩. ೯. ೫. ೫

೧೬. ತೇಜೋ ವಾ ಅತ್ರ ಯಜ್ಞಃ ।
ಶ. ಬ್ರಾ. ೭. ೩. ೩. ೯

೧೭. ಯಜ್ಞೋ ವಾ ಅವತಿ । ತಾಂ. ಬ್ರಾ. ೬. ೪. ೫

೧೮. ಭೈಷಜ್ಯಯಜ್ಞಾ ವಾ ಏತೇ ಯದ್
ಋತುಸಂಧಿಷು ಪ್ರಯುಜ್ಯಂತೇ ।
ಋತುಸಂಧಿಷು ವೈ ವ್ಯಾಧಿರ್ಜಾಯಂತೇ ।
ಗೋ. ಬ್ರಾ. ಉ. ೧. ೧೯ ; ಕೌ. ಬ್ರಾ. ೫. ೧

'(ಅ-ಧ್ವರ) ಅಹಿಂಸೆಯೂ ಒಂದು ಯಜ್ಞವೇ ಆಗಿದೆ. ವಿನಯವೂ ಯಜ್ಞವೇ. ಯಜ್ಞವು ಅನ್ನವನ್ನೀಯುವುದು. ಯಜ್ಞವು ಎಲ್ಲ ಪ್ರಾಣಿಮಾತ್ರಗಳಿಗೆ ಊಟ ಕೊಡುವುದು. ಯಜ್ಞವು ಸಂಪತ್ತು ಮತ್ತು ಸೌಭಾಗ್ಯ; ಯಜ್ಞವು ಸತ್ಯದ ಅಡಿಗಲ್ಲು. ಯಜ್ಞವು ಮಾಧುರ್ಯವುಳ್ಳದು. ಯಜ್ಞವು ಹಿರಿಮೆಯುಳ್ಳದು. ಅದು ಆತ್ಮತೇಜ ಅದು ಸುಖ, ಅತಿಶ್ರೇಷ್ಠ ಯಜ್ಞದಲ್ಲಿ ಎಲ್ಲ ಪ್ರಾಣಿಗಳಿವೆ. ಜ್ಞಾನವಿದೆ. ಲೋಕದಲ್ಲೆಲ್ಲ ಹಿರಿದಾದುದು ಅದು ಎಲ್ಲ ಸೃಷ್ಟಿಯ ಕೇಂದ್ರವಾಗಿದ್ದು ಇದೇ ವೀರ್ಯ ಮತ್ತು ಪರಾಕ್ರಮವೂ ಆಹುದು. ಯಜ್ಞವು ಎಲ್ಲರನ್ನೂ ಕಾಪಾಡುವುದು. ಈ ಯಜ್ಞವು ಔಷಧಿಗಳಿಂದ ಆಗುವುದು. ....ಆದುದರಿಂದ ಇದು ಋತುಸಂಧಿಕಾಲದಲ್ಲಿ ಮಾಡಲ್ಪಡುವುದು, ಋತುಸಂಧಿಕಾಲದಲ್ಲಿ ರೋಗಗಳು ತಲೆದೋರುತ್ತವೆ.'

ಈ ಕಾರಣದಿಂದಲೆ ಯಜ್ಞದ ವಿಶಾಲಸ್ವರೂಪವನ್ನು ನೆನೆದು ಶ್ರೀಕೃಷ್ಣನು ಗೀತೆಯಲ್ಲಿ 'ಅನೇನ ಪ್ರಸವಿಷ್ಯಧ್ವಂ; ಏಷವೋಽಸ್ತ್ವಿಷ್ಟಕಾಮಧುಕ್।' (ಗೀ ೩.೧೦) ಹೇಳಿದ್ದಾನೆ. ಇದು ಮಾನವರ ಏಳ್ಗೆಗೆ ಹೇಗೆ ಕಾರಣವಾಗುವುದೆಂಬುದನ್ನು ಮುಂದೆ ವಿವರಿಸಲಾಗುವುದು. ಇಲ್ಲಿ ಶ್ರೀಕೃಷ್ಣನೇ ಯಜ್ಞದ ಸ್ವರೂಪವನ್ನು ಹೀಗೆ ಸ್ಪಷ್ಟೀಕರಿಸುತ್ತಾನೆ:

ದೇವಾನ್ ಭಾವಯತಾನೇನ ತೇ ದೇವಾ
ಭಾವಯಂತು ವಃ
ಪರಸ್ಪರಂ ಭಾವಯಂತಃ ಶ್ರೇಯಃ
ಪರಮವಾಪ್ಸ್ಯಥ ॥ ಗೀ. ೩. ೧೧

'ನೀವು ದೇವರನ್ನು ಸಂತೋಷಗೊಳಿಸಿರಿ; ದೇವರು ನಿಮ್ಮನ್ನು ಸಂತೋಷಪಡಿಸಲಿ ಇಂತು ಒಬ್ಬರೊಬ್ಬರಿಗೆ ನೆರವಾಗಿ ನೀವು ಹಿರಿದಾದ ಶ್ರೇಯಸ್ಸನ್ನು ಹೊಂದಿರಿ.' ಒಬ್ಬರೊಬ್ಬರ ಏಳ್ಗೆಗೆ ನೆರವಾಗುವುದು ಇದೇ ಮಾನವರ ಪರಮ ಕಲ್ಯಾಣದ ಮಾರ್ಗವಾಗಿದೆಯೆಂದು ಗೀತೆಯು ಬೋಧಿಸುತ್ತಿದೆ. 'ಭಾವಯಂತಃ' (ಭಾವಯತಿ) ಇದರಲ್ಲಿ 'ಭಾವ'ವೆಂದರೆ 'ವಿಚಾರಮಾಡು; ಪಡೆ; ಮತ್ತು ಪವಿತ್ರಗೊಳಿಸು' ಎಂದ ಅರ್ಥವು ಸಂಭಾವನೆಯೆಂದರೆ ಇದೇ 'ಪೂಜೆ, ಸತ್ಕಾರ, ಇಲ್ಲವೆ ಆದರ',

ವೆಂದರೂ ಇದೇ ಅರ್ಥವು. ಸತ್ಕಾರ, ಸಂಗತಿ ಮತ್ತು ದಾನವೆಂದು ಯಜ್ಞದ ಮೂರು ಅರ್ಥಗಳೂ ಈ ಸಂಭಾವನೆಯಲ್ಲಿ ಅಡಕವಾಗಿವೆ. ಆದುದರಿಂದ 'ಪರಸ್ಪರಂ ಭಾವಯಂತಃ' ಎಂಬ ಮಾತು ಯಜ್ಞದ ಶುದ್ಧ ಸ್ವರೂಪವನ್ನು ಸೂಚಿಸುತ್ತವೆ, ಒಬ್ಬರೊಬ್ಬರನ್ನು ಸನ್ಮಾನಿಸುವುದರಲ್ಲಿಯೆ ಮಾನವರ ಪರಮಕಲ್ಯಾಣವಿದೆ.

### ಯಜ್ಞದಿಂದ ಏಳಿಗೆ.

(ಅನೇನ ದೇವಾನ್ ಭಾವಯತ; ತೇ ದೇವಾಃ ವಂ ಭಾವಯಂತು.) ಯಜ್ಞದಿಂದ ದೇವರನ್ನು ಸತ್ಕರಿಸಿರಿ. ಆ ದೇವರು ನಿಮ್ಮನ್ನು ಸತ್ಕರಿಸುವರು. ಹೀಗೆ ಒಬ್ಬರೊಬ್ಬರಿಗೆ ನೆರವಾಗಿ ನಾವು ಏಳ್ಗೆಯನ್ನು ಹೊಂದೋಣ.

'ಮಾತೃದೇವೋ ಭವ;' 'ಪಿತೃದೇವೋ ಭವ.' ತಾಯಿತಂದೆಗಳು ಮಕ್ಕಳನ್ನು ಕಕ್ಕುಲತೆಯಿಂದ ಕಾಪಾಡಿ ಹಿಗ್ಗಿಸಲಿ. ಮಕ್ಕಳು ತಾಯಿತಂದೆಗಳಿಗೆ ತಮ್ಮ ನಯವಿನಯಗಳಿಂದ ನಲಿಸಲಿ. ಹೀಗೆ ಮನೆಯಲ್ಲಿ, ಸಮಾಜದಲ್ಲಿ, ರಾಷ್ಟ್ರದಲ್ಲಿ ಒಬ್ಬರು ಇನ್ನೊಬ್ಬರಿಗೆ ನೆರವಾಗಿ ಹಿಗ್ಗಿಸಲಿ; ತಾವೂ ಹಿಗ್ಗಲಿ. ಎಂದರೆ ವಿಸ್ತಾರಹೊಂದಲಿ. ಏಳ್ಗೆಗೊಳ್ಳಲಿ. ಆನಂದಿಸಲಿ.

### ಜ್ಞಾನಯಜ್ಞ.

'ಆಚಾರ್ಯದೇವೋ ಭವ.' ಗುರುವು ಶಿಷ್ಯನಿಗೆ ತಾನು ಕಲಿತುದನ್ನು ಕಲಿಸಲಿ. ತಿಳಿದುದನ್ನು ಬೆಳಗಿಸಲಿ. ಶಿಷ್ಯನು ಗುರುವಿನ ಹಿರಿಮೆಗೆ ಕಾರಣನಾಗಿ ಆತನ ಹೆಸರನ್ನು ಮುಂದೆ ತರಲಿ. ಆತನಿಗೆ ಸಂತೋಷವನ್ನುಂಟುಮಾಡಲಿ. ಒಬ್ಬರನ್ನೊಬ್ಬರು ಪ್ರೀತಿಸುವ ಗುರುಶಿಷ್ಯರ ಉನ್ನತಿಯಾಗುವಂತೆ ಅವರಲ್ಲಿ ಸಂದೇಹ, ವಿರೋಧಗಳಿದ್ದರೆ ಆಗದು.

### ರಾಷ್ಟ್ರಯಜ್ಞ.

'ಪ್ರಜಾಪತಿಯು ಯಜ್ಞಮಾಡಿದನು' ಎಂದು ಬ್ರಾಹ್ಮಣಾದಿ ಗ್ರಂಥಗಳಲ್ಲಿ ಬರುತ್ತದೆ. ಪ್ರಜಾಪಾಲನವನ್ನು ಮಾಡುವುದು ಎಂದೇ ಇದರ ಅರ್ಥವು. ಅಧಿಕಾರಿಗಳಾಗಿದ್ದವರು ತಮ್ಮ ಪಾಲಿನ ಕರ್ತವ್ಯವನ್ನು ನಿರ್ವಂಚನೆಯಿಂದ ಜರುಗಿಸುವುದೇ ರಾಷ್ಟ್ರಯಜ್ಞವು. ಹೀಗೆ ರಾಜ-ಪ್ರಜರು ಒಬ್ಬರೊಬ್ಬರೊಡನೆ ನ್ಯಾಯನೀತಿಗಳಿಂದ ನಡೆದುಕೊಳ್ಳುವುದರಿಂದಲೆ ಆ ನಾಡಿನ ಜನರ ವೈಭವ ಸುಖಗಳು ಬೆಳೆಯುವವು; ಏಳ್ಗೆಯಾಗುವುದು.

### ಪುರುಷಯಜ್ಞ.

ಇಂದ್ರಿಯಗಳು ಮತ್ತು ಆತ್ಮವು ಮಾನವಶರೀರದಲ್ಲಿ ಪರಸ್ಪರ ಸಹಾಯಕರಾಗಿ ನಡೆದರೆ ಆ ಮನುಷ್ಯನ ಉನ್ನತಿಯಾಗುತ್ತದೆ. ಇಂದ್ರಿಯಗಳು ಎಳೆಸುವುದು ಒಂದನ್ನು; ಆತ್ಮವು ಅದು ಹಿತಕರವಲ್ಲವೆಂದು, ಅದನ್ನು ವಿರೋಧಿಸುವುದು; ಅಥವಾ ಆತ್ಮವು ತನ್ನ ಗುರಿಯನ್ನು ಸಾಧಿಸಲು ಇಂದ್ರಿಯಗಳಿಗೆ ಕೆಲವೊಂದು ವಿಶಿಷ್ಟರೀತಿಯಲ್ಲಿ ನಡೆಯಲು ಹೇಳಿದರೆ ಅವು ಅವನ್ನು ಎದುರಿಸುವುದು, ಹೀಗಾದಲ್ಲಿ ಈ ತಿಕ್ಕಾಟದಲ್ಲಿ ಆ ಮನುಷ್ಯನ ಆಯುಸ್ಸು, ಶಕ್ತಿಗಳು ವ್ಯರ್ಥವಾಗಿ ಹಾಳಾಗಿ ಆತನು ಏತಕ್ಕೂ ಬಾರದಾಗುವನು.

### ದೇವಯಜ್ಞ.

ಈ ಲೋಕದಲ್ಲಿ ಪೃಥ್ವಿ, ಅಪ್, ತೇಜ, ವಾಯು, ಆಕಾಶ, ಸೂರ್ಯ, ನಕ್ಷತ್ರ ವೃಕ್ಷ, ವನಸ್ಪತಿ ಇವೇ ಮೊದಲಾದ ಹಲವು ದೇವತೆಗಳಿವೆ. ಇವೆಲ್ಲವೂ ಮಾನವನಿಗೆ ನಾನಾಬಗೆಯಿಂದ ನೆರವಾಗುತ್ತಲಿವೆ. ಭೂಮಿಯು ನಮ್ಮನ್ನು ಹೊತ್ತು ಅನ್ನವನ್ನಿತ್ತು ಕಾಪಾಡುವುದು; ವಾಯುವು ಪ್ರಾಣಪನೀಯುವನು. ಸೂರ್ಯನು ತೇಜಸ್ಸನ್ನು ನೀಡುವನು, ಮಾನವನ ಬಾಳು ಇಂತಿವೆಲ್ಲ ದೇವತೆಗಳ ಪ್ರಸನ್ನತೆಯಮೇಲೆಯೆ ಅವಲಂಬಿಸಿದೆ. ಆದುದರಿಂದ ಮಾನವನು ಆ ದೇವತೆಗಳನ್ನು ಒಲಿಸಿಕೊಳ್ಳಲು ಅವುಗಳನ್ನು ಆರಾಧಿಸುವುದು ಆತನ ಕರ್ತವ್ಯವಾಗಿದೆ. ಮಾತೃಭೂಮಿಗಾಗಿ ಆತ್ಮಾರ್ಪಣಮಾಡಿದಲ್ಲಿ ನೆಲತಾಯಿಯ ಪೂಜೆಮಾಡಿದಂತಾಯಿತು. ಜಲಾಶಯಗಳ ಪಾವಿತ್ರ್ಯವನ್ನು ಕಾಯುವಂತೆ ಸ್ವಚ್ಛತೆಯಿಂದ ಅಲ್ಲಿ ನಡೆದುಕೊಂಡರೆ ಜಲದೇವರ ಆರಾಧನೆಮಾಡಿದಂತಾಯಿತು ಇದೇ ಬಗೆಯಾಗಿ ಉಳಿದ ದೇವತೆಗಳನ್ನೂ ಯೋಗ್ಯರೀತಿಯಿಂದ ಸತ್ಕರಿಸಲು ನಾವು ಕಲಿಯಬೇಕು. ಇದರಿಂದ ಪರಸ್ಪರ ಲಾಭವುಂಟು.

ಯಜ್ಞವು ಹಲವು ವಿಧವಾಗಿದೆ. ದ್ರವ್ಯಯಜ್ಞ; ತಪೋಯಜ್ಞ, ಸ್ವಾಧ್ಯಾಯಯಜ್ಞ, ಪ್ರಾಣಾಯಾಮಯಜ್ಞ ಮೊದಲಾದ ಅನೇಕ ಪ್ರಕಾರಗಳಿವೆ. ಇವೆಲ್ಲವುಗಳನ್ನೂ ಸರಿಯಾಗಿ ಅರಿತುಕೊಂಡು ಆಚರಿಸಬೇಕು. ಅದರಲ್ಲಿಯೆ ಕಲ್ಯಾಣವಿದೆ.

'ಯಜ್ಞಭಾವಿತಃ ದೇವಾಃ ಇಷ್ಟಾನ್ ಭೋಗಾನ್ ದಾಸ್ಯಂತೇ.' ಯಜ್ಞದಿಂದ ನಲಿದ ದೇವರು ಎಲ್ಲರಿಗೂ ಬೇಕಾದ ಭೋಗಗಳನ್ನು ಕೊಡುವರು ಯಜ್ಞದಿಂದ ಸನ್ಮಾನಿತರಾದ ದೇವರು ಬೇಡಿದ ಸುಖಕೊಡುವರು. ಅಪಮಾನಿತರು ಮುನಿದು ನಮ್ಮ ನಾಶಕ್ಕೂ ಕಾರಣರಾಗುವರು. ಬ್ರಹ್ಮಚರ್ಯಾದಿ ನಿಯಮಗಳ ಪಾಲನದಿಂದ ಸಂತುಷ್ಟರಾದ ಇಂದ್ರಿಯ(ದೇವರು) ಗಳು, ಆ ವ್ಯಕ್ತಿಗೆ ಆರೋಗ್ಯಸಂಪತ್ತನ್ನೂ ದೀರ್ಘಾಯುಸ್ಸನ್ನೂ ದಯ-

ಪಾಲಿಸುವರು. ಆದರೆ ಅನಾಚಾರಿಯಾಗಿ ನಡೆದವನಿಗೆ ಬಡತನವನ್ನೂ ಅಕಾಲಮರಣವನ್ನೂ ತಂದೊಡ್ಡುವರು. ಇಂತಹ ದೈನಂದಿನ ಅನುಭವದಿಂದ ಯಜ್ಞಮಹಿಮೆಯನ್ನು ಚೆನ್ನಾಗಿ ಅರಿತುಕೊಳ್ಳಬಹುದಾಗಿದೆ.

'ತೈಃ ದತ್ತಾನ್ ಏಭ್ಯಃ ಅಪ್ರಾಣಾಯ ಯಃ ಭುಂಕ್ತೇ ಸ ಸ್ತೇನಃ' ಈ ದೇವತೆಗಳು ದಯಪಾಲಿಸಿದುದರಲ್ಲಿ ಕೆಲವೊಂದು ಭಾಗವನ್ನು ಮರಳಿ (ಜನಗಳಿಗೆ) ಕೊಡದೆ ತಾನೇ ಎಲ್ಲವನ್ನೂ ಉಪಯೋಗಿಸುವಾತನೂ ಕಳ್ಳನೆನಿಸುವನು. ಲೋಕವ್ಯವಹಾರಗಳು ಸಮರ್ಪಕವಾಗಿ ಸಾಗಬೇಕಾದರೆ ಕೊಟ್ಟು ಕೊಳ್ಳುವ ಕೆಲಸವು ನಿರ್ವಂಚನೆಯಿಂದ ನಡೆಯಬೇಕು. ಬಂದ ಧನವು ಒಬ್ಬನಲ್ಲಿಯೆ ಕೂಡಿಬೀಳಲಾರಂಭಿಸಿದರೆ ಆದರಿಂದ ಉಳಿದವರ ಹೊಟ್ಟೆಯುಲ್ಲಿ ಕಿಚ್ಚಿದ್ದು ಆ ಸಂಗ್ರಹಕಾರನನ್ನು ಸುಡದೆ ಬಿಡದು. ಈ ಕಾರಣದಿಂದಾದರೂ ತನ್ನಲ್ಲಿದ್ದುದನ್ನು ಇನ್ನೊಬ್ಬನಿಗೆ ಕೊಡುವದು ಜಾಣ್ಮೆಯೆನಿಸುವುದು. ಆದರೆ ಇದು ಕೇವಲ ಧೂರ್ತವ್ಯವಹಾರವಾಯಿತು. ಇದರಲ್ಲಿ ಪಾವಿತ್ರ್ಯವಿಲ್ಲ. ತನ್ನಂತೆ ಇನ್ನುಳಿದವರೂ, ಎಂಬ ಭಾವನೆಯು ಜಾಗ್ರತವಾಗಿ ಆ ಸದ್ಭಾವದಿಂದ ತನ್ನಂತೆ ಇನ್ನುಳಿದವರೂ ಸುಖಿಗಳಾಗಲಿ, ಸಮಾಧಾನದಿಂದಿರಲಿ, ಎಂದು ತನಗೆ ದೇವರು ಕೊಟ್ಟುದನ್ನು ನೆರೆಹೊರೆಯವರಿಗೂ ಕೊಡುವದೇ ಮಿಗಿಲು. ಇದುವೆ ನಿಜವಾದ ಯಜ್ಞವಿಧಾನ

ಇದೇ ಮಾತನ್ನೇ ಗೀತೆಯ ಇನ್ನೊಂದು ಶ್ಲೋಕದಲ್ಲಿ ಹೇಗೆ ಹೇಳಿದೆ:

'ಆತ್ಮಕಾರಣಾತ್ ಪಚಂತಿ, ತೇ ಪಾಪಾಃ ಅಘಂ ಭುಂಜಂತಿ.' ಯಾರು ಕೇವಲ ತಮಗಾಗಿಯೆ ಕೂಳು ಬೇಯಿಸುವರೋ ಆ ಪಾಪಿಗಳು ಪಾಪವನ್ನೆ ತಿನ್ನುತ್ತಾರೆ. ಅಯಜ್ಞೆಯು ಭೋಗಿಸುವುದೆಲ್ಲವೂ ಪಾಪಕ್ಕೇ ಕಾರಣ. ವೇದಗಳಲ್ಲಿ ಸ್ವಾರ್ಥಿಗಳಿಗೆ 'ಅ-ರಾತಿ' ಎಂಬ ಹೆಸರಿದೆ, 'ಅರಾತಿ' ಎಂದರೆ ದಾನಮಾಡದವನು. ದಾನವೀಯದವನು ಅಯಜ್ಞೀಯು. ಅಯಜ್ಞೀಯು ಸಮಾಜದ ಶತ್ರುವು. 'ಅರಾತಿ' ಎಂದರೂ ಶತ್ರುವೆಂದೇ ಅರ್ಥವು. ಈಗ ಇದಕ್ಕೆ ಇಷ್ಟೇ ಅರ್ಥವು ಉಳಿದಿದೆ. ವೇದಗಳಲ್ಲಿ ಈ ಭಾವನೆ ಒಂದು ಸ್ವತಂತ್ರ ಸೂಕ್ತದಲ್ಲಿ ಬಂದಿದೆ. ಅದು:

**ನ ವಾ ಉ ದೇವಾಃ ಕ್ಷುಧಮಿದ್ವಧಂ ದದುರುತಾಶಿತಮುಪಗಚ್ಛಂತಿ ಮೃತ್ಯವಃ। ಉತೋ ರಯಿಃ ಪೃಣತೋ ನೋಪದಸ್ಯತ್ಯುತಾಪೃಣನ್ ಮರ್ಡಿತಾರಂ ನ ವಿಂದತೇ ॥ ೧ ॥ ಯ ಆಧ್ರಾಯ ಚಕಮಾನಾಯ ಪಿತ್ವೋಽನ್ನವಾನ್ತ್ಸನ್ರಫಿತಾಯೋಪಜಗ್ಮುಷೇ। ಸ್ಥಿರಂ ಮನಃ ಕೃಣುತೇ ಸೇವತೇ ಪುರೋತೋ ಚಿತ್ಸ ಮರ್ಡಿತಾರಂ ನ ವಿಂದತೇ ॥ ೨ ॥ ಸ ಇದ್ಭೋಜೋ ಯೋ ಗೃಹವೇ ದದಾತ್ಯನ್ನಕಾಮಾಯ ಚರತೇ ಕೃಶಾಯ। ಅರಮಸ್ಮೈ ಭವತಿ ಯಾಮಹೂತಾ ಉತಾಪರೀಷು ಕೃಣುತೇ ಸಖಾಯಮ್ ॥ ೩ ॥ ನ ಸ ಸಖಾ ಯೋ ನ ದದಾತಿ ಸಖ್ಯೇ ಸಚಾಭುವೇ ಸಚಮಾನಾಯ ಪಿತ್ವಃ। ಅಪಾಸ್ಮಾತ್ಪ್ರೇಯಾನ್ನ ತದೋಕೋ ಅಸ್ತಿ ಪೃಣಂತಮನ್ಯಮರಣಂ ಚಿದಿಚ್ಛೇತ್ ॥ ೪ ॥ ಮೋಘಮನ್ನಂ ವಿಂದತೇ ಅಪ್ರಚೇತಾಃ ಸತ್ಯಂ ಬ್ರವೀಮಿ ವಧ ಇತ್ಸ ತಸ್ಯ। ನಾರ್ಯಮಣಂ ಪುಷ್ಯತಿ ನೋ ಸಖಾಯಂ ಕೇವಲಾಘೋ ಭವತಿ ಕೇವಲಾದೀ ॥ ೫ ॥**

ಋಕ್. ೧೦ ೧೧೭

"ದೇವರು ಹಸಿವೆಯನ್ನು ಬಡವರಿಗೆ ಮಾತ್ರ ಜೆಂಬತ್ತುವಂತೆ ಮಾಡಿರುವದಿಲ್ಲ. ಏಕೆಂದರೆ ಹೊಟ್ಟೆ ಬಿರಿವಂತೆ ಉಣ್ಣುವ ಸಿರಿವಂತರೂ ಸಾವಿಗೆ ಈಡಾಗುತ್ತಾರೆ. ಬಡವರಿಗೆ ಕೈಯೆತ್ತಿ ಕೊಡುವವನ ಹಣವು ಕಡಿಮೆಯಾಗದೆ ಹೆಚ್ಚಾಗುವದು. ಆದರೆ ಕೊಡದವನಿಗೆ ಹಿತಕರ್ತನಾದ ವಬ್ಬ ಗೆಳೆಯನೂ ದೊರೆಯುವುದಿಲ್ಲ. 'ಭೋಜಃ' ಎಂದರೆ ನಿಜವಾದ ಭೋಜನಮಾಡುವವನು. ಮತ್ತು ರೊಟ್ಟಿಗಾಗಿ ಮನೆಮನೆಗೆ ತಿರುಗುವ ಬಡ ತಿರುಕನು (ಅನ್ನ-ಕಾಮಾಯ ಕೃಶಾಯ ಚರತೇ), ತನ್ನ ಮನೆಗೆ ಬಂದಾಗ ಯಾವನು ಅನ್ನವನ್ನಿಕ್ಕುವನೊ (ಗೃಹವೇ ದದಾತಿ) ಅತನಲ್ಲಿ ಸಂಪತ್ತು ಸಮೃದ್ಧವಾಗಿರುವದು. ಅತನ ಹಗೆಗಳೂ ಕೆಳೆಯರಾಗುವರು. ತನ್ನ ಕೆಳೆಯರಿಗೂ ಜೆಂಬಲಿಗರಿಗೂ ಕೂಡ ಯಾವನು ಕೈಯೆತ್ತಿ ಒಂದು ಕಾಸನ್ನೂ ಕೊಡಲಾರನೊ ಅತನು ಯಾರ ನಿಜವಾದ ಗೆಳೆಯನೂ ಅಲ್ಲ. ಎಲ್ಲರೂ ಅವನಿಂದ ದೂರಸರಿಯುವುದೇ ಹಿತಕರ. ಅತನ ಮನೆಯು ಮನೆಯೇ ಅಲ್ಲ. (ನ ಸ ಓಕಃ ಅಸ್ತಿ), ಆದುದರಿಂದ ಬೇರೆ ಕೊಡುಗೆಯ್ಯುವನಲ್ಲಿ ಹೋಗಬೇಕು. ಇನ್ನೊಬ್ಬರ ವಿಷಯದಲ್ಲಿ ಸಹಾನುಭೂತಿ, ಕರುಣವಿಲ್ಲದವನು ಮಾನವನೇ ಅಲ್ಲ. ಅತನಿಗೆ ಎಷ್ಟು ಸಂಪತ್ತು ಸಿಕ್ಕರೂ ಅದು ನಿರುಪಯುಕ್ತ. ನಾನು ನಿಜವಾಗಿ ಹೇಳುತ್ತೇನೆ. ಅತನಿಗೆ ದೊರೆತುದು ಅದು ಧನವಲ್ಲ; ಮರಣ. ತನ್ನ ಗೆಳೆಯರ ಅಥವಾ ಸಜ್ಜನರಿಗೆ ಸಹಾಯವನ್ನು ಕೊಡದೆ ತಾನೇ ಉಪಯೋಗಿಸುವವನು (ಕೇವಲಾದೀ), ಕೇವಲ ಪಾಪಿಯೇ ಆಗುತ್ತಾನೆ. (ಕೇವಲ ಅಘಃ ಭವತಿ)."

ಇದೆಲ್ಲವೂ 'ದಾನಯಜ್ಞ'ವನ್ನು ಕುರಿತು ವೇದದಲ್ಲಿ ಹೇಳಿದ್ದು ಈ ಮಾತಾಯಿತು. ಗೀತೆಯಲ್ಲಿಯೂ ವೇದದಲ್ಲಿ ಬಂದ ಕೊನೆಯ ಮಾತನ್ನೇ ಎತ್ತಿಕೊಂಡುದನ್ನು ಈ ಶ್ಲೋಕದಿಂದ ಮನಗಾಣಬಹುದಾಗಿದೆ.

ಅನ್ನಾದ್ಭವಂತಿ ಭೂತಾನಿ ಪರ್ಜನ್ಯಾದನ್ನಸಂಭವಃ ।
ಯಜ್ಞಾದ್ಭವತಿ ಪರ್ಜನ್ಯೋ ಯಜ್ಞಃ ಕರ್ಮಸಮುದ್ಭವಃ ॥ ೧೪ ॥
ಕರ್ಮ ಬ್ರಹ್ಮೋದ್ಭವಂವಿದ್ಧಿ ಬ್ರಹ್ಮಾಕ್ಷರ ಸಮುದ್ಭವಮ್ ।
ತಸ್ಮಾತ್ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ ॥ ೧೫ ॥

---

ಅನ್ವಯ:— ಭೂತಾನಿ ಅನ್ನಾತ್ ಭವಂತಿ; ಪರ್ಜನ್ಯಾತ್ ಅನ್ನಸಂಭವಃ; ಪರ್ಜನ್ಯಃ ಯಜ್ಞಾತ್ ಭವತಿ; ಯಜ್ಞಃ ಕರ್ಮಸಮುದ್ಭವಃ ॥ ೧೪ ॥ ಕರ್ಮ ಬ್ರಹ್ಮೋದ್ಭವಂ ವಿದ್ಧಿ ; ಬ್ರಹ್ಮ ಅಕ್ಷರ ಸಮುದ್ಭವಂ ; ತಸ್ಮಾತ್ ಸರ್ವಗತಂ ಬ್ರಹ್ಮ ಯಜ್ಞೇ ನಿತ್ಯಂ ಪ್ರತಿಷ್ಠಿತಮ್ ॥ ೧೫ ॥

ಪ್ರಾಣಿಗಳೆಲ್ಲವೂ ಅನ್ನದಿಂದ ಉಂಟಾಗುವುವು. ಅನ್ನವು ಮಳೆಯಿಂದಾಗುವುದು. ಮಳೆ ಯಜ್ಞದಿಂದ ಬರುವುದು. ಯಜ್ಞವು ಕರ್ಮಮೂಲವಾಗಿ ನೆರವೇರುವುದು. ॥ ೧೪ ॥ ಕರ್ಮವು (ನಿಯಮಗಳ) ತಿಳಿವಳಿಕೆಯಿಂದಲೂ ತಿಳಿವಳಿಕೆಯು ಅಕ್ಷರ ಪರಮಾತ್ಮನಿಂದಲೂ ಹುಟ್ಟುತ್ತದೆ. ಆದುದರಿಂದ ಸರ್ವವ್ಯಾಪಕನಾದ ಪರಮಾತ್ಮನು ಯಜ್ಞದಲ್ಲಿ ನೆಲೆಯಾಗಿ ನಿಂತಿರುತ್ತಾನೆ.

ಭಾವಾರ್ಥ:— ಸರ್ವವ್ಯಾಪಕನಾದ ಜ್ಞಾನಸ್ವರೂಪಿಯಾದ ಪರಮಾತ್ಮನಿಂದ ಕರ್ಮವಿಧಾನದ ಜ್ಞಾನವಾಗುತ್ತದೆ ಈ ಜ್ಞಾನದಿಂದ ಕರ್ಮ, ಕರ್ಮದಿಂದ ಯಜ್ಞವು. ಯಜ್ಞದಿಂದ ಮಳೆಯು, ಮಳೆಯಿಂದ ಅನ್ನವು ಅನ್ನದಿಂದ ಪ್ರಾಣಿಮಾತ್ರಗಳೂ ಉಂಟಾಗುತ್ತವೆ. ಆದುದರಿಂದ ಸರ್ವವ್ಯಾಪಕನಾದ ಜ್ಞಾನರೂಪಿಯಾದ ಸಾಕ್ಷಾತ್ ಅಕ್ಷರ ಪರಮಾತ್ಮನೇ ಯಾವಾಗಲೂ ಯಜ್ಞಕಾರ್ಯದಲ್ಲಿ ಪ್ರತ್ಯಕ್ಷವಾಗಿರುತ್ತಾನೆ.

---

ಕೇವಲಾಘೋ ಭವತಿ ಕೇವಲಾದೀ ।
ಋ. ೧೦-೧೧೭-೬

ಭುಂಜತೇ ತೇ ತ್ವಘಂ ಪಾಪಾ ಯೇ
ಪಚಂತ್ಯಾತ್ಮ ಕಾರಣಾತ್ । ಗೀ. ೩-೧೩

ವೇದದಲ್ಲಿ 'ಕೇವಲಾದೀ' ಎಂದಿದ್ದರೆ ಅದೇ ಮಾತು ಗೀತೆಯಲ್ಲಿ 'ಪಚಂತಿ ಆತ್ಮಕಾರಣಾತ್' ಎಂದು ಬಂದಿದೆ. ಗೀತೆಯು ವೇದವನ್ನು ಅನುಸರಿಸಿದೆ.

ಯಜುರ್ವೇದದಲ್ಲಿ ಇದನ್ನು ಕುರಿತು ಹೀಗೆ ಬಂದಿದೆ:

ತ್ಯಕ್ತೇನ ಭುಂಜೀಥಾಃ, ಮಾ ಗೃಧಃ,
ಕಸ್ಯಸ್ವಿದ್ಧನಮ್ । ೪೦-೧

ತ್ಯಾಗಿಯೆ ಭೋಗಿ. ಕಾರಣ ತ್ಯಾಗಮಾಡಿ ಭೋಗಿಸು. ಆಸೆಪಡಬೇಡ. ಧನವು ಯಾರದು? ಹುಟ್ಟುವಾಗ ಯಾರು ತರಲಿಲ್ಲ. ಹೋಗುವಾಗ ಒಯ್ಯಲಿಲ್ಲ. ಇದು ಎಲ್ಲರ ಸಂಪತ್ತು. ಎಲ್ಲರಿಗಾಗಿ ಇರುವ ಸಂಪತ್ತು. ಆದಕಾರಣ ಇದನ್ನು ಎಲ್ಲರಿಗೂ ಕೊಟ್ಟು ನೀನೂ ಆನಂದಿಸು. ಎಂದು ಯಜುರ್ವೇದದ ಸಂದೇಶವು.

ಯಜ್ಞಶಿಷ್ಟಾಶಿನಃ ಸಂತೋ ಮುಚ್ಯಂತೇ
ಸರ್ವಕಿಲ್ಬಿಷೈಃ । ೩-೧೩

'ಯಜ್ಞಮಾಡಿ ಎಂದರೆ ಕೊಟ್ಟು ಉಣ್ಣುವನು ಎಲ್ಲ ಪಾಪದಿಂದಲೂ ಮುಕ್ತನಾಗುವನು.' ಯಜ್ಞಮಾಡಿ ಉಳಿದುದು ಪ್ರಸಾದ. ಪ್ರಸಾದ ಸೇವನೆಯಿಂದ ಎಲ್ಲ ಪಾಪಗಳೂ ದೂರವಾಗುವುವು. ಯಜ್ಞಶೇಷವು ಪುಣ್ಯಕರ ಆದುದರಿಂದ ದಿನಾಲು ಮಾಡಿದ ಅಡುಗೆಯಲ್ಲಿ ದೇವಯಜ್ಞ, ಭೂತಯಜ್ಞವಾಗಿ ಅತಿಥಿಗಳಿಗೆ ನೀಡಿ ಉಳಿದುದನ್ನು 'ಯಜ'ಮಾನನು ಸ್ವೀಕರಿಸಬೇಕೆಂದು ಧರ್ಮಶಾಸ್ತ್ರವು ವಿಧಿಸುತ್ತದೆ.

ಯಜ್ಞ'ವೆಂದರೆ ಕೇವಲ ಹೋಮಹವನಗಳೆಂಬ ಅಪಾರ್ಥವು. ನಮ್ಮ ಜನಗಳನ್ನು ತಪ್ಪುದಾರಿಗೆ ಒಯ್ದಿದೆ. ಯಜ್ಞವೆಂದರೆ ಕೊಡುಗೆ. ಯಜ್ಞವೆಂದರೆ ಪರೋಪಕಾರ. ಯಜ್ಞಶೇಷವೆಂದರೆ ಉಪಕಾರಮಾಡಿ ಊಟ ಮಾಡುವುದು. ಬಾಳುವುದು. ಈ ವಿಚಾರವಾಗಿ ಹೆಚ್ಚಿನ ವಿವರ ಮುಂದೆ ಬರುವುದು. ಈಗ ಯಜ್ಞವಿಚಾರದಲ್ಲಿ ಶ್ರೀಕೃಷ್ಣನು ಹೇಳುವುದರ ಕಡೆಗೆ ಹೊರಳುವ.

(೧೪-೧೫) ಈ ಶ್ಲೋಕದಲ್ಲಿ ಪರಮಾತ್ಮನು ಯಜ್ಞದಲ್ಲಿ ತಾನೇ ಇರುವೆನೆಂದು ವಿವರಿಸಿ ಹೇಳುತ್ತಾನೆ. ಅದು ಎಂತೆಂದರೆ,

### ಅನ್ನದಿಂದ ಪ್ರಾಣಿಗಳು.

(ಅನ್ನಾತ್ ಭೂತಾನಿ ಭವಂತಿ) ಅನ್ನದಿಂದ ಪ್ರಾಣಿಮಾತ್ರಗಳು ಹುಟ್ಟುವುವು. ಇದನ್ನೇ ಉಪನಿಷತ್ತಿನಲ್ಲಿಯೂ ಕಾಣಬಹುದು,

೧. ಯೋ ವೈ ಸಾ ಮೂರ್ತಿಃ ಅಜಾಯತ
ಅನ್ನಂ ವೈ ತತ್ | ಐ. ಉ. ೩. ೨

೨. ಅನ್ನೇ ಹೀಮಾನಿ ಸರ್ವಾಣಿ ಭೂತಾನಿ
ವಿಷ್ಟಾನಿ | ಬೃ. ಉ. ೫ ೧೨. ೧

೩. ಅನ್ನಾದ್ವೈ ಪ್ರಜಾಃ ಪ್ರಜಾಯಂತೇ |
ಅಥೋ ಅನ್ನೇನ ಜೀವಂತಿ | ತೈ. ಉ. ೨. ೨. ೧

೪. ಅನ್ನಾದ್ಭೂತಾನಿ ಜಾಯಂತೇ
ಜಾತಾನ್ಯನ್ನೇನ ವರ್ಧಂತೇ | ತೈ. ಉ. ೨ ೨೧

೫. ಅನ್ನಂ ನ ನಿಂದ್ಯಾತ್ ; ತದ್ ವ್ರತಂ ;
ಪ್ರಾಣೋ ವಾ ಅನ್ನಮ್ | ತೈ. ಉ. ೩. ೭. ೧

೬. ಪರಂ ವಾ ಏತದಾತ್ಮನೋ ರೂಪಂ
ಯದನ್ನಮ್ | ಮೈ. ಉ. ೬. ೧೧

೭. ಪ್ರಾಣೋ ವಾ ಅನ್ನಸ್ಯ ರಸಃ | ಮೈ. ಉ. ೬. ೧೩

೮. ಅನ್ನಂ ವಾ ಅಸ್ಯ ಸರ್ವಸ್ಯ ಯೋನಿಃ |
ಮೈ. ಉ. ೬. ೧೪

೯. ಅನ್ನಾತ್ ಭೂತಾನಾಮ್ ಉತ್ಪತ್ತಿಃ |
ಮೈ. ಉ. ೬ ೩೭

೧೦. ಓಷಧಿವನಸ್ಪತಿಭಿರನ್ನಂ ಭವತಿ |
ಮ. ನಾರಾ. ೭೩. ೧

೧೧. ಅನ್ನಂ ವೈ ಪ್ರಜಾಪತಿಃ |
ಪ್ರಶ್ನ. ೧ ೧೪

೧೨. ಅನ್ನಂ ಬ್ರಹ್ಮ | ತೈ. ಉ. ೩ ೨.೧

"ಈ ಆಕಾರವುಳ್ಳ ಒಡಲು ಅದುವು ಅನ್ನವೇ. ಅನ್ನದಲ್ಲಿಯು ಎಲ್ಲ ಪ್ರಾಣಿಮಾತ್ರಗಳು ಇರುವುವು. ಅನ್ನದಿಂದ ಪ್ರಜಾನಿರ್ಮಾಣ; ಅನ್ನದಿಂದಲೇ ಅವುಗಳ ಜೀವನ. ಅನ್ನದಿಂದಲೇ ಪ್ರಾಣಿ ಸೃಷ್ಟಿಯು ಹುಟ್ಟು; ಅನ್ನದಿಂದಲೆ ಅವರ ಬೆಳಗೆ. ಅನ್ನವೆ ವ್ರತವು; ಆದಕಾರಣ ಅದನ್ನು ನಿಂದಿಸಲಾಗದು. ಅನ್ನವೆ ಪ್ರಾಣ: ಆತ್ಮನ ಪರರೂಪವೂ ಅನ್ನವೆ. ಅನ್ನವೇ ಎಲ್ಲರ ಹುಟ್ಟು. ಅದರಿಂದಲೆ ಎಲ್ಲ ಜೀವಿಗಳು ಬೆಳೆದು ಬಾಳುವುದು. ಓಷಧಿವನಸ್ಪತಿಗಳಿಂದ ಅನ್ನವುಂಟಾಗುತ್ತದೆ. ಪ್ರಜಾಪತಿ ಎಂದರೆ ಪ್ರಜೆಗಳನ್ನು ಕಾಪಾಡುವವನು ಅನ್ನವೇ. ಆದುದರಿಂದ ಅನ್ನವೇ ಬ್ರಹ್ಮವು."

ಇದರ ಉತ್ಪತ್ತಿಕ್ರಮವನ್ನು ಉಪನಿಷತ್ತಿನಲ್ಲಿ
ಹೀಗೆ ಹೇಳಿದೆ:

ಆತ್ಮನ ಆಕಾಶಃ ಸಂಭೂತಃ | ಆಕಾಶಾದ್ವಾಯುಃ | ವಾಯೋರಗ್ನಿಃ | ಅಗ್ನೇರಾಪಃ | ಅದ್ಭ್ಯಃ ಪೃಥಿವೀ | ಪೃಥಿವ್ಯಾ ಓಷಧಯಃ | ಓಷಧಿಭ್ಯೋಽನ್ನಮ್ | ಅನ್ನಾತ್ಪುರುಷಃ | ಸವಾ ಏಷ ಪುರುಷೋಽನ್ನರಸಮಯಃ |

—ತೈ. ಉ ೨. ೧.೧

"ಆತ್ಮನಿಂದ ಆಕಾಶವು; ಆಕಾಶದಿಂದ ವಾಯುವು; ವಾಯುವಿನಿಂದ ಅಗ್ನಿ; ಅಗ್ನಿಯಿಂದ ನೀರು; ನೀರಿನಿಂದ ನೆಲ; ನೆಲದಿಂದ ಗಿಡಗಂಟೆ; ಗಿಡಗಂಟೆಯಿಂದ ಅನ್ನ; ಅನ್ನದಿಂದ ಒಡಲು; ಈ ಒಡಲು ಅನ್ನ ರಸಮಯವಾಗಿದೆ"

### ಮಳೆಯಿಂದ ಬೆಳೆ.

(ಪರ್ಜನ್ಯಾತ್ ಅನ್ನ ಸಂಭವಃ) ಮಳೆಯಿಲ್ಲದೆ ಬೆಳೆ ಬಾರದು. ಬೆಳೆಯಿಲ್ಲದ ಅನ್ನ ದೊರೆಯಲಾರದೆಂಬುದನ್ನು ವಿವರಿಸಿ ಹೇಳುವುದು ಅನವಶ್ಯಕ ಇದು ಎಲ್ಲರೂ ಮನಗಂಡವಾತಾಗಿದೆ. ವೇದದಲ್ಲಿ ಮಳೆಗೆ (ಮುಗಿಲಿನೊಳಗಿನ) ಪ್ರಾಣರಸವೆಂದೇ ಹೇಳಲಾಗಿದೆ.

ಯತ್ಪ್ರಾಣಸ್ತನಯಿತ್ನುನಾಭಿಕಂದ
ತ್ಯೋಷಧೀಃ |
ಪ್ರವೀಯಂತೇ ಗರ್ಭಾಂದಧತೇಥೋ
ಬಹ್ವೀರ್ವಿಜಾಯಂತೇ || ೩ ||
ಯತ್ಪ್ರಾಣ ಋತಾವಾಗತೇಽಭಿಕಂದ
ತ್ಯೋಷಧೀಃ |
ಸರ್ವಂ ತದಾ ಪ್ರಮೋದತೇ ಯತ್ ಕಿಂಚ
ಭೂಮ್ಯಾಮಧಿ || ೪ ||
ಯದಾ ಪ್ರಾಣೋ ಅಭ್ಯವರ್ಷೀದ್ವರ್ಷೇಣ
ಪೃಥಿವೀಂ ಮಹೀಮ್ |
ಪಶವಸ್ತತ್ಪ್ರಮೋದಂತೇ ಮಹೋ ವೈ ನೋ
ಭವಿಷ್ಯತಿ || ೫ ||
ಅಭಿವೃಷ್ಟಾ ಓಷಧಯಃ ಪ್ರಾಣೇನ
ಸಮವಾದಿರನ್ |
ಆಯುರ್ವೈ ನಃ ಪ್ರಾತೀತರಃ ಸರ್ವಾ ನಃ
ಸುರಭೀರಕಃ || ೬ ||

—ಅಥರ್ವ ೧೧. ೪ (೬) ೩. ೬

ಈ (ಆಕಾಶಸ್ಥ) ಪ್ರಾಣವು ಗುಡುಗಿ ವನಸ್ಪತಿಗಳಿಗೆ ತನ್ನ ಸಂದೇಶವನ್ನು ಅರುಹುವುದೊ ಆಗ ಆ ವನಸ್ಪತಿಗಳು ಗರ್ಭಧಾರಣಮಾಡುವುವು. ಮತ್ತು ಹಲವು ಬೆಳೆಯುವುವು. ತಕ್ಕ ಮಳೆಗಾಲದಲ್ಲಿ, ಪ್ರಾಣವು ತನ್ನ ಒಲುವನ್ನು ಗುಡುಗಿನಿಂದ ಸಾರುವುದು. ಆಗ ಲೋಕದೊಳಗಿನ ಎಲ್ಲರಿಗೂ ಹಿಗ್ಗು. ಈ ವಿಶಾಲ ಭೂಮಿಯ ಮೇಲೆ

ಮಳೆಯು ಸುರಿಯುತ್ತಲೆ ಲೋಕವು ಆನಂದಗೊಳ್ಳುವುದು. ತಮ್ಮ ಶಕ್ತಿ, ಸಾಮರ್ಥ್ಯವು ಹೆಚ್ಚಿತೆಂದು ಭಾವಿಸುವರು. ಪ್ರಾಣದ ಮುಖಾಂತರವಾಗಿ ಆದ ಮಳೆಯ ಸಂಸ್ಪರ್ಶದಿಂದ ಹಿಗ್ಗಿದ ವನಸ್ಪತಿಗಳು, ಪ್ರಾಣವನ್ನು ಕುರಿತು ನುಡಿಯುವುದೇನಂದರೆ, ಎಲೈ ಪ್ರಾಣವೇ! ನೀನು ನಮ್ಮ ಆಯುಷ್ಯವನ್ನು ಅಭಿವೃದ್ಧಿಗೊಳಿಸಿದೆ. ನಮ್ಮ ನರುಗಂಪನ್ನು ಹೆಚ್ಚಿಸಿದೆ!"

### ಯಜ್ಞದಿಂದ ಮಳೆ.

(ಯಜ್ಞಾತ್ ಪರ್ಜನ್ಯಃ ಭವತಿ) ಯಜ್ಞವಿಲ್ಲದೆ ಮಳೆ ಬರಲಾರದು. ಮಳೆಯಿಲ್ಲದೆ ಬೆಳೆಯೆಲ್ಲಿಂದು? ಬೆಳೆಯಿಲ್ಲದಿದ್ದರೆ ಬರಗಾಲ ತಪ್ಪದು. ಇಂತಿದು ಯಜ್ಞದ ಹಿರಿಮೆ. ಯಜ್ಞವೇ ಈ ಜೀವನಸೌಖ್ಯಕ್ಕೆ ಮೂಲಾಧಾರ.




ಇಂತಿದು ಯಜ್ಞಚಕ್ರವು ಇದು ಪರಿಪಡಿಯಿಂದ ತಿರುಗುತ್ತಿದ್ದರೆ ಎಲ್ಲವೂ ಸರಿಹೋಗುವುದು ಅದರಲ್ಲಿ ಯಾವುದೊಂದು ಕ್ರಮತಪ್ಪಿ ನಡೆದರೆ ಪ್ರಾಣಿಮಾತ್ರಗಳ ಜೀವನವು ಸಂಕಷ್ಟದ್ದಾಗುವುದು. ಸಂಪೂರ್ಣ ನಷ್ಟವಾಗುವ ಹೆದರಿಕೆಯೂ ಇಲ್ಲದಿಲ್ಲ. ಆದುದರಿಂದ ಮಹಾನಾರಾಯಣೋಪನಿಷತ್ತಿನಲ್ಲಿ ಹೇಳಿರುವುದೇನೆಂದರೆ—

> ತಾಭಿಃ ಪರ್ಜನ್ಯೋ ವರ್ಷತಿ। ಪರ್ಜನ್ಯೇನೌಷಧಿವನಸ್ಪತಯಃ ಪ್ರಜಾಯಂತೇ। ೨೩-೧

ಹೀಗೆ ಯಜ್ಞದಿಂದ ಮಳೆ, ಮಳೆಯಿಂದ ಬೆಳೆ; ಬೆಳೆಯಿಂದ ಬದುಕಲು ಸಾಧ್ಯವಾಗುತ್ತದೆ. ಯಜ್ಞದಿಂದ ಮಳೆಯು ಹೇಗೆ ಬರುವುದು? ಎಂಬುದನ್ನು ಮನುಮಹರ್ಷಿಯು ಹೀಗೆ ವಿವರಿಸಿದ್ದಾನೆ.

> ಅಗ್ನೌ ಪ್ರಾಸ್ತಾಹುತಿಃ ಸಮ್ಯಗಾದಿತ್ಯಮುಪತಿಷ್ಠತೇ।
> ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ॥ ೩.೭೬

'ಅಗ್ನಿಯಲ್ಲಿ ಹಾಕಿದ ಆಹುತಿಯು ಆದಿತ್ಯನಲ್ಲಿಗೆ ಹೋಗುವುದು. ಆದಿತ್ಯನಿಂದ ಮಳೆ; ಮಳೆಯಿಂದ ಬೆಳೆ; ಬೆಳೆಯಿಂದ ಲೋಕವು ಬದುಕುವುದು.' ಇದನ್ನೆ ಕುರಿತು ಭಾರತದಲ್ಲಿ ಬಂದಿರುವುದೇನೆಂದರೆ—

> ಯತಃ ಪ್ರಜಾಃ ಪ್ರಭವತಿ ನಭಸೋಽಂಭ ಇವಾಮಲಮ್॥೧೦॥
> ಅಗ್ನೌ ಪ್ರಾಸ್ತಾಹುತಿಃ ಬ್ರಹ್ಮನ್ನಾದಿತ್ಯಮುಪಗಚ್ಛತಿ।
> ಆದಿತ್ಯಾಜ್ಜಾಯತೇ ವೃಷ್ಟಿಃ ವೃಷ್ಟೇರನ್ನಂ ತತಃ ಪ್ರಜಾಃ॥೧೧॥ ಮಹಾಭಾರತ ಶಾಂತಿಪ. ೨೬೩

ಮೋಡಗಳಿಂದ ಸ್ವಚ್ಛವಾದ ನೀರು ಬರುವಂತೆ ಯಜ್ಞದಿಂದ ಪ್ರಜೆಗಳಾಗುತ್ತಾರೆ. ಯಜ್ಞದಲ್ಲಿ ಹಾಕಿದ ಆಹುತಿಯು ಸೂರ್ಯನಲ್ಲಿಗೆ ಹೋಗುವುದು. ಸೂರ್ಯನಿಂದ ಮಳೆ; ಮಳೆಯಿಂದ ಬೆಳೆ; ಬೆಳೆಯಿಂದ ಬದುಕು ಆಗುವುದು ಶತಪಥ ಬ್ರಾಹ್ಮಣದಲ್ಲಿಯೂ ಇದನ್ನು ಕುರಿತು ಹೇಳಿರುವುದೇನೆಂದರ—

### ಪರ್ಜನ್ಯೇಷ್ಟಿ.

ಸ ಯದಿ ವೃಷ್ಟಿಕಾಮಃ ಸ್ಯಾತ್। ಯದೀಷ್ಟ್ಯಾ ವಾ ಯಜೇತ್.... ಬ್ರೂಯಾತ್, ವೃಷ್ಟಿಕಾಮೋ ವಾ ಅಸ್ಮೀತಿ ತತ್ರೋಽ ಅಧ್ವರ್ಯುಂ ಬ್ರೂಯಾತ್ ಪುರೋವಾತಂ ಚ ವಿದ್ಯುತಂ ಚ ಮನಸಾ ಧ್ಯಾಯೇತಿ। ಅಭ್ರಾಣಿ ಮನಸಾ ಧ್ಯಾಯೇತಿ; ಅಗ್ನೀಧಮ್ ಸ್ತನಯಿತ್ನುಂ ಚ ವರ್ಷಂ ಮನಸಾ ಧ್ಯಾಯೇತಿ ಹೋತಾರಂ, ಸರ್ವಾಣ್ಯೇತಾನಿ ಮನಸಾ ಧ್ಯಾಯೇತಿ ಬ್ರಹ್ಮಾಣಂ; ವರ್ಷತಿ ಹೈವ ತತ್ರ ಯತ್ರೈವಂ ಋತ್ವಿಜಃ ಸುವಿದಾನಾ ಯಜ್ಞೇನ ಚರಂತಿ॥

೧-೫-೨-೧೯

“ಮಳೆಯಾಗಬೇಕೆಂದು ಬಯಸುತ್ತಿದ್ದರೆ ಯಜಮಾನನು ಪರ್ಜನ್ಯೇಷ್ಟಿಯನ್ನು ಮಾಡಬೇಕು. ಆಗ ಮಳೆಯಾಗಲೆಂದು ಆತನು ಹಂಬಲಿಸಬೇಕು. ಅಧ್ವರ್ಯುವು ವಾಯು ಹಾಗೂ ವಿದ್ಯುತ್ತಿನ ಧ್ಯಾನಮಾಡಬೇಕು. ಅಗ್ನೀಧ್ರನು ಮೋಡಗಳ ಧ್ಯಾನಮಾಡಬೇಕು ಹೋತೃವು ಗುಡುಗು ಮತ್ತು ಮಳೆಯನ್ನು ನೆನೆಯಬೇಕು ಬ್ರಹ್ಮಾ ಆಗಿರುವವನು ಇವೆಲ್ಲವುಗಳ ಧ್ಯಾನಮಾಡಬೇಕು. ಜ್ಞಾನಿಗಳಾದ ಋತ್ವಿಜರು ಇರುವಲ್ಲಿ ಅವರು ಈ ಬಗೆಯಾಗಿ ಮನಸಾರೆ ನೆನೆದು ಇಷ್ಟಿಯನ್ನು ಮಾಡಿದರೆ ಅಲ್ಲಿ ಮಳೆಯು ಆಗಲೇಬೇಕು.” ಈ ಮಂತ್ರವು ಸಂಕಲ್ಪಶಕ್ತಿಯ ಮಹಿಮೆಯನ್ನು ಸೂಚಿಸುತ್ತದೆ. ಸಂಕಲ್ಪವೇ ಕ್ರತು; ಕ್ರತುವೇ ನಿಜವಾದ ಯಜ್ಞ.

ಋಗ್ವೇದದಲ್ಲಿ ಈ ವಿಷಯವನ್ನು ಕುರಿತು ಒಂದು ಮಂತ್ರವು ಹೀಗಿದೆ:

**ಕೃಷ್ಣಂ ನಿಯಾನಂ ಹರಯಃ ಸುಪರ್ಣಾ ಅಪೋ ವಸಾನಾ ದಿವಮುತ್ಪತಂತಿ । ತ ಆವವೃತ್ರನ್ತ್ಸದನಾದೃತಸ್ಯಾದಿದ್ ಘೃತೇನ ಪೃಥಿವೀ ವ್ಯುದ್ಯತೇ ॥**

೧-೧೬೪-೪೭

“(ಅಪಃ ವಸಾನಾಃ) ನೀರನ್ನು ಹೊತ್ತುಕೊಂಡು ಒಯ್ಯುವ ಮತ್ತು (ಹರಯಃ ಸುಪರ್ಣಾಃ) ನೀರನ್ನು ಹೀರುವ ಸೂರ್ಯಕಿರಣಗಳು (ಕೃಷ್ಣಂ ನಿಯಾನಂ) ನೀಲವರ್ಣದ (ದಿವಂ ಉತ್ ಪತಂತಿ) ಮುಗಿಲಿನ ಮೇಲೆ ಹೋಗುತ್ತವೆ. ಆ (ಋತಸ್ಯ ಸದನಾತ್) ನೀರಿನ ನೆಲೆಯಿಂದ (ತೇ ಆವವೃತ್ರನ್) ಅವು ಕೆಳಗೆ ಬರುತ್ತವೆ. ಮತ್ತು ಅವುಗಳ (ಘೃತೇನ) ನೀರಿನಿಂದ (ಪೃಥಿವೀ ವ್ಯುದ್ಯತೇ) ನೆಲವು ತುಂಬಿಹೋಗುತ್ತದೆ.”

ಸೂರ್ಯಕಿರಣಗಳಿಂದ ನೀರು ಆವಿಯಾಗಿ ಮೇಲಕ್ಕೆ ಹೋಗುವುದು ಹವನದಲ್ಲಿ ಹಾಕಿದ ಓಷಧಿವನಸ್ಪತಿಗಳ ಹಾಗೂ ತುಪ್ಪದ ಅಂಶವು ಮೇಲೆ ಹೋಗಿ ಮೋಡದಲ್ಲಿ ಸೇರುವುದು, ಅಂಥ ಓಷಧಿಗುಣಯುಕ್ತವಾದ ನೀರುಳ್ಳ ಮಳೆಯು ಭೂಲೋಕಕ್ಕೆ ಕಲ್ಯಾಣದಾಯಕವಾಗುವುದು ಎಂಬೀ ಬಗೆಯ ಕಲ್ಪನೆಯು ಪುರಾತನರಲ್ಲಿದ್ದಿತೆಂದು ಕಂಡುಬರುತ್ತದೆ. ಹೋಮಹವನಗಳಿಂದ ಮಳೆಬರುವುದು, ಎಂಬ ಹಿಂದಿನವರ ಗ್ರಹಿಕೆಗೆ, ಮೋಡಗಳಿಗೆ ಕೃತ್ರಿಮ ಆಘಾತಾದಿಗಳಿಂದ ಮಳೆತರುವ ಉಪಾಯಗಳ ಆಧುನಿಕ ಶಾಸ್ತ್ರಜ್ಞರ ರೀತಿಯು ಹೋಲಿಕೆಯಿದೆ. ಆದರೆ ಇದಲ್ಲವೂ ಇನ್ನೂ ಪ್ರತ್ಯಕ್ಷ ಪ್ರಯೋಗಗಳಿಂದ ಸಿದ್ಧವಾಗಬೇಕು. ಹಿಂದೆ ಬಹುದೊಡ್ಡ ಪ್ರಮಾಣದ ಯಾಗಗಳು ನಡೆದು ಅದರ ಹೊಗೆಯು ಮೋಡಗಳವರೆಗೆ ಸಹಜವಾಗಿ ತಾಗುವುದಾಗಿತ್ತು. ಈಗಿನ ಅಲ್ಪಪ್ರಮಾಣದ ಯಾಗಗಳಿಂದ ಆ ಕಲ್ಪನೆಯಾಗದು. ಆ ಹೋಮಧೂಮದಿಂದ ದೇಶದೊಳಗಿನ ರೋಗಾದಿ ಜಂತುಗಳ ನಾಶವಾಗುತ್ತಿರುವ ಸಂಭವವೂ ಇದೆ. ಪ್ರಾಚೀನ ವೈದ್ಯಶಾಸ್ತ್ರ ಮತ್ತು ಪುರಾಣಗಳೂ ಯಜ್ಞದಿಂದ ಈ ಬಗೆಯಾದ ಪರಿಣಾಮವನ್ನು ಹಾರಯಿಸಿದ್ದುದುಂಟು. ಆದರೆ ಇಂದಿನ ಪರಿಸ್ಥಿತಿಯಲ್ಲಿ ಅದೆಲ್ಲವೂ ಕಾಲ್ಪನಿಕವೆನಿಸುವಂತಿದೆ. ಆಧುನಿಕ ಪ್ರಯೋಗಗಳಿಂದ ಆ ಮಾತನ್ನು ಮನಗಾಣುವವರೆಗೆ ಹಾಗೆನಿಸುವುದೂ ಅನಿವಾರ್ಯ.

ಆದರೆ ಭಗವದ್ಗೀತೆಯಲ್ಲಿ ಹೇಳಿದ ಯಜ್ಞವು ಬಹಳ ವ್ಯಾಪಕವಾದ ಅರ್ಥವುಳ್ಳುದಾಗಿದೆ. ಅದು ಕೇವಲ ಹೋಮಹವನರೂಪಿಯಾಗಿಲ್ಲ ಅದರಲ್ಲಿ ವೈಯಕ್ತಿಕ, ಕೌಟುಂಬಿಕ, ಸಾಮಾಜಿಕ ಮತ್ತು ರಾಷ್ಟ್ರೀಯ ಕರ್ತವ್ಯಗಳ ಸಮಾವೇಶವಾಗುತ್ತದೆ. ಇದರ ಸಾಮಾನ್ಯಸ್ವರೂಪದ ವಿಚಾರವನ್ನು (ಗೀ ಶ್ಲೋ. ೩. ೧೦-೧೩) ಈ ಮೊದಲು ಹೇಳಿದೆ. ಗೀತೆಯಲ್ಲಿ ಹೇಳಿದ ವಿಶಾಲಾರ್ಥದ ಒಂದು ಸಣ್ಣ ಅಂಶವು ಹೋಮಹವನಾದಿರೂಪಿಯಾದ ಯಾಗವು ಎಂಬುದನ್ನು ಮರೆಯಬಾರದು.

### ಯಜ್ಞವೆಂದರೆ ಆತ್ಮಸಮರ್ಪಣ ಯೋಗ.

ಯಜ್ಞದಿಂದ ಈ ವಿಶ್ವವು ಉಂಟಾಗಿದೆ. ಯಜ್ಞದಿಂದಲೇ ಇದು ಉಳಿದಿದೆ. ಯಜ್ಞದಿಂದ ಮಳೆ; ಮಳೆಯಿಂದ ಬೆಳೆ; ಬೆಳೆಯಿಂದ ಬದುಕು, ಎಂದು ಹೇಳುವ ಯಜ್ಞಚಕ್ರದಲ್ಲಿ ಒಬ್ಬರು ಇನ್ನೊಬ್ಬರಿಗಾಗಿ ಆತ್ಮಸಮರ್ಪಣ ಮಾಡುವುದರಿಂದಲೇ ಲೋಕವು ನಡೆದಿದೆಯೆಂದು ಗೂಢಾರ್ಥವಿದೆ. ಒಬ್ಬರು ಇನ್ನೊಬ್ಬರ ಕಲ್ಯಾಣಕ್ಕಾಗಿ ಸವೆಯುವದೆ ಆತ್ಮಸಮರ್ಪಣರೂಪಿಯಾದ ಯಜ್ಞವು. ಮಳೆಯು ಬಿದ್ದು, ಬೆಳೆಗೆ ಕಾರಣವಾಗುವುದು. ಬೆಳೆಯು ಪ್ರಾಣಿಗಳ ಆಹಾರವಾಗಿ ತನ್ನ ಯಜ್ಞಕರ್ಮವನ್ನೆಸಗುವುದು ಪ್ರಾಣಿಗಳು ತಮ್ಮ ಸತ್ವ-ವೀರ್ಯವನ್ನಿತ್ತು ಪ್ರಜೆಗಳನ್ನು ನಿರ್ಮಿಸುವುವು. ಪ್ರಜೆಗಳು ತಮ್ಮ ಆತ್ಮಸಮರ್ಪಣದಿಂದ ಲೋಕದ ಕಲ್ಯಾಣಕ್ಕೆ ಕಾರಣರಾಗಬೇಕು.

ಮಳೆ, ಬೆಳೆ ಮೊದಲಾದುವುಗಳ ಯಜ್ಞವು ಸೃಷ್ಟಿಕ್ರಮದ ಒತ್ತಾಯದಿಂದ ನಡೆದುದಾಗಿದೆ ಆದುದರಿಂದ ಆ ಯಜ್ಞದ ಆನಂದವು, ಅವಕ್ಕಿಲ್ಲ. ಮನುಷ್ಯನು ಸ್ವಯಂ ಪ್ರಜ್ಞೆಯುಳ್ಳ ಪ್ರಾಣಿಯು. ಆತನು ಹೊರಗಿನ ಒತ್ತಾಯದಿಂದ

ಮಾಡುವ ಯಜ್ಞವು ಆತನಿಗೆ ಭೂಷಣವಲ್ಲ. ವಿಶ್ವಚಕ್ರದ ಕ್ರಮವನ್ನು ಅರಿತು ಅದಕ್ಕೆ ಪೋಷಕವಾದ ರೀತಿಯಲ್ಲಿ ತಾನಾಗಿಯೆ ತನ್ನ ಆತ್ಮಸಮರ್ಪಣ ರೂಪಿಯಾದ ಯಾಗವನ್ನು ಮಾಡಿದರೆ ಅದು ಶ್ರೇಯಸ್ಕರ. ಒಬ್ಬರು ಇನ್ನೊಬ್ಬರಿಗಾಗಿ ತ್ಯಾಗಮಾಡಲು ಸಿದ್ಧರಾಗದೆ ಇದ್ದರೆ ಈ ಲೋಕವ್ಯವಹಾರಗಳೇ ನಡೆಯಲಾರವು. ಈ ಬಗೆಯ ತ್ಯಾಗವು ಪರಿಸ್ಥಿತಿಯ ಒತ್ತಾಯದಿಂದ ಅಥವಾ ಪ್ರಕೃತಿನಿಯಮಗಳ ಬಲುಮೆಯಿಂದ ಆಗುವುದು ತಪ್ಪಿದ್ದಲ್ಲ. ಅದನ್ನೇ ತಾನಾಗಿ ತಿಳಿದು ಆಚರಿಸುವುದರಲ್ಲಿಯೆ ಮನುಷ್ಯನ ಮನುಷ್ಯತ್ವವಿದೆ. ಇಲ್ಲವಾದರೆ ಅವನು ಪಶುಗಳಿಂದ ಭಿನ್ನನಲ್ಲ. ಆದಕಾರಣ ಮಾನವನ ಜೀವನವು ಯಜ್ಞಮಯವಾಗಬೇಕು.

ಗೀತೆಯಲ್ಲಿ ಯಜ್ಞ ಶಬ್ದವು ಆತ್ಮಸಮರ್ಪಣ ರೂಪಿಯಾದ ಸಾಮಾನ್ಯ ಯಜ್ಞವಾಚಕವಾಗಿದೆ. ದ್ರವ್ಯಯಜ್ಞ, ತಪೋಯಜ್ಞ, ಜ್ಞಾನಯಜ್ಞ, ಮೊದಲಾದುವು ಈ ಸಾಮಾನ್ಯ ಯಜ್ಞದ ಅಂಗಗಳು. ಹೋಮಹವನವು ಯಜ್ಞದ ಉಪಲಕ್ಷಣವು ಮಾತ್ರ.

### ಕಾಯಕವೇ ಯಜ್ಞ

(ಯಜ್ಞಃ ಕರ್ಮಸಮುದ್ಭವಃ) ಕೆಲಸದಿಂದ ಯಜ್ಞವಾಗುತ್ತದೆ. ಒಳ್ಳೆಯ ಕೆಲಸಗಳು, ಲೋಕಕಲ್ಯಾಣಕಾರಕ ಕೆಲಸಗಳು ಯಜ್ಞವೆನಿಸುವುವು. ಆದುದರಿಂದ ಅಕೆಲಸಿಯು ಯಜ್ಞವಿರೋಧಿಯು. ಕರ್ಮಹೀನ ಹೇಡಿಯು. ಯಾವುದೇ ಬಗೆಯ ಯಜ್ಞಕ್ಕಾದರೂ ದುಡಿಮೆ ಬೇಕಾಗುವುದು. ಆದಕಾರಣ ದುಡಿಮೆ ಎಂದರೆ ಕಾಯಕ. ಕಾಯಕವೇ ಯಜ್ಞ. ಮೈಗಳ್ಳರೂ ಜೀವಗಳ್ಳರೂ ಯಜ್ಞ ಮಾಡಲಾರರು. ಯಜ್ಞಮಾಡದವರು 'ಯಜಮಾನ'ರಾಗಲಾರರು.

### ಜ್ಞಾನದಿಂದ ಕಾಯಕ.

(ಕರ್ಮ ಬ್ರಹ್ಮೋದ್ಭವಂ ವಿದ್ಧಿ) ತಿಳಿವು ಇಲ್ಲದೆ ಕಾಯಕವು ಕೈಗೂಡದು. ಇಲ್ಲಿ 'ಬ್ರಹ್ಮ'ವೆಂದರೆ ಕೆಲಸಮಾಡುವ ವಿಧಾನದ ತಿಳಿವು ಎಂದರ್ಥವಿದೆ. ಬ್ರಹ್ಮವೆಂದರೆ ಆತ್ಮಜ್ಞಾನ, ಮೋಕ್ಷದ ಜ್ಞಾನವೆಂದು ಇಲ್ಲಿ ಅರ್ಥವಾಗದು. ಬೇರೆ ಬೇರೆ ಕೆಲಸಗಳನ್ನು ಬೇರೆ ಬೇರೆ ಯಾಗಗಳನ್ನು ಮಾಡುವ ಬಗೆಯ ತಿಳುವಳಿಕೆಯೆಂದೇ ಇಲ್ಲಿ ಅರ್ಥವಿದೆ. ಈ ತಿಳುವಳಿಕೆಯಿಲ್ಲದೆ ಯಾವ ಕೆಲಸವೂ ಸಾಧ್ಯವಿಲ್ಲ, ವೇದಾದಿ ಗ್ರಂಥಗಳಲ್ಲಿ ಈ ಕೆಲಸದ ವಿಚಾರವೇ ಇರುವುದರಿಂದ ವೇದಕ್ಕೂ ವೇದಮಂತ್ರಗಳಿಗೂ 'ಬ್ರಹ್ಮ'ವೆಂದು ಹೆಸರಿದೆ. ಶ್ರೇಷ್ಠ ಕೆಲಸಗಳ ಹದವನ್ನು ತಿಳಿಸಿಹೇಳುವ ವಿಚಾರಗಳೆಲ್ಲವೂ ಬ್ರಹ್ಮವೆನಿಸುವುವು.

ಕೆಲವು ಬಲ್ಲಿದರು ಇಲ್ಲಿ 'ಬ್ರಹ್ಮ' ಶಬ್ದಕ್ಕೆ 'ಪ್ರಕೃತಿ' ಎಂದು ಅರ್ಥಹೇಳಿದಾರೆ. ಅದೂ ಇಲ್ಲಿ ಸರಿಹೋಗುತ್ತದೆ. 'ಕರ್ಮ ಬ್ರಹ್ಮೋದ್ಭವಂ ವಿದ್ಧಿ' ಎಂದರೆ ಕೆಲಸಗಳು ಪ್ರಕೃತಿ (ನಿಯಮದ) ಮೂಲಕವಾಗಿ ಉತ್ಪನ್ನವಾಗುತ್ತವೆ.

**ಮಮ ಯೋನಿರ್ಮಹದ್ಬ್ರಹ್ಮ ತಸ್ಮಿನ್
ಗರ್ಭಂ ದಧಾಮ್ಯಹಮ್ ।
ಸಂಭವಃ ಸರ್ವಭೂತಾನಾಂ ತತೋ ಭವತಿ
ಭಾರತ । ಗೀ. ೧೪-೩**

'ನನ್ನ (ಬ್ರಹ್ಮ) ಮಹಾಪ್ರಕೃತಿಯು ಸೃಷ್ಟಿಯನ್ನು ಹುಟ್ಟಿಸುತ್ತದೆ. ಅದರಲ್ಲಿ ನಾನು ಗರ್ಭವನ್ನಿಡುವೆನು. ಅದರಿಂದ ಎಲ್ಲ ಪ್ರಾಣಿಮಾತ್ರಗಳು ಹುಟ್ಟುವುವು.' ಎಂಬಲ್ಲಿ 'ಬ್ರಹ್ಮ'ವೆಂದರೆ ಪ್ರಕೃತಿಯೆಂದು ಅರ್ಥವು ಸ್ಪಷ್ಟವಿದೆ. ಇದರಂತೆ ಮಹಾಭಾರತದಲ್ಲಿ ಹೀಗೆ ಉಲ್ಲೇಖವಿದೆ:

**ಯಜ್ಞೋಽಯಷ್ಟವ್ಯ ಇತ್ಯೇವ ಯೋ
ಯಜತ್ಯಫಲೇಪ್ಸಯಾ ॥ ೩೦ ॥
ಅನುಯಜ್ಞಂ ಜಗತ್ಸರ್ವಂ ಯಜ್ಞಶ್ಚಾನು
ಜಗತ್ಸದಾ ॥ ೩೧ ॥**

ನಾಯಂ ಲೋಕೋಽಸ್ತ್ಯಯಜ್ಞಾನಾಂ
ಪರಶ್ಚೇತಿ ವಿನಿಶ್ಚಯಃ ಶಾಂತಿ ಪ. ಅ. ೨೬೮

'ಫಲೇಚ್ಛೆಯಿಲ್ಲದೆ ಮಾಡಿದ ಯಜ್ಞಾದಿ ಕರ್ಮವೇ ಯಜ್ಞ. ಲೋಕವೆಲ್ಲವೂ ಯಜ್ಞವನ್ನು ಹಿಂಬಾಲಿಸಿದೆ. ಯಜ್ಞವು ಲೋಕವನ್ನು ಹಿಂಬಾಲಿಸುತ್ತದೆ. ಅಯಜ್ಞಗಳಿಗೆ ಈ ಲೋಕವೂ ಇಲ್ಲ; ಪರಲೋಕವೂ ಇಲ್ಲ.' ಹೀಗೆ ಯಜ್ಞ ಮತ್ತು ಜಗತ್ತು ಒಂದನ್ನೊಂದು ಬಿಟ್ಟಿರಲಾರವು. ಪ್ರಕೃತಿ ಸ್ವಭಾವದ ಮೂಲಕವಾಗಿ ಕರ್ಮವೂ, ಕರ್ಮದಿಂದ ಯಜ್ಞವೂ ಸಂಭವಿಸುವುವು. ಕೆಲಸವು ಹೇಗೆ ಹುಟ್ಟಿದವರಿಗೆಲ್ಲ ತಪ್ಪಿದ್ದಲ್ಲವೊ ಹಾಗೆಯೆ ಯಜ್ಞವೂ ಬಿಟ್ಟುದಲ್ಲ. ಆದರೆ ಅದು ತಿಳುವಳಿಕೆಯಿಂದ ಫಲೇಚ್ಛೆಯಿಲ್ಲದೆ ಆಗಬೇಕು. ಇಲ್ಲವಾದರೆ ಅದು ವ್ಯರ್ಥ. ಹೀಗೆ ಇಲ್ಲಿ 'ಬ್ರಹ್ಮ' ಶಬ್ದಕ್ಕೆ 'ಪ್ರಕೃತಿ' ಎಂದು ಅರ್ಥವು ಸರಿಹೋಗುವುದಾದರೂ 'ಕರ್ಮವಿಧಿಯ ಜ್ಞಾನ'— ಕೆಲಸ ಮಾಡುವ ಹದದ ತಿಳುವಳಿಕೆ ಎಂದು ಅರ್ಥವೇ ನಮ್ಮ ದೃಷ್ಟಿಯಿಂದ ಹೆಚ್ಚು ಸಮರ್ಪಕವಾಗಿದೆ.

**ಏವಂ ಪ್ರವರ್ತಿತಂ ಚಕ್ರಂ ನಾನುವರ್ತಯತೀಹ ಯಃ |**
**ಅಘಾಯುರಿಂದ್ರಿಯಾರಾಮೋ ಮೋಘಂ ಪಾರ್ಥ ಸ ಜೀವತಿ || ೧೬ ||**

---

**ಅನ್ವಯ:—** ಹೇ ಪಾರ್ಥ! ಏವಂ ಪ್ರವರ್ತಿತಂ ಚಕ್ರಂ ಯಃ ಇಹ ನ ಅನುವರ್ತಯತಿ; ಸಃ ಇಂದ್ರಿಯಾರಾಮಃ ಅಘಾಯುಃ ಮೋಘಂ ಜೀವತಿ || ೧೬ ||

**ಎಲೈ ಅರ್ಜುನನೇ ಇಂತೀಬಗೆಯಾಗಿ ಆರಂಭಿಸಿದ ಈ ಯಜ್ಞ ಚಕ್ರವನ್ನು ಯಾವನು ಎಡೆಬಿಡದೆ ಮುಂದುವರಿಸುವುದಿಲ್ಲವೋ ಆ ಇಂದ್ರಿಯಲಂಪಟನಾದ ಮನುಷ್ಯನ ಆಯುಸ್ಸು ಪಾಪಮಯವಾಗುತ್ತದೆ. ಮತ್ತು ಆತನ ಬಾಳು ಹುರುಳಿಲ್ಲದುದಾಗುತ್ತದೆ. || ೧೬ ||**

**ಭಾವಾರ್ಥ :—** ಹೀಗಿದು ಕರ್ಮರೂಪಿಯಾದ ಯಜ್ಞಚಕ್ರವು ಅವ್ಯಾಹತವಾಗಿ ನಡೆದಿದೆ. ಇದನ್ನರಿತು ಯಾವನು ಈ ಯಜ್ಞಚಕ್ರಕ್ಕನುಗುಣವಾಗಿ ತನ್ನ ಬಾಳನ್ನು ಹೊಂದಿಸಿಕೊಳ್ಳುವನೊ ಅವನ ಬದುಕೇ ಒಂದು ಯಜ್ಞವಾಗಿ ಆತನು ಪವಿತ್ರನಾಗುವನು. ಇದಕ್ಕೆ ವಿಪರೀತವಾಗಿ ನಡೆದುಕೊಳ್ಳುವ ಇಂದ್ರಿಯಗಳ ವಿಲಾಸದಲ್ಲಿ ಮೈಮರೆವವನು ಪಾಪಿಯೆನಿಸಿ ಬಾಳನ್ನು ಹಾಳುಮಾಡಿಕೊಳ್ಳುವನು. || ೧೬ ||

---

### ಅಕ್ಷರದಿಂದ ಅರಿವು.

**( ಅಕ್ಷರ ಸಮುದ್ಭವಂ ಬ್ರಹ್ಮ )** ಅರಿವು, ಜ್ಞಾನವು ಅಕ್ಷರದಿಂದುಂಟಾಗುತ್ತದೆ. ಅಕ್ಷರ ಎಂದರೆ ಅಳಿವು ಇಲ್ಲದ ಆತ್ಮನು ಎಂದರ್ಥ. ಆತ್ಮನಿಂದರೆ ಅರಿವು ಉಂಟಾಗುವುದು ಆತ್ಮನು ಚಿತ್‌ಸ್ವರೂಪನು ಎಲ್ಲ ತಿಳುವಿನ ಹುಟ್ಟು ಈತನು.

> **ಆತ್ಮತೋ ಬಲಮಾತ್ಮತೋ ವಿಜ್ಞಾನಮಾತ್ಮತೋ ಧ್ಯಾನ; ಆತ್ಮತಶ್ಚಿತ್ತಮಾತ್ಮತಃ ಸಂಕಲ್ಪ ಆತ್ಮತೋ ಮನ; ಆತ್ಮತೋ ವಾಗಾತ್ಮತೋ ನಾಮಾತ್ಮತೋ ಮಂತ್ರಾ ಆತ್ಮತಃ ಕರ್ಮಾಣ್ಯಾತ್ಮತ ಏವೇದಂ ಸರ್ವಮ್ ||** ಛಾಂ. ಉ. ೭. ೨೬

‘ಬಲ, ವಿಜ್ಞಾನ, ಧ್ಯಾನ, ಚಿತ್ತ, ಸಂಕಲ್ಪ ಮನಸ್ಸು, ಮಾತು, ಹೆಸರು, ಮಂತ್ರ, ಕರ್ಮ ಮೊದಲಾದವೆಲ್ಲವೂ ಆತ್ಮನಿಂದಲೇ ತಲೆದೋರಿವೆ.’ ಛಾಂದೋಗ್ಯದ ಈ ವಚನವೇ ಗೀತೆಯಲ್ಲಿಯೂ ಅಡಕವಾಗಿದೆ.

### ಯಜ್ಞದಲ್ಲಿ ಪರಮಾತ್ಮನು.

**‘ತಸ್ಮಾತ್ ಸರ್ವಗತಂ ಬ್ರಹ್ಮ ನಿತ್ಯಂ ಯಜ್ಞೇ ಪ್ರತಿಷ್ಠಿತಮ್ |**

‘ಸರ್ವವ್ಯಾಪಕನಾದ ಪರಮಾತ್ಮನು ಯಜ್ಞದಲ್ಲಿ ಯಾವಾಗಲೂ ನಿಂತಿರುತ್ತಾನೆಂದು ಹೇಳಿದ್ದು, ಈ ಕಾರಣದಿಂದಲೇ ’ ಫಲೇಚ್ಛೆಯಿಲ್ಲದ ಸತ್ಕರ್ಮಗಳು ನಡೆದಲ್ಲಿ ಪರಮೇಶ್ವರನು ನೆಳಲಿನಂತೆ ಆ ಕೆಲಸದೊಡನೆ ಇದ್ದೇ ಇರುವನು ದೇಶಕಾಲ ಪಾತ್ರವನ್ನರಿತು ಮಾಡಿದ ಸರ್ವಲೋಕ ಹಿತಕಾರಿಯಾದ ದಾನ, ಉತ್ತಮ ಹೇತುವಿನಿಂದ ನಡಸಿದ ಸಂಘ, ಸಂಸ್ಥೆ ಲೋಕಕಲ್ಯಾಣಕ್ಕಾಗಿ ನಡೆದ ಯಾವುದೇ ಕೆಲಸದಲ್ಲಿ ಪರಮೇಶ್ವರನು ಇದ್ದೇ ಇರುವನು. ಇದರಿಂದ ಪರಮಾತ್ಮನ ಅಡಿಯಲ್ಲಿ ಯಾವಾಗಲೂ ಇರಬೇಕೆಂದು ಹಂಬಲಿಸುವವರು ಇಂತಹ ಒಳ್ಳೆಯ ಕೆಲಸಗಳಲ್ಲಿ ಆಸಕ್ತರಾಗಿರಬೇಕು. ಪರಮಾತ್ಮನನ್ನು ಹೊಂದುವ ನಿಶ್ಚಿತವಾದ ದಾರಿಯು ಇದಕ್ಕಿಂತ ಬೇರೆಯಾವುದೂ ಇಲ್ಲ. ಆದುದರಿಂದಲೇ ಗೀತೆಯಲ್ಲಿಯೂ ಹೀಗೆ ಹೇಳಿದೆ:

> **ಯತಃ ಪ್ರವೃತ್ತಿರ್ಭೂತಾನಾಂ ಯೇನ ಸರ್ವಮಿದಂ ತತಮ್ |**
> **ಸ್ವಕರ್ಮಣಾ ತಮಭ್ಯರ್ಚ್ಯ ಸಿದ್ಧಿಂ ವಿಂದತಿ ಮಾನವಃ ||** ೧೮ ೪೬

‘ಯಾವನಿಂದ ಈ ಎಲ್ಲ ಪ್ರಾಣಿಮಾತ್ರಗಳು ಜನ್ಮತಾಳಿರುವವೋ, ಯಾವನು ಇದೆಲ್ಲ (ವಿಶ್ವ)ವನ್ನು ವ್ಯಾಪಿಸಿರುವನೊ ಆತನನ್ನು ತನ್ನ ಕರ್ಮ ಸುಮನಗಳಿಂದ ಅರ್ಚಿಸಿ ಮನುಷ್ಯನು ಕೊನೆಯ ಸಿದ್ಧಿಯನ್ನು ಪಡೆಯುತ್ತಾನೆ.’ ಲೋಕಾನಂದಕಾರಿಯಾದ ಒಳ್ಳೆಲಸಗಳನ್ನು ಮಾಡುತ್ತಿರುವುದೇ ನಿಜವಾದ ಈಶ ಪೂಜೆಯೆಂದು ಗೀತೆಯು ಈ ವಚನದಿಂದ ಸ್ಪಷ್ಟವಾಗಿ ತಿಳಿದುಕೊಳ್ಳಬಹುದಾಗಿದೆ.

ಆದಕಾರಣ ಈ ಕೆಲಸಗಳನ್ನು ಎಡೆಬಿಡದೆ ಮುಂದುವರಿಸಬೇಕೆಂದು ಶ್ರೀಕೃಷ್ಣನು ಉಪದೇಶಿಸುತ್ತಾನೆ:

(೧೬) ಈ ಅಧ್ಯಾಯದ ೧೦ ರಿಂದ ೧೫ ರ ವರೆಗಿನ ಶ್ಲೋಕಗಳಲ್ಲಿ ವಿಶ್ವವ್ಯಾಪಿಯಾದ ಯಜ್ಞ ಚಕ್ರದ ವಿವರಣೆಯಿದೆ. ಈ ಯಜ್ಞ ಚಕ್ರವು ಪರಮಾತ್ಮನಿಂದ ನಡಸಲ್ಪಡುತ್ತಿದ್ದು ಮನುಷ್ಯೇತರ ಸೃಷ್ಟಿಯೆಲ್ಲ ನಾ

ಇದರಲ್ಲಿ ಅಳವಟ್ಟಿದೆ. ಮನುಷ್ಯನಿಗೆ ಇರುವ ಬುದ್ಧಿಯ ಬಲದಿಂದ ಆತನು ಈ ಚಕ್ರದ ಹೊರಗೆ ಉಳಿಯಲು ಹವಣಿಸುವನು. ಆದರೆ ಈಶಸಂಕಲ್ಪಕ್ಕೆ ವಿರೋಧಿಯಾಗಿ ನಡೆದಲ್ಲಿ ಈತನು ಆತ್ಮನಾಶವಮಾಡಿಕೊಳ್ಳುವನು. ಯಜ್ಞ ಚಕ್ರದ ರಹಸ್ಯವನ್ನರಿತು ಅದಕ್ಕೆ ಹೊಂದಿಕೊಂಡು ನಡೆದಲ್ಲಿ ತನ್ನ ಏಳ್ಗೆಯನ್ನು ಮಾಡಿಕೊಳ್ಳುವನಲ್ಲದೆ ಲೋಕಕಲ್ಯಾಣದ ಶ್ರೇಯಸ್ಸಿಗೂ ಪಾಲುಗಾರನಾಗುವನು.

ಹೇಡಿಯು ಯಜ್ಞಮಾಡಲು ಅನರ್ಹನು. ಬಲವಂತನೆ 'ಯಜಮಾನ'ನಾಗಬಲ್ಲನು. ಯಜ್ಞವೆಂದರೆ ತ್ಯಾಗ; ಕೊಡುಗೆ. ಕೊಡಬೇಕಾದವನ ಹತ್ತಿರ ಇರಬೇಡವೆ? ಬರಿಗೈಯ್ಯ ಬಡವಾಯಿಯು ದಾನಯಜ್ಞವನ್ನೇನು ಮಾಡಿಯಾನು? ತಿಳಿಗೇಡಿಗೆ ಜ್ಞಾನಯಜ್ಞದ ಭಾಗ್ಯವೆಲ್ಲಿಯದು? ಸಂಯಮ-ಶಕ್ತಿಗಳಿಲ್ಲದವನಿಗೆ ತಪೋಯಜ್ಞವು ಸಾಧಿಸೀತೆ? ಯಾವುದಾದರೂ ಬಲವು ಇಲ್ಲದೆ ಯಜ್ಞಮಾಡಲು ಯೋಗ್ಯತೆಬಾರದು. ಆದಕಾರಣ 'ಬಲಂ ಉಪಾಸ್ವ.' ಶಕ್ತಿಸಂಪಾದನೆ ಮಾಡುವುದು ಮೊದಲನೆಯ ಕರ್ತವ್ಯವು. ಪಡೆದು ಕೊಡು; ಕೊಡಲು ಪಡೆ. ಯಜ್ಞದ ಮಹಿಮೆಯನ್ನು ಕುರಿತು ಬ್ರಾಹ್ಮಣಗಳಲ್ಲಿ ಹೇಳಿರುವುದೇನೆಂದರೆ:

**ಬ್ರಹ್ಮ ವೈ ಸ್ವಯಂಭು ತಪೋಽತಪ್ಯತ। ತದೈಕ್ಷತ ನ ವೈ ತಪಸ್ಯಾನಂತ್ಯಮಸ್ತಿ। ಹಂತಾಹಂ ಭೂತೇಷ್ವಾತ್ಮಾನಂ ಜುಹವಾನಿ ಭೂತಾನೀತಿ। ತತ್ಸರ್ವೇಷು ಭೂತೇಷ್ವಾತ್ಮಾನಂ ಹುತ್ವಾ ಭೂತಾನಿ ಚಾತ್ಮನಿ ಸರ್ವೇಷಾಂ ಭೂತಾನಾಂ ಶ್ರೈಷ್ಠ್ಯಂ ಸ್ವಾರಾಜ್ಯಮಾಧಿಪತ್ಯಂ ಪರ್ಯೈತ್। ತ ಥೇ ವೈತದ್ಯಜಮಾನಃ ಸರ್ವಮೇಧೇ ಸರ್ವಾನ್ ಮೇಧಾನ್ ಹುತ್ವಾ ಸರ್ವಾಣಿ ಭೂತಾನಿ ಶ್ರೈಷ್ಠ್ಯಂ ಸ್ವಾರಾಜ್ಯಮಾಧಿಪತ್ಯಂ ಪರ್ಯೇತಿ॥** ಶತಪಥ. ೧೩-೭.೧

'ಸ್ವಯಂಭೂ ಬ್ರಹ್ಮನು ಒಮ್ಮೆ ತಪಸ್ಸನ್ನು ಕೈಕೊಂಡನು. ತಪಸ್ಸಿಗೆ ಕೊನೆಯೆ ಇಲ್ಲವೆಂಬುದನ್ನು ನೋಡಿದನು. ಎಲ್ಲ ಪ್ರಾಣಿಮಾತ್ರಗಳಿಗಾಗಿ ತನ್ನ ಆಹುತಿಕೊಡಬೇಕೆಂದೂ ಎಲ್ಲ ಪ್ರಾಣಿಮಾತ್ರಗಳನ್ನು ತನ್ನ ಆತ್ಮದಲ್ಲಿ ಅಳವಡಿಸಿಕೊಳ್ಳಬೇಕೆಂದೂ ನಿರ್ಧರಿಸಿದನು. ಬಳಿಕ ಹಾಗೆ ಮಾಡಲು ಆತನಿಗೆ ಹಿರಿಮೆ ಬಂದಿತು. ಸ್ವಾರಾಜ್ಯವು ದೊರೆತಿತು. ಆಧಿಪತ್ಯವೂ ಸಿಕ್ಕಿತು.'

**ವಿಶ್ವಕರ್ಮಾ ಭೌವನಃ ಸರ್ವಮೇಧೇ ಸರ್ವಾಣಿ ಭೂತಾನಿ ಜುಹವಾಂಚಕಾರ। ಸ ಆತ್ಮಾನಮಪಿ ಅಂತತೋ ಜುಹವಾಂಚಕಾರ ॥೨॥ ತದಭಿವಾದಿನ್ಯೇ ಷಗ್ಭವತಿ। ಯ ಇಮಾ ವಿಶ್ವಾ ಭುವನಾನಿ ಜುಹ್ವದಿತಿ ॥೩॥**

ನಿರುಕ್ತ ದೈ. ೧೦. ೨೬

"ವಿಶ್ವಕರ್ಮ ಭೌವನನು ಸರ್ವಮೇಧ ಯಾಗ ಮಾಡಿದನು. ಅದರಲ್ಲಿ ಮೊದಲು ಎಲ್ಲ ಪ್ರಾಣಿಗಳ ಬಳಿಕ ತನ್ನ ಆತ್ಮದ ಹವನ ಮಾಡಿದನು." ಇದರ ವರ್ಣನೆಯು ಋಗ್ವೇದದಲ್ಲಿ 'ಯ ಇಮಾ ವಿಶ್ವಾ ಭುವನಾನಿ ಜುಹ್ವತ' ಎಂಬ ಮಂತ್ರದಲ್ಲಿದೆ.

(೧೦. ೮೧ ೧).

ಯ ಇಮಾ ವಿಶ್ವಾ ಭುವನಾನಿ ಜುಹ್ವದೃಷಿರ್ಹೋತಾ ನ್ಯಸೀದತ್ಪಿತಾ ನಃ॥ ಸ ಆಶಿಷಾ ದ್ರವಿಣಮಿಚ್ಛಮಾನಃ ಪ್ರಥಮಚ್ಛದವರಾँ ಆವಿವೇಶ।

(ಋ ೧೦. ೮೧. ೧)

ನಮ್ಮ (ತಂದೆ) ಪರಮಋಷಿ ಸರ್ವ ಸಾಕ್ಷಿಯಾದ ವಿಶ್ವಕರ್ಮನು ಮೊದಲು ತನ್ನ ಎಲ್ಲ ಭೂತಮಾತ್ರಗಳನ್ನು ಕೊಟ್ಟನು. ಬಳಿಕ ತನ್ನ ಆತ್ಮದ ಆಹುತಿಯನ್ನು ಕೊಡಲು ಕುಳಿತನು. ಆತನು ತನ್ನ ಶುಭೇಚ್ಛೆಗಳಿಂದ (ಆಶಿಷಾ) ಎಲ್ಲರಿಗೂ ಧನವು ದೊರಯಬೇಕೆಂದು ಹಾರಯಿಸುತ್ತ, ಆತನು ಮುಖ್ಯಸ್ಥಾನದಲ್ಲಿ ಇರುವ ಅಧಿಕಾರಿಯಾಗಿದ್ದರೂ (ಪ್ರಥಮಚ್ಛದ್) ಕೀಳುಸ್ಥಿತಿಯಲ್ಲಿರುವವರ ವರೆಗೂ (ಅ-ವರಾನ್), ಹಬ್ಬಿದನು (ಆವಿವೇಶ).

ವೇದಗಳಲ್ಲಿ ಹೇಳಿದ ಈ ಮಹಾಯಾಗದ ಆದರ್ಶವೇ ಗೀತೆಯಲ್ಲಿಯೂ ಇದೆ. ಲೋಕಕಲ್ಯಾಣಕ್ಕಾಗಿ ಆತ್ಮಾರ್ಪಣ ಮಾಡುವ ತತ್ವವೇ ಈ ಮಹಾಯಾಗದ ಗುಟ್ಟು. ಸ್ವಂತದ ಲಾಭದ ಯಾವ ಹಂಬಲವೂ ಇಲ್ಲದೆ ಜಗತ್ತಿನ ಹಿತಕ್ಕಾಗಿ ತನ್ನ ಸರ್ವಸ್ವವನ್ನೂ ಸೂರೆಮಾಡುವವನು ಲೋಕಪೂಜ್ಯನೂ, ಮಹಾತ್ಮನೂ ಎಂದು ಖ್ಯಾತಿಪಡೆದು ಅಮರ ಪದವಿಯನ್ನು ಹೊಂದುತ್ತಾನೆ.

**ನ ಮೇ ಪಾರ್ಥಾಸ್ತಿ ಕರ್ತವ್ಯಂ ತ್ರಿಷು**
**ಲೋಕೇಷು ಕಿಂಚನ।**
**ನಾನವಾಪ್ತಮವಾಪ್ತವ್ಯಂ ವರ್ತ ಏವ ಚ**
**ಕರ್ಮಣಿ ॥** (ಗೀ. ೩. ೨೨)

## (೭) ಅನಾಸಕ್ತ ಕರ್ಮ.

ಯಸ್ತ್ವಾತ್ಮರತಿರೇವ ಸ್ಯಾದಾತ್ಮತೃಪ್ತಶ್ಚ ಮಾನವಃ ।
ಆತ್ಮನ್ಯೇವ ಚ ಸಂತುಷ್ಟಸ್ತಸ್ಯ ಕಾರ್ಯಂ ನ ವಿದ್ಯತೇ ॥ ೧೭ ॥
ನೈವ ತಸ್ಯ ಕೃತೇನಾರ್ಥೋ ನಾಕೃತೇನೇಹ ಕಶ್ಚನ ।
ನ ಚಾಸ್ಯ ಸರ್ವಭೂತೇಷು ಕಶ್ಚಿದರ್ಥವ್ಯಪಾಶ್ರಯಃ ॥ ೧೮ ॥
ತಸ್ಮಾದಸಕ್ತಃ ಸತತಂ ಕಾರ್ಯಂ ಕರ್ಮ ಸಮಾಚರ ।
ಅಸಕ್ತೋ ಹ್ಯಾಚರನ್ ಕರ್ಮ ಪರಮಾಪ್ನೋತಿ ಪೂರುಷಃ ॥ ೧೯ ॥

---

**ಅನ್ವಯ :—** ಯಃ ತು ಮಾನವಃ ಆತ್ಮರತಿಃ ಏವ, ಆತ್ಮತೃಪ್ತಃ ಚ, ಆತ್ಮನಿ ಏವ ಚ ಸಂತುಷ್ಟಃ ಸ್ಯಾತ್, ತಸ್ಯ ಕಾರ್ಯಂ ನ ವಿದ್ಯತೇ ॥ ೧೭ ॥ ಇಹ ಕೃತೇನ ತಸ್ಯ ಅರ್ಥಃ ನ ಏವ, ಅಕೃತೇನ (ಅಪಿ) ಕಶ್ಚನ ತಸ್ಯ (ಅರ್ಥ) ನ, (ತಥಾ) ಸರ್ವ ಭೂತೇಷು ಚ ಅಸ್ಯ ಕಶ್ಚಿತ ಅರ್ಥವ್ಯಪಾಶ್ರಯಃ ನ ॥ ೧೮ ॥ ತಸ್ಮಾತ್ (ತ್ವಂ) ಅಸಕ್ತಃ (ಸನ್) ಸತತಂ ಕರ್ಮ ಸಮಾಚಾರ, ಹಿ ಪುರುಷಃ ಅಸಕ್ತಃ (ಸನ್) ಕರ್ಮ ಆಚರನ್, ಪರಂ ಆಪ್ನೋತಿ ॥ ೧೯ ॥

ಯಾವನು ಆತ್ಮದಲ್ಲಿ ತಲ್ಲೀನನಾಗಿರುವನೋ ಆತ್ಮದಲ್ಲಿ ತೃಪ್ತನಾಗಿರುವನೋ ಆತ್ಮದಲ್ಲಿ ಸಂತುಷ್ಟನಿರುವನೋ ಆತನಿಗೆ ಮಾಡಬೇಕಾದುದು ಯಾವುದೂ ಉಳಿದಿಲ್ಲ. ॥ ೧೭ ॥ ಇಲ್ಲಿ ಮಾಡುವ ಕೆಲಸದಲ್ಲಿ ಆತನ ಸ್ವಾರ್ಥವು ಏನೂ ಆಗುವುದಿಲ್ಲ. ಕೆಲಸ ಮಾಡದಿರುವುದರಿಂದಲೂ ಆತನ ಸ್ವಾರ್ಥವಿರುವುದಿಲ್ಲ. ಅದರಂತೆ ಎಲ್ಲ ಪ್ರಾಣಿಮಾತ್ರಗಳೊಡನೆ ಆತನ ಸ್ವಾರ್ಥಸಂಬಂಧವೇನೂ ಇರುವುದಿಲ್ಲ. ॥ ೧೮ ॥ ಆದುದರಿಂದ ನೀನು ಅನಾಸಕ್ತನಾಗಿ ಮಾಡತಕ್ಕ ಕೆಲಸಮಾಡುತ್ತಿರು, ಅನಾಸಕ್ತನಾಗಿ ಕೆಲಸದಲ್ಲಿ ತೊಡಗಿದವನು ಪರಮಪದವಿಯನ್ನು ಪಡೆಯುತ್ತಾನೆ. ॥ ೧೯ ॥

**ಭಾವಾರ್ಥ :—** ಯಾವನು ತನ್ನಲ್ಲಿಯೆ ತಾನು ಲೀನನಾಗಿ, ಹೊರಗಿನ ಯಾವ ವಸ್ತುವನ್ನೂ ಹಾರಯಿಸದೆ ತನ್ನಲ್ಲಿಯೇ ತಾನು ಹಿಗ್ಗುಗೊಳ್ಳುವನೊ ಆತನಿಗೆ ಹೊರಗಣ ಕೆಲಸದ ಯಾವ ಒತ್ತಾಯವೂ ಸೋಂಕದು. ಆತನು ಕೆಲಸ ಮಾಡಿದರೂ ಸರಿ, ಬಿಟ್ಟರೂ ಸರಿ. ಏಕೆಂದರೆ ಹೊರಗಣ ಜಂಜಾಟದ ತೊಡಕು ಆತನಿಗೆ ಇರುವುದಿಲ್ಲ. ಸ್ವಾರ್ಥವು ತಿಲಮಾತ್ರವೂ ಉಳಿದಿರುವುದಿಲ್ಲ. ಆತನ ಆನಂದದ ವಸ್ತುವು ಹೊರಗೆ ಇರದೆ ಆತನಲ್ಲಿಯೆ ಇರುವುದರಿಂದ ಆತನು ಅನಾಸಕ್ತನು. ಆದಕಾರಣ ಮನುಷ್ಯರು ಅನಾಸಕ್ತರಾಗಿ ಕೆಲಸ ಮಾಡುತ್ತಿರಬೇಕು. ಅನಾಸಕ್ತಿಯಿಂದ ಮಾಡಿದ ಕೆಲಸವು ಆ ಮನುಷ್ಯನನ್ನು ಪರಮಪದಕ್ಕೆ ಒಯ್ಯುತ್ತದೆ.

---

“ಎಲೈ ಅರ್ಜುನನೇ! ನನಗೆ ಈ ಮೂರುಲೋಕದಲ್ಲಿಯೂ ಮಾಡಬೇಕಾದುದು ಏನೂ ಉಳಿದಿಲ್ಲ. ಪಡೆಯುವದಿದ್ದುದೂ ಯಾವುದೂ ಇಲ್ಲ. ಆದರೂ ನಾನು (ಯಜ್ಞ)ಕರ್ಮವನ್ನು ಮಾಡುತ್ತಲೆ ಇದ್ದೇನೆ.” ಹಿಂದ ಸ್ವಯಂಭೂ ಬ್ರಹ್ಮನು ಈ ಸರ್ವಮೇಧ ಮಾಡಿದನು. ಬಳಿಕ ವಿಶ್ವಕರ್ಮನು ಮಾಡಿದನು. ಅವನ ಶ್ರೀಕೃಷ್ಣನೂ ನಡಿಸಿದನು. ಇವರ ತೆರನಾಗಿ ಈ ಸರ್ವಮೇಧ ಮಾಡುವವರು ಇವರಂತೆಯೆ ಲೋಕವಿಖ್ಯಾತರಾಗುವರು. ಸ್ವಾರಾಜ್ಯವನ್ನು ಪಡೆಯುವವರು; ಅಧಿಪತಿಗಳಾಗಿಯೂ ಮೆರೆಯುವರು.

ಹೀಗೆ ತನ್ನ ಜೀವನವನ್ನು ಯಜ್ಞಮಯಮಾಡುವ ಪುರುಷನು ಪುರುಷರಲ್ಲಿ ಉತ್ತಮನು, ಪುರುಷೋತ್ತಮನು ಎನಿಸುವನು ಉಳಿದವರು ಕಿಂಕರರೆನಿಸಿ ಬಾಳುವರು.

| | |
|---|---|
| ಉತ್ತಮ | ಹೀನ |
| ಪುಣ್ಯಾಯು | ಅಘಾಯು |
| ಪುಣ್ಯಮಯ ಜೀವನ | ಪಾಪಮಯಜೀವನ |
| ಇಂದ್ರಿಯ ಸಂಯಮ | ಇಂದ್ರಿಯಾರಾಮ |
| ಯಜ್ಞಂ ಅನುವರ್ತಯತಿ | ಯಜ್ಞಂ ನಾನುವರ್ತಯತಿ |

ಸಫಲಂ ಜೀವತಿ ಸಮೋಘಂ ಜೀವತಿ.

ಈ ಮೇಲಣ ಪದಸಮುಚ್ಚಯವು ಉತ್ತಮ ಮತ್ತು ಹೀನ ಜೀವಿಗಳ ಬಾಳ ಪಾಡನ್ನು ಚೆನ್ನಾಗಿಯೆ ವಿವರಿಸಿ ಹೇಳುತ್ತವೆ. ಇವರಲ್ಲಿ ಎಲರಿಗಾಗಿ ತನ್ನ ಬಾಳನ್ನು ಹೋಮಮಾಡುವ (ಸವೆಸುವ) ಮನುಷ್ಯನು ಪುಣ್ಯಾತ್ಮನೆಂದೂ ತನಗಾಗಿ ಎಲ್ಲರನ್ನೂ ಗೋಳಿಡಿಸಿ ತನ್ನ ಭೋಗವಿಲಾಸಗಳಿಗಾಗಿಯೇ ಬದುಕಿದವನು ಪಾಪಾತ್ಮನೆಂದೂ ಬೇರೆ ಹೇಳಬೇಕಾಗಿಲ್ಲ.

ಜನ್ಮಸಾರ್ಥಕ್ಯ.

(೧೭-೧೮) ಹೊರಗಣ ವಸ್ತುಗಳ ಹಂಬಲವು ಎಲ್ಲಿಯವರೆಗೆ ತಪ್ಪಿಲ್ಲವೋ ಅಲ್ಲಿಯವರೆಗೆ ಮನುಷ್ಯನಿಗೆ ಆತೃಪ್ತಿಯು ಬೆನ್ನಬಿಟ್ಟಿಲ್ಲ. ಆ ಹೊರಗಣ ಇಷ್ಟವಸ್ತುವನ್ನು ಪಡೆವವರೆಗೆ ತನ್ನ ಜನ್ಮಸಾರ್ಥಕವಾಯಿತೆಂದು ಆತನು ಬಗೆಯುವುದಿಲ್ಲ. ಕೃತಕೃತ್ಯನಾದೆನೆಂದು ಆತನಿಗೆ ಎನಿಸುವುದಿಲ್ಲ. ಆ ಹೊರವಸ್ತು ಪಡೆವ ಹಂಬಲವೆ ಆತನನ್ನು ಯಾವಾಗಲೂ ಕರ್ಮಕ್ಕೆ ಪ್ರಚೋದಿಸುತ್ತದೆ. ಯಾವಾಗಲೂ ತನ್ನ ಕೊರತೆಯು ನೆನವಾಗಿ ಆತನು ಅತೃಪ್ತನು; ಅಸಂತುಷ್ಟನು; ಆತನನ್ನು ಬಿಡದೆ ಆತನ ಅಪೂರ್ಣತೆಯು ಕುರುಹುಗೊಳ್ಳುವುದು. ತನ್ನ ಭೋಗವಿಲಾಸಗಳಿಗೆ ಅವಶ್ಯಕ ಸಾಧನಗಳನ್ನು ಕಲೆಹಾಕುವುದಕ್ಕಾಗಿ ಆತನು ಹಗಲಿರುಳೂ ಎಡೆಬಿಡದೆ ಹೊಡೆದಾಟ, ಹೋರಾಟಗಳನ್ನು ನಡೆಸುತ್ತಾನೆ ಒಂದು ದೊರೆತೊಡನೆ, ಅದರ ಮುಂದಿನದರ ಆಶೆಯು ಆತನನ್ನು ಎಲ್ಲಿಯೂ ವಿಶ್ರಮಿಸಗೊಡುವುದಿಲ್ಲ. ಈ ಕರ್ಮಭೋಗಗಳ ಚಕ್ರದೊಳಗಿಂದ ಹೊರಬೀಳುವುದಕ್ಕೆ ಅಸಾಧಾರಣವಾದ ಎದೆಗಾರಿಕೆಯು ಬೇಕಾಗುತ್ತದೆ. ಸಾಮಾನ್ಯರು ಈ ಚಕ್ರದಲ್ಲಿಯೆ ಸುತ್ತಾಡುತ್ತ ಬಳಲಿ ಬೆಂಡಾಗಿ ಸಾಯುವರು.

ಈ ಗೋಳಿನೊಳಗಿಂದ ಪಾರಾಗಲು ದೂರದರ್ಶಿಗಳಾದ ತತ್ತ್ವಜ್ಞರು ಬಹಳ ಅಮೋಘವಾದ ದಾರಿಯನ್ನು ಕಂಡುಹಿಡಿದಿದ್ದಾರೆ. ಮನುಷ್ಯನ ಪಡೆವು ಹೊರಗಿಲ್ಲ. ಆತನ ಅಂತರಂಗದಲ್ಲಿಯೇ ಇದೆ. ಅದನ್ನು ಪಡೆದನೆಂದರೆ ಆತನ ಎಲ್ಲ ಹಂಬಲ ಹರಿದಾಟವೂ ನಿಂತು ಶಾಂತಿಸುಖವು ದೊರೆಯುವುದು. 'ಆತ್ಮ-ರತಿ;' ತನ್ನ ಆತ್ಮದಲ್ಲಿ ತಾನು ತಲ್ಲೀನನಾಗಿ ನಲಿಯುವುದು. ಆತ್ಮ-ಕ್ರೀಡೆ, ತನ್ನ ಆತ್ಮದೊಡನೆ ಸರಸವಾಡುವುದು. ಬೇರೆಯವರ ಹಂಗಿಲ್ಲದ ಆನಂದವು ಬಿಡುಗಡೆಯಾಗುವುದರಿಂದ ದೊರೆವುದು. ಈ ಆತ್ಮಾನಂದನಾಟದಲ್ಲಿಯೇ ಜ್ಞಾನಿಗೆ ದೊರೆಯುತ್ತದೆ. ಈ ಆನಂದವು ಅಪೂರ್ವವಾದುದು. ಅನುಪಮೇಯವಾದುದು. ಇದನ್ನು ಕುರಿತು ಉಪನಿಷತ್ತಿನಲ್ಲಿ ಹೇಳಿರುವುದೇನೆಂದರೆ :

**ಅಥಾತ ಆತ್ಮಾದೇಶ ಏವಾತ್ಮೈವಾಧಸ್ತಾತ್, ಆತ್ಮೋಪರಿಷ್ಟಾದಾತ್ಮಾ ಪಶ್ಚಾತ್, ಆತ್ಮಾಪುರಸ್ತಾತ್, ಆತ್ಮಾ ದಕ್ಷಿಣತ, ಆತ್ಮೋತ್ತರತ, ಆತ್ಮೈವೇದ ಸರ್ವಂ ಇತಿ; ಸವಾ ಏಷ ಏವಂ ಪಶ್ಯನ್, ಏವಂ ಮನ್ವಾನಃ, ಏವಂ ವಿಜಾನನ್ ಆತ್ಮರತಿಃ ಆತ್ಮಕ್ರೀಡಃ ಆತ್ಮಮಿಥುನಃ ಆತ್ಮಾನಂದಃ ಸ ಸ್ವರಾಡ್ ಭವತಿ; ತಸ್ಯ ಸರ್ವೇಷು ಲೋಕೇಷು ಕಾಮಚಾರೋ ಭವತಿ । ಅಥ ಯೇಽನ್ಯಥಾತೋ ವಿದುರನ್ಯ ರಾಜಾನಸ್ತೇ ಕ್ಷಯ್ಯಲೋಕಾ ಭವಂತಿ ತೇಷಾಂ ಸರ್ವೇಷು ಲೋಕೇಷ್ವಕಾಮಚಾರೋ ಭವತಿ** ಛಾಂದೋಗ್ಯ. ೭-೨೫-೨

"ಆತ್ಮನ ಆದೇಶವು ಹೀಗಿದೆ: ಆತ್ಮನು ಕೆಳಗೆ, ಮೇಲೆ, ಹಿಂದೆ, ಮುಂದೆ, ಎಡಕ್ಕೆ, ಬಲಕ್ಕೆ (ಎಲ್ಲೆಡೆಗೂ) ಇದ್ದಾನೆ ಎಲ್ಲವೂ ಇದು ಆತ್ಮವೇ, ಎಂದು ಯಾವನು ಕಾಣುವನೋ ಅರಿಯುವನೋ, ಅನುಭವಿಸುವನೋ ಆತನು ಆತ್ಮನೊಡನೆ ಆಸಕ್ತನಾಗುವನು (ಆತ್ಮರತಿಃ); ಆತ್ಮನೊಡನೆ ಆಡುವನು (ಆತ್ಮಕ್ರೀಡಃ); ಆತ್ಮನೊಡನೆ ಕೂಡುವನು (ಆತ್ಮಮಿಥುನಃ) ಇಂತಹನು ಸಂಪೂರ್ಣ ಸ್ವಾತಂತ್ರ್ಯವನ್ನು (ಸ್ವರಾಟ್) ಅನುಭವಿಸುವನು. ಇವನೇ ಮುಕ್ತನು ಇವನು ಎಲ್ಲ ಲೋಕಗಳಲ್ಲಿ ಮನಬಂದಂತೆ ವಿಹರಿಸಬಲ್ಲನು.

ಆದರೆ ಇದಕ್ಕೆ ವಿಪರೀತವಾಗಿ ಬೇರೆ ಬಗೆಯಾದ ತಿಳಿವುಳ್ಳವನಾಗಿರುವನೊ (ಅನ್ಯ-ರಾಜಾನಃ), ಅವನು ಹೆರವರ ಆಳಾಗಿ, ಪರತಂತ್ರನಾಗುವನು. ಅವನು ಕ್ಷೀಣವಾಗುವ ಲೋಕಕ್ಕೆ ಹೋಗುವನು. ಇಂತಹರು ಎಲ್ಲ ಲೋಕದೊಡನೆ ವಿಹರಿಸಲಾರರು

ಇಲ್ಲಿಯ 'ಆತ್ಮರತಿಃ,' 'ಆತ್ಮಕ್ರೀಡಃ,' 'ಆತ್ಮಮಿಥುನಃ,' 'ಆತ್ಮಾನಂದಃ,' 'ಸ್ವರಾಟ್' ಈ ಪದಗಳು ಗೀತೆಯೊಳಗಿನ 'ಆತ್ಮರತಿ' ಶಬ್ದದ ಅರ್ಥವನ್ನು ಸಂಪೂರ್ಣವಾಗಿ ಗ್ರಹಿಸಲಿಕ್ಕೆ ಚೆನ್ನಾಗಿ ನೆರವಾಗುವಂತಿವೆ. ಉಪನಿಷತ್ತಿನಲ್ಲಿ ಇನ್ನೊಂದೆಡೆಗೆ ಹೇಳಿರುವುದೇನೆಂದರೆ :

**ಪ್ರಾಣೋಹ್ಯೇಷ ಯಃ ಸರ್ವಭೂತೈರ್ವಿಭಾತಿ**
**ವಿಜಾನನ್ ವಿದ್ವಾನ್ ಭವತೇ ನಾತಿವಾದೀ ।**

ಕತೆಯು ಉಳಿಯುವುದಿಲ್ಲ. ಆನಂದದ ನಿಧಿಯೇ ಆತನಿಗೆ ಒಳಗೆ ದೊರೆತಿರುತ್ತದೆ. ಇಂತಹ ಯೋಗಸಿದ್ಧರು ಹೊರಗಣ ಯಾವ ಆಸಕ್ತಿಯುಳ್ಳವರೂ ಆಗಿರುವುದಿಲ್ಲ. (ಸರ್ವಭೂತೇಷು ಅಸ್ಯ ಅರ್ಥವ್ಯಪಾಶ್ರಯಃ ನ) ಅವರಿಗೆ ಎಲ್ಲ ಬಗೆಯ ಹಿಗ್ಗು ಅವರ ಆತ್ಮದಲ್ಲಿಯೆ ದೊರೆಯುತ್ತಿರುತ್ತದೆ. ಇದನ್ನು ಛಾಂದೋಗ್ಯದಲ್ಲಿ ಸೊಗಸಾಗಿ ಹೀಗೆ ವಿವರಿಸಿ ಹೇಳಿದೆ:

**ತಸ್ಯ ಹವಾ ಏತಸ್ಯೈವಂ ಪಶ್ಯತ ಏವಂ ಮನ್ವಾನಸ್ಯೈವಂ ವಿಜಾನತ ಆತ್ಮತಃ ಪ್ರಾಣ ಆತ್ಮತ ಆಶಾ ಆತ್ಮತಃ ಸ್ಮರ ಆತ್ಮತ ಆಕಾಶ ಆತ್ಮತಃ ತೇಜ ಆತ್ಮತಃ ಆಪ ಆತ್ಮತಃ ಅವಿರ್ಭಾವತಿರೋಭಾವಾವಾತ್ಮತೋಽನ್ನಮ್ ಆತ್ಮತೋಬಲಮ್ ಆತ್ಮತೋ ವಿಜ್ಞಾನಮ್ ಆತ್ಮತೋ ಧ್ಯಾನಮ್ ಆತ್ಮತಃ ಚಿತ್ತಮ್, ಆತ್ಮತಃ ಸಂಕಲ್ಪ ಆತ್ಮತಃ ಮನ, ಆತ್ಮತಃ ವಾಕ್ ಆತ್ಮತಃ ನಾಮಮ್, ಆತ್ಮತಃ ಮಂತ್ರಾ ಆತ್ಮತಃ ಕರ್ಮಮ್ ಆತ್ಮತಃ ಏವೇದಂ ಸರ್ವಮ್ ಇತಿ ॥ ೧ ॥ ತದೇಷಶ್ಲೋಕೋ ನಪಶ್ಯೋ ಮೃತ್ಯುಂ ಪಶ್ಯತಿ, ನ ರೋಗಂ ನೋತ ದುಃಖತಾಂ ಸರ್ವಂ ಹ ಪಶ್ಯಃ ಪಶ್ಯತಿ ಸರ್ವಮಾಪ್ನೋತಿ ಸರ್ವಶ ಇತಿ.... ॥ ೨ ॥ (೭. ೨೬)**

ಈ ಬಗೆಯಾಗಿ ಆತ್ಮಾನುಭಾವದಲ್ಲಿದ್ದವರಿಗೆ ಬಯಕೆ, ನೆನಪು, ಹೊಳಪು, ನೀರು, ಕಾಣುವುದು, ಕಾಣದಿರುವುದು, ಅನ್ನ, ಬಲ, ತಿಳಿವು, ಧ್ಯಾನ, ಚಿತ್ತ, ಸಂಕಲ್ಪ, ಮನಸು, ಮಾತು, ಹೆಸರು, ಮಂತ್ರ ಕರ್ಮ. ಮತ್ತು ಉಳಿದುದೆಲ್ಲವೂ ಆತ್ಮನಿಂದಲೇ ದೊರೆಯುತ್ತದೆ. ಈ ಅನುಭವದವರಿಗೆ ಸಾವಿನ ಹೆದರಿಕೆಯಿಲ್ಲ. ರೋಗಗಳ ಬಾಧೆಯಿಲ್ಲ. ಕಷ್ಟಗಳ ಕಾಟವಿಲ್ಲ. ಅವರು ಎಲ್ಲವನ್ನೂ ಕಾಣುವರು ಮತ್ತು ಎಲ್ಲವನ್ನೂ ಹೊಂದುವರು. ಎಂದು ಶ್ಲೋಕವು ಸುಪ್ರಸಿದ್ಧವಿದೆ.” ಆದುದರಿಂದಲೇ ಹೀಗೆ ಎಲ್ಲವನ್ನೂ ಪಡೆಯಬಲ್ಲ ಸಿದ್ಧನಿಗೆ ‘ತಸ್ಯ ಕಾರ್ಯಂ ನವಿದ್ಯತೇ’ ಎಂದು ಗೀತೆಯು ಹೇಳಿದೆ. ಅವನೇ ನಿಜವಾದ ಕೃತಕೃತ್ಯನು ಧನ್ಯನು.

ಈ ಬಗೆಯಾಗಿ ಜನ್ಮಸಾರ್ಥಕ್ಯವು ಆಗುವ ದಾರಿ ಯಾವುದು? ಅದಕ್ಕೆ ಗೀತೆಯು ಹೇಳಿದ ಉತ್ತರವಿದು. ‘ಅಸಕ್ತಃ ಕಾರ್ಯಂ ಕರ್ಮ ಸಮಾಚರ.’ ಆಸಕ್ತಿಯನ್ನು ಬಿಟ್ಟು ಕರ್ತವ್ಯಕರ್ಮ ಮಾಡುತ್ತಿರು. ಈ ದಾರಿಯಿಂದ ನಡೆದವರಿಗೆ ಪರಮಪದವು ಪ್ರಾಪ್ತವಾಗುವುದು. (ಪರಂ ಆಪ್ನೋತಿ). ಪರ ಎಂದರೆ ಉಚ್ಚ ಸ್ಥಿತಿಯು ದೊರೆಯುವುದು. ಆದುದರಿಂದ ಕರ್ಮದ ಫಲವನ್ನು ಲೋಕಹಿತಾರ್ಥಕ್ಕಾಗಿ ತ್ಯಾಗಮಾಡಬೇಕು. ತನಗಾಗಿಯೆ ಆ ಫಲವನ್ನು ಬಯಸುವುದು ಸ್ವಾರ್ಥವು. ಆಸಕ್ತಿಯೆಂದರೆ ಇದೇ. ಆಸಕ್ತಿಯನ್ನು ಬಿಡುವುದು ಎಂದರೆ ಕರ್ಮಫಲವನ್ನು ಲೋಕಕಲ್ಯಾಣಕ್ಕಾಗಿ ಅರ್ಪಿಸುವುದು. ಈ ಬಗೆಯಾಗಿ ಈ ಸಂಸಾರದಲ್ಲಿ ನಡೆದುಕೊಂಡರೆ ಪರಮ ಪದವು ಯಾವನಿಗೂ ದೊರೆಯುವಲ್ಲಿ ಸಂದೇಹವಿಲ್ಲ.

ಅನಾಸಕ್ತಿ, ತ್ಯಾಗ, ಯಜ್ಞ ಎಂಬೀ ವಿಚಾರದಲ್ಲಿ ಗೀತೆಯು ಹೇಳಿದ ಮಾತುಗಳನ್ನು (ಅಧ್ಯಾಯ ೩. ಶ್ಲೋಕ ೧೮) ಈ ಮೊದಲು ಹೇಳಿದೆ. ಅವನ್ನು ಮತ್ತೆ ಮನನಮಾಡಬೇಕು. ಇಲ್ಲಿ ಹೇಳಿದ ವಿಚಾರಗಳನ್ನೇ ಬೇರೆ ಆತ್ಮಜ್ಞಾನಿಗಳೂ ಪುಷ್ಟೀಕರಿಸಿ ಬರೆದಿದ್ದಾರೆ.

**ಜ್ಞಸ್ಯ ನಾರ್ಥಃ ಕರ್ಮತ್ಯಾಗೈರ್ನಾರ್ಥಃ**
**ಕರ್ಮಸಮಾಶ್ರಯೈಃ ॥**

**ತೇನ ಸ್ಥಿತಂ ಯಥಾ ಯದ್ಯತ್ತತ್ತಥೈವ**
**ಕರೋತ್ಯಸೌ ॥** ಯೋಗವಾ. ೬. ಉ. ೧೯೯. ೪

ಜ್ಞಾನಿಗೆ ಕರ್ಮತ್ಯಾಗದಿಂದಲಾಗಲಿ, ಕರ್ಮಮಾಡುವುದರಿಂದಲಾಗಲಿ ಪಡೆಯಬೇಕಾದುದೇನೂ ಇರುವುದಿಲ್ಲ ಆತನು ಇದ್ದ ಸ್ಥಿತಿಯಲ್ಲಿ ಆತನಿಗೆ ಪ್ರಾಪ್ತವಾದ ಕರ್ಮವನ್ನು ಆತನು ಮಾಡುತ್ತಿರುತ್ತಾನೆ.

**ಮಮ ನಾಸ್ತಿ ಕೃತೇನಾರ್ಥೋ ನಾಕೃತೇನೇಹ**
**ಕಶ್ಚನ ।**

ಯಥಾ ಪ್ರಾಪ್ತೇನ ತಿಷ್ಠಾಮಿ ಹ್ಯಕರ್ಮಣಿ ಕ
ಆಗ್ರಹಃ ॥ — ಯೋಗವಾ ೬ ಉ ೨೧೬ ೧೪

‘ನನಗೆ ಕರ್ಮಮಾಡಿ ಪಡೆಯಬೇಕಾದುದೇನೂ ಇಲ್ಲ. ಬಿಟ್ಟು ದೊರಕಿಸತಕ್ಕುದೂ ಇಲ್ಲ. ನನಗೆ ಎರಡೂ ಒಪ್ಪೆ. ಒಂದುದನ್ನ ನೆರವೇರಿಸುತ್ತೇನೆ. ಕೆಲಸ ಮಾಡದೆ ಇರುವ ಹಟವಾದರೂ ಏಕಿರಬೇಕು?”

**ಕಿಂಚಿದಸ್ಯ ನ ಸಾಧ್ಯಂ ಸ್ಯಾತ್ಸರ್ವಜಂತುಷು**
**ಸರ್ವದಾ ।**

ಅತೋಽಸಕ್ತತಯಾ ಭೂಪ ಕರ್ತವ್ಯಂ
ಕರ್ಮ ಜಂತುಭಿಃ — ಗಣೇಶಗೀತಾ ೩. ೧೮

‘ಜ್ಞಾನಿಗೆ ಯಾವ ಪ್ರಾಣಿಮಾತ್ರದಿಂದ ಸಾಧಿಸಿಕೊಳ್ಳಬೇಕಾದುದು ಏನೂ ಇರುವುದಿಲ್ಲ. ಆದುದರಿಂದ ಜನರು ಆಸಕ್ತಿರಹಿತರಾಗಿ. ತಮ್ಮ ಕೆಲಸಗಳನ್ನು ಮಾಡುತ್ತಿರಬೇಕು.

## (೮) ಜನಕನ ಆದರ್ಶ.

**ಕರ್ಮಣೈವ ಹಿ ಸಂಸಿದ್ಧಿಮಾಸ್ಥಿತಾ ಜನಕಾದಯಃ |**
**ಲೋಕಸಂಗ್ರಹಮೇವಾಪಿ ಸಂಪಶ್ಯನ್ ಕರ್ತುಮರ್ಹಸಿ || ೨೦ ||**

---

**ಅನ್ವಯ:—** ಹಿ ಜನಕಾದಯಃ ಕರ್ಮಣಾ ಏವ ಸಂಸಿದ್ಧಿಂ ಆಸ್ಥಿತಾಃ | (ತ್ವಂ) ಅಪಿ ಲೋಕಸಂಗ್ರಹಂ ಏವ ಸಂಪಶ್ಯನ್ ಕರ್ತುಂ ಅರ್ಹಸಿ || ೨೦ ||

**ಜನಕನೆ ಮೊದಲಾದವರು ಕಾಯಕದಿಂದಲೆ ಪರಮಸಿದ್ಧಿಯನ್ನು ಹೊಂದಿದರು. ಅದರಂತೆ ನೀನು ಲೋಕಸಂಗ್ರಹವನ್ನು ಗುರಿಯಾಗಿಟ್ಟುಕೊಂಡು ಕಾಯಕವನ್ನು ಮಾಡುವುದು ತಕ್ಕುದಾಗಿದೆ.**

**ಭಾವಾರ್ಥ:—** ಜನಕನು, ಅಶ್ವಪತಿರಾಜನೆ ಮೊದಲಾದ ಪುರಾತನರು ಹೀಗೆ ನಿಷ್ಕಾಮಕರ್ಮಿಗಳಾಗಿ ಸಿದ್ಧಿಯನ್ನು ಪಡೆದರು. ಪೂರ್ವಜರ ಈ ಆದರ್ಶವನ್ನು ಕಣ್ಣೆದುರಿಗಿರಿಸಿಕೊಂಡು ಲೋಕಸಂಗ್ರಹಕ್ಕಾಗಿ ಪ್ರತಿಯೊಬ್ಬರೂ ಕೆಲಸಮಾಡಲೇಬೇಕು.

---

ಗೀತೆಯಲ್ಲಿ ಮಾಡಿದ ಉಪದೇಶವಾದರೂ ಇದಕ್ಕಿಂತ ಬೇರೆಯಾಗಿಲ್ಲ. ಮಾನವನು ತನ್ನ ಜೀವನವನ್ನು ಒಂದು ಯಜ್ಞರೂಪವಾಗಿ ಮಾರ್ಪಡಿಸಿಕೊಳ್ಳಬೇಕೆಂದು ಗೀತೆಯು ಆದೇಶಿಸಿದೆ ಇದೇ ಮಾತನ್ನೆ ಆಸಕ್ತಿರಹಿತನಾಗಿ ಕರ್ಮಮಾಡು ಎಂದು ಇನ್ನೊಂದು ಬಗೆಯಾಗಿ ಹೇಳಿದ್ದಾಗಿದೆ. ಈ ಬಗೆಯಾಗಿ ಯೋಗಸಿದ್ಧರಾಗಿ ಪರಮಪದವಿಯನ್ನು ಪಡೆದು ಹಿಂದಿನ ಮಹಾಪುರುಷರಿಂದ ಆದರ್ಶವನ್ನು ಶ್ರೀಕೃಷ್ಣನು ಎತ್ತಿ ಮುಂದಿನ ಶ್ಲೋಕದಲ್ಲಿ ಹೇಳಿದ್ದಾನೆ

(೨೦) ಶ್ರೀಕೃಷ್ಣನು ಈ ವರೆಗೆ ಪ್ರತಿಪಾದಿಸಿದ ನಿಷ್ಕಾಮಕರ್ಮಯೋಗದ ತತ್ವವನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡ ಜನಕಾದಿ ಪುರಾತನ ಶ್ರೇಷ್ಠರ ಉದಾಹರಣವನ್ನೆತ್ತಿ ಹೇಳಿದ್ದಾನೆ. ಬರಿಯ ತಾತ್ವಿಕವಿವೇಚನೆಗಿಂತ, ಆ ತತ್ವವನ್ನು ಅನುಸರಿಸಿ ಆಚರಿಸಿದವರ ಉದಾಹರಣವನ್ನು ಹೇಳಿದರೆ ಹೆಚ್ಚು ಪರಿಣಾಮವಾಗುತ್ತದೆ. ಆ ದೃಷ್ಟಿಯಿಂದ ಅರ್ಜುನನಿಗೆ ಶ್ರೀಕೃಷ್ಣನು ಐತಿಹಾಸಿಕ ಉದಾಹರಣವನ್ನೂ ಹೇಳಿದ್ದಾನೆ. ಇದು ಬರಿ ಕಾಲ್ಪನಿಕ ತತ್ವಜ್ಞಾನವಾಗಿರದೆ, ಇದರಂತೆ ನಡೆದು ಅನುಭವವನ್ನು ಪಡೆದ ವ್ಯವಹಾರ್ಯವಿಷಯವಾಗಿದೆಯೆಂದು ಇದರಿಂದ ಅರ್ಜುನನ ಮನಗಾಣಿಸಿಕೊಡುತ್ತಲಿದ್ದಾನೆ.

ಹಿರಿಯಕ್ಕನ ಚಾಳಿ ಮನೆಮಂದಿಗೆಲ್ಲ, ಎಂಬಂತೆ ನಾಡಿನ ಹಿರಿಯರು ಹೇಗೆ ನಡೆದುಕೊಳ್ಳುವರೊ ಹಾಗೆ ಉಳಿದ ಸಾಮಾನ್ಯಜನಗಳು ಅನುಸರಿಸುವರು. ಅರ್ಜುನನು ಆ ಕಾಲದ ಒಬ್ಬ ವಿಖ್ಯಾತ ಲೋಕೈಕವೀರ. ಆತನನ್ನು ಲಕ್ಷಾವಧಿ ಜನಗಳು ಹಿಂಬಾಲಿಸತಕ್ಕವರು. ಇಂತಹ ಒಬ್ಬ ಕಾಳಗದೊಳಗಿಂದ ಕಾಲ್ತೆಗೆದನಾದರೆ ನಾಡಿಗೆಲ್ಲ ಇವನು ಹಾಕಿಕೊಟ್ಟ ಮೇಲ್ಪಂಕ್ತಿಯಾವುದು? ಅರ್ಜುನನೇನೊ ಸದ್ಬುದ್ಧಿಯಿಂದ, ಆಪ್ತೇಷ್ಟರ ಕರುಣೆಯಿಂದ ಕಾಳಗದಿಂದ ಹಿಂಜರಿದಿರಬಹುದು ಆದರೆ ಆತನ ಅಂತರಂಗದೊಳಗಿನ ಉದ್ದೇಶವು ಜನಗಳಿಗೆ ತಿಳಿಯುವುದರ ಮೊದಲು ಆತನು ರಣರಂಗದಿಂದ ಹೊರಬಿದ್ದು ನಡೆದುದೇ ಗೊತ್ತಾಗುವುದು. ಕಾಳಗಕ್ಕೆ ಅಣಿಯಾಗಿನಿಂತಾಗ ಫಕ್ಕನೆ ಹೀಗೆ ಹಿಂಜರಿದುಹೋಗುವ ರೂಢಿಯನ್ನು ಅರ್ಜುನನಂತಹನು ಒಮ್ಮೆ ಆರಂಭಿಸಿದನೆಂದರೆ ರಾಷ್ಟ್ರದ ಮೇಲೆ ಅದರ ದುಷ್ಪರಿಣಾಮಗಳು ಏನಾಗಬಹುದು? ಇದೆಲ್ಲ ವಿಚಾರವನ್ನು ದೂರದರ್ಶಿಯಾಗಿ ಮಾಡಬೇಡವೆ?

ಲೋಕಕ್ಕೆ ತಪ್ಪುದಾರಿಗೆ ಹಚ್ಚುವ ರೀತಿಯಲ್ಲಿ ಹಿರಿಯರಾದವರು ಎಂದೂ ನಡೆಯತಕ್ಕದ್ದಲ್ಲ. ಲೋಕಸಂಗ್ರಹಕ್ಕಾಗಿ ಅವರು ಆಜನ್ಮ ನಿಷ್ಕಾಮಕರ್ಮವನ್ನು ಆಚರಿಸುತ್ತ ಜನಗಳಿಗೆ ಒಳ್ಳೆ ಮೇಲ್ಪಂಕ್ತಿಯನ್ನು ಹಾಕಿಕೊಡುವುದು ಅವರ ಕರ್ತವ್ಯವಾಗಿದೆ. ಜನಸಾಮಾನ್ಯರಿಗೆ ತ್ಯಾಗ, ಧೈರ್ಯ, ಉತ್ಸಾಹ, ಸಾಹಸಾದಿ ಸದ್ಗುಣಗಳಲ್ಲಿ ಆಸಕ್ತಿಯುಂಟಾಗಿ ಅವರೆಲ್ಲರೂ ಲೋಕಕಲ್ಯಾಣಕ್ಕಾಗಿ ಒಂದುಗೂಡಿ ಕೆಲಸಮಾಡಲು ಹುರುಪುಳ್ಳವರಾಗುವಂತೆ ತಮ್ಮ ನಡೆನುಡಿಗಳಿಂದ ಮಾದರಿಯನ್ನು ಹಾಕಿಕೊಡುವುದು ಮುಂದಾಳುಗಳ, ತಲೆಯಾಳುಗಳ ಮೊದಲಕೆಲಸವಾಗಿದೆ.

## ಲೋಕಸಂಗ್ರಹ.

'ಲೋಕಸಂಗ್ರಹ'ವೆಂಬುದಕ್ಕೆ ಹೀಗೆ ಅರ್ಥಮಾಡಬಹುದು. (೧) ಜನರ ಸಂಘಟನೆಯನ್ನು ಮಾಡುವುದು. (೨) ಜನರ ಕಲ್ಯಾಣ, ರಾಷ್ಟ್ರದ ಏಳ್ಗೆ, ಜಗತ್ತಿನ ಹಿತ, ಮಾನವಕುಟುಂಬದ ಉದ್ಧಾರ ಮಾಡುವುದು. (೩) ಲೋಕರಕ್ಷಣ, ರಾಷ್ಟ್ರದ ಸಂರಕ್ಷಣಮಾಡುವುದು. (೪) ರಾಷ್ಟ್ರೀಯ ಸಂಘಟನೆಯನ್ನು ಮಾಡುವುದು. (೫) ಲೋಕವನ್ನು ಶ್ರೇಷ್ಠ ಮಾರ್ಗದಿಂದ ಮುಂದ ಒಯ್ಯುವುದು; ಸಮಾಜದ ಉನ್ನತಿಯನ್ನು ಮಾಡುವುದು.

ಪ್ರತಿಯೊಬ್ಬರೂ ಲೋಕಸಂಗ್ರಹಕ್ಕಾಗಿ ಕೆಲಸಮಾಡುವುದು ಉಚಿತವಾಗಿದೆ ಅದರಲ್ಲಿಯೂ ಮೇಲಿನ ಸ್ಥಾನಮಾನಗಳಲ್ಲಿ ಇರುವವರು, ಪದವಿಪಟ್ಟಗಳುಳ್ಳವರ ಮೇಲೆ ಲೋಕಸಂಗ್ರಹಕ್ಕಾಗಿ ದುಡಿಯುವ ಹೊಣೆಯು ಹೆಚ್ಚಾಗಿದೆ. ಅವರು ತಮ್ಮ ಪ್ರತಿಯೊಂದು ಆಚರಣವನ್ನೂ ವಿಮರ್ಶಿಸಿ ನೋಡಿಕೊಳ್ಳಬೇಕು. ಯಾವುದರಿಂದ ಲೋಕಕ್ಕೆ ಒಂದು ಒಳ್ಳೆದಾರಿಯನ್ನು ತೋರಿದಂತಾಗುವುದೊ ಅದನ್ನಷ್ಟೇ ಅವರು ಆಚರಿಸಬೇಕು. ಈ ಉದ್ದೇಶದಿಂದಲೇ ಗೀತೆಯಲ್ಲಿ ಶ್ರೀಕೃಷ್ಣನು, 'ಅರ್ಜುನಾ ನೀನು ಲೋಕಸಂಗ್ರಹವನ್ನು ಕಣ್ಣಮುಂದಿಟ್ಟುಕೊಂಡು ಈ ಕಾಳಗರೂಪಿಯಾದ ಶ್ರೇಷ್ಠಕರ್ಮವನ್ನು ನೆರವೇರಿಸಲೇಬೇಕು' ಎಂದು ಹೇಳಿದ್ದಾನೆ. ನಿನಗೆ ಅದನ್ನು ಮಾಡುವುದರಿಂದ ಲಾಭ, ಅಥವಾ ಬಿಟ್ಟರೆ ಹಾನಿಯಿರಲಿಕ್ಕಿಲ್ಲ. ಆದರೆ ಲೋಕವು ನಿನ್ನಹಾಗೆಯೆ ನಡೆದುಕೊಳ್ಳಹತ್ತಿದರೆ ಅದರ ಗತಿಯೇನಾದೀತು ? ಅದು ಲೋಕಕ್ಕೆಲ್ಲ ಹಿತಕಾರಕವೇ ? ಎಂಬುದನ್ನು ದೂರದೃಷ್ಟಿಯಿಂದ ವಿಚಾರಿಸಿ ಹಿರಿಯರಾದವರು ತಮ್ಮ ನಡೆವಳಿಯನ್ನು ಇಡಬೇಕು.

**ಋಷಯೋಹ್ಯಪಿ ನಿಮರ್ಯಕಾಃ ಪಶ್ಯಂತೋ**
**ಲೋಕಸಂಗ್ರಹಾನ್ ।** ಮಹಾಭಾ. ಉ ೫೧ ೫೪

[ನೀಲಕಂಠೀ ಟೀಕೆ: ಲೋಕವ್ಯವಹಾರಾನ್ ಪಶ್ಯಂತಃ ಲೋಕಮಧ್ಯೇ ಸ್ಥಿತಾಃ ಸಂತಃ]

ಋಷಿಗಳು ಲೋಕಸಂಗ್ರಹದ ವಿಚಾರಮಾಡಿಯೆ ನಡೆಯುತ್ತಿದ್ದರು.

**ಲೋಕಸಂಗ್ರಹ ಸಂಯುಕ್ತಂ ವಿಧಾತ್ರಾ**
**ವಿಹಿತಂ ಪುರಾ ।**

**ಸೂಕ್ಷ್ಮಧರ್ಮಾರ್ಥನಿಯತಂ ಸತಾಂ ಚರಿತ**
**ಮುತ್ತಮಮ್ ॥** ಮ. ಭಾ. ಶಾಂ. ೨೫೮ ೨೫

ಲೋಕಸಂಗ್ರಹದಿಂದ ಕೂಡಿದ ಮತ್ತು ಸೂಕ್ಷ್ಮಹೊತ್ತಿನಲ್ಲಿ ಧರ್ಮಾರ್ಥವನ್ನು ಸರಿಯಾಗಿ ಮಾಡುವ ಸಜ್ಜನರ ನಡೆವಳಿಯು, ಮೊದಲು ಬ್ರಹ್ಮದೇವನೇ ಗೊತ್ತುಪಡಿಸಿರುವನೇನೊ ಎಂಬಂತಿರುತ್ತದೆ.

ಬ್ರಹ್ಮಚರ್ಯದಿಂದ ವಿದ್ಯಾರ್ಜನೆಯನ್ನು ಮಾಡಿದ ತರುವಾಯ ಮುಂದೆ ಲೋಕಸಂಗ್ರಹಕ್ಕಾಗಿ ಆಯುಷ್ಯವನ್ನು ವಿನಿಯೋಗಿಸಬೇಕೆಂದು ಅಥರ್ವವೇದದಲ್ಲಿಯೂ ಹೇಳಿದೆ. ನಮ್ಮ ಪ್ರಾಚೀನ ಗ್ರಂಥಗಳಲ್ಲಿ ಬಳಸಿರುವ 'ಲೋಕಸಂಗ್ರಹ' ಎಂಬ ಈ ಪದಸಮುಚ್ಚಯದಷ್ಟು ಉಚಿತಾರ್ಥವುಳ್ಳ ಸುಂದರ ಶಬ್ದರಚನೆಯು ಬೇರಿನ್ಯಾವ ಭಾಷೆಯಲ್ಲಿಯೂ ದೊರೆಯಲಾರದು.

**ಬ್ರಹ್ಮಚಾರ್ಯೇತಿ ಸಮಿಧಾ ಸಮಿದ್ಧಃ**
**ಕಾರ್ಷ್ಣಂ ವಸಾನೋ ದೀಕ್ಷಿತೋ ದೀರ್ಘಶ್ಮಶ್ರುಃ ।**
**ಸ ಸದ್ಯ ಏತಿ ಪೂರ್ವಸ್ಮಾದುತ್ತರಂ ಸಮುದ್ರಂ**
**ಲೋಕಾನ್ ಸಂಗೃಭ್ಯ ಮುಹುರಾಚರಿಕ್ರತ್ ॥**
ಅಥರ್ವ ೧೧ ·೫. (೭)·೬

"ತುಂಬ ಗಡ್ಡಮೀಸೆಗಳ ದೀಕ್ಷೆಗೊಂಡ ಬ್ರಹ್ಮಚಾರಿಯು ಸಮಿತ್ತುಗಳೊಡನೆ ( ಅಧ್ಯಯನವು ಮುಗಿದ ಬಳಿಕ ) ಪೂರ್ವಸಮುದ್ರದಿಂದ ಉತ್ತರ ಸಮುದ್ರದವರೆಗೆ ಅಲೆದಾಡಿ ಲೋಕಸಂಗ್ರಹಮಾಡುತ್ತ ( ಎಂದರೆ ಲೋಕಕಲ್ಯಾಣಕ್ಕಾಗಿ ದುಡಿಯುತ್ತ ; 'ಲೋಕಾನ್ ಸಂಗೃಭ್ಯ' ) ಜನರಿಂದ ಅಡಿಗಡಿಗೆ ಧರ್ಮಾಚರಣೆಯನ್ನು ಮಾಡಿಸುವನು ( ಮುಹುಃ ಆಚರಿಕ್ರತ್ )."

ಬ್ರಹ್ಮಚರ್ಯಾಶ್ರಮ ಸಮಾಪ್ತಿಯ ನಂತರ ಎಂದರೆ ವಿದ್ಯಾರ್ಜನೆಯನ್ನು ಮುಗಿಸಿ ಪದವಿ ಪ್ರಶಸ್ತಿಗಳನ್ನು ಪಡೆದ ಬಳಿಕ ಸಮಾಜಸೇವೆಯ ಅನುಭವವನ್ನು ಪಡೆಯಲು ತರುಣರು ಲೋಕಸಂಗ್ರಹ ಕಾರ್ಯಕ್ಕಾಗಿ ದೇಶದಲ್ಲಿ ಪ್ರವಾಸಮಾಡುವ ಪುರಾತನ ಪದ್ಧತಿಯು ಅಥರ್ವವೇದದಲ್ಲಿ ಉಲ್ಲೇಖಿಸಲ್ಪಟ್ಟಿದೆ. ವಿದ್ಯೆಯನ್ನು ಕೇವಲ ನೌಕರಿ ದೊರಕಿಸಿ ಸೇವಾವೃತ್ತಿಯಿಂದ ಹೊಟ್ಟೆ ಹೊರಕೊಳ್ಳುವ ಸಾಧನವೆಂದು ಪಡೆಯುವುದು ದೇಶದ ಅಧಃಪಾತಕ್ಕೆ ಕಾರಣವಾಗುತ್ತದೆಂಬುದನ್ನು ನಾವಿಂದು ಮನಗಂಡುದಾಗಿದೆ. ವೇದದಲ್ಲಿ ಹೇಳಿದಂತೆ ಲೋಕಸಂಗ್ರಹಕ್ಕಾಗಿ ನಮ್ಮ ಜ್ಞಾನಶಕ್ತಿಗಳನ್ನು ಭಾರತೀಯರು ಉಪಯೋಗಿಸುತ್ತ ಬಂದಿದ್ದರೆ ನಮ್ಮ ನಾಡಿಗೆ ಇಂದಿನಂತಹ ಹೀನಸ್ಥಿತಿಯು ಎಂದೂ ಒದಗುತ್ತಿದ್ದಿಲ್ಲ. ಗುರುವಿನಂತೆ ಶಿಷ್ಯ. ತಂದೆಯಂತೆ ಮಗ. ಆದುದರಿಂದ ಹಿರಿಯರಾದವರು ಹೇಗೆ ನಡೆದುಕೊಳ್ಳಬೇಕೆಂಬುದನ್ನು ಶ್ರೀಕೃಷ್ಣನು ಮುಂದಿನ ಶ್ಲೋಕಗಳಲ್ಲಿ ಹೇಳಿದ್ದಾನೆ.

## (೯) ಲೋಕಸಂಗ್ರಹ.

ಯದ್ಯದಾಚರತಿ ಶ್ರೇಷ್ಠಸ್ತತ್ತದೇವೇತರೋ ಜನಃ ।
ಸ ಯತ್ಪ್ರಮಾಣಂ ಕುರುತೇ ಲೋಕಸ್ತದನುವರ್ತತೇ ॥ ೨೧ ॥
ನ ಮೇ ಪಾರ್ಥಾಽಸ್ತಿ ಕರ್ತವ್ಯಂ ತ್ರಿಷು ಲೋಕೇಷು ಕಿಂಚನ ।
ನಾನವಾಪ್ತಮವಾಪ್ತವ್ಯಂ ವರ್ತ ಏವ ಚ ಕರ್ಮಣಿ ॥ ೨೨ ॥
ಯದಿ ಹ್ಯಹಂ ನ ವರ್ತೇಯಂ ಜಾತು ಕರ್ಮಣ್ಯತಂದ್ರಿತಃ ।
ಮಮ ವರ್ತ್ಮಾನುವರ್ತಂತೇ ಮನುಷ್ಯಾಃ ಪಾರ್ಥ ಸರ್ವಶಃ ॥ ೨೩ ॥
ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ ಕರ್ಮ ಚೇದಹಮ್ ।
ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾಮಿಮಾಃ ಪ್ರಜಾಃ ॥ ೨೪ ॥

---

**ಅನ್ವಯ :—** ಯತ್ ಯತ್ ಶ್ರೇಷ್ಠಃ ಆಚರತಿ ತತ್ ತತ್ ಏವ ಇತರಃ ಜನಃ ( ಆಚರತಿ ). ಸಃ ಯತ್ ಪ್ರಮಾಣಂ ಕುರುತೇ, ಲೋಕಃ ತತ್ ಅನುವರ್ತತೇ ॥ ೨೧ ॥ ಹೇ ಪಾರ್ಥ! ( ಯದ್ಯಪಿ ) ಮೇ ತ್ರಿಷು ಲೋಕೇಷು ಕಿಂಚನ ಕರ್ತವ್ಯಂ ನ ಅಸ್ತಿ, ಅನವಾಪ್ತಂ ಅವಾಪ್ತವ್ಯಂ ಚ ನ ( ಅಸ್ತಿ, ತಥಾಪಿ ) ಅಹಂ ಕರ್ಮಣಿ ವರ್ತೇ ಏವ ॥ ೨೨ ॥ ಯದಿ ಅಹಂ ಅತಂದ್ರಿತಃ ( ಸನ್ ) ಕರ್ಮಣಿ ಜಾತು ನ ವರ್ತೇಯಂ, ( ತರ್ಹಿ ) ಹೇ ಪಾರ್ಥ! ಮನುಷ್ಯಾಃ ಸರ್ವಶಃ ಮಮ ವರ್ತ್ಮ ಅನುವರ್ತಂತೇ ॥ ೨೩ ॥ ಅಹಂ ಕರ್ಮ ನ ಕುರ್ಯಾಂ ಚೇತ್ ಇಮೇ ಲೋಕಾಃ ಉತ್ಸೀದೇಯುಃ, ಸಂಕರಸ್ಯ ಚ ಕರ್ತಾ ಸ್ಯಾಮ್. ಇಮಾಃ ಪ್ರಜಾಃ ಚ ಉಪಹನ್ಯಾಮ್ ॥ ೨೪ ॥

**ಹಿರಿಯರಂತೆ ಉಳಿದವರೂ ನಡೆದುಕೊಳ್ಳುತ್ತಾರೆ. ಅವರು ಯಾವುದನ್ನು ಅನುಸರಣಯೋಗ್ಯವು—ಪ್ರಮಾಣವು ಎಂದು ಬಗೆಯುವರೊ ಅದನ್ನೇ ಉಳಿದವರು ಅನುಸರಿಸುವರು ॥ ೨೧ ॥ ಎಲೆ ಅರ್ಜುನನೆ! ನನಗೆ ಈ ಮೂಲೋಕದಲ್ಲಿ ಮಾಡಬೇಕಾದುದು ಏನೂ ಉಳಿದಿಲ್ಲ; ಪಡೆಯಬೇಕಾದುದೇನೂ ಉಳಿದಿಲ್ಲ. ಆದರೂ ನಾನು ಕೆಲಸಮಾಡುವುದನ್ನು ತೊರೆದಿಲ್ಲ. ॥ ೨೨ ॥ ನಾನು ಬೇಸರವನ್ನು ಬಿಟ್ಟು ಕೆಲಸಮಾಡದೆ ಇದ್ದರೆ, ಎಲೈ ಅರ್ಜುನನೆ! ಜನಗಳೂ ಎಲ್ಲ ಬಗೆಯಿಂದ ನನ್ನ ದಾರಿಯನ್ನೇ ಹಿಡಿಯುವರು ॥ ೨೩ ॥ ನಾನು ಕೆಲಸಮಾಡದಿದ್ದರೆ ಈ ಲೋಕಗಳೆಲ್ಲವೂ ಹಾಳಾಗುವುವು; ಲೋಕದಲ್ಲಿ ಸಂಕರವುಂಟಾದೀತು. ಅದಕ್ಕೆ ನಾನೇ ಕಾರಣನಾದಂತಾದೀತು. ಈ ಪ್ರಜೆಗಳ ನಾಶಕ್ಕೆ ನಾನೇ ಕಾರಣನಾಗುವೆನು ॥ ೨೪ ॥**

**ಭಾವಾರ್ಥ :—** ಹಿರಿಯರಂತೆ ಕಿರಿಯರು. ಹಿರಿಯರಾದವರು ತಾವು ಪಡೆಯಬೇಕಾದುದು ಏನೂ ಉಳಿದಿಲ್ಲವಾದರೂ ಲೋಕಕ್ಕಾಗಿ ಅವರು ಕೆಲಸದಲ್ಲಿ ತೊಡಗಿರಲೇ ಬೇಕು. ಅವರೆ ಕೆಲಸಬಿಟ್ಟರೆ ಉಳಿದವರೂ ಅವರ ಹಾಗೆಯೆ ನಡೆಯಹತ್ತುವರು. ಹೀಗೆ ಎಲ್ಲರೂ ಕೆಲಸಗೇಡಿಗಳಾದರೆ ಲೋಕವು ಹಾಳಾಗುವುದು. ಸಂಕರವುಂಟಾಗುವುದು. ಸಮಾಜವು ಹಾಳಾದ ಹೊಣೆಯು ಕೆಲಸ ಮಾಡದ ಹಿರಿಯರ ಮೇಲೆಯೇ ಇದೆ. ಆದಕಾರಣ ಹಿರಿಯರು ರಾಷ್ಟ್ರಹಿತದ ಸಲುವಾಗಿ ಲೋಕಸಂಗ್ರಹದ ಕೆಲಸವನ್ನು ಮಾಡುತ್ತಲೆ ಇರಬೇಕು ( ೨೧-೨೪ )

---

### ಹಿರಿಯರ ಹೊಣೆಗಾರಿಕೆ.

( ೨೧-೨೪ ) ಹಿರಿಯರನ್ನು ಅನುಸರಿಸುವಲ್ಲಿ ಉಳಿದವರಿಗೆಲ್ಲ ಒಂದು ಸಮಾಧಾನ; ಹೆಮ್ಮೆ, ಹಿರಿಯರು ತಮ್ಮ ಪರಿಶ್ರಮದಿಂದ ಸಂಪಾದಿಸಿದ ಶ್ರೇಷ್ಠ ಸದ್ಗುಣಗಳನ್ನು ಜನಸಾಮಾನ್ಯರು ಅನುಕರಿಸುವುದು ಕಷ್ಟಸಾಧ್ಯವಾಗಿರುತ್ತದೆ. ಹೊರಗಣ ಆಚಾರದ ಸ್ಥೂಲ ಅನುಕರಣವು ಸುಲಭವಾಗಿರುತ್ತದೆ. ದೋಷಗಳನ್ನು ಅನುಕರಿಸುವುದಕ್ಕಂತೂ ಶ್ರಮವೆ ಬೇಡ. ಹಿರಿಯರ ಅನುಕರಣಮಾಡಬೇಕೆಂಬ ಬುದ್ಧಿಯು ಜನಸಾಮಾನ್ಯರನ್ನು ಒಳ್ಳೆಯ ದಾರಿಗೆ ಹಚ್ಚಬೇಕಾದರೆ ಅವರು ಯಾವಾ-

ಗಲೂ ತನ್ನ ಶ್ರೇಷ್ಠ ಆಚಾರ ವಿಚಾರಗಳಿಂದ ಉಳಿದವರಿಗೆ ಮೇಲ್ಪಂಕ್ತಿಯನ್ನು ಹಾಕಿಕೊಡುವುದು ಅವರ ಕರ್ತವ್ಯವಾಗಿದೆ.

ಈಗ ಅರ್ಜುನನ ದೃಷ್ಟಾಂತವನ್ನೆ ತಕ್ಕೊಳ್ಳಬಹುದು. ಅರ್ಜುನನು ಸವ್ಯಸಾಚಿಯಷ್ಟೆ. ಆತನು ಈ ಶಕ್ತಿಯನ್ನು ಹಲವು ಕಾಲದ ಅಭ್ಯಾಸದಿಂದ ಪಡೆದನು. ಅರ್ಜುನನು ಸವ್ಯಸಾಚಿಯಾದಂತೆ ಉಳಿದವರೂ ಸವ್ಯಸಾಚಿಗಳಾಗಲು ಹವಣಿಸಿದರೂ ಅದು ಕೈಗೂಡಬಹುದು. ಅಥವಾ ಕೈಗೂಡಲಿಕ್ಕಿಲ್ಲ. ಆದರೆ ಆತನು ಕಾಳಗ ಮಾಡಲಾರದೆ ಹಿಂದಿರುಗಿದ್ದನಾದರೆ, ಅದನ್ನು ಅನುಕರಿಸುವುದು ಮಾತ್ರ ಎಲ್ಲರಿಗೂ ಸುಲಭವಾಗಿದ್ದಿತು. ಜನಸಾಮಾನ್ಯರು ಅನುಸರಿಸುವುದು ಬಹುತರವಾಗಿ ಇಂತಹ ಅಲ್ಪಗುಣಗಳನ್ನೇ. ಆದಕಾರಣ ಹಿರಿಯರು ಬಹಳ ಜಾಗರೂಕತೆಯಿಂದ ನಡೆದುಕೊಳ್ಳಬೇಕು. ಸಾಮಾನ್ಯಜನರಿಗೆ ಅಡ್ಡದಾರಿಗೆ ಹಚ್ಚದಂತೆ ತಮ್ಮ ನಡೆವಳಿಯನ್ನು ಇಟ್ಟಿರಬೇಕು.

ಯುರೋಪಿನ ಇತಿಹಾಸದಲ್ಲಿ ಒಂದು ಕತೆ ಬರುತ್ತದೆ. ಒಂದು ಅರಮನೆಯಲ್ಲಿ ನಡೆದ ಸಂಗತಿಯಿದು. ಅರಸಿಯ ಕಾಲಿಗೆ ಹುಣ್ಣಾಗಿ ನೋವಾಯಿತು. ಅದನ್ನು ತೋರಿಸಿಕೊಳ್ಳಲಾರದೆ ಅವಳು ಕೈಯಲ್ಲಿ ಕೋಲು ಹಿಡಿದು ಕುಂಟುತ್ತ ಹೊಸಬಗೆಯಲ್ಲಿ ನಡೆಯತೊಡಗಿದಳು. ಉಳಿದವರೂ ಅರಸಿಯಂತೆ ತಾವೂ ಒಂದು ಕೋಲು ಹಿಡಿದು ಅವಳಂತೆ ಕಾಲೆಳೆಯುತ್ತ ನಡೆಯಲಾರಂಭಿಸಿದರಂತೆ! ಆ ರಾಣಿಯ ಕಾಲು ಸರಿಯಾಗುವಷ್ಟರಲ್ಲಿ ಪರಿವಾರದವರಲ್ಲೆಲ್ಲ ಈ ಹೊಸಬಗೆ( ಫ್ಯಾಶನ್ ) ಒಂದು ತಲೆದೋರಿತಂತೆ! ಈ ಕಾರಣದಿಂದಲೆ ಉಪನಿಷತ್ಕಾರರು ಎಲ್ಲರಿಗೂ ಎಚ್ಚರಿಸಿ ಸಾರಿರುವುದೇನಂದರೆ :

**ಯಾನಿ ಅನವದ್ಯಾನಿ ಕರ್ಮಾಣಿ, ತಾನಿ ಸೇವಿತವ್ಯಾನಿ; ನೋ ಇತರಾಣಿ, ಯಾನಿ ಅಸ್ಮಾಕಂ ಸುಚರಿತಾನಿ ತಾನಿ ತ್ವಯಾ ಉಪಾಸ್ಯಾನಿ ನೋ ಇತರಾಣಿ; ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ ವೃತ್ತವಿಚಿಕಿತ್ಸಾವಾ ಸ್ಯಾತ್ । ತೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ ಯುಕ್ತಾಃ ಆಯುಕ್ತಾಃ ಅಲೂಕ್ಷಾಃ ಧರ್ಮಕಾಮಾಃ ಸ್ಯುಃ, ತಥಾ ತೇ ತತ್ರ ವರ್ತೇರನ್, ತಥಾ ತತ್ರ ವರ್ತೇಥಾಃ ॥** ತೈತ್ತಿರೀಯ ೧೧. ೨. ೪

' ನಮ್ಮ ದೋಷಗಳನ್ನು ಅನುಸರಿಸಬೇಡ ; ದೋಷರಹಿತವಾದ ಕೆಲಸಗಳನ್ನು ಮಾತ್ರ ಅನುಸರಿಸು. ನಮ್ಮ ಒಳ್ಳೆಯ ನಡತೆಯನ್ನೆ ಹಿಂಬಾಲಿಸು ಉಳಿದುವುಗಳನ್ನು ಬಿಟ್ಟುಬಿಡು. ನಮ್ಮ ನಡೆ ಅಥವಾ ಇರವಿನಲ್ಲಿ ನಿನಗೆ ಸಂದೇಹವುಂಟಾದಾಗ, ನಿಮ್ಮಲ್ಲಿರುವ ವಿಚಾರಿಗಳೂ ವಿಮರ್ಶಕರೂ ಸಚ್ಛೀಲರೂ ಆದವರ ನೋಡಿ ಅದರಂತೆ ನಡೆ. "

**ಯದ್ಯಹಂ ನಾರ್ಚಯೇಯಂ ವೈ ಈಶಾನಂ ವರದಂ ಶಿವಮ್ ॥ ೨೪ ॥**
**ಆತ್ಮಾನಂ ನಾರ್ಚಯೇತ್ ಕಶ್ಚಿತ್ ಇತಿ ಮೇ ಭಾವಿತಾತ್ಮನಃ ।**
**ಮಯಾ ಪ್ರಮಾಣಂ ಹಿ ಕೃತಂ ಲೋಕಃ ಸಮನುವರ್ತತೇ ॥ ೨೫ ॥**

ಎಂದು ಮಹಾಭಾರತದ ನಾರಾಯಣೀಯ ಅಧ್ಯಾಯದಲ್ಲಿ ಹೇಳಿದೆ. ಅಲ್ಲಿ ಶ್ರೀಕೃಷ್ಣನು ಅರ್ಜುನನಿಗೆ ಹೇಳಿರುವುದೇನಂದರೆ ' ವರಗಳನ್ನು ದಯಪಾಲಿಸುವ ಒಡೆಯನಾದ ಶಿವನನ್ನು ನಾನು ಪೂಜಿಸದೆ ಇದ್ದರೆ, ನನ್ನ ಆತ್ಮನ ಪೂಜೆಯನ್ನು ಯಾರೂ ಮಾಡರು. ಏಕೆಂದರೆ, ಎಲ್ಲರೂ ನನ್ನಂತೆ ನಡೆಯುವರು. ' ಆದಕಾರಣ ಹಿರಿಯರು ತಮ್ಮ ನಡೆವಳಿ ನುಡಿವಳಿಯನ್ನು ಚೊಕ್ಕಟವಾಗಿ ಲೋಕಕ್ಕೆ ಅನುಕರಣಾರ್ಹವಾಗುವಂತೆ ಇರಿಸಬೇಕು.

ಶ್ರೀಕೃಷ್ಣನು ಅರ್ಜುನನಿಗೆ ಪ್ರಾಚೀನ ಕಾಲದ ಜನಕ ( ಅಶ್ವಪತಿ ) ಮೊದಲಾದ ಶ್ರೇಷ್ಠರ ಉದಾಹರಣಗಳನ್ನು ಹೇಳಿ ಬಳಿಕ ಅಷ್ಟು ದೂರವೇಕೆ, ತಾನೇ ಆ ಬಗೆಯಾಗಿ ನಡೆಯುತ್ತಿಲ್ಲವೆ? ಎಂದು ತನ್ನ ದೃಷ್ಟಾಂತವನ್ನೆ ಹೇಳಿದ್ದಾನೆ. ತನಗೆ ಈ ಲೋಕದಲ್ಲಿ ದೊರೆಯದೆ ಇದ್ದ ವಸ್ತುವಿಲ್ಲ. ಮಾಡಲೇಬೇಕಾದ ಕೆಲಸವಿಲ್ಲ. ಹೀಗಿರುವುದಾದರೂ ತಾನು ಲೋಕಸಂಗ್ರಹಕ್ಕಾಗಿ ಈ ಕೆಲಸದಲ್ಲಿ ತೊಡಗಿಕೊಂಡಿಲ್ಲವೆ? ದುಷ್ಟನಿಗ್ರಹ ಶಿಷ್ಟಪರಿಪಾಲನಕ್ಕಾಗಿ ಹೋರಾಟವು ಎಂದೂ ಯಾರಿಗೂ ಬಿಟ್ಟದ್ದಲ್ಲ. ಬಿಡತಕ್ಕದ್ದಲ್ಲವೆಂದು ತನ್ನ ಮೇಲಿಂದಲೆ ತಿಳಿಸಿಹೇಳಿದ್ದಾನೆ.

ನನಗೆ ಹೊಂದಬೇಕಾದುದು ಅವುದೂ ಉಳಿದಿಲ್ಲವೆಂದು ನಾನೇ ಯಾವುದನ್ನೂ ಮಾಡದೆ ಉದ್ಯೋಗ ನಡಿಸದೆ ಸುಮ್ಮನಿದ್ದರೆ ಲೋಕಕ್ಕೆಲ್ಲ ಅನಾಚಾರವನ್ನು ಕಲಿಸಿದಂತಾದೀತೆಂದು ಶ್ರೀಕೃಷ್ಣನು ಹೇಳಿದ್ದಾನೆ. ಉದ್ಯೋಗ ಶೀಲತೆ ಭೂಷಣವೆನಿಸಬೇಕು. ' ಕೆಲಸಿಗ '-ನೆನಿಸಿಕೊಂಬಲ್ಲಿ ಹೆಮ್ಮೆ ಬಡಬೇಕು. ಅದರ ಬದಲು ' ಕೆಲಸಿಗ 'ನೆಂದರೆ ಅಪಾರ್ಥವುಂಟಾಗುವ ಸಮಾಜವು ಕರ್ಮಯೋಗಕ್ಕೆ ವಿಪರೀತವಾದ ಆಚರಣೆಯನ್ನೇ ತನ್ನ ಆದರ್ಶವಾಗಿ ಇಟ್ಟುಕೊಂಡಿತೆಂಬುದು ಸ್ಪಷ್ಟವಾಗುತ್ತದೆ.

ಮತ್ತು ಆ ಸಮಾಜದಲ್ಲಿ 'ಕೆಲಸಿಗನು' ಕೀಳನು; ಕೆಲಸಗೇಡಿ ಮೈಗಳ್ಳರು ಶ್ರೇಷ್ಠರು ಎಂಬ ಭಾವನೆಯು ಬೇರೂರಿರುತ್ತದೆಂದು ಬೇರೆ ಹೇಳಬೇಕಾಗಿಲ್ಲ. ಮೈಗಳ್ಳ-ತನಕ್ಕೆ ಮೆಚ್ಚಿದ, ಕೆಲಸಿಗರನ್ನು ಎಂದರೆ ಕೆಲಸದಲ್ಲಿ ತೊಡಗಬೇಕಾದವರನ್ನು ಹೀನರೆಂದು ಬಗೆದ ಸಮಾಜವು ತಾನೇ ಹೀನಸ್ಥಿತಿಗೆ ಹೋಗದೆ ಇದ್ದರೇ ಸೋಜಿಗ! ಅದು ಮೈಗಳ್ಳತನದ ಆದರ್ಶವನ್ನು ತನ್ನ ಕಣ್ಣೆದುರಿಗೆ ಇಟ್ಟುಕೊಂಡುದರಿಂದ ಅದರ ಇಳಿಗಾಲವು ನಿಶ್ಚಿತ.

ಆದುದರಿಂದಲೆ ಶ್ರೀಕೃಷ್ಣನು ಗೀತೆಯಲ್ಲಿ ಹೀಗೆ ಹೇಳಿದ್ದಾನೆ: "ನಾನೇ ಕೆಲಸಮಾಡುವುದನ್ನು ಬಿಟ್ಟರೆ ಲೋಕವು ಹಾಳಾಗುವುದು ಅವರ ಏಳ್ಗೆಯಾಗದೆ ಸಂಕರವುಂಟಾಗುವುದು."

### ಸಂಕರದಿಂದ ಸರ್ವನಾಶ.

ಕರ್ಮತ್ಯಾಗದಿಂದ ಸಂಕರವಾಗುವುದು. ಸಂಕರ-ದಿಂದ ಪ್ರಜೆಗಳು ಹಾಳಾಗುವರು. ಪ್ರಜಾಪಾಲನವಂತೂ ಪರಮಾತ್ಮನ ಉದ್ದೇಶವು. ಆದುದರಿಂದಲೇ ತಾನು ಕರ್ಮದಲ್ಲಿ ತೊಡಗಿರುವೆನು ಎಂದು ಶ್ರೀಕೃಷ್ಣನು ಅರ್ಜುನನಿಗೆ ಹೇಳಿದ್ದಾನೆ ಮತ್ತು ತನ್ನಂತೆ ಅರ್ಜುನ-ನಿಗೂ ಲೋಕಹಿತಾರ್ಥವಾಗಿ ಕೆಲಸದಲ್ಲಿ ತೊಡಗಿರಲು ಹೇಳಿದ್ದಾನೆ. ಆದಕಾರಣ ಪ್ರತಿಯೊಬ್ಬರು ಹೋರೆ-ಮಾಡಲೇ ಬೇಕು ಹೋರೆ, ಹೋರಾಟಗಳಿಗೆ ಬೇಸತ್ತು ಅಥವಾ ಅವು ತನಗೆ ಅವಶ್ಯಕವಿಲ್ಲ (ಏಕೆಂದರೆ ತನಗೆ ಬೇಕಾದುದು ಎಲ್ಲವೂ ಉಂಟು) ಎಂದು ಕೆಲಸಗೇಡಿ-ಗಳಾಗಿ ಬಾಳುವವರು ಲೋಕನಾಶದ ಪಾಪಕ್ಕೆ ಗುರಿ-ಯಾಗುವರು. ಆದಕಾರಣ ನಾಡಿನ ಸ್ವಾತಂತ್ರ್ಯಕ್ಕಾಗಿ, ಧರ್ಮಸಂಸ್ಥಾಪನೆಗಾಗಿ ನಡೆವ ಹೋರಟೆಯಿಂದ ಮೈ-ದೆಗೆಯುವುದು ಅಧರ್ಮವು ಅರ್ಜುನಾ, ನೀನು ಯುದ್ಧ-ದಿಂದ ಹಿಂಜರಿಯಬೇಡವೆಂದು ಶ್ರೀಕೃಷ್ಣನು ತಿಳಿಸಿ-ಹೇಳಿದ್ದಾನೆ.

ಈ ಶ್ಲೋಕದಲ್ಲಿ 'ಕೆಲಸ ಬಿಟ್ಟರೆ ಸಂಕರವಾಗುವುದು; ಸಂಕರದಿಂದ ಲೋಕನಾಶವಾಗುವುದು' ಎಂದು ಹೇಳಿದೆ. ಇಲ್ಲಿ ಸಂಕರವೆಂದರೆ ಪ್ರತಿಯೊಬ್ಬರೂ ತಮ್ಮ ಗುಣ-ಕರ್ಮಕ್ಕನುಸರಿಸಿ ಪಾಲಿಗೆ ಬಂದ 'ಸ್ವ-ಧರ್ಮ'ವನ್ನು ಮಾಡದೆ ಇರುವುದು ಎಂದರ್ಥ. ಧೀಮಂತರು ಜ್ಞಾನಾ-ರ್ಜನೆ ಮಾಡಿ ತಾವು ನಡಸತಕ್ಕ ಅಧ್ಯಯನ ಅಧ್ಯಾಪನದ ಕಾರ್ಯಗಳನ್ನು ಬಿಟ್ಟರೆ, ಸಮಾಜದ ಕಣ್ಣು ಕುರುಡಾಗು-ತ್ತದೆ. ವಿಬುಧರಾದವರು ಪರಕೀಯರ ಸೇವೆಗಾಗಿ ತಮ್ಮ ಜ್ಞಾನದ ಉಪಯೋಗ ಮಾಡಲಾರಂಭಿಸಿದರೆ ಆ ರಾಷ್ಟ್ರವು ಕಂಗಾಲಸ್ಥಿತಿಗೆ ಬಾರದೆ ಇದ್ದೀತೆ? ಕಾದಬೇಕು, ಗೆಲ್ಲಬೇಕು, ಆಳಬೇಕು ಎಂಬ ಹುಮ್ಮ-ಸದ ಹುರಿಯಾಳುಗಳು ತಮ್ಮ ಶಕ್ತಿಸರ್ವಸ್ವವನ್ನು ತಮ್ಮ ದೇಶಕ್ಕಾಗಿ ವಿನಿಯೋಗಿಸದೆ, ಅವರೇ ಹೆರವರ ಕೈಗೊಂಬೆ-ಗಳಾಗಿ ತಮ್ಮವರ ಬಂಧನಕ್ಕೆ ನೆರವಾಗುವ ನಿಂದ್ಯ ಕರ್ಮಿಗಳಾದರೆ ಆ ನಾಡಿಗರು ದಿಕ್ಕೇಡಿಗಳಾಗುವಲ್ಲಿ ಸಂದೇಹವೆ?

ಒಂದು ದೇಶದ ಶ್ರೇಷ್ಠಿಗಳೂ ಸಿರಿವಂತರೂ ತಮ್ಮ ವ್ಯಾಪಾರದ ಅಭಿವೃದ್ಧಿಯ ಮಬ್ಬಿನಲ್ಲಿ ತಮ್ಮ ನಾಡಿನ ಉದ್ಯೋಗದಂದುಗಗಳಿಗೆ ಪ್ರೋತ್ಸಾಹಿಸಿದರೆ ಪರಕೀಯರ ಸರಕಿನ ಪ್ರಚಾರಕರೂ ಪೋಷಕರೂ ಆಗಿಬಿಟ್ಟರೆ ಇಂತಹ ಹೀನ ಕರ್ಮಿಗಳ ದೇಶದ ಜನಗಳ ಪಾಡು ನಾಯಿಪಾಡಿ-ಗಿಂತ ಬೇರೆಯಾದೀತೆ?

ತುತ್ತು ರೊಟ್ಟಿ ದೊರೆತು, ತಮ್ಮ ಹೊಟ್ಟೆ ತುಂಬಿದ-ರಾಯಿತು; ಅದು ಯಾರ ಸೇವೆ? ಆ ಸೇವೆಯಿಂದ ತನ್ನವರಿಗೂ ತನ್ನ ನಾಡಿಗೂ ಹಾನಿಯುಂಟಾಗುತ್ತಿದೆಯೆ? ಲಾಭವಿದೆಯೆ ಎಂಬ ಯಾವ ವಿಚಾರವೂ ಇಲ್ಲದ ಅವಿ-ವೇಕಿಗಳಾಗಿ ಶೂದ್ರವೃತ್ತಿಯಲ್ಲಿ ಆಸಕ್ತರಾದ ಜನರ ದೇಶದಲ್ಲಿ ಆ ದೇಶದವರೇ 'ದೇಸಿಗರು' ಎಂದರೆ ಪರದೇಶಿಗಳಾಗಿ ಬಾಳುವ ಹೊತ್ತು ಬರದೆ ಹೋದೀತೆ?

ಸಂಕರವೆಂದರೇ ಇದು! ಪ್ರತಿಯೊಬ್ಬನೂ ತನ್ನ ಗುಣ-ಕರ್ಮಕ್ಕನುಸರಿಸಿ ತನ್ನ ಪಾಲಿಗೆ ಬಂದ ಸ್ವ-ಧರ್ಮದ ಆಚರಣೆಯನ್ನು ನಿಷ್ಕಾಮರೀತಿಯಿಂದ ಲೋಕ-ಕಲ್ಯಾಣದ ಸಲುವಾಗಿ ನಡೆಯಿಸುತ್ತಿರುವುದೇ ಜೀವನ ಸಾರ್ಥಕ್ಯದ ನಿಜವಾದ ದಾರಿಯಾಗಿದೆ. ಬೆಂಕೆಯು ತನ್ನ ಸುಡುವ ಗುಣವನ್ನೆ ಬಿಟ್ಟರೆ? ನೀರು ತೋಯಿಸುವ ಧರ್ಮವನ್ನೆ ಮರೆತರೆ? ಲೋಕವು ನಡೆವ ಆಸೆಯೆಲ್ಲಿ?

ತಮ್ಮ ಪಾಲಿಗೆ ಬಂದ ಕರ್ತವ್ಯವನ್ನು ಜರುಗಿಸದೆ, ಅದು ಕಷ್ಟಸಾಧ್ಯವಾದುದೆಂದು ಬೇರೊಂದು ಕೆಲಸಕ್ಕೆ ಕೈಯಿಕ್ಕುವುದರಿಂದ 'ಸಂಕರ'ವುಂಟಾಗುವುದು. ಸಮಾಜದಲ್ಲಿ ಅವ್ಯವಸ್ಥೆಯು ತಲೆದೋರುವುದು. ಕಟ್ಟು ಕಟ್ಟಳೆಗಳು ಸಡಿಲಿ ಅನಾಚಾರವು ಹೆಚ್ಚುವುದು. ಅನಾರಿ-ಗಳು ಹೆಚ್ಚಾಗುವುದರಿಂದ ಸಮಾಜವು ಹಾಳಾಗುವುದು.

(೨೫-೨೬) ಲೋಕಸಂಗ್ರಹದ ಕೆಲಸವನ್ನು ಎಡೆ-ಬಿಡದೆ ಮುಂದುವರಿಸುವ ಹೊಣೆಗಾರಿಗೆ ಹಿರಿಯರಾದವರ ಮೇಲೆ ಯಾವಾಗಲೂ ಇದ್ದೇ ಇದೆ. ಅವರಿಗೆ ಇನ್ನೂ ಕೆಲವು ಬುದ್ಧಿಯ ಮಾತನ್ನು ಈ ಶ್ಲೋಕಗಳಲ್ಲಿ ಹೇಳಿದೆ.

ಲೋಕಸಂಗ್ರಹ ಕೆಲಸಗಳನ್ನು ಕೈಕೊಳ್ಳುವುದು ಜ್ಞಾನಿಗಳ ಕರ್ತವ್ಯವೇ ಆಗಿದೆ. ಲೋಕಸಂಗ್ರಹವೆಂದರೆ

ಸಕ್ತಾಃ ಕರ್ಮಣ್ಯವಿದ್ವಾಂಸೋ ಯಥಾ ಕುರ್ವಂತಿ ಭಾರತ ।
ಕುರ್ಯಾದ್ವಿದ್ವಾಂಸ್ತಥಾಸಕ್ತಶ್ಚಿಕೀರ್ಷುರ್ಲೋಕಸಂಗ್ರಹಮ್ ॥ ೨೫ ॥
ನ ಬುದ್ಧಿಭೇದಂ ಜನಯೇದಜ್ಞಾನಾಂ ಕರ್ಮಸಂಗಿನಾಮ್ ।
ಜೋಷಯೇತ್ ಸರ್ವಕರ್ಮಾಣಿ ವಿದ್ವಾನ್ಯುಕ್ತಃ ಸಮಾಚರನ್ ॥ ೨೬ ॥

---

**ಅನ್ವಯ :**— ಹೇ ಭಾರತ! ಅವಿದ್ವಾಂಸಃ ಯಥಾಕರ್ಮಣಿ ಸಕ್ತಾಃ (ಕರ್ಮ) ಕುರ್ವಂತಿ, ತಥಾ ಲೋಕಸಂಗ್ರಹಂ ಚಿಕೀರ್ಷುಃ ವಿದ್ವಾನ್ ಅಸಕ್ತಃ (ಕರ್ಮ) ಕುರ್ಯಾತ್ ॥ ೨೫ ॥ ವಿದ್ವಾನ್ ಕರ್ಮಸಂಗಿನಾಂ ಅಜ್ಞಾನಾಂ ಬುದ್ಧಿಭೇದಂ ನ ಜನಯೇತ್ (ಕಿಂತು) ಯುಕ್ತಃ ಸಮಾಚರನ್ ಸರ್ವಕರ್ಮಾಣಿ ಜೋಷಯೇತ್ ॥೨೬॥

ಎಲೈ ಭಾರತನೆ, ತಿಳಿಗೇಡಿಗಳು ಆಸಕ್ತರಾಗಿ ಕೆಲಸದಲ್ಲಿ ತೊಡಗಿರುತ್ತಾರೆ. ಅದರಂತೆ ಲೋಕಸಂಗ್ರಹದ ಅಪೇಕ್ಷೆಯಿದ್ದ ವಿದ್ವಾಂಸನು ಆಸಕ್ತಿಯಿಲ್ಲದೆ ಕೆಲಸಮಾಡಬೇಕು. ॥ ೨೫ ॥ ಕೆಲಸದಲ್ಲಿ ತೊಡಗಿರುವ ಅಜ್ಞಾನಿಗಳಲ್ಲಿ, ತಿಳಿದವನು ಎಂದೂ ಬುದ್ಧಿಭೇದವನ್ನು ಮಾಡಬಾರದು. ತಾನು ಸ್ವಂತ ಸಮತ್ವಬುದ್ಧಿಯೋಗಿಯಾಗಿ ಜನರಿಂದ ಎಲ್ಲ ಕೆಲಸಗಳನ್ನು ಒಲುಮೆಯಿಂದ ಮಾಡಿಸಿಕೊಳ್ಳಬೇಕು ॥ ೨೬ ॥

**ಭಾವಾರ್ಥ :**— ತಿಳಿಗೇಡಿಗಳು ಸ್ವಾರ್ಥಭಾವನೆಯಿಂದ ಪ್ರೇರಿತರಾಗಿ ಕೆಲಸಗಳಲ್ಲಿ ಆಸಕ್ತರಾಗಿರುತ್ತಾರೆ. ಅವರು ಹೇಗೆ ಹುಮ್ಮಸಗೊಂಡು ಕೆಲಸಮಾಡುವರೊ ಅದೇ ಹುಮ್ಮಸದಿಂದ ಆದರೆ ಆಸಕ್ತಿಯಿಲ್ಲದೆ ಲೋಕಕಲ್ಯಾಣೇಚ್ಛೆಯಿಂದ ತಿಳಿದವರೂ ಕೆಲಸದಲ್ಲಿ ತೊಡಗಿರಬೇಕು ಫಲದ ಆಶೆಯಿಂದ ಕೆಲಸದಲ್ಲಿ ಹುಮ್ಮಸಗೊಂಡು ಜನರಿಗೆ ಒಮ್ಮೆಲೆ ಏನಾದರೂ ಉಪದೇಶಿಸಿ ತಿಳಿದವರು ಅವರನ್ನು ಕೆಲಸದಿಂದ ನಿವೃತ್ತರಾಗುವಂತೆ ಅವರ ಬುದ್ಧಿಯನ್ನು ಚಂಚಲವಾಗಗೊಡಬಾರದು. ಅವರಿಂದ ಎಲ್ಲವನ್ನೂ ಮಾಡಿಸಿಕೊಳ್ಳಬೇಕು ತಾನು ಮಾತ್ರ ಸಮತ್ವಬುದ್ಧಿಯುಳ್ಳವನಾಗಿ ತನ್ನ ಆಚರಣವನ್ನಿಡಬೇಕು. ॥ ೨೫-೨೬ ॥

---

'ಲೋಕಕಲ್ಯಾಣ' ರಾಷ್ಟ್ರದ ಏಳ್ಗೆ ಎಂದು ಅರ್ಥವು. ಈ ಜ್ಞಾನಿಯು ನಿತ್ಯತೃಪ್ತನೂ ಆತ್ಮಸಂತುಷ್ಟನೂ, ಇಚ್ಛಾದ್ವೇಷರಹಿತನೂ ಆಗಿರುವನು. ಆದಕಾರಣ ಆತನಿಗೆ ಸ್ವಂತದ ಲಾಭಕ್ಕಾಗಿ ಏನನ್ನೂ ಮಾಡಬೇಕಾಗಿರುವುದಿಲ್ಲ. (ತಸ್ಯ ಕಾರ್ಯಂ ನವಿದ್ಯತೇ) ಎಂದು ಗೀತೆಯು ಹೇಳಿರುವುದು ನಿಜ. ಆದರೂ ಲೋಕಸಂಗ್ರಹಕ್ಕಾಗಿ ಕೆಲಸಮಾಡುವುದನ್ನು ಆತನು ಬಿಡಕೂಡದು. ಎಂದು ಶ್ರೀಕೃಷ್ಣನ ಆದೇಶವಿದೆ.

ಫಲವನ್ನು ಉಪಭೋಗಿಸುವ ಆತುರತೆಯಿಂದ ಸಾಮಾನ್ಯಜನರು ಯಾವುದೊಂದು ಹೋರೆಯಲ್ಲಿ ತೊಡಗಿರುತ್ತಾರೆ. ಅವರ ಕರ್ಮಪ್ರವೃತ್ತಿಗೆ ಭೋಗೇಚ್ಛೆಯೆ ಕಾರಣವಾಗಿರುತ್ತದೆ. ಆದರೆ ಈ ಭೋಗೇಚ್ಛೆಯ ಆಸೆಯನ್ನು ಒಮ್ಮೆಲೆ ಕಡಿದುಬಿಟ್ಟರೆ ಅವರಲ್ಲಿ ಕೆಲಸದ ಉತ್ಸಾಹ ಪ್ರೀತಿಗಳೆ ಉಳಿಯುವುದಿಲ್ಲ. ಆದುದರಿಂದ ಜನಸಾಮಾನ್ಯರಿಗೆ ಇಲ್ಲದ ತತ್ವಬೋಧಿಸಿ ಅವರ ಕೆಲಸದೊಳಗಿನ ಆಸಕ್ತಿಯನ್ನು ಕುಗ್ಗಿಸಲಾಗದು.

ಜ್ಞಾನಿಗಳಾದವರು ನಿಷ್ಕಾಮರಾಗಿ ಕರ್ಮವನ್ನಾಚರಿಸಬಲ್ಲರು. ಅವರಿಗೆ ಯಾವ ಸ್ವಾರ್ಥವನ್ನೂ ಸಾಧಿಸಬೇಕಾಗಿರುವುದಿಲ್ಲ. 'ಚಿಕೀರ್ಷುರ್ ಲೋಕಸಂಗ್ರಹಮ್' ಕೇವಲ ಲೋಕಕಲ್ಯಾಣಕ್ಕಾಗಿಯೆ ಅವರು ದುಡಿಯಬೇಕು ತನ್ನ ಸಲುವಾಗಿ ಮಾಡಬೇಕಾಗಿಲ್ಲವೆಂದು ಸ್ವಲ್ಪವೂ ಉದಾಸೀನತೆಗೆ ಎಡೆಗೊಡದೆ ಸಂಪೂರ್ಣ ಉತ್ಸಾಹಶಕ್ತಿಗಳನ್ನು ವಿನಿಯೋಗಿಸಿ ತತ್ಪರತೆಯಿಂದ ಲೋಕಸೇವೆಯೆ ಆತ್ಮಸೇವೆ, ಎಂಬ ಅನುಭಾವಗೊಳ್ಳುತ್ತ ಕಾರ್ಯತತ್ಪರರಾಗಬೇಕು.

ಕೆಲಸಗಳಿಗೆ ಯಾರಾಗಲಿ ಕೈಯಿಕ್ಕುವುದು ನಾಲ್ಕು ಬಗೆಯಾಗಿ. ೧. ಸಕಾಮರಾಗಿ; ೨. ನಿಷ್ಕಾಮನೆಯಿಂದ; ೩. ಸನ್ಯಾಸಭಾವದಿಂದ; ೪. ಹೊರಗಣ ಒತ್ತಾಯದಿಂದ. ಸಕಾಮಕರ್ಮವು ಧರ್ಮಾನುಕೂಲವಿರಬಹುದು. ಅಥವಾ ಅಧರ್ಮದತ್ತ ಒಯ್ಯುವುದಾಗಿರಬಹುದು; ಇದಕ್ಕೇ 'ವಿಕರ್ಮ'ವೆಂದು ಹೆಸರು. ವಿಕರ್ಮವು ಯಾವಾಗಲೂ ತ್ಯಾಜ್ಯ. ಧರ್ಮಾನುಕೂಲವಾದ ಸಕಾಮಕರ್ಮವು ಹಾನಿಕಾರಕವಲ್ಲ. ನಿರ್ವಂಚನೆಯಿಂದ ಧನಗಳಿಸಿ ಸುಖಿಯಾಗಬೇಕೆಂಬ ಹಂಬಲವು ಜನರಲ್ಲಿ ಇರಬೇಕಾದುದು ಆ ಬಗೆಯಾಗಿ ನೇರವಾದ ದಾರಿಯಿಂದ ಧನಮಾನಗಳನ್ನು ಪಡೆದು ಸುಖಿಯಾದ-

ವನು ಕ್ರಮವಾಗಿ ನಿಸ್ವಾರ್ಥಭಾವದಿಂದ ಪರಹಿತಕ್ಕಾಗಿಯೂ ತನ್ನ ಕೈಲಾದ ನೆರವನ್ನು ಕೊಡುವ. ಬುದ್ಧಿಯುವನಾಗುವನು. ಬರಬರುತ್ತ ಸಂಪೂರ್ಣ ಲೋಕಹಿತಕಾರಿಯಾಗಿ ನಿಸ್ವಾರ್ಥದಿಂದಲೇ ಕೆಲಸಗಳನ್ನು ನೆರವೇರಿಸುವ ಯೋಗ್ಯತೆಯೂ ಅವನಿಗೆ ಬರುವುದು.

ತನ್ನ ಸಲುವಾಗಿ ಅಥವಾ ಹೆರವರ ಸಲುವಾಗಿ ಕೆಲಸ ಮಾಡುವಾಗ ಕೇಡಿಗಳು ಮಾಡುವ ತೊಂದರೆಗಳಿಗೆ ಬೇಸತ್ತು, ಇಲ್ಲವೆ ಆ ಕೆಲಸಗಳಲ್ಲಿ ಬಂದ ಆಕಸ್ಮಿಕ ತೊಡಕು ತೊಂದರೆಗಳಿಗೆ ಪರಿತಾಪಗೊಂಡು, ಹಲವರು ಈ ಕರ್ಮದ ಜಂಜಡವೇ ಬೇಡವೆಂದು (ಕರ್ಮ) ಸಂನ್ಯಾಸಮಾರ್ಗವನ್ನು ಅನುಸರಿಸುತ್ತಾರೆ. ಹೀಗೆ ಸಂನ್ಯಾಸಿಯಾಗಿ ಸುಖದುಃಖ, ಆಶೆ-ನಿರಾಶೆಗಳೆಂಬ ಎರಡರ ಇರುಕಿನಲ್ಲಿ ಸಿಲುಕದೆ ಮನಃಶಾಂತಿಯನ್ನು ಹೊಂದುವುದು ಅವರ ಗುರಿಯಾಗಿರುತ್ತದೆ. ತಲೆತಿರುಕರಾಗಿ, ಯಾವುದಾದರೂ ರೊಚ್ಚಿನಿಂದ ಕರ್ಮಸಂನ್ಯಾಸಿಗಳಾದವರು ಮಿಥ್ಯಾಚಾರಿಗಳಾಗುತ್ತಾರೆ. ಕೆಲಸದ ಹಂಬಲ, ಸಂಸಾರೇಚ್ಛೆಯು ತಣಿದಿರುವುದಿಲ್ಲ; ಆವೇಗ ಉದ್ವೇಗದಲ್ಲಿ ಸಂನ್ಯಾಸಿಗಳಾದವರು ಹೊಂದುಕರು, ಡೊಂಬರ ಸೋಗಿನವರೆ ಸರಿ. ಆದರೆ ಸಂಯಮಶಕ್ತಿಯನ್ನು ಏಕಾಂತದ ಮನನನಿದಿಧ್ಯಾಸಗಳಿಂದ ಹೆಚ್ಚಿಸಿಕೊಳ್ಳಲು ಅನುದಿನವೂ ಆತ್ಮಸಾಧನೆಯನ್ನು ಕೈಕೊಂಡಿರುವ ಸ್ನೇಹಿಗಳಿಗೆ ಶಾಂತಿಯು ಕೊನೆಗೆ ದೊರೆಯುವುದುಂಟು.

ಸಾಮ್ಯಾವಸ್ಥೆಯನ್ನು ಪಡೆದ ಈ ಬಗೆಯ ಸಂನ್ಯಾಸಿಗಳು ಲೋಕದ ದುಃಖಗಳನ್ನು ನೋಡಿ ಮಿಡಿಗರು ಅಥವಾ ಜನರ ಆರ್ತಪ್ರಾರ್ಥನೆಯನ್ನು ಕೇಳಿ ಸುಮ್ಮನಿರಲಿಕ್ಕಾಗದೆ ಲೋಕಸಂಗ್ರಹಕ್ಕಾಗಿ ಕೆಲಸಗಳನ್ನು ಕೈಕೊಳ್ಳುವರು ಇಂತಹ ಮಹಾತ್ಮರಿಗೆ ತಮ್ಮ ಸಂಸಾರ, ಕೆಲಸವೆಂಬುದೇನೂ ಇರುವುದಿಲ್ಲವಾದರೂ ಮನುಷ್ಯ ಕುಟುಂಬಿಗಳು ಇವರು ರಾಷ್ಟ್ರದ ಸುಖಸ್ವಾತಂತ್ರ್ಯಕ್ಕಾಗಿ ತಮ್ಮ ಆಯುಷ್ಯವನ್ನು ಸವೆಸುವುದು ಇವರ ಶೀಲವಾಗುತ್ತದೆ

'ಬುದ್ಧಿಭೇದ'ವನ್ನು ಮಾಡಿ ಜನಸಾಮಾನ್ಯರು ಕೆಲಸಿಗರಾಗಿರುವುದನ್ನು ಬಿಡಿಸುವುದು ಅಯುಕ್ತವು. ಅವರಿಗೆ ಕೆಲಸಗಳಿಂದ ದೂರವಿರುವಂತೆ ಉಪದೇಶಿಸುವುದರ ಬದಲು, ಆ ಕೆಲಸಗಳು ಶ್ರೇಯಸ್ಕರರೀತಿಯಲ್ಲಿ ಕೊನೆಗಂಡು ಆ ಜನರಿಗೂ, ಸಮಾಜಕ್ಕೂ ಕೂಡಿಯೆ ಹಿತವಾಗುವಂತೆ ಅವರಿಗೆ ದಾರಿತೋರುವುದು ಜ್ಞಾನಿಗಳ ಕೆಲಸವಾಗಿದೆ. 'ಜೋಷಯೇತ್ ಸರ್ವಕರ್ಮಾಣಿ' ಎಂಬುದರ ಭಾವವು ಇದೇ ಆಗಿದೆ.

ಬುದ್ಧಿಭೇದ ಶಬ್ದದ ಅರ್ಥವು ಸ್ಪಷ್ಟವಾಗುವುದಕ್ಕಾಗಿ ಇದರ ಮೇಳನುಡಿಗಳನ್ನೂ ಮಾರನುಡಿಗಳನ್ನೂ ಇಲ್ಲಿ ಕೊಟ್ಟಿದೆ.

| | |
|---|---|
| ಬುದ್ಧಿಯೋಗ | ಬುದ್ಧಿಭೇದ |
| ಸಮತ್ವಬುದ್ಧಿ | ವಿಷಮಭಾವ |
| ಶಾಂತಿ | ಅಶಾಂತಿ |
| ಸಂದೇಹನಿವೃತ್ತಿ | ಸಂದೇಹ |
| ಸ್ಥಿತಪ್ರಜ್ಞ | ಚಂಚಲಪ್ರಜ್ಞ |
| ವೀತರಾಗಭಯಕ್ರೋಧ | ರಾಗಭಯಕ್ರೋಧ |

ಬುದ್ಧಿಭೇದವಾದವರಿಂದ ಕೈಕೊಂಡ ಕೆಲಸವು ಯಶಸ್ವಿಯಾಗಿ ಕೊನೆಗಾಣುವುದಿಲ್ಲ. ಆದುದರಿಂದ ಅಕಾಲದಲ್ಲಿ ಬುದ್ಧಿಭೇದವನ್ನುಂಟುಮಾಡುವುದು ಅನ್ಯಾಯವು. ಹಗೆಗಳು ತಮ್ಮ ಎದುರಾಳಿಗಳಲ್ಲಿ ಒಡಕುಹುಟ್ಟಿಸಲು ಬುದ್ಧಿಭೇದದ ಪ್ರಯೋಗಮಾಡುತ್ತಾರೆ. ಸಾಮ್ರಾಜ್ಯಶಾಸಕರು ಅಂಕಿತರಾಷ್ಟ್ರವನ್ನು ತಮ್ಮ ಅಧೀನದಲ್ಲಿಡಲು ಯಾವಾಗಲೂ ಉಪಯೋಗಿಸುವ ಅಮೋಘವಾದ ಅಸ್ತ್ರವಿದು. ಆದುದರಿಂದ ಪರಕೀಯರ ಉಪದೇಶಕ್ಕೆ ಮರುಳಾಗಿ ತಮ್ಮ ಬುದ್ಧಿಭೇದವಾಗದಂತೆ ಸ್ಥಿರವೃತ್ತಿಯವರಾಗಿ ಉಳಿಯಲು ಪ್ರಯತ್ನಪಡುವುದು ಪ್ರತಿಯೊಬ್ಬ ಸಾಧಕನ ಕರ್ತವ್ಯವಾಗಿದೆ.

ಜ್ಞಾನಿಯಾದವನು ಮೃಗಗಳಂತೆ ಕರ್ಮಹೀನನಾಗಿ ಬಿಳ್ಗಲಸಿಯಾಗಿರಬೇಕು. ಯೋಗಯುಕ್ತನಾಗಿ ಕರ್ತವ್ಯಗಳನ್ನು ಒರುಗಿಸುತ್ತಿರಬೇಕು (ಯುಕ್ತಃ ಸಮಾಚರನ್) ಜ್ಞಾನಿಯೂ ಕೆಲಸಮಾಡುವವನು; ಸಾಮಾನ್ಯನೂ ಕೆಲಸಮಾಡುವವನು. ಆದರ ಇಬ್ಬರಲ್ಲಿ ವ್ಯತ್ಯಾಸವಿಲ್ಲವೆ? ಎಂದು ಪ್ರಶ್ನಿಸಬಹುದು. ಈ ಸಂದೇಹವನ್ನು ದೂರಮಾಡುವುದಕ್ಕಾಗಿ ಶ್ರೀಕೃಷ್ಣನು ಮುಂದಿನ ಮಾತುಗಳನ್ನು ಹೇಳುತ್ತಾನೆ.

## ಗುಣಕರ್ಮಕ್ಕೆ ಕಾರಣ

(೨೭-೨೮) ಸಾಮಾನ್ಯವಾಗಿ ಮನುಷ್ಯನು ತಾನು ಮಾಡುವವನು ಎಂದು ಎಣಿಸುತ್ತಾನೆ. ಆದರ ನಿಜವಾಗಿ ನೋಡಿದಲ್ಲಿ ಮನುಷ್ಯನಿಂದ ಮಾಡಿಸುವುದು 'ಗುಣಗಳು.'

**ಪ್ರಕೃತೇಃ ಗುಣೈಃ ಕರ್ಮಾಣಿ ಸರ್ವಶಃ ಕ್ರಿಯಮಾಣಾನಿ ॥ ೨೭ ॥**

## (೧೦) ತಿಳಿಗೇಡಿ ಮತ್ತು ತಿಳಿದವ

ಪ್ರಕೃತೇಃ ಕ್ರಿಯಮಾಣಾನಿ ಗುಣೈಃ ಕರ್ಮಾಣಿ ಸರ್ವಶಃ |
ಅಹಂಕಾರ ವಿಮೂಢಾತ್ಮಾ ಕರ್ತಾಹಮಿತಿ ಮನ್ಯತೇ ‖ ೨೭ ‖
ತತ್ತ್ವವಿತ್ತು ಮಹಾಬಾಹೋ ಗುಣಕರ್ಮ ವಿಭಾಗಯೋಃ |
ಗುಣಾಗುಣೇಷು ವರ್ತಂತ ಇತಿ ಮತ್ವಾ ನ ಸಜ್ಜತೇ ‖ ೨೮ ‖

**ಅನ್ವಯ:—** ಪ್ರಕೃತೇಃ ಗುಣೈಃ ಕರ್ಮಾಣಿ ಸರ್ವಶಃ ಕ್ರಿಯಮಾಣಾನಿ ( ಸಂತಿ, ಪರಂತು) ಅಹಂಕಾರ ವಿಮೂಢಾತ್ಮಾ 'ಅಹಂ ಕರ್ತಾ' ಇತಿ ಮನ್ಯತೇ ‖ ೨೭ ‖ ಹೇ ಮಹಾಬಾಹೋ! ಗುಣಕರ್ಮವಿಭಾಗಯೋಃ ತತ್ತ್ವವಿತ್ ತು 'ಗುಣಾಃ ಗುಣೇಷು ವರ್ತಂತೇ' ಇತಿ ಮತ್ವಾ ನ ಸಜ್ಜತೇ ‖ ೨೮ ‖

**ಪ್ರಕೃತಿಯ ಗುಣದ ಮೂಲಕವಾಗಿ ಎಲ್ಲ ಕೆಲಸಗಳೂ ಒದಗುತ್ತವೆ. (ಆದರೆ) ಹೆಮ್ಮೆಯಿಂದ ತಿಳಿಗೇಡಿಯಾದ ಮನುಷ್ಯನು 'ನಾನೇ ಮಾಡುವವನು' ಎಂದು ಬಗೆಯುತ್ತಾನೆ ‖ ೨೭ ‖ ಆದರೆ ಎಲೈ ಮಹಾಬಾಹುವೇ! ಗುಣವಿಭಾಗ ಮತ್ತು ಕರ್ಮವಿಭಾಗದ ತತ್ತ್ವವನ್ನು ಅರಿತವನು ಗುಣಗಳು ಗುಣಗಳೊಡನೆ (ಬೆರೆತು) ಒದಗುತ್ತಿರುತ್ತದೆಂದು ಬಗೆದು ಅದರಲ್ಲಿ ಆಸಕ್ತನಾಗುವುದಿಲ್ಲ ‖ ೨೮ ‖**

**ಭಾವಾರ್ಥ:—** ಎಲ್ಲ ಕೆಲಸಗಳೂ ಪ್ರಕೃತಿಯ ಗುಣದಿಂದ ಒದಗುತ್ತವೆ. ಆತ್ಮನು ಅಕರ್ತೃವು, ಜ್ಞಾನಿಯು ಪ್ರಕೃತಿಯ ಗುಣಗಳನ್ನೂ ಅವುಗಳ ಮೂಲಕವಾಗಿ ಒದಗುವ ಕರ್ಮಗಳನ್ನೂ ಅರಿಯುವವನು. ಒಂದು ಗುಣವು ಇನ್ನೊಂದು ಗುಣದೊಡನೆ ಕೂಡಿ ಕರ್ಮವು ಸಂಭವಿಸುವುದು; ಎಂಬುದನ್ನು ಅರಿತು ಅವನು ಅಹಂಕಾರದಿಂದ ಅಲಿಪ್ತನಾಗುತ್ತಾನೆ. ಅಹಂಕಾರದಿಂದ ತಿಳಿಗೇಡಿತನವು ತಲೆದೋರುತ್ತದೆ ಕರ್ಮಕ್ಕೆ ತಾನೇ ಕಾರಣನೆಂದು ಬಗೆದು ಅದರ ಫಲದಲ್ಲಿ ಆಸಕ್ತನಾಗಿ ಮೋಸಹೋಗುವನು ‖ ೨೭–೨೮ ‖

ಪ್ರಕೃತಿಯ ಗುಣಗಳಿಂದಲೇ ಎಲ್ಲ ಕೆಲಸಗಳು ಒದಗುತ್ತವೆ. ಆದುದರಿಂದ ಮನುಷ್ಯನು ತಾನು ಮಾಡುವೆನೆಂಬುದು ಭ್ರಾಂತಿ. ಮಾಡುವುದು ಪ್ರಕೃತಿಗುಣ.

ಅಂದವಾದ ಒಂದು ಅರಮನೆಯನ್ನು ಅರಸನು ತಾನು ಕಟ್ಟಿಸಿದೆನೆಂದು ಬಗೆಯುತ್ತಾನೆ. ಆದರೆ ಅದು ಅಹಂಕಾರದ ಮೂಲಕವಾಗಿ ಉಂಟಾದ ಭ್ರಮೆ. ನಿಜವಾಗಿ 'ಪ್ರಕೃತಿ'ಯ ಗುಣಧರ್ಮಗಳಿಂದ ಅದು ಆಗಿರುತ್ತದೆ. ಆ ಅರಮನೆಯು ಕಲ್ಲು, ಇಟ್ಟಿಗೆ, ಗಚ್ಚು, ಕಟ್ಟಿಗೆ, ಸುಣ್ಣ, ಬಣ್ಣ ಮೊದಲಾದ ಪದಾರ್ಥಗಳಿಂದಾಗಿದೆ. ಈ ಪದಾರ್ಥಗಳಲ್ಲಿ ಇರುವ ಪ್ರಾಕೃತಿಕ ಗುಣಗಳೇ ಇಲ್ಲವಾಗಿದ್ದರೆ ಆ ಅರಮನೆಯು ನಿಲ್ಲುತ್ತಿರಲಿಲ್ಲ. ಕಲ್ಲು ಗಚ್ಚು ಸೇರಿ ಗಟ್ಟಿಯಾಗಿ ಹಿಡಿದುಕೊಂಬ ಗುಣವು ಪ್ರಕೃತಿ ಸ್ವಭಾವವು. ಇದರಂತೆ ಅವೆಲ್ಲವು ಹದದಿಂದ ಕೂಡಿ ಅರಮನೆಯಾಯಿತು. ಹಲವು ಓಜರು (ಗೌಂಡಿಗಳು), ಬಡಿಗರು, ಕಮ್ಮಾರರು ತಮ್ಮ ಪ್ರಕೃತಿ ಧರ್ಮಕ್ಕನುಸರಿಸಿ ಅದನ್ನು ಸಿದ್ಧಪಡಿಸಿದರು. ಅರಸನಲ್ಲಿರುವ ಸೌಂದರ್ಯಪ್ರೇಮ, ರಸಿಕತೆ, ವಿಲಾಸದ ಅಭಿಲಾಷೆಗಳು ಸೇರಿ ಆತನಲ್ಲಿ ಅರಮನೆಯನ್ನು ಕಟ್ಟಿಸುವ ಪ್ರೇರಣೆಯನ್ನುಂಟು ಮಾಡಿದುವು. ಹೀಗಾಗಿ ಒಟ್ಟಿನಲ್ಲಿ ಆ ಭವ್ಯ ಮಂದಿರವು ಸಿದ್ಧವಾಯಿತು. ಅದರ ಕರ್ತೃವು ಯಾವನೊಬ್ಬನೇ ಅಲ್ಲ, ಹಲವು ಪ್ರಕೃತಿಗುಣಗಳು ಒಂದರೊಡನೊಂದು ಸೇರಿ ಒಂದು ಕೆಲಸವು ಪೂರ್ಣವಾಗುತ್ತದೆ.

ಸೂರ್ಯನಲ್ಲಿಯ ತೇಜಸ್ಸು ಹೊಳಪನ್ನುಂಟು ಮಾಡುತ್ತದೆ. ಬೆಂಕಿಯು ಕಾವು ತೋರಿಸುತ್ತದೆ. ನೀರಿನ ಆರ್ದ್ರತೆ ತೋಯಿಸುತ್ತದೆ. ಹೀಗಿದು ಪ್ರಕೃತಿಧರ್ಮವೇ ಲೋಕದೊಳಗಿನ ಎಲ್ಲ ಕ್ರಿಯೆಗಳ ಕಾರಣವು. ಆದಕಾರಣ ಮಾನವನು ಉದಾರತೆಯಿಂದ, ತಾನು ಕರ್ಮಕ್ಕೆ ನಿಮಿತ್ತನಲ್ಲದೆ ಮೂಲಕಾರಣವು ಬೇರೆಯೆ ಆಗಿದೆಯೆಂಬುದನ್ನು ನೆನಪಿಸಲ್ಲಿಡಬೇಕು. ಈ ನೆನಹು ಇದ್ದವರಿಗೆ ಅಹಂಕಾರದ ಬಾಧೆಯು ಆಗುವುದಿಲ್ಲ. ಅಹಂಕಾರವು ಆವರಿಸದಿದ್ದಲ್ಲಿ ತಿಳಿಗೇಡಿತನವು ಅಂಟಿಕೊಳ್ಳುವುದಿಲ್ಲ.

### ಗುಣ ಮತ್ತು ಕರ್ಮಗಳ ವಿಭಾಗ

ಪ್ರಕೃತಿಯ ಗುಣಗಳು ಮತ್ತು ಅವುಗಳಿಂದಾಗುವ ಕೆಲಸಗಳ ಅರಿವು ಇದ್ದವನೆ ತಿಳಿದವನು. ಇದು ಗೊತ್ತಿಲ್ಲ-

**ಪ್ರಕೃತೇರ್ಗುಣಸಂಮೂಢಾಃ ಸಜ್ಜಂತೇ ಗುಣಕರ್ಮಸು ।**
**ತಾನಕೃತ್ಸ್ನವಿದೋ ಮಂದಾನ್ ಕೃತ್ಸ್ನವಿನ್ನ ವಿಚಾಲಯೇತ್ ॥ ೨೯ ॥**

---

**ಅನ್ವಯ:—** ಪ್ರಕೃತೇಃ ಗುಣಸಂಮೂಢಾಃ ಗುಣಕರ್ಮಸು ಸ್ವಜ್ಜಂತೇ; ತಾನ್ ಅಕೃತ್ಸ್ನವಿದಃ ಮಂದಾನ್ ಕೃತ್ಸ್ನವಿತ್ ನ ವಿಚಾಲಯೇತ್ ॥ ೨೯ ॥

**ಪ್ರಕೃತಿಗುಣಗಳಿಂದ ತಿಳಿಗೇಡಿಗಳಾದ ಜನರು ಗುಣಗಳಿಂದ ಸಂಭವಿಸುವ ಕೆಲಸಗಳಲ್ಲಿ ತೊಡಗಿ ಕೊಳ್ಳುತ್ತಾರೆ. ಮಂದ ಬುದ್ಧಿಗಳಾದ ಆ ತಿಳಿಗೇಡಿಗಳನ್ನು ಬಲ್ಲವನು ಅಲುಗಾಡಿಸಬಾರದು. ॥ ೨೯ ॥**

**ಭಾವಾರ್ಥ:—** ಪ್ರಾಕೃತಿಕ ಗುಣಗಳಿಂದ ಆವರಿಸಲ್ಪಟ್ಟ ಜನರು ಆ ಗುಣಗಳ ಮೂಲಕವಾಗಿ ಸ್ವಾಭಾವಿಕವಾಗಿ ಒದಗುವ ಕರ್ಮಗಳಿಗೆ ತಾವೇ ಕಾರಣರೆಂದು ಬಗೆಯುತ್ತಾರೆ. ಹೀಗೆ ತಿಳಿಗೇಡಿಗಳು ಫಲಾಸಕ್ತಿಯಿಂದ ಕೆಲಸಗಳಲ್ಲಿ ತೊಡಗುತ್ತಾರೆ. ಬಲ್ಲವರು ಇಂತಹರನ್ನು ಅವರ ಕೆಲಸಗಳಿಂದ ಒಮ್ಮೆಲೆ ಬಿಡಿಸಕೂಡದು. ಅವರ ಬುದ್ಧಿ ಭೇದವಾಗುವಂತೆ ನಡೆಯಕೂಡದು.

---

ದವನು ತಿಳಿಗೇಡಿ. ತಿಳಿದವನಿಗೆ ಹೆಮ್ಮೆ ಸೋಂಕದು. ಹೆಮ್ಮೆಯಿಂದ ಕಣ್ಗಾಣದವರಾಗಿ ಮನುಷ್ಯರು ತೊಡಕು ತೊಂದರೆಗಳಲ್ಲಿ ಸಿಕ್ಕಿಬೀಳುತ್ತಾರೆ. ತಿಳಿದವರಿಗೆ ಅದು ತೊಡಕಾಗದೆ ಜೇಡವು ತನ್ನ ಬಲೆಯಲ್ಲಿ ಲೀಲಾಜಾಲವಾಗಿ ಓಡಾಡುವಂತೆ ಅದರೊಳಗೆ ವಿಹರಿಸುತ್ತಾರೆ. ತಿಳಿದವನು ಮತ್ತು ತಿಳಿಗೇಡಿಗಳ ಮನಸ್ಥಿತಿ ಮತ್ತು ಕೆಲಸದ ರೀತಿಗಳು ಹೀಗೆ ಭಿನ್ನವಾಗಿವೆ. ಆದರೆ ಈ ಸ್ಥಿತಿಯಲ್ಲಿ ತಿಳಿಗೇಡಿಗಳಲ್ಲಿ ಥಟ್ಟನೆ ಬುದ್ಧಿಭೇದ ಮಾಡಿದರೆ ಅದು ಹಾನಿಗೆ ಕಾರಣವಾಗುತ್ತದೆ; ಎಂದು ಮುಂದಿನ ಶ್ಲೋಕದಲ್ಲಿ ವಿವರಿಸಿ ಹೇಳಿದ್ದಾಗಿದೆ.

**ಪ್ರಕೃತಿ ಗುಣಗಳ ಮೋಹ.**

(೨೯) (ಪ್ರಕೃತೇಃ ಗುಣ ಸಂಮೂಢಃ) ಮನುಷ್ಯನು ಪ್ರಕೃತಿಯ ಗುಣಗಳಿಂದ ಆವರಿಸಲ್ಪಟ್ಟು ಕಣ್ಗಾಣದವನಾಗುತ್ತಾನೆ ಸತ್ವ, ರಜ, ತಮಗಳೆಂಬ ಪ್ರಾಕೃತಿಕ ಗುಣಗಳು ಲೋಕದಲ್ಲಿ ನಾನಾವಿಧದಿಂದ ವ್ಯಾಪಿಸಿಕೊಂಡಿವೆ

(ಗುಣಕರ್ಮಸು ಸಜ್ಜಂತೇ) ಗುಣಗಳಿಂದ ಸಂಭವಿಸಿದ ಕರ್ಮಗಳಲ್ಲಿ ಸಾಮಾನ್ಯಜನರು ಸಿಕ್ಕಿಬೀಳುತ್ತಾರೆ ಗುಣಗಳ ಮೂಲಕವಾಗಿ ಕೆಲಸಗಳು ಒದಗುತ್ತಿರುವವಾದರೂ ತಿಳಿಗೇಡಿಗಳು ಅದರ ಸುಂಕವನ್ನು ಸುಮ್ಮನೆ ತಮಗೆ ಅಂಟಿಸಿಕೊಳ್ಳುತ್ತಾರೆ ಪ್ರಕೃತಿಯ ಪ್ರವಾಹದಲ್ಲಿ ಹರಿಯುತ್ತ ಹೊರಟವರು ಅವರು. ಆದುದರಿಂದ ತಾವೇ ಈಸಲಾರದ ಈ ಜನಗಳು ಅಡಿಗಡಿಗೂ ಗುಟಕರಿಸುತ್ತ ಅಶಾಂತಿಗೆ ಒಳಗಾಗುತ್ತಾರೆ.

ಇಂತಹರಿಗೆ 'ಅಕೃತ್ಸ್ನವಿದ್ ಮಂದ'ರು ಎಂದು ಹೇಳಿದೆ. 'ಕೃತ್ಸ್ನವಿತ್' ಎಂದರೆ ಎಲ್ಲ ಬಲ್ಲವನು. ಸರ್ವಜ್ಞನು. 'ಅಕೃತ್ಸ್ನವಿತ್' ಎಂದರೆ ಅಪೂರ್ಣ ತಿಳಿದವನು; ಅಜ್ಞನು. ಎಲ್ಲವನ್ನೂ ಸರಿಯಾಗಿ ತಿಳಿಯದವನು ಅಜ್ಞನು. ಇವರಿಗೆ ಮೋಹಭ್ರಮೆಗಳು ಆವರಿಸಿಕೊಳ್ಳುವುದರಿಂದ ಮಂದರಾಗಿರುತ್ತಾರೆ. ಸರಿಯಾಗಿ ಕಣ್ಗಾಣದವರಾಗಿರುತ್ತಾರೆ. ಆದಕಾರಣ ಇವರಿಗೆ ದುಃಖಕ್ಕೆ ಈಡಾಗಬೇಕಾಗುತ್ತದೆ. ಇವರು ಪ್ರಕೃತಿಯ ಗುಣಗಳನ್ನೂ ಆ ಗುಣಗಳಿಂದ ಆಗುವ ಪ್ರತಿಕ್ರಿಯಾರೂಪ ಕರ್ಮದ ಬಗೆಯನ್ನೂ ತಿಳಿದುಕೊಳ್ಳಲು ಸಮರ್ಥರಾಗುವವರೆಗೆ ಇವರಿಗೆ ಅಶಾಂತಿಯು ತಪ್ಪಿದ್ದಲ್ಲ.

'ಅದನ್ನು ತಾನು ಮಾಡಿದೆನು, ಅಥವಾ ಮಾಡುವೆನು' ಎಂಬ ಆಸಕ್ತಿಯು ಆ ಕರ್ಮಮೂಲಕವಾಗಿ ಉಂಟಾಗುವ ಎಲ್ಲ ಸುಖದುಃಖಗಳ ಉಗಮಸ್ಥಾನವಾಗಿದೆ. ಆದುದರಿಂದ ಈ ಆಸಕ್ತಿಯ ಬೇರನ್ನೇ ಬಲ್ಲಿದರು (ಕೃತ್ಸವಿತ್) ಕಡಿದುಹಾಕುತ್ತಾರೆ ಆದರೆ ಜನಸಾಮಾನ್ಯರಿಗೂ (ಅಕೃತ್ಸವಿತ್, ಮಂದ) ಥಟ್ಟನೆ ಹಾಗೆ ತಮ್ಮ ಮನಸ್ಸನ್ನು ಬದಲಿಸಲಿಕ್ಕಾಗುತ್ತಿರುವುದಿಲ್ಲ. ಆಸಕ್ತಿಯಿಲ್ಲದೆ ಕೆಲಸಮಾಡುವುದೇ ಅವರಿಗೆ ಅಶಕ್ಯವಿರುತ್ತದೆ. ಆದುದರಿಂದ ಇಂತಹರಿಗೆ ಆಸಕ್ತಿರಹಿತರಾಗಿರೆಂದು ಉಪದೇಶಿಸುವುದು ಗಂಡಾಂತರಕ್ಕೆ ಕಾರಣವಾಗುವುದು. ಅವರಿಗೆ ಲಾಭದ ಆಶೆಯಿಲ್ಲದೆ ಕೆಲಸಕ್ಕೆ ಮನಸಾಗದು; ಕೈಯೇಳದು; ಕಾಲು ನಡೆಯದು. ಆದಕಾರಣ ಆಸಕ್ತಿಯ ಪ್ರೇರಣೆಯನ್ನೇ ಕತ್ತರಿಸಿದರೆ ಅವರು, ನಿಷ್ಕಾಮಕರ್ಮಗಳಾಗುವುದಂತೂ ದೂರೇ ಉಳಿಯಿತು. ಆಲಸಿಗರಾಗಿ ಯಾವ ಕೆಲಸಕ್ಕೂ ಮನಸ್ಸಿಲ್ಲದೆ ತ್ರಿಶಂಕುಗಳಾಗುವರು ಆದಕಾರಣ

## (೧೧) ಪರಮಾತ್ಮನಿಗೆ ಅರ್ಪಿಸಿ ಕೆಲಸ.

ಮಯಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯಾಧ್ಯಾತ್ಮಚೇತಸಾ ।
ನಿರಾಶೀರ್ನಿರ್ಮಮೋ ಭೂತ್ವಾ ಯುಧ್ಯಸ್ವ ವಿಗತಜ್ವರಃ ॥ ೩೦ ॥

---

**ಅನ್ವಯ :—** ಮಯಿ ಅಧ್ಯಾತ್ಮಚೇತಸಾ ಸರ್ವಾಣಿ ಕರ್ಮಾಣಿ ಸಂನ್ಯಸ್ಯ ನಿರಾಶೀಃ ನಿರ್ಮಮಃ ಭೂತ್ವಾ, ಯುಧ್ಯಸ್ವ ॥ ೩೦ ॥

ನನ್ನಲ್ಲಿ ಅಧ್ಯಾತ್ಮಬುದ್ಧಿಯಿಂದ ಎಲ್ಲ ಕೆಲಸಗಳನ್ನೂ ಅರ್ಪಿಸಿ, ಆಶೆಯಿಲ್ಲದವನಾಗಿ ತನ್ನತನವನ್ನು ತೊರೆದು, ಸಂತಾಪರಹಿತನಾಗಿ ಹೋರಾಡು ॥ ೩೦ ॥

**ಭಾವಾರ್ಥ :—** ಆತ್ಮೋನ್ನತಿಯ ಗುರಿಯನ್ನು ಯಾವಾಗಲೂ ಕಣ್ಣೆದುರಿಟ್ಟುಕೊಂಡು, ನನಗೆ (ಪರಮಾತ್ಮನಿಗೆ) ಎಲ್ಲ ಕೆಲಸಗಳನ್ನೂ ಅರ್ಪಿಸಬೇಕು. ಫಲದ ಆಶೆಯನ್ನು ಹಿಡಿಯಲಾಗದು. ತನ್ನತನದ ಮೋಹವನ್ನೂ ತೊರೆಯಬೇಕು. ತನ್ನ ಮನಸ್ಸಿನಂತಾಗದೆ ಹೋದರೆ ಪರಿತಾಪವನ್ನೂ ಹಚ್ಚಿಕೊಳ್ಳಬಾರದು. ಈ ಬಗೆಯಾಗಿ ಮನಸ್ಸನ್ನು ಹದಗೊಳಿಸಿಕೊಂಡು ಹೋರೆ ಮಾಡಬೇಕು. ಹೋರಾಟ ನಡೆಸಬೇಕು. ॥ ೩೦ ॥

---

ಗೀತೆಯು ಇಂತಹ ಬುದ್ಧಿಯಲ್ಲಿ ಚಾಂಚಲ್ಯವುಂಟಾಗುವಂತೆ ಯಾವ ಉಪದೇಶವನ್ನೂ ಮಾಡಬಾರದೆಂದು (ಮಂದಾನ್ ಕೃತ್ಸ್ನವಿತ್ ನ ವಿಚಾಲಯೇತ್) ಎಂದು ಆದೇಶಿಸುತ್ತದೆ.

### ಅನಧಿಕಾರ ಚೇಷ್ಟೆ.

ಆದಕಾರಣ ಜನಸಾಮಾನ್ಯರಲ್ಲಿ ಕರ್ಮಪ್ರವೃತ್ತಿಯು ನಷ್ಟವಾಗುವಂತಹ ಯಾವ ಕೃತಿಯನ್ನೂ ಜ್ಞಾನಿಯು ಮಾಡಕೂಡದು. ಪ್ರತಿಯಾಗಿ ಅವರಿಗೆ ಉತ್ತಮೋತ್ತಮ ಆದರ್ಶಗಳನ್ನು ತೋರಿಸಿ ಹಾಗೆ ಒಳ್ಳೆಯ ಕೆಲಸಗಳಲ್ಲಿ ತೊಡಗಿ ಯೋಗ್ಯತೆಯನ್ನು ಪಡೆಯುವುದಕ್ಕೆ ಪ್ರೋತ್ಸಾಹಿಸಬೇಕು. ಆ ಬಗೆಯಾಗಿ ಸತ್ಕಾರ್ಯಗಳಲ್ಲಿ ಅವರು ಮುಂದುವರೆಯುತ್ತ ಹೋದಹಾಗೆ ಮನಸು ತಿಳಿದು ನಿಷ್ಕಾಮಕರ್ಮದ ಹದವೂ ಅವರಿಗೆ ಗೊತ್ತಾಗುವುದು.

ಕೆಲಸಗಳನ್ನು ನೆರವೇರಿಸುವಾಗ ಅಶಾಂತಿ, ಕಳವಳಗಳ ಬಾಧೆಯಾಗದೆ ಅವು ಕರ್ತವ್ಯವೆಂದು ಸರಿಯಾಗಿ ಜರುಗಿಸುವ ಯೋಗ್ಯತೆಯು ಪ್ರಾಪ್ತವಾಗಬೇಕಾದರೆ ಮಾಡಬೇಕಾದ ಹಂಚಿಕೆಯನ್ನು ಮುಂದಿನ ಶ್ಲೋಕದಲ್ಲಿ ಹೇಳಿದೆ.

### (೩೦) ೧. 'ಅಧ್ಯಾತ್ಮಚೇತಾಃ'

'ಅಧ್ಯಾತ್ಮಚೇತ'ರು ಎಂದರೆ ಅಧ್ಯಾತ್ಮದಲ್ಲಿ ಚಿತ್ತವುಳ್ಳವರು ಆಗುವುದು ಮೊದಲನೆಯ ಕೆಲಸ. ಆತ್ಮ, ಪರಮಾತ್ಮನಲ್ಲಿ ಚಿತ್ತವು ಸ್ಥಿರವಾದನು ಎಂದರೆ ಭಕ್ತನು ಆಗಬೇಕು.

ಸಾಮಾನ್ಯರ ಮನಸು ಶರೀರ-ಭೋಗಗಳ ಕಡೆಗೆ ಲೌಕಿಕ ವಿಷಯಗಳ ಕಡೆಗೆ ಎಳಸುತ್ತದೆ. ಇಂದ್ರಿಯಗಳು ಹೊರಗೆ ಸೆಳೆಯುತ್ತಿರುತ್ತವೆ.

ಪರಾಂಚಿ ಖಾನಿ ವ್ಯತೃಣತ್ ಸ್ವಯಂಭೂಃ
ತಸ್ಮಾತ್ ಪರಾಙ್ ಪಶ್ಯತಿ ನ ಅಂತರಾತ್ಮನ್ ।
ಕಶ್ಚಿತ್ ಧೀರಃ ಪ್ರತ್ಯಗಾತ್ಮಾನಮ್ ಐಕ್ಷತ್
ಆವೃತ್ತ ಚಕ್ಷುರಮೃತತ್ವ ಮಿಚ್ಛನ್ ॥

—ಕಠ ೨. ೧. ೧

"ಸ್ವಯಂಭೂ ಪರಮೇಶ್ವರನು ಇಂದ್ರಿಯಗಳನ್ನು ಹೊರಗೆ ಹರಿಯುವಂತೆ ಮಾಡಿದ್ದಾನೆ. ಅವು ಬಾಹ್ಯ ವಿಷಯಗ್ರಹಣ ಮಾಡುವ ಸ್ವಭಾವವುಳ್ಳವುಗಳಾಗಿವೆ. ಆದಕಾರಣ ಮನುಷ್ಯನು ಹೊರಗಣ ವಿಷಯಗಳನ್ನು ಕಾಣುತ್ತಾನೆ ಅಂತರಾತ್ಮನನ್ನು ಕಾಣುವುದಿಲ್ಲ. ಯಾವನಾದರೂ ಒಬ್ಬ ತಿಳಿದ ಎದೆಗಾರನು ಅಮೃತತ್ವವನ್ನು ಅಪೇಕ್ಷಿಸುವವನಾಗಿ ಕಣ್ಣು ಮೊದಲಾದ ಇಂದ್ರಿಯಗಳನ್ನು ಅಂಕೆಯಲ್ಲಿರಿಸಿಕೊಂಡು ಅಂತರಾತ್ಮನನ್ನು ಕಾಣುವನು"

ಪರಾಚಃ ಕಾಮಾನನುಯಂತಿ ಬಾಲಾಃ ತೇ
ಮೃತ್ಯೋಃ ಯಂತಿ ವಿತತಸ್ಯ ಪಾಶಮ್ । ಅಥ
ಧೀರಾ ಅಮೃತತ್ವಂ ವಿದಿತ್ವಾ ಧ್ರುವಮ್ ಅಧ್ರುವೇಷು ಇಹ ನ ಪ್ರಾರ್ಥಯಂತೇ ॥

—ಕಠ. ೨. ೧. ೨.

"ತಿಳಿಗೇಡಿಗಳು ಹೊರಗಣ ವಿಷಯೋಪಭೋಗಗಳ ಬೆಂಬತ್ತುವರು, ಅದರಿಂದ ಸಾವಿನ ಹರವಾದ ಬಲೆಯಲ್ಲಿ

ಸಿಕ್ಕಿಬೀಳುವರು. ಆದರೆ ತಿಳಿದ ಎಡೆಗಾರನು (ಧೀರಾಃ) ಅಮೃತತ್ವವೆ ನಿತ್ಯವೆಂದು ತಿಳಿದವರಾಗಿ ಅದನ್ನು ಪಡೆಯಲು ಹವಣಿಸುವರು. ಅನಿತ್ಯವಾದ ವಿಷಯ ಭೋಗಗಳನ್ನು ಹಾರಯಿಸುವುದಿಲ್ಲ."

ಜನಸಾಮಾನ್ಯರು 'ಆತ್ಮಚೇತ ರಾಗಿರುವುದಿಲ್ಲ' 'ವಿಷಯ ಚೇತ'ರು. ಆದುದರಿಂದ ಅವರು ಹಲವು ಸುಖ ವಿಲಾಸಗಳ ಹಂಬಲದಿಂದ ನಾನಾ ಕರ್ಮಗಳಲ್ಲಿ ತೊಡಕಿಕೊಂಡಿರುತ್ತಾರೆ. ಕಹಿ ಅನುಭವವು ಬಂದಹಾಗೆ ಮನಸು ಫಲೇಚ್ಛೆಯಿಂದ ಬಿಡುಗಡೆ ಹೊಂದಲು ಕಲಿಯುವುದು

**ಅನ್ಯಚ್ಛ್ರೇಯೋಽನ್ಯದುತೈವ ಪ್ರೇಯಃ ತೇ ಉಭೇ ನಾನಾರ್ಥೇ ಪುರುಷಂ ಸಿನೀತಃ। ತಯೋಃ ಶ್ರೇಯಃ ಆದದಾನಸ್ಯ ಸಾಧು ಭವತಿ ಹೀಯತೇಽರ್ಥಾದ್ಯ ಉ ಪ್ರೇಯೋ ವೃಣೀತೇ ॥**

**ಶ್ರೇಯಃ ಚ ಪ್ರೇಯಃ ಚ ಮನುಷ್ಯಮೇತಃ ತೌ ಸಂಪರೀತ್ಯ ವಿವಿನಕ್ತಿ ಧೀರಃ। ಶ್ರೇಯೋ ಹಿ ಧೀರಃ ಅಭಿಪ್ರೇಯಸಃ ವೃಣೀತೇ; ಪ್ರೇಯೋ ಮಂದಃ ಯೋಗಕ್ಷೇಮಾತ್ ವೃಣೀತೇ ॥**

ಕಠ ೧ ೨ ೧-೨

'ಶ್ರೇಯಸ್ಸು ಎಂದರೆ ಸ್ವಾತಂತ್ರ್ಯಸುಖದ ದಾರಿ; ಪ್ರೇಯಸ್ಸು ಎಂದರೆ ತಾತ್ಕಾಲಿಕ ಭೋಗವಿಲಾಸದ ಹಾದಿ. ಇವೆರಡೂ ಭಿನ್ನಮಾರ್ಗಗಳು. ಇವೆರಡೂ ದಾರಿಗಳು ಮನುಷ್ಯನ ಎದುರಿಗಿವೆ ಇವೆರಡರಲ್ಲಿ ಶ್ರೇಯಸ್ಸಿನ ದಾರಿಯಿಂದ ಕಲ್ಯಾಣವು ಪ್ರಾಪ್ತವಾಗುವುದು. ಪ್ರೇಯದ ದಾರಿಯಿಂದ ಭೋಗಗಳನ್ನು ಹೊಂದುವವರು. ಹಿತದಿಂದ ದೂರಾಗುವರು. ಶ್ರೇಯ ಮತ್ತು ಪ್ರೇಯಗಳೆರಡು ಮಾನವರೆದುರಿಗಿದ್ದು ಅವುಗಳಲ್ಲಿ ತಿಳಿದ ಎಡೆಗಾರನು (ಧೀರಃ) ತಾತ್ಕಾಲಿಕ ಭೋಗಗಳಿಗಿಂತ ಶ್ರೇಯ-ಸ್ವಾತಂತ್ರ್ಯವು (ಮೋಕ್ಷವು) ಒಳಿತೆಂದು ಸ್ವೀಕರಿಸುವನು. ತಿಳಿಗೇಡಿ, ಅಲ್ಪದೃಷ್ಟಿಯುವನು ಇಂದಿನ ಯೋಗಕ್ಷೇಮವನ್ನೆ ಬಯಸುವನು.'

ಲೋಕದಲ್ಲಿಯ ಎರಡು ಬಗೆಯ ಜನರನ್ನು ಮೇಲೆ ಉಲ್ಲೇಖಿಸಲಾಗಿದೆ. ಅವೆರಡೂ ವರ್ಗಗಳ ಸ್ಪಷ್ಟ ಕಲ್ಪನೆ ಬರಲು ಅವರ ಪರ್ಯಾಯನಾಮಗಳನ್ನು ಒಂದೆಡೆಗೆ ಕೊಟ್ಟಿದ್ದಾಗಿದೆ.

| | |
|---|---|
| ಅಧ್ಯಾತ್ಮಚೇತಾಃ | ವಿಷಯಚೇತಾಃ |
| ಶ್ರೇಯ ಆದದಾನಃ | ಪ್ರೇಯ ಆದದಾನಃ |
| ಧೀರಃ | ಬಾಲಃ, ಮಂದಃ |
| ಆತ್ಮಾನಂ ಐಕ್ಷತ | ಪರಾಙ್ ಪಶ್ಯತಿ |
| ಅಮೃತಂ ಯಂತಿ | ಮೃತ್ಯುಪಾಶಂ ಯಂತಿ |
| ಸಾಧುಃ ಭವತಿ | ಅರ್ಥಾತ್ ಹೀಯತೇ |
| ನಿರಾಶೀಃ | ಆಶಾಪಾಶ ಬದ್ಧಃ |
| ನಿರ್ಮಮಃ | ಅಹಂಕಾರ ಹತಃ |
| ವಿಗತಜ್ವರಃ | ಜ್ವರಾಭಿಭೂತಃ |

ಹೊರಗಿನ ವಿಷಯಗಳು ಕೊನೆಯ ಗುರಿಯಾಗಲಾರವು. ಯೋಗಕ್ಷೇಮವೊಂದೇ ಜೀವನಕ್ಕೆ ತೃಪ್ತಿಯನ್ನು ಕೊಡಲಾರದು ಆತ್ಮವಿಕಾಸವು ಮಾನವನ ಆತ್ಯಂತಿಕ ಧ್ಯೇಯ ಇದೇ ಶ್ರೇಯ ಇಂದಿನ ಯೋಗಕ್ಷೇಮದ ಚಿಂತೆ ತಾತ್ಪೂರ್ತಿಕ ಇದರ ಮುಂದಿನ ವಿಚಾರವನ್ನೇ ಮರೆತರೆ ಆತ್ಮಹಾನಿಯುಂಟು. ಆದುದರಿಂದ ಯೋಗಕ್ಷೇಮದ ಚಿಂತೆಯಲ್ಲಿಯೇ ಮೈಮರೆಯದೆ 'ಆತ್ಮಚೇತ'ರಾಗಿರುರುವುದು ಕರ್ತವ್ಯವು.

**೨. 'ಪರಮಾತ್ಮನಿಗೆ ಅರ್ಪಿಸಿ ಕೆಲಸ.'**

**'ಸರ್ವಾಣಿ ಕರ್ಮಾಣಿ ಮಯಿ ಸಂನ್ಯಸ್ಯ'**– ಎಲ್ಲ ಕೆಲಸಗಳನ್ನೂ ಪರಮಾತ್ಮನಿಗೆ ಅರ್ಪಿಸು, ಎಂದು ಇಲ್ಲಿ ಆಜ್ಞಾಪಿಸಲಾಗಿದೆ. ಮನುಷ್ಯನು ಕೇವಲ ತನಗಾಗಿಯೆ ಕೆಲಸಮಾಡುವುದು ಸ್ವಭಾವವಾಗಿದೆ. ಆದರೆ ಈ ಲೋಕದಲ್ಲಿ ಕೇವಲ ತಾನೇ ಇಲ್ಲ. ಆದಕಾರಣ ವಿಶಾಲಾತ್ಮನಾಗಿ ತನ್ನ ಕೆಲಸದ ಫಲವು ಕೇವಲ ತನಗಾಗಿಯೆ ಎಂಬ ಸಂಕುಚಿತಭಾವವನ್ನು ತೊರೆಯಬೇಕು ಮಾಡತಕ್ಕ ಕೆಲಸವನ್ನು ಹಲವರ ಹಿತದ್ದಾಗುವಂತೆ ಮಾರ್ಪಡಿಸಿಕೊಂಡು ಅದು ಪರಮಾತ್ಮನಿಗೆ ಅರ್ಪಣವೆಂಬ ಭಾವದಿಂದ ನೆರವೇರಿಸಬೇಕು.

**ಏಳ್ಗೆಯ ದಾರಿ.**

ಕೇವಲ ತನಗಾಗಿಯೆ ಮಾಡುವ ಕೆಲಸದಲ್ಲಿ ಸ್ವಾರ್ಥವು ತುಂಬಿಕೊಳ್ಳುವುದು. ಹೆರವರ ವಿಷಯದಲ್ಲಿ ಅನಾದರ ಅಸೂಯೆ ಈರ್ಷೆಗಳೂ ಅದರಲ್ಲಿ ತಲೆದೋರುವ ಸಂಭವವಿರುವುದು. ಆದುದರಿಂದ ಹಾಗೆ ಕೇವಲ ತನ್ನಮಟ್ಟಿಗೇ ಎಂದು ಕೈಕೊಂಡ ಕೆಲಸವು ಅಪವಿತ್ರದಾರಿಯಲ್ಲಿ ಸಾಗುವ ಹದರಿಕೆಯಿದೆ.

ಆದರೆ ಅದು ಕೇವಲ ತನಗಾಗಿಯೆ ಅಲ್ಲ; ಅದರ ಲಾಭವು ಉಳಿದ ಹಲವರಿಗೂ ಆಗುವ ತೆರನಾಗಿ ಮಾರ್ಪಡಿಸಿಕೊಂಡು ಮುಂದುವರಿಸಿದಲ್ಲಿ ಅದು ಪವಿತ್ರತರವಾಗಹತ್ತುವುದು ಗಳಿಸಿದದುಡ್ಡು ತನಗಲ್ಲದೆ ಬೇರೆಯವರಿಗೆ ಅದರೊಳಗಣ ಒಂದು ಕಾಸೂ ವ್ಯಯವಾಗತಕ್ಕದ್ದಲ್ಲವೆಂಬ ದೃಷ್ಟಿಯು ಒದರೆ! ಆ ಮನುಷ್ಯನಿಗೆ ಆತನ ದುಡ್ಡಿನ ಸುಖವೂ ಅವನಿಗೆ

ದೊರೆಯಲಾರದು. ಯಾರು ಅದರ ಮೇಲೆ ಕಣ್ಣಿಟ್ಟಿರುವರೊ ಎಂಬ ಚಿಂತೆ ಹಗಲಿರುಳು! ತಾನು ಭೋಗಿಸುವುದನ್ನು ನೆರೆತೊರೆಯುವರು ಹೊಟ್ಟೆಕಿಚ್ಚಿನಿಂದ ಕಾಣುವರೆಂಬ ಸಂದೇಹವು ಆತನನ್ನು ಬೆನ್ನಟ್ಟುವುದು! ಹೀಗೆ ದುಡ್ಡು ಇದ್ದುದೂ ಒಂದು ದುಃಖದ ವಿಷಯವೇ ಆಗುವುದು ಆದರೆ ಆ ಧನವು ಹಲವು ಜನಗಳ ಕಲ್ಯಾಣಕ್ಕಾಗಿ ವಿನಿಯೋಗವಾಗತಕ್ಕುದೆಂದು ಗೊತ್ತಾಗಿದ್ದರೆ! ಆ ಒಡೆಯನಿಗೆ ಸನ್ಮಾನಿಸದ ನರಪ್ರಾಣಿಯಾವುದು? ಅವನೊಡನೆ ಎಲ್ಲರೂ ಒಳ್ಳೆದರಾಗಿ ಒಲುಮೆಯಿಂದ ನಲುಮೆಯಿಂದ ನಡೆದುಕೊಳ್ಳುವವರೆ! ಹೀಗಾಗಿ ಅವನಿಗೆ ಎಲ್ಲೆಲ್ಲೂ ಸಂತೋಷವೇ ತುಂಬಿಕೊಂಡ ಅನುಭವವು ಬಾರದೆ ಇರದು

ಇನ್ನು ಪರಮೇಶ್ವರಾರ್ಪಣ ಭಾವದಿಂದ ಆತನು ತನ್ನ ಜೀವನವನ್ನು ಮಾರ್ಪಡಿಸಿಕೊಂಡು ನಡೆಯಿಸಿದ ಕೆಲಸಗಳಿದ್ದರಂತೂ ಆ ಸೌಭಾಗ್ಯಕ್ಕೆ ಎಣೆಯಿಲ್ಲ. ಆತನು ನಡೆನುಡಿಗಳೆಲ್ಲವೂ ಪವಿತ್ರತಮವಾಗಿ ಆತನು ಲೋಕಪೂಜ್ಯ ಮಹಾತ್ಮನಾಗುವನು. ಮಾನವನ ಏಳ್ಗೆಯ ದಾರಿಯು ಇದು ಹೀಗಿದೆ.

ಹೀನನಾಗಿದ್ದವನೂ ಸುವಿಚಾರವು ತಲೆದೋರಿ, ಪರಮಾತ್ಮನಿಗೆ ಅರ್ಪಣಭಾವದಿಂದ ತನ್ನ ಕಾಯಕವನ್ನು ನಡಸಿದರೆ ಆತನಿಗೂ ಶ್ರೇಯಸ್ಸು ದೊರೆಯುವುದು.

> ಅಪಿ ಚೇತ್ ಸುದುರಾಚಾರಃ ಭಜತೇ ಮಾಮ್
> ಅನನ್ಯಭಾಕ್ ।
> ಸಾಧುಃ ಏವ ಸ ಮಂತವ್ಯಃ ಸಮ್ಯಕ್
> ವ್ಯವಸಿತಃ ಹಿ ಸಃ ॥ ೩೦ ॥
> ಕ್ಷಿಪ್ರಂ ಭವತಿ ಧರ್ಮಾತ್ಮಾ ಶಶ್ವತ್ ಶಾಂತಿಂ
> ನಿಗಚ್ಛತಿ ।
> ಕೌಂತೇಯ ಪ್ರತಿಜಾನೀಹಿ ನ ಮೇ ಭಕ್ತಃ
> ಪ್ರಣಶ್ಯತಿ ॥ ೩೧ ॥
> ಮಾಂ ಹಿ ಪಾರ್ಥ ವ್ಯಪಾಶ್ರಿತ್ಯ ಯೇಽಪಿ ಸ್ಯುಃ
> ಪಾಪಯೋನಯಃ ।
> ಸ್ತ್ರಿಯೋ ವೈಶ್ಯಾಃ ತಥಾ ಶೂದ್ರಾಃ ತೇಽಪಿ
> ಯಾಂತಿ ಪರಾಂ ಗತಿಮ್ ॥
>
> —ಗೀತಾ ಅ ೯

"ಒಳ್ಳೆ ದುರಾಚಾರಿಯಾದವನು ನನ್ನನ್ನು ಏಕ ಭಕ್ತಿಯಿಂದ ಭಜಿಸಿದರೆ ಆತನು ಕೂಡ ಸಾಧುವೆನಿಸಿಕೊಳ್ಳುತ್ತಾನೆ. ಏಕೆಂದರೆ ಆತನು (ಕ್ರಮವಾಗಿ) ಮಾರ್ಪಡುವನು. ಆತನು ಬೇಗನೆ ಧರ್ಮಾತ್ಮನೆನಿಸಿ ಶಾಶ್ವತವಾದ ಶಾಂತಿಯನ್ನು ಪಡೆಯುವನು. ಎಲೈ ಅರ್ಜುನನೆ, ನನ್ನ ಭಕ್ತನು ಎಂದೂ ಹಾಳಾಗಲಾರನೆಂಬುದನ್ನು ನೀವು ತಿಳಿದಿರು. ಎಲೈ ಅರ್ಜುನನೆ, ಪಾಪಿಗಳಾಗಿದ್ದರೂ ಹೆಣ್ಣುಮಕ್ಕಳೂ ವೈಶ್ಯರೂ ಶೂದ್ರರೂ ನನಗೆ ಮರೆಹೊಕ್ಕರೆ ಅವರೂ ಪರಮಗತಿಯನ್ನು ಹೊಂದುತ್ತಾರೆ.

ಪರಮಾತ್ಮನ ಕಡೆಗೆ ಮನಸು ಒಮ್ಮೆ ಒಲಿದರೆ, ಮೊದಲು ಎಂತಹ ಪಾಪಿ, ಪತಿತನಾಗಿದ್ದರೂ ಆತನಲ್ಲಿ ಕ್ರಮವಾಗಿ ಸುಧಾರಣೆಯಾಗುತ್ತ ಹೋಗುವುದು ನಿಶ್ಚಿತ. ಆದರೆ ಆತನು ಮಾತ್ರ ಅನನ್ಯಭಾವದಿಂದ ಪರಮಾತ್ಮನಲ್ಲಿ ಮೊರೆಯಿಡಬೇಕು.

### ೩. 'ನಿರಾಶೀಃ'

'ಆಶೆಗಳನ್ನು ತೊರೆ' ಎಂಬುದು ಮೂರನೆಯ ಕಟ್ಟಪ್ಪಣೆ. ಆಶೆಯಿಂದ ಕೆಲಸಕ್ಕೆ ಕೈಯಿಕ್ಕಿದವನು ಅದನ್ನು ಬೇಕಾದ ಮಾರ್ಗದಿಂದಲಾದರೂ ಸಾಧಿಸಲು ಹಿಂದೆಗೆಯುವುದಿಲ್ಲ. ಫಲದ ಆಶೆಯಿಂದ ನ್ಯಾಯಾನ್ಯಾಯದ ಪರಿವೆಯಿಲ್ಲದೆ ಕಾರ್ಯಸಾಧಿಸುವ ಹಂಬಲದಲ್ಲಿ ಅಡ್ಡದಾರಿ ಹಿಡಿಯುವ ಹೆದರಿಕೆಯಿದೆ. ಆದಕಾರಣ ಇದೆಲ್ಲ ಅನರ್ಥಕ್ಕೆ ಕಾರಣವಾಗುವ ಫಲದ ಆಶೆಯನ್ನು ತೊರೆದರೆ ದುಃಖದ ಅಂಜಿಕೆಯೆ ಉಳಿಯುವುದಿಲ್ಲ.

> ಆಶಾಪಾಶಶತೈರ್ಬದ್ಧಾಃ ಕಾಮಕ್ರೋಧ
> ಪರಾಯಣಾಃ ।
> ಈಹಂತೇ ಕಾಮಭೋಗಾರ್ಥಮನ್ಯಾಯೇನಾರ್ಥ
> ಸಂಚಯಾನ್ ॥ ೧೨ ॥
> ಚಿಂತಾಮಪರಿಮೇಯಾಂ ಚ ಪ್ರಲಯಾಂತಾಮು
> ಪಾಶ್ರಿತಾಃ ।
> ಕಾಮೋಪಭೋಗ ಪರಮಾ ಏತಾವದಿತಿ
> ನಿಶ್ಚಿತಾಃ ॥ ೧೧ ॥
>
> ಗೀತಾ ಅ. ೧೬

"ಆಶೆಯ ನೂರಾರು ಕಟ್ಟುಗಳಿಂದ ಬಿಗಿಯಲ್ಪಟ್ಟವರೂ ಕಾಮಕ್ರೋಧಗಳಿಂದ ಆವರಿಸಿದವರು ವಿಷಯೋಪಭೋಗಗಳ ಪೂರ್ತತೆಯ ಸಲುವಾಗಿ ಅನ್ಯಾಯದಿಂದ ಧನಸಂಗ್ರಹಮಾಡುವರು. ಸಾವರೆಗೂ ಬೆನ್ನುಬಿಡದಿರುವ ಚಿಂತೆಗಳಿಂದ ಕೂಡಿದವರಾದ ಇವರು ವಿಷಯೋಪಭೋಗಗಳಲ್ಲಿ ತತ್ಪರರಾಗಿರುತ್ತಾರೆ. ಮತ್ತು ಅದರಲ್ಲಿ ಹಿಗ್ಗುಗೊಳ್ಳುತ್ತಾರೆ. ಆದರೆ ಕೊನೆಗೆ ಇವರು ನಿಶ್ಚಿತವಾಗಿ ದುಃಖಗಳನ್ನು ಅನುಭವಿಸಬೇಕಾಗುತ್ತದೆ." ಈ ಗೋಳಾಟದಲ್ಲಿ ಸಿಕ್ಕಬಾರದಾಗಿದ್ದರೆ ಆಶಾರಹಿತರಾಗಲು ಪ್ರಯತ್ನಪಡಬೇಕು.

ಯೇ ಮೇ ಮತಮಿದಂ ನಿತ್ಯಮನುತಿಷ್ಠಂತಿ ಮಾನವಾಃ ।
ಶ್ರದ್ಧಾವಂತೋಽನಸೂಯಂತೋ ಮುಚ್ಯಂತೇ ತೇಽಪಿ ಕರ್ಮಭಿಃ ॥ ೩೧ ॥
ಯೇ ತ್ವೇತದಭ್ಯಸೂಯಂತೋ ನಾನುತಿಷ್ಠಂತಿ ಮೇ ಮತಮ್ ।
ಸರ್ವಜ್ಞಾನವಿಮೂಢಾಂಸ್ತಾನ್ವಿದ್ಧಿ ನಷ್ಟಾನಚೇತಸಃ ॥ ೩೨ ॥

---

ಅನ್ವಯ:— ಯೇ ಮಾನವಾಃ ಶ್ರದ್ಧಾವಂತಃ ಅನಸೂಯಂತಃ ಇದಂ ಮೇ ಮತಮ್ ನಿತ್ಯಂ ಅನುತಿಷ್ಠಂತಿ; ತೇ ಅಪಿ ಕರ್ಮಭಿಃ ಮುಚ್ಯಂತೇ ॥ ೩೧ ॥ ಯೇ ತು ಏತತ್ ಅಭ್ಯಸೂಯಂತಃ ಮೇ ಮತಂ ನ ಅನುತಿಷ್ಠಂತಿ, ತಾನ್ ಸರ್ವಜ್ಞಾನವಿಮೂಢಾನ್ ಅಚೇತಸಃ ನಷ್ಟಾನ್ ವಿದ್ಧಿ ॥ ೩೨ ॥

ನೆರೆನಂಬಿ, ಹೊಟ್ಟೆಕಿಚ್ಚಿಲ್ಲದವರಾಗಿ ಯಾರು ನನ್ನ ಮಾತನ್ನು ಅನುದಿನವೂ ಅನುಸರಿಸುವರೊ ಅವರು ಎಲ್ಲ ಕರ್ಮದೋಷಗಳಿಂದ ಮುಕ್ತರಾಗುತ್ತಾರೆ. ॥ ೩೧ ॥ ಆದರೆ ಇದನ್ನು ಹೊಟ್ಟೆಕಿಚ್ಚಿನಿಂದಲೇ ಕಾಣುವರೊ ಮತ್ತು ನನ್ನ ಮಾತನ್ನು ಅನುಸರಿಸುವುದಿಲ್ಲವೊ ಆ ತಿಳಿಗೇಡಿಗಳು ಯಾವ ಬಗೆಯ ತಿಳುವಳಿಕೆಯೂ ಇಲ್ಲದವರಾಗುತ್ತಾರೆ. ಅದಕಾರಣ ಅವರು ನಾಶಹೊಂದುವರೆಂದು ತಿಳಿ. ॥ ೩೨ ॥

ಭಾವಾರ್ಥ :— ಕೇವಲ ಕೊರತೆಗಳನ್ನೆ ನೆನೆಯದೆ ಶ್ರದ್ಧೆಯುಳ್ಳವರಾಗಿ ನನ್ನ ಹೇಳಿಕೆಯಂತೆ ನಡೆಯಬೇಕು. ಹಾಗೆ ಮಾಡಿದಲ್ಲಿ ಜನರು ದೋಷಗಳಿಂದ ಮುಕ್ತರಾಗುವರು. ಆದರೆ ಕೇವಲ ದೋಷಗಳನ್ನೇ ಕಾಣುವವರೂ ನನ್ನ ಉಪದೇಶದಂತೆ ನಡೆಯದವರೂ ತಿಳಿಗೇಡಿಗಳಾಗಿ ಎಲ್ಲ ಬಗೆಯ ಜ್ಞಾನಕ್ಕೂ ಎರವಾಗುವರು ಅದರಿಂದ ಅವರು ನಿಶ್ಚಿತವಾಗಿ ಹಾಳಾಗುವರು. ॥ ೩೧-೩೨ ॥

---

### ೪ 'ನಿರ್ಮಮಃ'

'ತನ್ನತನ ಬಿಡು' ಎಂಬುದು ನಾಲ್ಕನೆಯ ನಿಯಮವು. 'ಇದು ನನ್ನದು' 'ನನ್ನದು' ಎಂಬ ಅಂಟುಕತನವು ಸಂಸಾರಚಕ್ರದಲ್ಲಿ ಬಿಗಿಹಿಡಿದಿಡುವುದು. ಇದನ್ನು ತೊರೆದು ತಾನು ಒಬ್ಬ ತ್ರಯಸ್ಥನಂತೆ ತನ್ನ ಎಲ್ಲ ವ್ಯವಹಾರಗಳನ್ನೂ ಜರುಗಿಸಲು ಕಲಿತರೆ ಜೀವನದಲ್ಲಿ ಬರಬಹುದಾದ ಅನೇಕ ದುಃಖಗಳೊಳಗಿಂದ ಮನುಷ್ಯನು ಪಾರಾಗಬಲ್ಲನು

### ೫ 'ವಿಗತಜ್ವರಃ'

ಮೇಲಣ ನಾಲ್ಕು ಮಾತುಗಳನ್ನು ಅಳವಡಿಸಿಕೊಂಡವನು ವಿ-ಗತ-ಜ್ವರನಾಗುವನು. ಆತನ ಜ್ವರ (ಸಂತಾಪವು) ದೂರವಾಗುವುದು. ಯಾರು ಆಶೆಗಳನ್ನು ತೊರೆದಿರುವರೊ, ಯಾರು ತನ್ನತನದಿಂದ ದೂರವಾಗಿರುವರೊ, ಯಾವನು ಪರಮಾತ್ಮನಲ್ಲಿ ಪೃಥವಾಗಿ ಚಿತ್ತವನ್ನು ಇಟ್ಟಿರುವನೊ, ಯಾವನು ತನ್ನ ಎಲ್ಲ ಕೆಲಸಗಳನ್ನು ಪರಮೇಶ್ವರನಿಗೆ ಅರ್ಪಿಸಿರುವನೊ ಅವನಿಗೆ ಸಂತಾಪ, ಅಸಂತೋಷದ ಬಾಧೆಯಾಗುವ ಅಂಜಿಕೆಯು ಇಲ್ಲ. ಆತನು ಶಾಂತ, ಗಂಭೀರ, ಪ್ರಸನ್ನಮುದ್ರೆಯವನಾಗಿರುವನು

ಇಂತಹ ಧೀರಗಂಭೀರವೃತ್ತಿಯುಳ್ಳವನಾಗಿ ಹೋರೆ, ಹೋರಟೆಯನ್ನು ಕೈಕೊಂಡವನಿಗೆ ಆತನ ಕರ್ಮದ ಯಾವ ದೋಷವೂ ತಟ್ಟದು ಇಂತಹನಿಂದ ಲೋಕಸಂಗ್ರಹ ಕಾರ್ಯವು ಸೊಗಸಾಗಿ ಸಾಗುವದು ಲೋಕವನ್ನು ಈತನು ಪೂಜಿಸುವನು. ಲೋಕಕ್ಕೆ ಈತನು ಪೂಜ್ಯನಾಗುವನು.

ಈ ಬಗೆಯಾಗಿ ಕೆಲಸಗಳನ್ನು ನೆರವೇರಿಸುವುದರಿಂದಾಗುವ ಲಾಭವನ್ನು ಮುಂದಿನ ಶ್ಲೋಕದಲ್ಲಿ ಹೇಳಿದೆ.

(೩೧-೩೨) ಈ ಲೋಕದಲ್ಲಿ ಪರಿಪೂರ್ಣವಾದುದು ಯಾವುದೂ ಇಲ್ಲ. ಗುಣಗಳೊಡನೆ ಕೆಲವೊಂದು ಅನಿವಾರ್ಯವಾದ ಕೊರತೆಗಳೂ ನೆಳಲಿನಂತೆ ಹಿಂಬಾಲಿಸುತ್ತವೆ. ಒಂದು ಬಗೆಯ ತತ್ವಜ್ಞಾನವನ್ನು ಒಪ್ಪಿ ಸ್ವೀಕರಿಸುತ್ತಲೆ ಅದರ ಕೆಲವೊಂದು ಕೊರತೆಗಳು ಕಾಣಲಾರಂಭಿಸುತ್ತವೆ. ಇಂತಹ ಸಂದರ್ಭದಲ್ಲಿ ಶ್ರದ್ಧೆಯ ಬೆಂಬಲ ಪಡೆದು ಮುನ್ನಡೆಯುವವರಾಗಬೇಕು. ಕೇವಲ ದೋಷೈಕದೃಷ್ಟಿಯ ಹೊಟ್ಟೆಕಿಚ್ಚಿನವರಿಗೆ ಯಾವ ಜ್ಞಾನವೂ ಲಭಿಸದು. ಹೊಟ್ಟೆಕಿಚ್ಚಿಲ್ಲದ ಸಹಾನುಭೂತಿಯಿಂದ— ಶ್ರದ್ಧೆ-ವಿಶ್ವಾಸಗಳಿಂದ ನನ್ನ ಮಾತನ್ನು ಅನುಸರಿಸಿದಲ್ಲಿ

## (೧೨) ಪ್ರಕೃತಿ ಸ್ವಭಾವ.

**ಸದೃಶ ಚೇಷ್ಟತೇ ಸ್ವಸ್ಯಾಃ ಪ್ರಕೃತೇರ್ಜ್ಞಾನವಾನಪಿ ।**
**ಪ್ರಕೃತಿಂ ಯಾಂತಿ ಭೂತಾನಿ ನಿಗ್ರಹಃ ಕಿಂ ಕರಿಷ್ಯತಿ ॥ ೩೩ ॥**

**ಅನ್ವಯ :—** ಜ್ಞಾನವಾನ್ ಅಪಿ ಸ್ವಸ್ಯಾಃ ಪ್ರಕೃತೇಃ ಸದೃಶಃ ಚೇಷ್ಟತೇ । ಭೂತಾನಿ ಪ್ರಕೃತಿಂ ಯಾಂತಿ। ನಿಗ್ರಹಃ ಕಿಂ ಕರಿಷ್ಯತಿ ॥ ೩೩ ॥

**ತಿಳಿದವನೂ ತನ್ನ ಸ್ವಭಾವದಂತೆಯೆ ನಡೆದುಕೊಳ್ಳುತ್ತಾನೆ. ಎಲ್ಲ ಪ್ರಾಣಿಗಳು ತಮ್ಮ ಪ್ರಕೃತಿ-ಗುಣಕ್ಕನುಸರಿಸಿಯೇ ನಡೆಯುತ್ತವೆ. ಆ ಸಂದರ್ಭದಲ್ಲಿ ಏನು ತಡೆಹಿಡಿಯುವವನು ?**

**ಭಾವಾರ್ಥ :—** ಪ್ರತಿಯೊಂದು ಜೀವಿಯೂ ತನ್ನ ಸ್ವಭಾವಕ್ಕನುಸರಿಸಿ ನಡೆಯುತ್ತದೆ. ಅದೇಕೆ ತಿಳಿದವರು ಕೂಡ ಹೀಗೆಯೇ, ಎಂದಬಳಿಕ ಅಲ್ಲಿ ಬಲದಿಂದ ಅಥವಾ ಒತ್ತಾಯದಿಂದ ತಡೆಹಿಡಿಯುವುದು ಹೇಗೆ ?

ಜೀವನದಲ್ಲಿ ಕಲ್ಯಾಣವಾಗದೆ ಇರಲಾರದೆಂದು ಶ್ರೀಕೃಷ್ಣನು ಇಲ್ಲಿ ಹೇಳಿದ್ದಾನೆ.

ತರ್ಕಕ್ಕೆ ಕೊನೆಮೊದಲಿಲ್ಲ. ಕೇವಲ ತರ್ಕದಿಂದ ಮನಃಶಾಂತಿ ಸಿಕ್ಕಲಾರದು. 'ನ ಏಷಾ ತರ್ಕೇಣ ಮತಿಃ ಆಪನೇಯಾ' ಎಂದು ಉಪನಿಷತ್ತು ಹೇಳಿದೆ. ಬರಿಯ ತರ್ಕ-ಸಂದೇಹಗಳ ದಾರಿಯಲ್ಲಿ ಸಾಗಿ ಯಾರೂ ಗತಿಗಾಣರು 'ಸಂಶಯಾತ್ಮಾ ವಿನಶ್ಯತಿ' ಎಂಬುದೇ ಸರಿ.

ಆದಕಾರಣ ('ಶ್ರದ್ಧಾವಂತಃ ಅನಸೂಯಂತಃ') ಶ್ರದ್ಧೆಯುಳ್ಳವನೂ ಸಹಾನುಭೂತಿಯಿಂದ ಯುಕ್ತನೂ ಆಗಬೇಕು. ಬುದ್ಧಿಯೋಗಿಯಾಗಿ ಈ ದಾರಿಯಿಂದ ಮುಂದುವರಿದವರು ಹಾನಿಗೆ ಎಂದೆಂದೂ ಈಡಾಗಲಾರರು.

'ಅಸೂಯಂತಃ' ಎಂದರೆ ಅಸೂಯೆ, ಹೊಟ್ಟೆಕಿಚ್ಚಿನವರು. ಇವರು, ಇನ್ನೊಬ್ಬರ ಗುಣಗಳನ್ನು ಕಂಡು ಮೆಚ್ಚಿ ಹಿಗ್ಗರು. ಹೆರವರ ಕೊರತೆಗಳನ್ನೆ ಯಾವಾಗಲೂ ಹುಡುಕುವರು. ಇದು ಕೆಡುಕಿನ ದಾರಿ. ಕೇಡಿಗಳ ದಾರಿ ಇದರಿಂದ ಯಾರ ಹಿತವೂ ಸಾಧಿಸಲಾರದು. ಯಾವಾಗಲೂ ಗುಣೈಕದೃಷ್ಟಿಯುವರಾಗಿರಬೇಕು. ಹೆರವರೊಳಗಿನ ಒಳ್ಳೆಯ ಗುಣಗಳನ್ನೂ ಅರಿತು ಅವನ್ನು ತಮ್ಮಲ್ಲಿ ಅಳವಡಿಸಿಕೊಳ್ಳುವ ಹಂಬಲವುಳ್ಳವರಾಗಿರಬೇಕು. ಮನುಷ್ಯನು ಯಾವಾಗಲೂ ಯಾವುದನ್ನು ನೆನೆಯುವನೊ ಅದೇ ಅವನಾಗುವನು. ಆದಕಾರಣ ಯಾವಾಗಲೂ ಒಳ್ಳೆಯದನ್ನೆ ನೆನೆಯಬೇಕು. ಒಳ್ಳೆತನ್ನೆ ಮಾಡಬೇಕು ಹೊಲಸು ಹೇಸಿ ವಿಚಾರಗಳು ಸತತವಾಗಿ ತಲೆಯಲ್ಲಿ ಓಡಾಡುವವರ ದೃಷ್ಟಿಯು ಪವಿತ್ರವಾಗಿ ಉಳಿಯಲಾರದು. ಅಪವಿತ್ರ ದೃಷ್ಟಿಯವರಿಗೆ ಯಾವ ಜ್ಞಾನವೂ ಲಭಿಸದು. ಜ್ಞಾನವಿಹೀನನಿಗೆ ಈ ಲೋಕದಲಾಗಲಿ, ಪರಲೋಕದಲ್ಲಾಗಲಿ ದುರ್ಗತಿಯು ತಪ್ಪುವುದಿಲ್ಲ

ಅಸೂಯೆ ಹೊಟ್ಟೆಕಿಚ್ಚಿನವರು 'ಅಹಂಕಾರವಿಮೂಢ'-ರಾಗಿರುತ್ತಾರೆ. ಇವರಿಗೆ 'ಸರ್ವಜ್ಞಾನವಿಮೂಢ'ರೆಂದೂ ಹೆಸರು ಧರ್ಮಸಂಮೂಢರೂ ಇವರೇ ಆದಕಾರಣ ಇವರು ಶ್ರೀಕೃಷ್ಣನು ಹೇಳಿದಂತೆ ದೋಷೈಕ ದೃಷ್ಟಿ-ಯುವರಾಗಿ ಕೇವಲ ಕೊರತೆಗಳನ್ನೇ ನೆನೆದು ಗುಣಗಳನ್ನು ಮರೆತು (ಯೇ ತು ಅಭ್ಯಸೂಯಂತಃ), ವಿಪರೀತ ವೃತ್ತಿಯುವರಾಗುತ್ತಾರೆ. (ಮೆ ಮಂತಂ ನ ಅನುತಿಷ್ಠಂತಿ) ಅವರು ಬಹಳ ತಿಳಿದವರಾಗಿದ್ದರೂ ಅದು ಕೇವಲ ತರ್ಕಜ್ಞಾನ. ಅನುಭೂತಿ ಇದ್ದವರಲ್ಲ. ಆದುದರಿಂದ ಅವರು 'ಸರ್ವ-ಜ್ಞಾನ-ವಿಮೂಢ'ರೆಂದು ಗೀತೆಯು ಹೇಳಿದ್ದು ತೀರ ಉಚಿತವಾಗಿದೆ

ಎಷ್ಟೇ ತಿಳಿದವನಾದರೂ ಮನುಷ್ಯನಿಗೆ ಆತನ ಪ್ರಕೃತಿ ಸ್ವಭಾವವು ಬೆನ್ನು ಬಿಡದು. ಆದಕಾರಣ ಬರಿ ತಿಳಿವು ಸಾಲದು ಪ್ರಕೃತಿ ಸ್ವಭಾವದಲ್ಲಿಯೆ ಬದಲಾಗಬೇಕು.

(೩೩) ವ್ಯಕ್ತಿಗಳಿದ್ದಷ್ಟು ಪ್ರಕೃತಿಗಳು. ಹುಲಿ ಸಿಂಹ-ಮೊದಲಾದುವು ಹಿಂಸ್ರ ಪಶುಗಳು. ಜಿಂಕೆ ಆವು ಆಡು ಮೊದಲಾದುವು ಹುಲು ಜೀವಿಗಳು. ಕೆಲವು ನೀರಿನಲ್ಲಿ, ಕೆಲವು ನೆಲದಲ್ಲಿ ವಾಸವಾಗುವುವು

ಮಾನವರಲ್ಲಿಯೂ ಹಲವು ಬಗೆಗಳು ಕೆಲರಿಗೆ ಶಾಂತಿಯು ಬೇಕಿದರೆ, ಕೆಲರಿಗೆ ಗೋಜಿ ಹೊಡೆದಾಟಗಳು ಬೇಕು. ಹಲರಿಗೆ ದುಡ್ಡು ಕೂಡಿಹಾಕುವ ಹುಚ್ಚು.

ಕೆಲರಿಗೆ ಹೇಳಿದಷ್ಟು ಕೇಳಿ ಹೊಟ್ಟೆ ಹೊರಕೊಂಬುದ-ಕ್ಕಿಂತ ಹೆಚ್ಚಿನ ಹುಮ್ಮಸವೇ ಜೀವನದಲ್ಲಿರುವುದಿಲ್ಲ. ಇಂತಿವರೆಲ್ಲರೂ ತಮ್ಮ ತಮ್ಮ ಸ್ವಭಾವಕ್ಕನುಸರಿಸಿ ಕೆಲಸಗಳನ್ನು ಕೈಕೊಂಡು ಜೀವನವೃತ್ತಿಯನ್ನು ಸಾಗಿಸುತ್ತಿರುತ್ತಾರೆ.

### ಸ್ವ-ಭಾವ

'ಸ್ವ-ಭಾವ' ಎಂಬಲ್ಲಿ 'ಸ್ವ' ಎಂದರೆ ತನ್ನ, 'ಭಾವ' ಎಂದರೆ ಹುಟ್ಟು; ಹುಟ್ಟಿನಿಂದ ಆದ ಭಾವ, ಇರವು; ಹುಟ್ಟುಗುಣ ಎಂದು ಅರ್ಥವಿದೆ. ಹುಟ್ಟುಗುಣವು ಗಟ್ಟಹತ್ತಿದರೂ ಬಿಡದು ಎಂಬ ಗಾದೆಯಿದೆ. ಇದರಿಂದ ಪ್ರಕೃತಿಸ್ವಭಾವವು ಎಷ್ಟು ದೃಢವಾದುದು ಎಂಬ ಮಾತು ಗೊತ್ತಾಗುತ್ತದೆ. ತುಂಬ ಕಷ್ಟಪಟ್ಟು ಕೆಲವೊಂದು ಬದಲಾವಣೆಗಳನ್ನು ಮಾಡಿಕೊಳ್ಳಬಹುದು. ವಿಶ್ವಾಮಿತ್ರನು ಕ್ಷತ್ರಿಯ ಪ್ರಕೃತಿಯಿಂದ ಬ್ರಾಹ್ಮವೃತ್ತಿಯವನಾಗಲು ಬದ್ಧಪ್ರತಿಜ್ಞನಾಗಿ, ಘೋರತಪಸ್ಸನ್ನಾಚರಿಸಿದನು. ಆದರೂ ನಡನಡುವೆ ಆತನ ವೀರವೃತ್ತಿಯು ತಲೆಯೆತ್ತಿ ಆತನನ್ನು ಬೇಗ ಬೇರೆ ದಾರಿಗೆ ಒಯ್ಯುತ್ತದ್ದಿ-ತೆಂಬುದನ್ನು ಪುರಾಣಾಂತರದ ಕತೆಗಳಿಂದ ಕಂಡು-ಕೊಳ್ಳಬಹುದಾಗಿದೆ.

ಅರ್ಜುನನು ಹುಟ್ಟು ವೀರನು. ಆತನಿಗೆ ಕ್ಷಣಿಕ ವೈರಾಗ್ಯವು ತಲೆದೋರಿ, ಆತನು ಹೋರಾಟದಿಂದ ಹಿಂದಿರುಗುವ ಯೋಚನೆಯುಳ್ಳವನು. ಆದರೆ ಅದು ಅರಗಳಿಗೆಯ ಮಟ್ಟಿಗೆ ಮಾತ್ರ ಆಗಬಹುದಾದ ಮಾತಾ-ಗಿತ್ತು. ಏಕೆಂದರೆ ಆತನ ಹುಟ್ಟುಗುಣವು ಆತನನ್ನು ಸುಮ್ಮನೆ ಕಣ್ಣುಮುಚ್ಚಿ ಧ್ಯಾನಾಸಕ್ತನಾಗಿ ಇರಗೊಡು-ತ್ತಿದ್ದಿಲ್ಲ. ಈ ಕಾರಣದಿಂದಲೇ ಶ್ರೀಕೃಷ್ಣನು ಆತನಿಗೆ ಹೇಳಿದ್ದೇನೆಂದರೆ

> ಅಥ ಚೇತ್ ತ್ವಮ್ ಅಹಂಕಾರಾತ್ ನ
> ಶ್ರೋಷ್ಯಸಿ ವಿನಂಕ್ಷ್ಯಸಿ ॥ ೫೮ ॥
> ಯತ್ ಅಹಂಕಾರಮ್ ಆಶ್ರಿತ್ಯ ನ ಯೋತ್ಸ್ಯ
> ಇತಿ ಮನ್ಯಸೇ ।
> ಮಿಥ್ಯೈಷ ವ್ಯವಸಾಯಃ ತೇ ಪ್ರಕೃತಿ-ಸ್ತ್ವಾಂ
> ನಿಯೋಕ್ಷ್ಯತಿ ॥ ೫೯ ॥
> ಸ್ವಭಾವಜೇನ ಕೌಂತೇಯ ನಿಬದ್ಧಃ ಸ್ವೇನ
> ಕರ್ಮಣಾ ।
> ಕರ್ತುಂ ನ ಇಚ್ಛಸಿ ಯತ್ ಮೋಹಾತ್
> ಕರಿಷ್ಯಸಿ ಅವಶೋಽಪಿ ತತ್ ॥ ೬೦ ॥
>
> ಭ. ಗೀ. ಅ. ೧೮

"ನೀನು ಅಹಂಕಾರದಿಂದ ನನ್ನ ಮಾತನ್ನು ಕೇಳದಿ-ದ್ದರೆ ನೀನು ನಾಶಹೊಂದುವೆ. 'ನಾನು ಕಾದಲಾರೆ' ಎಂದು ನೀನು ಅಹಂಕಾರದಿನದ ಭಾವಿಸಿದರೆ, ಅದು ನಿನ್ನ ಹುರುಳಿಲ್ಲದ ನಿಶ್ಚಯವಾಗಿದೆ. ನಿನ್ನ ಸ್ವಭಾವವು ನಿನ್ನನ್ನು ಕಾದಹಚ್ಚುವುದು. ಎಲೈ ಕುಂತೀಪುತ್ರನೆ, ಹುಟ್ಟುಗುಣದಿಂದ ಬಿಗಿಯಲ್ಪಟ್ಟ ನೀನು, ಅದನ್ನು ಮೋಹದಿಂದ ಮಾಡಲಾರೆನೆಂದರೂ ನಿನಗರಿಯದಲೆಯೆ ನೀನದನ್ನು ಕೈಕೊಳ್ಳುವೆ!"

ತನ್ನನ್ನು ತಾನು ಅರಿಯಬೇಕೆಂಬುದು ಇದಕ್ಕಾ-ಗಿಯೇ. ತನ್ನ ಮೂಲ ಗುಣಗಳು ಯಾವುವು ಎಂಬು-ದನ್ನು ಚೆನ್ನಾಗಿ ಬಿಡಿಬಿಡಿಯಾಗಿ ಅರಿತುಕೊಂಡಿದ್ದರೆ ಆತನಿಂದ ಅನ್ಯಥಾ ಆಚರಣೆಯಾಗುವ ಸಂಭವವು ಕಡಿಮೆ. ಸ್ವಭಾವಧರ್ಮಕ್ಕನುಸರಿಸಿ ತನ್ನ ಪಾಲಿಗೆ ಬಂದ ಕರ್ತವ್ಯವನ್ನು ಪ್ರತಿಯೊಬ್ಬರೂ ನೆರವೇರಿಸಲೇಬೇಕು. ಅದನ್ನು ಬಿಟ್ಟುಬಿಡುವೆನೆಂಬುದು ಕೇವಲ ಭ್ರಮೆ, ಆತ್ಮವಂಚನೆ. ಏಕೆಂದರೆ, ಮೇಲ್ನೋಟಕೆಯಲ್ಲಿ ಹಾಗೆ ಅದನ್ನು ತಾನು ಬಿಟ್ಟೆನೆಂದೆನಿಸಿದರೂ ತನಗರಿಯದಲೆಯೆ ಅತ್ತಕಡೆಗೆ ಸೆಳೆಯಲ್ಪಡುವನು ಮತ್ತು ಆ ಸ್ವಭಾವವು ಪಲೆಯೆತ್ತಿ ಆತನಿಂದ ಅದನ್ನು ಮಾಡಿಸದೆ ಬಿಡುವುದಿಲ್ಲ. ಆದಕಾರಣ ವೀರವೃತ್ತಿಯ ಅರ್ಜುನನೇ ನೀನು ಕಾದಲಾರೆನೆಂದು ಈಗ ಹೇಳುವುದೆಲ್ಲವೂ ಭ್ರಮೆ. ನಿನ್ನ ಸ್ವಭಾವವು ನಿನಗೆ ಬಿಟ್ಟದ್ದಲ್ಲ; ಎಂದು ಶ್ರೀಕೃಷ್ಣನು ಆತನಿಗೆ ತಿಳಿಸಿ ಹೇಳುತ್ತಿದ್ದಾನೆ.

> 'ಜ್ಞಾನವಾನ್ ಅಪಿ ಸ್ವಸ್ಯಾಃ ಪ್ರಕೃತೇಃ
> ಸದೃಶಂ ಚೇಷ್ಟತೇ ।"

ತಿಳಿದವರು ಕೂಡ ತಮ್ಮ ಪ್ರಕೃತಿಸ್ವಭಾವವನ್ನು ಮೀರಿ ನಡೆಯಲಾರರು

> ಕೃಷ್ಣೋ ಭೋಗೀ, ಶುಕಃ ತ್ಯಾಗೀ, ರಾಜಾನೌ
> ಜನಕರಾಘವೌ ।
> ವಸಿಷ್ಠಃ ಕರ್ಮಕರ್ತಾ ಚ ಪಂಚೈತೇ
> ಜ್ಞಾನಿನಃ ಸ್ಮೃತಾಃ ।
>
> ಜೀವನ್ಮುಕ್ತಿ ವಿವೇಕ

"ಕೃಷ್ಣನು ಭೋಗಿಯಾಗಿದ್ದನು; ಶುಕನು ತ್ಯಾಗಿಯು; ಜನಕನೂ ರಾಮಚಂದ್ರನೂ ಅರಸರು; ವಸಿಷ್ಠನು ಕರ್ಮನಿಷ್ಠನು; ಆದರೂ ಹೀಗೆ ಇವರು ಐವರೂ ಜ್ಞಾನಿಗಳು." ತಮ್ಮ ತಮ್ಮ ಪ್ರಕೃತಿಧರ್ಮಕ್ಕನುಸರಿಸಿ ಕರ್ಮನಿರತರಾಗಿದ್ದರು. ಜಡಭರತನು ನಿಷ್ಕ್ರಿಯನಾ-ಗಿದ್ದನು. ವೃಕ್ಷವು ಒಂದಿಯ ಕೆಳಗೆಬಿದ್ದಿರುತ್ತಿದ್ದನು.

ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ |
ತಯೋರ್ನ ವಶಮಾಗಚ್ಛೇತ್ತೌ ಹ್ಯಸ್ಯ ಪರಿಪಂಥಿನೌ || ೩೪ ||

---

**ಅನ್ವಯಃ—** ಇಂದ್ರಿಯಸ್ಯ ಅರ್ಥೇ ಇಂದ್ರಿಯಸ್ಯ ರಾಗದ್ವೇಷೌ ವ್ಯವಸ್ಥಿತೌ, ತಯೋಃ ವಶಂ ನ ಆಗಚ್ಛೇತ್ ತೌ ಹಿ ಅಸ್ಯ ಪರಿಪಂಥಿನೌ || ೩೪ ||

**ಇಂದ್ರಿಯಗಳ ವಿಷಯಗಳಲ್ಲಿ ಇಂದ್ರಿಯಗಳ ರಾಗದ್ವೇಷವು ನಿಶ್ಚಿತವಾಗಿವೆ. ಅವುಗಳ ಅಂಕೆಯಲ್ಲಿ ಹೋಗಬಾರದು. ಅವು ಈತನ ( ಮನುಷ್ಯನ ) ಹಗೆಗಳಾಗಿವೆ.**

**ಭಾವಾರ್ಥ:—** ಪ್ರತಿಯೊಂದು ಇಂದ್ರಿಯಕ್ಕೆ ಆಕರ್ಷಕವಾದ ಅಥವಾ ತಿರಸ್ಕಾರವನ್ನುಂಟು ಮಾಡುವ ವಿಷಯಗಳು ನಿಶ್ಚಿತವಾಗಿವೆ. ಇಷ್ಟ ವಿಷಯದಲ್ಲಿ ಪ್ರೀತಿಯೂ ಬೇಡವಾದುದರಲ್ಲಿ ಬೇಸರವೂ ಇಂದ್ರಿಯಗಳಿಗೆ ಉಂಟೆಂಬುದು ಎಲ್ಲರ ಅನುಭವದ ಸಂಗತಿಯಾಗಿದೆ. ತಿಳಿದವರು ಈ ಪ್ರೀತಿ ಬೇಸರಗಳ ಎಳೆದಾಟಕ್ಕೆ ಸಿಕ್ಕಿ ಬೀಳಬಾರದು. ಏಕೆಂದರೆ ಈ ರಾಗದ್ವೇಷಗಳು ಹಗೆಗಳಾಗಿವೆ. ಹಗೆಗಳ ಕೈಯಲ್ಲಿ ಬೀಳುವುದು ಭೂಷಣವಲ್ಲ. ||೩೪||

---

ವ್ಯಾಸನು ಜ್ಞಾನದಾನದಲ್ಲಿ ಮಗ್ನನು. ದುರ್ವಾಸನು ಉಗ್ರಸ್ವಭಾವದವನು. ವಾಮದೇವನು ಶಾಂತನು; ನಾರದನು ನಾಡಿನಲ್ಲಿ ಚಳವಳಗಾರನು. ಇಂತಿವರೆಲ್ಲ ತಿಳಿದವರಾದರೂ ತಮ್ಮ ಸ್ವಭಾವದಿಂದ ಬದ್ಧರೇ ಆಗಿದ್ದರು

ಸ್ವಭಾವಧರ್ಮವನ್ನು ಮೀರಿ ವಿಪರೀತವಾಗಿ ನಡೆವ ಹಟವು ಹಾನಿಗೆ ಈಡುಮಾಡುವುದು. ಹೊಸದಾಗಿ ಕೈಕೊಂಡುದೂ ಕೈಗೂಡದು. ಮೊದಲಿನ ಸ್ವಭಾವದಂತೆ ಮಾಡುವುದನ್ನಂತೂ ಮೊದಲೆ ಬಿಟ್ಟಿರುವನು. ಇಂತಹರ ಪಾಡು ವಿಚಿತ್ರವಾಗುತ್ತದೆ.

ಸ್ವಭಾವಧರ್ಮವನ್ನು ತಡೆದುಹಿಡಿಯುವುದರಿಂದ ಆಗಬೇಕಾದುದೇನು ? (ನಿಗ್ರಹಃ ಕಿಂ ಕರಿಷ್ಯತಿ?, ಎಂಬುದರಿಂದ ಸಂಯಮಮಾಡಬಾರದೆಂದು ಹೇಳಿದಂತೆ ಎಂದು ಭಾವಿಸಬಾರದು. ಇಂದ್ರಿಯ ದಮನದ ವಿಚಾರವು ಗೀತೆಯಲ್ಲಿ ಹಲವೆಡೆಗೆ ಬಂದಿದೆ (ಗೀ. ೨:೬೧;೬೪;೬೮; ಮುಂತಾದುವು). ಎಲ್ಲ ಇಂದ್ರಿಯಗಳನ್ನು ನಿಗ್ರಹಿಸಿ ಯೋಗಿಯು ನನ್ನಲ್ಲಿ ತನ್ಮಯನಾಗಬೇಕು. ಇಂದ್ರಿಯಗಳನ್ನು ಅಂಕೆಯಲ್ಲಿರಿಸಿದವನು ಸ್ಥಿತಪ್ರಜ್ಞನಾಗುವನು ಇಂದ್ರಿಯ ಸಂಯಮಿಯೂ, ರಾಗದ್ವೇಷರಹಿತನೂ ಆದವನು ಇಂದ್ರಿಯಗಳಿಂದ ಕೆಲಸಮಾಡಿಸಿಕೊಳ್ಳುವಾಗಲೂ ಪ್ರಸನ್ನತೆಯ ಸುಖವನ್ನು ಪಡೆಯುವನು' ಎಂದು ಮುಂತಾದ ಇಂದ್ರಿಯ ದಮನದ ಮಹತ್ವವನ್ನು ಸ್ಪಷ್ಟವಾಗಿ ವಿವರಿಸಿದೆ

ಆದರೆ ಸಂಯಮವೆಂದು ಸಹಜ ಪ್ರಕೃತಿಧರ್ಮಗಳನ್ನು ವಿರೋಧಿಸುವ ಹಟವನ್ನು ಯಾರಾದರೂ ಹಿಡಿಯುತ್ತಿದ್ದರೆ ಅಂತಹರ ವಿಚಾರಗಳನ್ನು ಖಂಡಿಸಲು ಮೇಲಣ ಮಾತನ್ನು (ನಿಗ್ರಹಃ ಕಿಂ ಕರಿಷ್ಯತಿ ?) ಮಾತು ಹೇಳಿದ್ದಾಗಿದೆ ಸಹಜಧರ್ಮವನ್ನು— ಮೂಲಪ್ರವೃತ್ತಿಗಳನ್ನೇ ಕೊಡೆದು ಹಾಕುವ ಅಟ್ಟಹಾಸವು ಎಂದೆಂದೂ ಸಾಧ್ಯವಾಗಲಾರದೆಂದು ಇಲ್ಲಿ ಗೀತೆಯು ಹೇಳುತ್ತಿದೆ

(೩೪) ಒಂದೊಂದು ಇಂದ್ರಿಯದ ವಿಷಯವು ಒಂದೊಂದು ನಿಶ್ಚಿತವಾಗಿದೆ. ಕಿವಿಗೆ ಶಬ್ದ ವಿಷಯ. ಕಣ್ಣಿಗೆ ರೂಪ; ನಾಲಗೆಗೆ ರಸ, ಮೂಗಿಗೆ ಗಂಧ, ತೊಗಲಿಗೆ ಸ್ಪರ್ಶ ಸಿಹಿಯು ಸೇರುವುದು. ಕಹಿಯು ಬೇಡವಾಗುವುದೂ ಇದರಂತೆಯೆ ನಿಶ್ಚಿತ ಮಾತು. ಹೀಗಿದು ಇಂದ್ರಿಯ ಮತ್ತು ಅವರ ವಿಷಯಗಳ ವ್ಯವಸ್ಥೆಯಿದೆ

ಜ್ಞಾನಿಗೂ ಅಜ್ಞಾನಿಯಂತೆ ಸೌಂದರ್ಯದಿಂದ ಸೊಗಸೂ, ಕುರೂಪತೆಯಿಂದ ಅಸಮಾಧಾನವೂ ಆಗುವುದು ನಿಜ. ಸಾಧುವಾದರೂ ಆತನಿಗೆ ಸಿಹಿಯು ಕಹಿಯಾಗಿ ಕಹಿಯು ಸಿಹಿಯಾಗಿ ಇರಲಾರದು ಸಾಮಾನ್ಯ ಮನುಷ್ಯನು ಮತ್ತು ಸಾಧುವಿನಲ್ಲಿ ಅಂತರವು ಅವರ ನಡೆವಳಿಯಲ್ಲಿದೆ ಸಿಹಿ ಮತ್ತು ಕಹಿಗಳೆರಡಕ್ಕೂ ಹಿಗ್ಗದೆ ಜಗ್ಗದೆ ಸಾಧುವು ತನ್ನ ಹಾದಿಗುಂದಿಯುತ್ತ ಸಾಗುವನು. ಸಾಮಾನ್ಯನು ಈ ಸಿಹಿ ಕಹಿಗಳ ಸುಖದುಃಖಗಳ ದ್ವಂದ್ವದಲ್ಲಿಯೆ ಗುಟಕರಿಸುತ್ತ ಹೊರಳಾಡುವನು ರಾಗದ್ವೇಷಗಳು ಸಾಮಾನ್ಯರನ್ನು ಬಂಧಿಸಿಡುವುವು. ಸಾಧುವು ಅವುಗಳಲ್ಲಿ ಕೊಡಕಿಕೊಳ್ಳದೆ ಮುಂದರಿಯುವನು

## ಆಧಿ ದೈವಿಕ ದೃಷ್ಟಿ

ಶ್ರೇಯಾನ್ ಸ್ವಧರ್ಮೋ ವಿಗುಣಃ ಪರಧರ್ಮಾತ್ ಸ್ವನುಷ್ಠಿತಾತ್ ।
ಸ್ವಧರ್ಮೇ ನಿಧನಂ ಶ್ರೇಯಃ ಪರಧರ್ಮೋ ಭಯಾವಹಃ ॥ ೩೫ ॥

---

**ಅನ್ವಯ:**— ಸ್ವನುಷ್ಠಿತಾತ್ ಪರಧರ್ಮಾತ್ ಸ್ವಧರ್ಮಃ ವಿಗುಣಃ (ಅಪಿ) ಶ್ರೇಯಾನ್ । ನಿಧನಂ ಶ್ರೇಯಃ । ಪರಧರ್ಮಃ ಭಯಾವಹಃ ॥ ೩೫ ॥

**ಸುಖವಾಗಿ ಅನುಸರಿಸಬಹುದಾದ ಪರಧರ್ಮಕ್ಕಿಂತಲೂ ಗುಣರಹಿತವಾದರೂ ತನ್ನ ಧರ್ಮವೇ ಲೇಸಾದುದು. ಸ್ವಧರ್ಮದಲ್ಲಿ ಸಾಯುವುದು ಲೇಸು. ಪರಧರ್ಮವು ಭೀಕರವಾಗಿದೆ**

**ಭಾವಾರ್ಥ:**— ತನ್ನ ಧರ್ಮವು ಗುಣವಿಹೀನವಾಗಿದ್ದು ಕಷ್ಟಕರವಾಗಿದ್ದರೂ ಅದನ್ನು ಬಿಡಲಾಗದು. ಹೆರವರದು ಎಷ್ಟೋ ಸುಖಕರವೂ, ಗುಣಯುಕ್ತವೂ ಆಗಿದ್ದರೂ ಅದಕ್ಕೆ ಆಸೆಪಡಲಾಗದು. ಏನೇ ಆದರೂ ತನ್ನದೇ ತನಗೆ ಶ್ರೇಯಸ್ಕರವಾದುದು. ಕೊನೆಯ ವರೆಗೂ ತನ್ನ ಧರ್ಮವನ್ನು ಬಿಡದೆ ಅದರಲ್ಲಿಯೆ ಮಡಿಯುವುದು ಲೇಸು. ಹೆರವರ ಧರ್ಮವು ಗಂಡಾಂತರಕ್ಕೆ ಕಾರಣವಾದುದಾಗಿದೆ. ॥ ೩೫ ॥

---

ರಾಗದ್ವೇಷಗಳು ಮಾನವನ ವೈರಿಗಳಾಗಿವೆ. ಅವು 'ಪರಿಪಂಥಿ' ಎಂದರೆ ಹಾದಿಗಳ್ಳರು 'ದಾರಿಗಳ್ಳರ' ತೆರನಾಗಿರುತ್ತವೆ. ಮಾನವನ ಪಯಣದ ದಾರಿಯಲ್ಲಿ ಅಡಗಿ ಇಲ್ಲವೆ ಗೆಳೆಯನ ಸೋಗಿನಲ್ಲಿ ಕೂಡಿ ನಡೆದು ಥಕ್ಕನೆ ಮೋಸಗೊಳಿಸುವವು. ವಿಷಯ ಸುಖಗಳು ಮೊದಲು ಸರಿಯೆನಿಸಿ ಕೊನೆಗೆ ಕಹಿಗೆ ಕಾರಣವಾಗುವಂತೆ ರಾಗ ದ್ವೇಷಗಳ ಕೈಯಲ್ಲಿ ಸಿಲುಕಿ ಅಜ್ಞಾನಿಗಳು ಬಲಿಗೀಡಾಗುವರು. ತಿಳಿದವರು ಇದರ ಹಿಡಿತದಲ್ಲಿ ಸಿಲುಕದೆ ದೂರದಿಂದಲೆ ಇವರ ಆಟಗಳನ್ನು ನಿರೀಕ್ಷಿಸುವರು. ಇದರಿಂದ ಜ್ಞಾನಿಗಳು ಆತ್ಮಾನಂದಕ್ಕೆ ಎಂದೂ ಎರವಾಗಬೇಕಾಗುವುದಿಲ್ಲ.

ಸುಖದ ಆಸೆಯಿಂದ ಹೀನಮಾರ್ಗವನ್ನು ಅನುಸರಿಸುವುದೂ, ಕಷ್ಟಕ್ಕೆ ಹೆದರಿ ನ್ಯಾಯಮಾರ್ಗವನ್ನು ಬಿಡುವುದೂ ಕಲ್ಯಾಣಕಾರಕವಲ್ಲ, ಎಂಬುದೇ ಶ್ರೀಕೃಷ್ಣನ ಉಪದೇಶವಾಗಿದೆ. ಇದನ್ನೇ ಇನ್ನಷ್ಟು ಸ್ಪಷ್ಟಗೊಳಿಸಿ ಶ್ರೀಕೃಷ್ಣನು ಮುಂದೆ ಹೇಳುವುದೇನೆಂದರೆ:

ಒಬ್ಬೊಬ್ಬರಿಗೆ ಒಂದೊಂದು ಹುಟ್ಟು ಕರ್ತವ್ಯವು ಇರುತ್ತದೆ. ಅದುವೆ ಅವರ ಧರ್ಮ-ಸ್ವಧರ್ಮ. ಬೆಂಕಿಯ ಧರ್ಮ ಬೇಯಿಸುವುದು; ನೀರಿನದು ತಣಿಸುವುದು; ಇಂತೀ ಸ್ವಧರ್ಮವನ್ನು ತೊರೆದರೆ ಅವಕ್ಕೂ ಹಾನಿ; ಲೋಕಕ್ಕೂ ಅಹಿತ. ಇಂತೀ ಒಗೆಯಾದ ಸ್ವಧರ್ಮವನ್ನು ಬಿಟ್ಟು ಪರಧರ್ಮಕ್ಕೆ ಹಾತೊರೆದರೆ ಅದು ಹಾನಿಗೆ ಕಾರಣವಾಗುವಲ್ಲಿ ಸಂದೇಹವೇ ಇಲ್ಲ.

### ಆಧ್ಯಾತ್ಮಿಕ ದೃಷ್ಟಿ

ಒಂದೊಂದು ಇಂದ್ರಿಯಕ್ಕೆ ಒಂದೊಂದು ಧರ್ಮವು ನಿಸರ್ಗಸಿದ್ಧವಾಗಿ ಬಂದಿದೆ. ಕಣ್ಣು, ಕಾಣುವುದು, ಕಿವಿ ಕೇಳುವುದು, ಮೂಗು, ಮೂಸುವುದು. ಈ ಸ್ವಧರ್ಮವನ್ನು ಅವು ಅನುಸರಿಸಿಕೊಂಡು ನಡೆದರೇ ಶರೀರ ಸ್ವಾಸ್ಥ್ಯವು ಸರಿಯಾಗಿ ಉಳಿಯುವುದು. ಅದರ ಕಿವಿಯು ತನ್ನ ಧರ್ಮವನ್ನು ಬಿಟ್ಟು ಕಣ್ಣಿನ ಧರ್ಮವನ್ನು ಹಾರಯಿಸಿದರೆ ಮೂಗು ಕಿವಿಯಾಗ ಹಟತೊಟ್ಟರೆ! ನಾಲಗೆಯು ಕಾಣ ಬಯಸಿದರೆ! ದೇಹದ ಕಾರ್ಯಗಳಲ್ಲಿರುವ ಸಮಕಟ್ಟು ತಪ್ಪಿ ಹಾನಿಯು ಕಟ್ಟಿಟ್ಟುದೇ ಸರಿ.

ಅದಕಾರಣ ತನ್ನ ಮೂಲ ಧರ್ಮವೇನೆಂಬುದನ್ನು ಅರಿತು ಆಚರಿಸುವುದೇ ಮಾನವನ ಆದ್ಯಕರ್ತವ್ಯವಾಗಿದೆ. ಇದರಲ್ಲಿಯೇ ಲೋಕದ ಕಲ್ಯಾಣವಿದೆ. ತನ್ನ ಧರ್ಮವು ಕಠಿಣವೆನಿಸುತ್ತಲೆ ಅದನ್ನು ಬಿಟ್ಟು, ಸುಖಕರವೆಂದು ತೋರುವ ಹೆರವ ಧರ್ಮಕ್ಕೆ ತಿರುಗುವುದು ಲೇಸಿಗೆ ಕಾರಣವಾಗಲಾರದು. ತನ್ನ ಧರ್ಮವನ್ನು ಸರಿಯಾಗಿ ಸಂಪೂರ್ಣ ಯಶಸ್ವಿಯಾಗಿ ಆಚರಿಸುವುದಕ್ಕೆ ತನ್ನ ಶಕ್ತಿಸರ್ವಸ್ವನ್ನೆಲ್ಲ ಕೇಂದ್ರೀಕರಿಸುವುದರಲ್ಲಿಯೇ ನಿಜವಾದ ಕಲ್ಯಾಣವಿದೆ.

### ಆಧಿಭೌತಿಕ ದೃಷ್ಟಿ

ಅರಿವಿನ ತಿಳಿಬೆಳಕಿನಲ್ಲಿ ತನ್ನ ಜೀವನವನ್ನು ಸಾಗಿಸಬೇಕೆಂದು ಹಾರಯಿಸುವವನು ಹಾರುವವನು; ತನ್ನ,

ದಮ, ಶಾಂತಿಶೀಲನು ಇವನು, ಜ್ಞಾನೋಪಾಸನೆಯೆ ಈತನ ಜೀವಿತ ಕಾರ್ಯ. ಕಲಿಯುವುದೂ ಕಲಿಸುವುದೂ ಈತನ ಕರ್ತವ್ಯ.

ತೋಳ್ಬಲದ ಬೆಂಬಲದಿಂದ ಗೆಲ್ಲುಗೊಂಬ ವೀರನು ಕ್ಷತ್ರಿಯನೆನಿಸುವನು ವ್ಯಾಪಾರ ಒಕ್ಕಲತನ ಮೊದಲಾದ ಉದ್ಯೋಗ, ದಂದುಗಗಳಿಂದದ ಹಣಗಳಿಸುವುದರಲ್ಲಿ ತೊಡಗಿದವನು ವೈಶ್ಯನು ಆಳುಬಾಳಿನವರು, ಹೊಟ್ಟೆಗಾಗಿ ಹೆರವರ ಊಳಿಗ ಕೈಕೊಂಡವರು ದಾಸರು; ಇವರೇ ಶೂದ್ರರು.

ಆದರೆ ಸಮತಾವಾದದ ಭ್ರಮೆಯಿಂದ ಹಲವರಿಗೆ ಇದರಲ್ಲಿ ವಿಷಮತೆಯು ಕಾಣುವುದು. ತಲೆಯು ಉತ್ತಮಾಂಗವೇಕೆ? ಅದು ಕಾಲಿನಂತೆ ಕೆಸರಲ್ಲಿ ಏಕೆ ಕೆಲಸ ಮಾಡಬಾರದು? ಹೊಟ್ಟೆಯು ಉಳಿದ ಇಂದ್ರಿಯಗಳಿಗಿಂತ ಹೆಚ್ಚು ಸಂಪತ್ತುಳ್ಳುದು; ಎಲ್ಲ (ಅನ್ನ) ಸಂಗ್ರಹವು ಅದರ ಬಳಿಯಲ್ಲೇಕೆ? ಎಂದು ಮುಂತಾಗಿ ವೈಷಮ್ಯದ ಕೋಲಾಹಲವನ್ನು ಎಬ್ಬಿಸಿದರೆ ಅದು ನ್ಯಾಯ್ಯವೆ?

ನಿಜವಾಗಿ ವೈದಿಕ ಧರ್ಮವು ಸಾಮ್ಯವಾದಿಯಾಗಿದೆ. ಆದರ ಸಾಮ್ಯವಾದವು ನಿಸರ್ಗ ನಿಯಮಕ್ಕೆ ಅನುಸರಿಸಿ ಇದೆ.

**ಬ್ರಾಹ್ಮಣೋಽಸ್ಯ ಮುಖಮಾಸೀತ್ ಬಾಹೂ ರಾಜನ್ಯಃ ಕೃತಃ |**
**ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋಽಜಾಯತ ||**

ಋ. ೧೦ ೯೦-೧೨

ಬ್ರಾಹ್ಮಣನು ಸಮಾಜದ ತಲೆಯಿದ್ದಂತೆ. ಕ್ಷತ್ರಿಯನು ತೋಳುಗಳು; ವೈಶ್ಯನು ತೊಡೆಗಳು; ಅಡಿಗಳು ಆಳು—ಶೂದ್ರರಿದ್ದಂತೆ.

ದೇಹೇಂದ್ರಿಯಗಳು ತಮ್ಮ ಹುಟ್ಟು ಕೆಲಸಗಳನ್ನು ಮೇಲುಕೀಳೆಂದು ಎಣಿಸಿ ಸ್ವ-ಕರ್ತವ್ಯಪಾಲನೆಯನ್ನು ಬಿಟ್ಟು ಹೆರವರ ಕೆಲಸಕ್ಕೆ ಹಾತೊರೆದರೆ ಆ ದೇಹವು ಜೀವಂತವಾಗಿ ಉಳಿಯುವ ಸಂಭವವು ಉಂಟೆ?

ಸಾಮಾಜಿಕ ಸ್ಥಿತಿಯೂ ಹೀಗೆಯೆ ಇದೆ. ಆದುದರಿಂದ ಸಮಾಜದ ಏಳ್ಗೆಗಾಗಿ ಪ್ರತಿಯೊಬ್ಬನೂ ತಮ್ಮ ಹುಟ್ಟು ಕರ್ತವ್ಯವನ್ನು ಎಂದೂ ಬಿಟ್ಟುಕೊಡಲಾಗದು.

ಆದುದರಿಂದಲೇ 'ಸ್ವಧರ್ಮೇ ನಿಧನಂ ಶ್ರೇಯಃ' ತನ್ನ ಧರ್ಮವನ್ನು ಅನುಸರಿಸುತ್ತಿರುವಾಗ ಸಾವು ಬಂದರೂ ಲೇಸಾದುದು; ಎಂದೂ 'ಪರಧರ್ಮೋ ಭಯಾವಹಃ' ಹೆರವರ ಧರ್ಮವು ಗಂಡಾಂತರಕ್ಕೆ ಕಾರಣವೆಂದೂ ಶ್ರೀಕೃಷ್ಣನ ಆದೇಶವಿದೆ.

ಸಮತಾವಾದದ ಮಬ್ಬಿನಲ್ಲಿ ಸ್ವಭಾವಧರ್ಮಗಳಲ್ಲಿರುವ ವ್ಯತ್ಯಾಸಗಳನ್ನು ಮರೆತು ನಾಡಿನ ಹಾನಿ ಮಾಡುತ್ತಿದ್ದಾರೆ. ನಿಸರ್ಗಸಿದ್ಧವಾದ ಗುಣಕರ್ಮದ ತತ್ವಕ್ಕನುಸರಿಸಿ ಇರುವ ವರ್ಣ ಮತ್ತು ಆಶ್ರಮಗಳ ವ್ಯವಸ್ಥೆಯು ಮೂಲತಃ ಬಹಳ ಶಾಸ್ತ್ರೀಯ ತಳಹದಿಯುಳ್ಳದ್ದಾಗಿದೆ.

**ಬ್ರಾಹ್ಮಣೋಽಸ್ಯ ಮುಖಮಾಸೀದ್ ಬಾಹೂ ರಾಜನ್ಯಃ ಕೃತಃ |**
**ಊರೂ ತದಸ್ಯ ಯದ್ವೈಶ್ಯಃ ಪದ್ಭ್ಯಾಂ ಶೂದ್ರೋಽಜಾಯತ ||**

ಋಕ್ ೧೦ ೯೦·೧೨

"ಜ್ಞಾನಿಯು ಸಮಾಜದ ಬಾಯಿ; ವೀರನು ಅದರ ತೋಳು; ವರ್ತಕನು ಆದರ ತೊಡೆ; ತೊತ್ತುಗಳು ಅದರ ಅಡಿ" ಎಂದು ವೇದದಲ್ಲಿ ಹೇಳಿದುದು ಶಾಶ್ವತ ಸತ್ಯವಾಗಿದೆ.

## ಪ್ರತಿಯೊಬ್ಬರ ಮನಸ್ಸು ಮಟ್ಟ ಬೇರೆ

**ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ ||**

ಋಕ್. ೧೦ ೭೧·೭

'ಕಣ್ಣು ಕಿವಿಗಳುಳ್ಳ ಜನಗಳೆಲ್ಲರೂ ಸಮಾನರಾಗಿಯೇ ತೋರುವರು ಆದರೂ ಮನಸಿನ ವೇಗ ಸಾಮರ್ಥ್ಯವು) ಇವರೆಲ್ಲರಲ್ಲಿ ಸಮವಾಗಿಲ್ಲ.'' ಮಾನವರೆಲ್ಲ ಸರಿಸಮಾನರೆಂಬ ತಾತ್ವಿಕವಾದವನ್ನು ಅಕ್ಷರಶಃ ಅನುಸರಿಸುವುದು ಅವ್ಯವಹಾರ್ಯವು. ಇವರ ಪ್ರಕೃತಿಧರ್ಮಕ್ಕನುಸರಿಸಿ ಅವರ ಮನೋಬಲದಲ್ಲಿ ವ್ಯತ್ಯಾಸವಿರುತ್ತದೆ. ಇದನ್ನು ದುರ್ಲಕ್ಷಿಸಿ ನಡೆಯದು.

ಆದ ಕಾರಣ ಪ್ರತಿಯೊಬ್ಬರೂ ತಮ್ಮ ಸ್ವಧರ್ಮವನ್ನು ಅರಿತು ಆಚರಿಸಬೇಕು. ಆದರಲ್ಲಿ ಸಾವು ಬಂದರೂ ಲೇಸೇ (ಸ್ವಧರ್ಮೇ ನಿಧನಂ ಶ್ರೇಯಃ) ತಮ್ಮದಲ್ಲದ ಕ್ಷೇತ್ರದಲ್ಲಿ ದುಡುಕುವುದು— ಪರಧರ್ಮದಲ್ಲಿ ಸೇರುವುದು ಹಾನಿಗೆ ಕಾರಣ. ಭಯಂಕರ. (ಪರಧರ್ಮೋ ಭಯಾವಹಃ)

ಆದರೂ ಮನುಷ್ಯನು ಪಾಪಕ್ಕೆ ಎಳಸುವ ಕಾರಣವೇನು? ಅರ್ಜುನನ ಪ್ರಶ್ನೆಗೆ ಶ್ರೀಕೃಷ್ಣನು ಮುಂದೆ ಸಮಾಧಾನವನ್ನು ಹೇಳಿದ್ದಾನೆ.

**ಅರ್ಜುನ ಉವಾಚ— ಅಥ ಕೇನ ಪ್ರಯುಕ್ತೋಽಯಂ ಪಾಪಂ ಚರತಿ ಪೂರುಷಃ |**
**ಅನಿಚ್ಛನ್ನಪಿ ವಾರ್ಷ್ಣೇಯ ಬಲಾದಿವ ನಿಯೋಜಿತಃ || ೩೬ ||**

---

ಅನ್ವಯ:— ಅರ್ಜುನ ಉವಾಚ— ಹೇ ವಾರ್ಷ್ಣೇಯ | ಅಥ ಕೇನ ಪ್ರಯುಕ್ತಃ ಅಯಂ ಪುರುಷಃ ಅನಿಚ್ಛನ್ ಅಪಿ ಬಲಾತ್ ನಿಯೋಜಿತಃ ಇವ, ಪಾಪಂ ಚರತಿ? || ೩೬ ||

**ಅರ್ಜುನನು ಕೇಳಿದನು : ಎಲೈ ಶ್ರೀಕೃಷ್ಣನೇ! ಈ ಮನುಷ್ಯನು ಮನಸ್ಸಿಲ್ಲದಿದ್ದರೂ ಯಾರ ಪ್ರೇರಣೆಯಿಂದ ಒತ್ತಾಯಪಡಿಸಿದವರಂತೆ ಪಾಪವನ್ನು ಆಚರಿಸುವನು ?**

**ಭಾವಾರ್ಥ:**—ಪಾಪವನ್ನಾಚರಿಸಬೇಕೆಂದು ಬಯಸುವವರು ಯಾರೂ ಇಲ್ಲ. ಆದರೂ ಯಾರೋ ಬಲವಂತಪಡಿಸಿದವರಂತೆ ಕೆಲವು ಬಾರಿ ಮನುಷ್ಯನು ಕೇಡಾಳಿಯಾಗುವನು. ಅದು ಏಕೆ?

---

(೩೬) ಪಾಪಾಚರಣದಲ್ಲಿ ಸುಖವೆಂದೂ ಬಗೆದವರು ಯಾರೂ ಇಲ್ಲ. ಅದು ಹಾನಿಕರವೆಂದು ಎಲ್ಲರ ಮನವರಿಕೆಯಾಗಿದ್ದು ಅದನ್ನೇ (ಪಾಪವನ್ನೇ) ಮಾಡುವ ಅನಿವಾರ್ಯ ಪ್ರಸಂಗವು ಮನುಷ್ಯನಿಗೆ ಏಕೆ ಉಂಟಾಗುತ್ತದೆ? ಯಾರ ಒತ್ತಾಯದಿಂದ ಆತನು ಕೇಡಾಳಿಯಾಗಿ ನಡೆಯುವನು ?

ಎಂಬ ಅರ್ಜುನನ ಕೋರಿಕೆಗೆ ಶ್ರೀಕೃಷ್ಣನು ಕೊಟ್ಟ ಉತ್ತರವೇನೆಂದರೆ :

(೩೬–೩೭) 'ಮನುಷ್ಯನು ಅವನ ಇಷ್ಟವಿಲ್ಲದಿದ್ದರೂ ಪಾಪಕ್ಕೆ ಎಳೆಸುವ ಕಾರಣ ಏನು?' ಎಂದು ಅರ್ಜುನನು ಶ್ರೀಕೃಷ್ಣನಿಗೆ ಪ್ರಶ್ನೆ ಕೇಳುತ್ತಾನೆ. ಅದಕ್ಕೆ ಶ್ರೀಕೃಷ್ಣನ ಉತ್ತರವು ಹೀಗಿದೆ: ಎಲೈ ಅರ್ಜುನನೇ, ಮನುಷ್ಯನಲ್ಲಿ ಕಾಮವು ಹುದುಗಿಕೊಂಡಿರುತ್ತದೆ. ಅದು ಆತನಿಂದ ಅವನ ಅಪೇಕ್ಷೆಯ ವಿರುದ್ಧವಾಗಿಯೂ ಪಾಪ ಮಾಡಿಸುತ್ತದೆ. ಈ ಕಾಮಕ್ಕೆ ಕೊನೆಯೆ ಇಲ್ಲ. ಆದುದರಿಂದ ಏನು ದೊರೆತರೂ ಅದರ ಮೇಲೆ ಮತ್ತೆ ಕಾಮವು ಬೆಳೆದು, ಮತ್ತೆ ಮುಂದಿನದನ್ನು ಕೋರುವುದು ತಪ್ಪುವುದಿಲ್ಲ. ಬೆಂಕಿಯಲ್ಲಿ ಉರುವಲ ಹಾಕಿದರೆ ಉರಿಯು ಹೆಚ್ಚಾಗುತ್ತದೆ ಹೊರತು ಆರುವುದಿಲ್ಲ. ಉಪಭೋಗಗಳಿಂದ ಕಾಮಶಾಂತಿಯು ಆಗದೆ, ಅದು ಹೆಚ್ಚು ಹೆಚ್ಚಾಗಿ ಬೆಳೆಯುತ್ತ ನಡೆಯುವುದು. ಆದ ಕಾರಣ ಕಾಮೋಪಭೋಗರತರಾಗಿರುವುದು ಶಾಂತಿಸುಖದ ದಾರಿಯಲ್ಲ, ಕಾಮನೆಗಳ ತ್ಯಾಗವೇ ನಿಜವಾದ ಸುಖದ ಸಾಧನವು.

**ಆರು ಹಗೆಗಳು!**

ಕಾಮ, ಕ್ರೋಧ, ಲೋಭ, ಮೋಹ, ಮದ ಮತ್ತು ಮತ್ಸರಗಳೆಂಬಿವು ಇವು ಆರು ಮನೋವಿಕಾರಗಳಿವೆ. ಇವೆಲ್ಲವುಗಳಲ್ಲಿ ಹಿರಿದಾದುದು ಕಾಮವು. ಉಳಿದೆಲ್ಲವೂ ಇದನ್ನು ಹಿಂಬಾಲಿಸಿ ಬರುವವು.

> ಕಾಮಾತ್ ಕ್ರೋಧೋಽಭಿಜಾಯತೇ |
> ಕ್ರೋಧಾತ್ ಭವತಿ ಸಂಮೋಹಃ ||
>
> ಗೀ. ೨-೬೨

ಕಾಮದಿಂದ ಕ್ರೋಧವುಂಟಾಗುವುದು. ಕ್ರೋಧದಿಂದ ಮೋಹವು ತಲೆದೋರುವುದು. ಇದೇ ಮೇರೆಗೆ ಉಳಿದುವೂ ಬಳಿಕ ಹುಟ್ಟುವವು.

ಇಲ್ಲಿ 'ಕಾಮ'ವೆಂದರೆ ಬರಿಯ ಹಾತೊರೆಯುವಿಕೆಯಲ್ಲ. 'ಹೆಣ್ಣಿನ ಹಂಬಲ' ಎಂದೇ ಇಲ್ಲಿ ಅರ್ಥವು.

> ಕಾಮಃ ತತ್ ಅಗ್ರೇ ಸಮವರ್ತತಾಧಿ ಮನಸೋ ರೇತಃ ಪ್ರಥಮಂ
> ಯದಾಸೀತ್ | ಸತೋ ಬಂಧುಮಸತಿ ನಿರವಿಂದನ್
> ಹೃದಿ ಪ್ರತೀಷ್ಯಾ ಕವಯೋ ಮನೀಷಾ ||
>
> ಋಕ್. ೧೦ ೧೨೯-೪

"(ಅಗ್ರೇ ಯತ್ ಮನಸಃ ಪ್ರಥಮಂ ರೇತಃ ಆಸೀತ್) ಮೊದಲು ಮನಸಿನಲ್ಲಿ ಯಾವ ವೀರ್ಯವು ಇದ್ದಿತೊ, (ಅರ್ಥಾತ್ ಪ್ರವೃತ್ತಿ ಶಕ್ತಿರೂಪ ಕಾಮ) ಅದುವೆ ಕಾಮ (ಇಚ್ಛಾ) ರೂಪವಾಯಿತು. (ಅಸತಿ ಸತಃ ಬಂಧುಂ ನಿರವಿಂದನ್) ಅಸತ್ ಸೃಷ್ಟಿಯಲ್ಲಿ ಇದ್ದು ಸದಾತ್ಮನೊಡನೆ ಸಂಬಂಧಪಡುವುದು ಈ ಕಾಮವು (ಹೃದೀ ಕವಯೊ ಮನೀಷಾ ಪ್ರತಿಷ್ಯಾ) ಇದನ್ನು ಜ್ಞಾನಿಗಳು ಮನಸಿನಲ್ಲಿ ಕಂಡು ತಿಳಿದರು."

ಇಚ್ಛಾಶಕ್ತಿಯ ಉಗಮವನ್ನು ಅತ್ಯಂತ ಉದಾತ್ತ ನಾದ ರೀತಿಯಲ್ಲಿ ಋಗ್ವೇದಗಳಲ್ಲಿ ಹೇಳಿ[illegible]ವು ಈ ಶಕ್ತಿಯು ಬಂದು ಅಂಶ.

# (೧೩) ಪಾಪ ಪ್ರವೃತ್ತಿಯ ಕಾರಣ

ಶ್ರೀಭಗವಾನುವಾಚ:— ಕಾಮ ಏಷ ಕ್ರೋಧ ಏಷ ರಜೋಗುಣ ಸಮುದ್ಭವಃ |
ಮಹಾಶನೋ ಮಹಾಪಾಪ್ಮಾ ವಿದ್ಧ್ಯೇನಮಿಹ ವೈರಿಣಮ್ || ೩೭ ||
ಧೂಮೇನಾವ್ರಿಯತೇ ವಹ್ನಿರ್ಯಥಾಽಽದರ್ಶೋ ಮಲೇನ ಚ |
ಯಥೋಲ್ಬೇನಾವೃತೋ ಗರ್ಭಸ್ತಥಾ ತೇನೇದಮಾವೃತಮ್ || ೩೮ ||
ಆವೃತಂ ಜ್ಞಾನಮೇತೇನ ಜ್ಞಾನಿನೋ ನಿತ್ಯವೈರಿಣಾ |
ಕಾಮರೂಪೇಣ ಕೌಂತೇಯ ದುಷ್ಪೂರೇಣಾನಲೇನ ಚ || ೩೯ ||

---

**ಅನ್ವಯ:**— ರಜೋಗುಣ-ಸಮುದ್ಭವಃ ಮಹಾಪಾಪ್ಮಾ ಏಷಃ ಕಾಮಃ, ಏಷಃ ಕ್ರೋಧಃ ( ಅಸ್ತಿ; ತ್ವಂ) ಏನಂ ಇಹ ವೈರಿಣಂ ವಿದ್ಧಿ || ೩೭ || ಯಥಾ ಧೂಮೇನ ವಹ್ನಿಃ, ಯಥಾ ಚ ಮಲೇನ ಆದರ್ಶಃ ಆವ್ರಿಯತೇ; ಯಥಾ ಉಲ್ಬೇನ ಗರ್ಭಃ ಆವೃತಃ, ತಥಾ ತೇನ ಇದಂ ಆವೃತಮ್ || ೩೮ || ಹೇ ಕೌಂತೇಯ! ನಿತ್ಯವೈರಿಣಾ ಏತೇನ ದುಷ್ಪೂರೇಣ ಕಾಮರೂಪೇಣ ಅನಲೇನ ಜ್ಞಾನಿನಃ ಜ್ಞಾನಂ ಆವೃತಮ್ || ೩೯ ||

ರಜೋಗುಣದಿಂದ ಹುಟ್ಟುವ ಈ ಕಾಮ ಮತ್ತು ಕ್ರೋಧಗಳು ಬಹಳ ಕೊಳಬಕ್ಕವಾಗಿವೆ, ಮತ್ತು ಪಾಪಯುಕ್ತವಾಗಿವೆ. (ಅದಕಾರಣ) ಇವನ್ನು ನಿನ್ನ ಹಗೆಯೆಂದು ತಿಳಿ. || ೩೭ || ಕನ್ನಡಿಯು ಧೂಳದಿಂದ ಮಸುಳುವಂತೆ ಗರ್ಭವು ಒಂದು ಆವರಣದಿಂದ ಮುಚ್ಚಿರುವಂತೆ ಇದು (ಕಾಮವು) ಎಲ್ಲ (ತಿಳಿ)ವನ್ನು ಕವಿದಿರುತ್ತದೆ. || ೩೮ || ಎಲೈ ಕುಂತೀಪುತ್ರನೇ, ಎಲ್ಲರ ಎಂದೂ ತಣಿಯದ ಬೆಂಕೆಯಂತೆ, ಎಲ್ಲರ ನಿತ್ಯ ವೈರಿಯಾದ ಈ ಕಾಮದಿಂದ ತಿಳಿದವರ ತಿಳಿವು ಮರೆಯಾಗಿದೆ. || ೩೯ ||

---

### ಯುಕ್ತವಾದ ಕಾಮವಾಸನೆ ಪವಿತ್ರ

ಇಚ್ಛಾಶಕ್ತಿಯನ್ನು ಪವಿತ್ರವಾಗಿರಿಸಿ ಅದನ್ನು ಲೋಕಕಲ್ಯಾಣಕ್ಕಾಗಿ ಬಳಸುವುದು ತಿಳಿದವರ ಕರ್ತವ್ಯ. 'ಧರ್ಮಕ್ಕೆ ಅವಿರೋಧವಾದ ಕಾಮನೂ ತಾನು' ಎಂದು ಗೀತೆಯಲ್ಲಿ ಶ್ರೀಭಗವಂತನು ಹೇಳಿದ್ದಾನೆ ಸಜ್ಜನರಾದ ತಾಯ್ತಂದೆಗಳಲ್ಲಿ ಪುಣ್ಯಜೀವಗಳು ಜನ್ಮತಾಳುತ್ತವೆ. ಇಂತಹ ಮಹಾನುಭಾವರ ಜನ್ಮಕಾರಣವಾಗುವ ಸಂಯಮಿಗಳ ಧರ್ಮಸಂಭೋಗವು ಒಂದು ಧರ್ಮಕಾರ್ಯವೇ ಸರಿ.

ಪ್ರಾಪ್ಯ ಪುಣ್ಯಕೃತಾಂ ಲೋಕಾನ ಉಷಿತ್ವಾ
ಶಾಶ್ವತೀಃ ಸಮಾಃ |
ಶುಚೀನಾಂ ಶ್ರೀಮತಾಂ ಗೇಹೇ ಯೋಗಭ್ರಷ್ಟೋಽ
ಭಿಜಾಯತೇ || ೪೧ ||
ಅಥವಾ ಯೋಗಿನಾಮೇವ ಕುಲೇ ಭವತಿ ಧೀಮತಾಮ್ |
ಏತದ್ಧಿ ದುರ್ಲಭತರಂ ಲೋಕೇ ಜನ್ಮ ಯದೀ-
ದೃಶಮ್ || ೪೨ ||
ತತ್ರ ತಂ ಬುದ್ಧಿಸಂಯೋಗಂ ಲಭತೇ ಪೌರ್ವದೇಹಿಕಮ್|
ಯತತೇ ಚ ತತೋ ಭೂಯಃ ಸಂಸಿದ್ಧೌ ಕುರುನಂದನ ||೪೩||

ಗೀತಾ ೬. ೪೧-೪೩

"ಪುಣ್ಯವಂತರು ಇರುವ ಲೋಕದಲ್ಲಿ ಹಲವು ದಿನಗಳವರೆಗೆ ನಿಂತು ಯೋಗಭ್ರಷ್ಟನು ಮರಳಿ ಪವಿತ್ರ ಯೋಗಸಾಧನಸಂಪನ್ನರಲ್ಲಿ ಜನ್ಮತಾಳುತ್ತಾನೆ. ಅಥವಾ ಜ್ಞಾನಯೋಗಿಗಳಲ್ಲಿ ಹುಟ್ಟುವನು. ಈ ಬಗೆಯಾಗಿ ಹುಟ್ಟುವುದು ಪರಮಭಾಗ್ಯವು ಇವನಿಗೆ ಪೂರ್ವಜನ್ಮದ ಬುದ್ಧಿಸಂಸ್ಕಾರಗಳ ಲಾಭವು ದೊರೆತು ಆತನು ಇಲ್ಲಿಂದ ಮತ್ತೆ ಮುಂದೆ ಮೋಕ್ಷದ ಮಾರ್ಗದಲ್ಲಿ ಮುಂದುವರಿಯುತ್ತಾನೆ."

### ಕಾಮವು ರಜೋಗುಣವು

ರಜೋ ರಾಗಾತ್ಮಕಂ ವಿದ್ಧಿ ತೃಷ್ಣಾಸಂಗ ಸಮುದ್ಭವಮ್ |
ತನ್ನಿಬಧ್ನಾತಿ ಕೌಂತೇಯ ಕರ್ಮಸಂಗೇನ
ದೇಹಿನಮ್ || ೭ ||
ಸಂಜಯತಿ ರಜಃ ಕರ್ಮಣಿ ಭಾರತ || ೯ ||

ಇಂದ್ರಿಯಾಣಿ ಮನೋಬುದ್ಧಿರಸ್ಯಾಧಿಷ್ಠಾನಮುಚ್ಯತೇ |
ಏತೈರ್ವಿಮೋಹಯತ್ಯೇಷ ಜ್ಞಾನಮಾವೃತ್ಯ ದೇಹಿನಮ್ || ೪೦ ||
ತಸ್ಮಾತ್ ತ್ವಮಿಂದ್ರಿಯಾಣ್ಯಾದೌ ನಿಯಮ್ಯ ಭರತರ್ಷಭ |
ಪಾಪ್ಮಾನಂ ಪ್ರಜಹಿಹ್ಯೇನಂ ಜ್ಞಾನ ವಿಜ್ಞಾನ ನಾಶನಮ್ || ೪೧ ||

---

ಅನ್ವಯಃ:-- ಇಂದ್ರಿಯಾಣಿ, ಮನಃ ಬುದ್ಧಿಃ ಅಸ್ಯ ಅಧಿಷ್ಠಾನಂ ಉಚ್ಯತೇ | ಏಷಃ ಏತೈಃ ಜ್ಞಾನಂ ಆವೃತ್ಯ ದೇಹಿನಂ ವಿಮೋಹಯತಿ || ೪೦ || ಹೇ ಭರತರ್ಷಭ! ತಸ್ಮಾತ್ ತ್ವಂ ಆದೌ ಇಂದ್ರಿಯಾಣಿ ನಿಯಮ್ಯ, ಜ್ಞಾನವಿಜ್ಞಾನನಾಶನಂ. ಏನಂ ಪಾಪ್ಮಾನಂ ಪ್ರಜಹಿಹಿ || ೪೧ ||

ಇಂದ್ರಿಯಗಳನ್ನು, ಮನಸು ಮತ್ತು ಬುದ್ಧಿ ಇವು (ಕಾಮರೂಪಿಯಾದ ವೈರಿಯ) ನಿವಾಸಸ್ಥಾನಗಳಾಗಿವೆ. ಈ ಕಾಮವು ಈ ಇಂದ್ರಿಯಗಳ ಮುಖಾಂತರವಾಗಿ ತಿಳಿವನ್ನು ನುಂಗಿ (ಆವರಿಸಿ), ಮನುಷ್ಯನನ್ನು ತಿಳಿಗೇಡಿಯನ್ನಾಗಿ ಮಾಡುತ್ತದೆ. || ೪೦ || ಆದುದರಿಂದ ಎಲೆ ಭರತಶ್ರೇಷ್ಠನೆ! ನೀನು ಮೊದಲು ಇಂದ್ರಿಯಗಳನ್ನು ಅಧೀನದಲ್ಲಿರಿಸಿಕೊಂಡು ಜ್ಞಾನ ಮತ್ತು ವಿಜ್ಞಾನದ ನಾಶಕವಾದ ಈ ಪಾಪಿಯನ್ನು ಬಿಟ್ಟುಬಿಡು || ೪೧ ||

ಭಾವಾರ್ಥ:- ರಜೋಗುಣದಿಂದ ಕಾಮವೂ ಕಾಮದಿಂದ ಕ್ರೋಧವೂ ಹುಟ್ಟುತ್ತವೆ. ಇವುಗಳು ಯಾವಾಗಲೂ ಅತೃಪ್ತವಾಗಿರುತ್ತವೆ. ಆದುದರಿಂದ ಅತೃಪ್ತನು ಅದನ್ನು ಸಾಧಿಸಲು ಕೆಟ್ಟ ಕಾರ್ಯಗಳಿಗೆ ಮನಸುಮಾಡುತ್ತಾನೆ. ಪಾಪಿಯಾಗುತ್ತಾನೆ. ಆದ್ದರಿಂದ ಕಾಮವು ಮಾನವನ ಕಡು ವೈರಿಯಾಗಿದೆ. ಈ ಕಾಮಕ್ರೋಧಗಳಿಂದ ಮನುಷ್ಯನ ತಿಳಿವು ಹಾಳಾಗುತ್ತದೆ. ಮನುಷ್ಯನ ಇಂದ್ರಿಯ, ಮನಸ್ಸು, ಮತ್ತು ಬುದ್ಧಿಯಲ್ಲಿ ಈ ಕಾಮವು ನೆಲಸಿರುತ್ತದೆ ಮತ್ತು ಮನುಷ್ಯನ ತಿಳಿವನ್ನು ಕವಿಯುತ್ತದೆ. ಮತ್ತು ಆತನನ್ನು ತಿಳಿಗೇಡಿಯನ್ನಾಗಿ ಮಾಡುತ್ತದೆ ಆದುದರಿಂದ ಸಂಯಮಿಯಾಗಿ ತನ್ನ ಇಂದ್ರಿಯಗಳನ್ನು ಅಧೀನದಲ್ಲಿಟ್ಟುಕೊಳ್ಳಬೇಕು. ಮತ್ತು ಜ್ಞಾನ-ವಿಜ್ಞಾನದ ನಾಶಮಾಡುವ ಈ ಪಾಪಿ ಹಗೆಯನ್ನು ದೂರ ಓಡಿಸಬೇಕು. || ೩೭-೪೧ ||

---

ಲೋಭಃ ಪ್ರವೃತ್ತಿ ರಾರಂಭಃ ಕರ್ಮಣಾಮಶಮಃ ಸ್ಪೃಹಾ |
ರಜಸ್ಯೇತಾನಿ ಜಾಯಂತೇ ವಿವೃದ್ಧೇ ಭರತರ್ಷಭ || ೧೨ ||
ರಜಸಿ ಪ್ರಲಯಂ ಗತ್ವಾ ಕರ್ಮಸಂಗಿಷು ಜಾಯತೇ || ೧೫ ||
ರಜಸಸ್ತು ಫಲಂ ದುಃಖಮ್............ || ೧೬ || ೦
ರಜಸೋ ಲೋಭ ಏವ ಚ (ಜಾಯತೇ) || ..|
ಭ. ಗೀ ೧೪-..-೧೭.

"ರಜೋಗುಣವು ಭೋಗಾಸಕ್ತಿಯ ಮೂಲ ಕಾರಣವು. ಮನುಷ್ಯರನ್ನು ಈ ಭೋಗಾಸಕ್ತಿಯು (ಹೀನ) ಕರ್ಮಗಳಲ್ಲಿ ತೊಡಗಿಸುತ್ತದ. ರಜೋಗುಣದ ಹೆಚ್ಚಳದಿಂದ ಮಾನವರಲ್ಲಿ ಲೋಭವೂ ಪ್ರವೃತ್ತಿಯೂ ಕರ್ಮಾರಂಭದ ಬಲವೂ ಆಸೆಯೂ ಅಶಾಂತಿಯೂ ಏಳುತ್ತಿರುವುವು ರಜೋಗುಣದಲ್ಲಿ ಸಾವು ಬಂದರೆ ಕರ್ಮಾಸಕ್ತರಲ್ಲಿ ಹುಟ್ಟುವನು. ರಜೋಗುಣದಿಂದ ದುಃಖವು ಪ್ರಾಪ್ತವಾಗುವುದು. ರಜೋಗುಣದಿಂದ ಲೋಭವು ಉಂಟಾಗುವುದು." ಎಂದು ಗೀತೆಯಲ್ಲಿ ಹೇಳಿದೆ

ಪೃಥಕ್ತ್ವೇನ ತು ಯಜ್ಜ್ಞಾನಂ ನಾನಾಭಾವಾನ್ ಪೃಥಗ್ವಿಧಾನ್ ||
ವೇತ್ತಿ ಸರ್ವೇಷು ಭೂತೇಷು ತಜ್ಜ್ಞಾನಂ ವಿದ್ಧಿ ರಾಜಸಮ್ || ೨೧ ||
ಯತ್ತು ಕಾಮೇಪ್ಸುನಾ ಕರ್ಮ ಸಾಹಂಕಾರೇಣ ವಾ ಪುನಃ |
ಕ್ರಿಯತೇ ಬಹುಲಾಯಾಸಂ ತದ್ರಾಜಸ ಮುದಾಹೃತಮ್ || ೨೪ ||
ರಾಗೀ ಕರ್ಮಫಲಪ್ರೇಪ್ಸುರ್ಲುಬ್ಧೋ ಹಿಂಸಾತ್ಮಕೋಽಶುಚಿಃ |
ಹರ್ಷಶೋಕಾನ್ವಿತಃ ಕರ್ತಾ ರಾಜಸಃ ಪರಿಕೀರ್ತಿತಃ || ೨೭ ||
ಯಯಾ ಧರ್ಮಮಧರ್ಮಂ ಚ ಕಾರ್ಯಂ ಚಾಕಾರ್ಯಮೇವ ಚ |
ಅಯಥಾವತ್ ಪ್ರಜಾನಾತಿ ಬುದ್ಧಿಃ ಸಾ ಪಾರ್ಥ ರಾಜಸೀ || ೩೧ ||

**ವಿಷಯೇಂದ್ರಿಯ ಸಂಯೋಗಾದ್ಯತ್ತದಗ್ರೇಽ**
**ಮೃತೋಪಮಮ್ |**
**ಪರಿಣಾಮೇ ವಿಷಮಿವ ತತ್ಸುಖಂ ರಾಜಸಂ**
**ಸ್ಮೃತಮ್ ||೩೮||**
ಗೀ. ಅ. ೧೮

'ಪ್ರಾಣಿಮಾತ್ರಗಳಲ್ಲಿ ಭಿನ್ನಭೇದವನ್ನು ಕಾಣಿಸುವ ಜ್ಞಾನವು ರಾಜಸ; ಅದು ಉಪಭೋಗದ ಇಚ್ಛೆಯಿಂದ ಉತ್ಪನ್ನವಾಗುವುದು. ಹೆಮ್ಮೆಯಿಂದ ಜರಗುವ, ಬಹಳ ಆಯಾಸದಿಂದ ಕೈಗೂಡುವ ಕೆಲಸವು ರಾಜಸ; ಕರ್ಮ ಫಲದ ಆಶೆಮಾಡುವ, ಲೋಭಿ, ಹಿಂಸಕನು, ಅಪವಿತ್ರನು; ಇವನು ಹರ್ಷ-ಶೋಕದಿಂದ ಕೂಡಿದವನಾಗಿರುತ್ತಾನೆ; ಇಂತಹನಿಗೆ ರಾಜಸಕರ್ಮಿಯೆಂದು ಹೆಸರು. ವಿಷಯ ಮತ್ತು ಇಂದ್ರಿಯಗಳ ಸಂಗದಿಂದುಂಟಾಡುದು, ಮೊದಲು ಸಿಹಿಯಾಗಿದ್ದು ಕಡೆಗೆ ಕಹಿಯಾಗುವದು ಎಲ್ಲವೂ ರಾಜಸಸುಖವೆನಿಸುವುದು '

ರಜೋಗುಣದಿಂದ ಕಾಮಪ್ರವೃತ್ತಿಯಾಗುವುದು. ಕಾಮೋಪಭೋಗದಲ್ಲಿ ಅಡೆತಡೆಗಳುಂಟಾಗುತ್ತಲೇ ಮನುಷ್ಯನು ತಳಮಳಗೊಳ್ಳುವನು; ಕ್ರುದ್ಧನಾಗುವನು. ಇದರ ಸ್ಥಿತಿಯನ್ನು ಕುರಿತು ಹೀಗೆ ವರ್ಣನೆಗೈದಿದೆ:

### ಕೊಳಬಕ್ಕತನ

ಕಾಮಕ್ಕೆ ಎಷ್ಟು ದೊರೆತರೂ ತೃಪ್ತಿಯಿಲ್ಲ. 'ಮಹಾ ಅಶನಃ' ಎಂದು ಇದನ್ನು ಹೇಳಿದ್ದಾಗಿದೆ. ಎಷ್ಟು ದೊರೆತರೂ ತಣಿಯದೆ, ಇನ್ನೂ ಹೆಚ್ಚು ಬೇಕೆಂಬ ಹಂಬಲಿಗನಾಗುವುದರಿಂದ ತನ್ನ ಹಬ್ಬಯಕೆಗಳನ್ನು ಸಾಧಿಸಿಕೊಳ್ಳಲು ಯಾವ ಬೇಕಾದ ಸಾಧನಗಳ ಉಪಯೋಗಮಾಡುವ ಚಪಲವುಂಟಾಗುವದು. ಆದುದರಿಂದಲೇ ಕಾಮವು 'ಮಹಾಪಾಪ್ಮಾ' ( ಮಹಾಪಾಪಿ ) ಆಗಿದೆಯೆಂದು ಹೇಳಿದ್ದುಂಟು ಈ ಕಾಮನೆಗಳು ಕವಿದುಕೊಂಡಿರುವುದರಿಂದ ನಮಗೆ ನಮ್ಮ ಆತ್ಮದ ಶುದ್ಧಸ್ವರೂಪವೇ ತಿಳಿಯದಾಗುತ್ತದೆ ಈ ಕಾಮನೆಗಳಿಗೆ ಎಂದೂ ಕೊನೆಯಿಲ್ಲ 'ದುಷ್ಪೂರಂ'—ಎಂದೂ ಶಾಂತವಾಗದುವು ಇವು.

ಇಂತಹ ಜನಗಳಿಗೆ ಪುನರುದ್ಧಾರದ ಆಸೆಯೆ ಇಲ್ಲವೆ? ಉಂಟು. ಏಕೆಂದರೆ ಯಾರೂ ಆತ್ಯಂತಿಕ ಹೀನರಲ್ಲ. ಹೀನರೂ, ಕೇದಾರಸೂ, ಕಾಮುಕರೂ, ಎನಿಸುವವರ ಅಂತರಂಗದ ಶುದ್ಧಾತ್ಮನ ಮೇಲೆ ಒಂದು ಆವರಣವು ಒಂದಿರುತ್ತದೆ. ಬೆಂಕಿಯ ಮೇಲೆ ಹೂಗೆಯು ಮುಸುಕಿದಂತೆ ಇಲ್ಲವೆ ಕನ್ನಡಿಯ ಮೇಲೆ ಧೂಳು ಕುಳಿತಂತೆ; ಅಥವಾ ಗರ್ಭಾಶಯದ ಮೇಲೆ ಪರಿಯು ಹೊದ್ದಿರುವಂತೆ; ಇವರ ಅಂತರಾತ್ಮನು ಅಜ್ಞಾನದ ಮುಸುಕಿನಲ್ಲಿ ಇವರಿಗೆ ಕಾಣದಾಗಿರುತ್ತಾನೆ. ಆದರೆ ಈ ಜನರು ಮನಸ್ಸಂಯಮದಿಂದ ಚಿತ್ತಶುದ್ಧಿಯನ್ನು ಮಾಡಿಕೊಂಡರೆ ಅವರಿಗೆ ತಮ್ಮ ನಿಜವಾದ ಶುದ್ಧಸ್ವರೂಪದ ಜ್ಞಾನವಾಗಿ, ಅವರು ಮತ್ತೆ ಸನ್ಮಾರ್ಗಿಗಳಾಗುವಲ್ಲಿ ಸಂದೇಹವೆ ಇಲ್ಲ.

ಕಾಮಭೋಗೇಚ್ಛೆಯು ಜ್ಞಾನಿಗಳ ಹಗೆ ( ಜ್ಞಾನಿನಾಂ ವೈರೀ ). ಶಿವನು ಜ್ಞಾನಮೂರ್ತಿ. ಆದುದರಿಂದಲೆ ಆತನು ಕಾಮಹರನು. ತನ್ನ ಉರಿಗಣ್ಣಿನಿಂದ ಕಾಮನನ್ನು ಸುಟ್ಟನೆಂಬ ಕತೆ ಅರ್ಥಪೂರ್ಣವಾಗಿದೆ. ಕಾಮಾರಿಯಾದ ಶಿವನಿಗೆ 'ಉಮಾಪತಿ' ಎಂದೂ ಹೆಸರಿದೆ. ( ಉಮಾ ಎಂದರೆ ವಿದ್ಯೆ. )

ಆದಕಾರಣ ಜ್ಞಾನವಿದ್ದಲ್ಲಿ ವಿಲಾಸ, ಸ್ವೈರಾಚಾರದ ಹಂಬಲವು ಇರಲಾರದು. ಸೂರ್ಯನಿದ್ದಲ್ಲಿ ಕತ್ತಲೆಯು ನಿಲ್ಲುವುದುಂಟೆ? ಆದುದರಿಂದಲೆ ಬ್ರಹ್ಮಚಾರಿಯು ಭೋಗಪ್ರವೃತ್ತಿಯಿಂದ ದೂರವಿರಲೇಬೇಕೆಂದು ವಿಧಿಸಿದೆ. ಕಾಮವಿಲಾಸಕ್ಕೆ ಒಲಿದವರ ಬುದ್ಧಿಯು ವಿಕೃತವಾಗುವುದು ಚಿತ್ತಶುದ್ಧಿಯು ನಷ್ಟವಾಗುವುದು.

'ಪಾಪವನ್ನು ಮಾಡಲೇಬೇಕೆಂಬ ಇಚ್ಛೆಯು ಇಲ್ಲದಿದ್ದರೂ ಮನುಷ್ಯನಿಂದ ಪಾಪಾಚರಣೆಯು ಏಕೆ ಸಂಭವಿಸುವುದು?' ಎಂದು ಅರ್ಜುನನು ಕೇಳಿದ ಪ್ರಶ್ನೆಗೆ ಈಗ ಉತ್ತರವು ಗೊತ್ತಾಗುವುದು ಮನಸ್ಸು, ಬುದ್ಧಿಗಳು ಕಾಮಾಸಕ್ತವಾಗುತ್ತವೆ. ವಿಚಾರಗಳು ನಷ್ಟವಾಗುವುವು ಅವಿಚಾರವು ತಲೆದೋರುವುದು. ಕಾಮಾತುರತೆ ಹೆಚ್ಚುವುದು ಅದನ್ನು ಹೇಗೂ ಸಂಪಾದಿಸಲು ಮನಬಂದಂತೆ ವರ್ತಿಸುವನು. ಹೀಗೆ ಪಾಪದಲ್ಲಿ ಇವನ ಕಾಲು ಹೆಚ್ಚು ಹೆಚ್ಚು ಆಳವಾಗಿ ಸಿಕ್ಕುವುದು

ಕಾಮವನ್ನು ಬೆಂಕಿಗೂ ಹೋಲಿಸಿ ಹೇಳಿದ್ದಾಗಿದೆ. ಕಾಮರೂಪಃ ಅನಲಃ' ಈ ಬೆಂಕಿಯು ಒಬ್ಬನ ದೇಹಕ್ಕೆ ತಾಗಿದರೆ ಅದು ಬೆಂದು ಬೆಂಡಾಗುವುದು. ನಿರ್ವೀರ್ಯವಾಗಿ ಬೆಂಡಿನಂತೆ ಹಗುರಾಗುವುದು ಬೆಂಕಿಯಲ್ಲಿ ಕಟ್ಟಿಗೆಹಾಕಿದಹಾಗೆ, ತುಪ್ಪವನ್ನೆರಚಿದಂತೆ ಭೋಗವಿಲಾಸಗಳನ್ನು ಹೆಚ್ಚು ಹೆಚ್ಚು ಉಪಭೋಗಿಸಿದಹಾಗೆ ಕಾಮದ ಕಾವು ಹೆಚ್ಚುವುದೆಹೊರತು ಕಡಿಮೆಯಾಗದು. ಆದುದರಿಂದ ಭೋಗವಿಲಾಸದಿಂದ ಶಾಂತಿಯಿಲ್ಲ. ಸಂಯಮದಿಂದಲೇ ಅದು ದೊರೆಯತಕ್ಕದು

## (೧೪) ಶ್ರೇಷ್ಠವಾದ ಶಕ್ತಿ

ಇಂದ್ರಿಯಾಣಿ ಪರಾಣ್ಯಾಹುರಿಂದ್ರಿಯೇಭ್ಯಃ ಪರಂ ಮನಃ |
ಮನಸಸ್ತು ಪರಾ ಬುದ್ಧಿರ್ಯೋ ಬುದ್ಧೇಃ ಪರತಸ್ತು ಸಃ || ೪೨ ||

ಏವಂ ಬುದ್ಧೇಃ ಪರಂ ಬುದ್ಧ್ವಾ ಸಂಸ್ತಭ್ಯಾತ್ಮಾನಮಾತ್ಮನಾ |
ಜಹಿ ಶತ್ರುಂ ಮಹಾಬಾಹೋ ಕಾಮರೂಪಂ ದುರಾಸದಮ್ || ೪೩ ||

ಇತಿ ಶ್ರೀಮದ್ಭಗವದ್ಗೀತಾಸೂಪನಿಷತ್ಸು ಬ್ರಹ್ಮವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇ ಕರ್ಮಯೋಗೋ ನಾಮ ತೃತೀಯೋಽಧ್ಯಾಯಃ || ||

---

**ಅನ್ವಯ:**— ಇಂದ್ರಿಯಾಣಿ ಪರಾಣಿ ಆಹುಃ, ಇಂದ್ರಿಯೇಭ್ಯಃ ಪುನಃ ಪರಂ, ಮನಸಃ ತು ಬುದ್ಧಿಃ ಪರಾ, ಯಃ ತು ಬುದ್ಧೇಃ ಪರತಃ ಸಃ (ಆತ್ಮಾ ಅಸ್ತಿ) || ೪೨ || ಹೇ ಮಹಾಬಾಹೋ! ಏವಂ (ಆತ್ಮಾನಂ) ಬುದ್ಧೇಃ ಪರಂ ಬುದ್ಧ್ವಾ, ಆತ್ಮನಾ ಆತ್ಮಾನಂ ಸಂಸ್ತಭ್ಯ, ಕಾಮರೂಪಂ ದುರಾಸದಂ ಶತ್ರುಂ ಜಹಿ || ೪೩ ||

ದೇಹಕ್ಕಿಂತಲೂ ಇಂದ್ರಿಯಗಳು ಮಿಗಿಲು; ಇಂದ್ರಿಯಗಳಿಂದ ಮನಸ್ಸು ಮಿಗಿಲು; ಮನದಿಂದ ಬುದ್ಧಿ ಮಿಗಿಲು; ಬುದ್ಧಿಯಿಂದ ಆತ (ಆತ್ಮ)ನು ಮಿಗಿಲಾದವನು || ೪೨ || ಎಲೈ ಮಹಾಬಾಹುವಾದ ಅರ್ಜುನನೆ! ಹೀಗೆ ಆತ್ಮವು ಬುದ್ಧಿಯಿಂದ ಮಿಗಿಲಾದುದೆಂದು ಅರಿತು ತನ್ನ ಬಲದಿಂದ ಬಿಗಿಹಿಡಿದು ಗೆಲ್ಲಲು ಗಡಚಾದ ಈ ಕಾಮರೂಪಿಯಾದ ಹಗೆಯನ್ನು ಹೊಡೆ. || ೪೩ ||

**ಭಾವಾರ್ಥ:**— ಇಂದ್ರಿಯಗಳು ದೇಹದಮೇಲೆ ಅಧಿಕಾರ ನಡಸುವುವು. ಇಂದ್ರಿಯಗಳನ್ನು ಮನಸ್ಸು ಆಳುವುದು; ಮನಸ್ಸನ್ನು ಬುದ್ಧಿಯು ಅಂಕೆಯಲ್ಲಿಟ್ಟುಕೊಳ್ಳಬಲ್ಲುದು; ಬುದ್ಧಿಯನ್ನು ಆತ್ಮವು ಅಧೀನದಲ್ಲಿಡಬಲ್ಲುದು. ಆದುದರಿಂದ ಎಲ್ಲವುಗಳ ಮೇಲೂ ಆತ್ಮದ ಸ್ವಾಮಿತ್ವವು ನಡೆಯುವುದೆಂದ ಹಾಗಾಯಿತು. ಇದನ್ನರಿತು ಮನುಷ್ಯನು ಆತ್ಮಶಕ್ತಿಯಿಂದ ತನ್ನನ್ನು ಕೇಂದ್ರದಲ್ಲಿರಿಸಿಕೊಂಡು—ಸ್ಥಿರೀಕರಿಸಿಕೊಂಡು— ಪ್ರಶಾಂತನಾಗಿ ಗೆಲ್ಲಲು ಕಷ್ಟಕರವಾದ ಕಾಮವೆಂಬ ಹಗೆಯನ್ನು ಹೊಡೆದುಹಾಕಬೇಕು || ೪೨ ೪೩ ||

---

ಕಾಮವು ಮನಸ್ಸು-ಬುದ್ಧಿಗಳಲ್ಲಿ ಸೇರಿಕೊಂಡು ಹಿತಕರ್ತನಂತೆ ನಟಿಸಿ ಮನುಷ್ಯನನ್ನು ನಾಶಕ್ಕೆ ಈಡುಮಾಡುತ್ತದೆ. ಎಂದರೆ ಮನುಷ್ಯನ ಸ್ವಾರ್ಥಬುದ್ಧಿಯು ಪರೋಪಕಾರದ ಸೋಗಿನಿಂದ ಅವನನ್ನು ಅಡ್ಡದಾರಿಗೆ ಹಚ್ಚುತ್ತದೆ. ತಾನು ಮಾಡುವುದು ಒಂದು ಪರೋಪಕಾರದ ಕೆಲಸ, ಲೋಕಹಿತದ ಕೆಲಸ, ದೇಶಸೇವೆಯ ಕೆಲಸ ಎಂಬ ಹೆಸರಿನಲ್ಲಿ ಸ್ವಾರ್ಥವು ಮನುಷ್ಯನನ್ನು ಕೆಲಸಕ್ಕೆ ಮುಂದೆ ದೂಡುತ್ತಿರುತ್ತದೆ. ಆದರ ಒಳಗೆ ಸ್ವಲ್ಪ ಬಿಡಿಸಿ ತಿಳಿದು ನೋಡಿದರೆ ಸ್ವಾರ್ಥವೇ ಪರೋಪಕಾರದ ಬಣ್ಣ ಬಳಿದುಕೊಂಡು ಅಂದವಾದ ಹೆಸರಿನ ಸೋಗಿನಲ್ಲಿ ಮನುಷ್ಯನನ್ನು ಕೆಲಸಕ್ಕೆ ಒತ್ತಾಯಪಡಿಸುತ್ತಿರುತ್ತದೆ. ಆದುದರಿಂದ

ತಸ್ಮಾತ್ ತ್ವಮ್ ಇಂದ್ರಿಯಾಣಿ ಆದೌ ನಿಯಮ್ಯ ಭರತರ್ಷಭ |
ಪಾಪ್ಮಾನಂ ಪ್ರಜಹಿಹಿ ಏನಂ ಜ್ಞಾನ ವಿಜ್ಞಾನ ನಾಶನಮ್ || ೪೧ ||

"ಆದಕಾರಣ ಮೊದಲು ಇಂದ್ರಿಯಗಳ ಸಂಯಮ ಮಾಡಿ ಜ್ಞಾನ ವಿಜ್ಞಾನದ ನಾಶಮಾಡುವ ಈ ಪಾಪಿಯನ್ನು ತೊರೆದು ಬಿಡು" ಎಂದು ಹೇಳಿದ್ದಾನೆ.

ಈ ಶ್ಲೋಕದ ಪರಿಚ್ಛೇದವನ್ನು ಎರಡು ತೆರನಾಗಿ ಮಾಡಬಹುದಾಗಿದೆ. 'ಪ್ರಜಹಿಹಿ' ಎಂದರೆ ಬಿಟ್ಟುಬಿಡು; ಅಥವಾ 'ಪ್ರಜಹಿ' ಹೊಡೆದು ಬಿಡು; ನಾಶಮಾಡು. ಇವೆರಡರಲ್ಲಿ ಮೊದಲನೆಯದೆ ಉತ್ತಮ. ಏಕೆಂದರೆ ಆತ್ಯಂತಿಕ ನಾಶವು ಎಂದಿಗೂ ಇಷ್ಟವಲ್ಲ ಅನಿಷ್ಟ. ಆದಕಾರಣ ಅದನ್ನು ಧರ್ಮಕ್ಕೆ ಹೊಂದಿಕೆಯಾಗುವಂತೆ ಸಮಾಜ ಧಾರಣೆ, ಪೋಷಣೆಗೆ ಸಹಾಯಕವಾಗುವಂತೆ ಮಾರ್ಪಡಿಸಿಕೊಳ್ಳುವುದೇ ಲೇಸು. ಆದಕಾರಣ ಕಾಮವನ್ನು ಕೊಂದುಬಿಡುವ ಬದಲು ಅದನ್ನು ತೊರೆಯಬೇಕು; ಬೇಕಾದಾಗ ಕರೆಯಬೇಕು ಅದರಿಂದ ಕಲ್ಯಾಣಕಾರಕ ಇಷ್ಟ ಕಾರ್ಯಗಳನ್ನು ಮಾಡಿಸಿಕೊಳ್ಳಬೇಕು.

ಇದೇ ಮಾತನ್ನೆ ಇನ್ನೊಂದು ಬಗೆಯಿಂದ ಹೇಳಿದುದುಂಟು.

### ಆತ್ಮಶಾಸನ

(೪೨-೪೩) ಸಾಮಾನ್ಯವಾಗಿ ದೇಹದ ಮೇಲೆ ಕಾಮವು ತನ್ನ ಒಡೆತನವನ್ನು ನಡಸುವುದುಂಟೆಂದು ಹಿಂದೆ ಹೇಳಿದೆ (ಶ್ಲೋ. ೩೭ ೪೦) ಕಾಮ, ಕ್ರೋಧ, ಮದ, ಮತ್ಸರಾದಿಗಳಲ್ಲಿ ಒಂದಿಲ್ಲೊಂದು ತನ್ನ ಅಧಿಕಾರವನ್ನು ನಡಸುತ್ತಿರುವುದುಂಟು. ಆದರೆ ನಿಜವಾಗಿ ಈ ದೇಹದ ಒಡೆತನವು ಯಾರದೂ ಇದರ ನಿಜವಾದ ಸ್ವಾಮಿಯು ಎಲ್ಲಿರುವನು? ಇದು ತಿಳಿಯಬೇಕಾದ ಮುಖ್ಯ ಸಂಗತಿಯಾಗಿದೆ.

'ಇದು ನನ್ನ ದೇಹ' ಎಂದು ಸ್ಥೂಲವಾಗಿ ಹೇಳುವ ವಾಡಿಕೆಯುಂಟಾದರೂ 'ನಾನು' ಎಂದರೆ ಯಾರು ಎಂಬುದರ ಸ್ಪಷ್ಟವಾದ ಕಲ್ಪನೆಯಿದ್ದವರೇ ವಿರಳ. ಈ ಮಾತನ್ನು ನಿರ್ಧರಿಸಿ ಸ್ಪಷ್ಟಪಡಿಸಿ ಹೇಳುವ ಶಾಸ್ತ್ರವೇ 'ಅಧ್ಯಾತ್ಮಶಾಸ್ತ್ರ.' ಈ ದೇಹದ ಒಡೆಯನಿಗೆ 'ಆತ್ಮ' ಎಂದು ಹೆಸರು. ಶರೀರರೂಪಿಯಾದ ರಾಜ್ಯದ ಮೇಲೆ ಆತ್ಮನೇ ನಿಜವಾಗಿ ಅರಸುಗೆಯ್ಯಬೇಕು. ಬುದ್ಧಿಯು ಆತ್ಮನ ಸಧರ್ಮಿಣಿ; ಅರಸಿ, ಮಹಾದೇವಿ. ಈ ಸಹಚರಿಯೊಡನೆ ಆತ್ಮನು ರಾಜ್ಯಭಾರ ನಡಸುವನು. ಆತ್ಮನ ದಳವಾಯಿಯು ಮನಸ್ಸು. ಈ ಮನಸೆಂಬ ದಳವಾಯಿಯ ಕಯ್ಯಲ್ಲಿ ಕಣ್ಣು, ಕಿವಿ, ಮೂಗು ಮೊದಲಾದ ಹತ್ತು ಪ್ರಾಂತಗಳ ಒಡೆತನವನ್ನು ಒಪ್ಪಿಸಲಾಗಿದೆ. ಅರಸನು ಕಾಲಕಾಲಕ್ಕೆ ಸೇವಕರನ್ನು ಎಚ್ಚರಿಸಿ ತನ್ನ ಸ್ವಾಮಿತ್ವದ ಅನುಭವವನ್ನು ಅವರಿಗೆ ತಂದುಕೊಡದಿಲ್ಲವಾದರೆ ಆಯಾ ಅಧಿಕಾರಿಗಳು ಮೂಲ ಸ್ವಾಮಿಯನ್ನೇ ಮರೆತು ಆಡಳಿತವನ್ನು ತಾವೇ ಮನಬಂದಂತೆ ನಡಸುವುದುಂಟು!

ಆದುದರಿಂದ ದುರ್ಬಲವಾದ ಆತ್ಮಶಕ್ತಿಯುಳ್ಳವರಿಂದ ತಮ್ಮ ದೇಹದ ಮೇಲೆ ತಮ್ಮದೇ ಆದ ಒಡೆತನವನ್ನು ನಡಸಲಿಕ್ಕಾಗುವುದಿಲ್ಲ. ಅವರ ದೇಹವು ಸಿಟ್ಟು, ಸೆಡವು, ಬಿಂಕ, ಹಮ್ಮು, ಹೊಟ್ಟೆಕಿಚ್ಚು ಮೊದಲಾದ ಕಿರುಕುಳರ ಕೈಯಲ್ಲಿ ಸಿಕ್ಕು ಅರಾಜಕಕ್ಕೆ ಒಳಗಾಗುತ್ತದೆ.

ಈ ಕಾರಣದಿಂದ 'ಸಂಸ್ತಭ್ಯ ಆತ್ಮನಾ ಆತ್ಮಾನಂ' ಎಂದು ಗೀತೆಯು ಹೇಳಿದೆ. ತನ್ನ ಶಕ್ತಿಯಿಂದ ಸಂಯಮಪೂರ್ವಕವಾಗಿ ಎಲ್ಲವನ್ನು ಸ್ಥಿರೀಕರಿಸಿಕೊಳ್ಳಬೇಕು. ದೇಹದ ಮೇಲೆ ತನ್ನ ಕೇವಲ ಆತ್ಮನದೇ ಒಡೆತನ ನಡೆವಂತೆ ನೋಡಿಕೊಳ್ಳಬೇಕು.

ಬುದ್ಧಿಯು ಆತ್ಮನ ಸಹಚರಿ. ಆದರೆ ಅವನು ಕಾಮ, ಕ್ರೋಧಾದಿ ಹೆರವರ ಕೈಗೆಬಿದ್ದು ಅವರು ಹೇಳಿದಂತೆ ಕೇಳಿ ಅವರೊಡನೆ ಬಾಳುವುದುಂಟು. ಈ ಬಗೆಯ ಸ್ವೈರಾಚಾರವು ಅವಳಿಂದ ಆಗದಂತೆ ಎಂದರೆ ಬುದ್ಧಿಯು ಕಾಮ, ಕ್ರೋಧಾದಿಗಳಿಗೆ ವಶವಾಗದಂತೆ ಜಾಗರೂಕರಾಗಿರುವುದು ಕರ್ತವ್ಯವಾಗಿದೆ. ಇಲ್ಲವಾದರೆ ರಾವಣನು ಸೀತೆಯನ್ನು ಕದ್ದೊಯ್ದ ಬಳಿಕ ಅಡವಿಪಾಲಾದ ರಾಮನಂತೆ ದಿಕ್ಕೆಟ್ಟು ಬಳಲುವ ಹೊತ್ತು ಬರುವುದು ನಿಶ್ಚಿತ.

ಆದುದರಿಂದ ಆತ್ಮನಿಗೇ ಅಧೀನವಾಗಿ ಬುದ್ಧಿಯು ಕೆಲಸಮಾಡಬೇಕು. ಆತ್ಮನು ಎಲ್ಲವುಗಳ ಮೇಲೆ ಒಡೆತನವನ್ನು ನಡಸಬೇಕು. ಈ ಬಗೆಯ ಆತ್ಮಶಾಸನದ ಗುಟ್ಟನ್ನು ತಿಳಿಸಿಕೊಡುವುದೇ ಯೋಗಶಾಸ್ತ್ರದ ಗುರಿಯಾಗಿದೆ.

### ಸಂಯಮ

ಆತ್ಮಶಕ್ತಿಯನ್ನು ಸಂಪಾದಿಸಲು ಶ್ರೀಕೃಷ್ಣನು ಇಲ್ಲಿ ಒಂದು ಉತ್ತಮವಾದ ಸಾಧನೆಯನ್ನು ಹೇಳಿದ್ದಾನೆ. 'ಆತ್ಮನಾ ಆತ್ಮಾನಂ ಸಂಸ್ತಭ್ಯ' ಎಂಬುದೇ ಆ ಸಾಧನೆ. ತನ್ನಿಂದ ಏನಾದರೂ ತಪ್ಪುಗಳು ಆದರೆ ಅದಕ್ಕಾಗಿ ತನ್ನನ್ನು ತಾನೇ ಶಿಕ್ಷಿಸಿಕೊಳ್ಳಬೇಕು. ಬೇರೆಯವರು ತನ್ನನು ದಂಡಿಸುವ ಕಾರಣವಿಲ್ಲ. ಅದು ಸಾಧ್ಯವೂ ಇಲ್ಲ. ತನ್ನ ತಪ್ಪು ಒಪ್ಪುಗಳು ತನಗೆ ನಿಶ್ಚಿತವಾಗಿ ತಿಳಿಯುವಂತೆ ಬೇರೆಯವರಿಗೆ ಗೊತ್ತಾಗಲಾರವು. ಆತ್ಮನಿರೀಕ್ಷಣೆಯಿಂದ ತನ್ನ ಕೃತಿಗಳ ವಿಮರ್ಶೆಯನ್ನು ನಡಸುತ್ತಿರಬೇಕು. ಒಳ್ಳೆಯವುಗಳ ಬಗ್ಗೆ ಸಮಾಧಾನತಾಳುವಂತೆ ಕೆಡುಕಾದುವುಗಳನ್ನು ಬಿಡಿಸು ಉಮ್ಮಳಿಸುವುದು ಅವಶ್ಯ. ಆ ಬಗೆಯ ತಪ್ಪು ಇನ್ನೊಮ್ಮೆ ಒದಗದಂತೆ ತನಗೆ ತಾನೇ ತಕ್ಷಣ—ಶಿಕ್ಷೆ—ಕೊಟ್ಟುಕೊಳ್ಳಬೇಕು.

ಹೆರವರ ಮೇಲೆ ಅಧಿಕಾರ ನಡಸುವುದು, ಅವರನ್ನು ದಂಡಿಸುವುದು ಸುಲಭ. ಆದರೆ ತನ್ನನ್ನು ತಾನೇ ಶಿಕ್ಷೆಗೆ ಒಳಗುಮಾಡಿಕೊಳ್ಳುವುದು ಅಷ್ಟು ಸುಲಭವಲ್ಲ. ಏಕೆಂದರೆ ಅನೇಕಸಲ ಬುದ್ಧಿಯು ಮನಸಿನ ಸಹಾಯದಿಂದ ತನ್ನ ತಪ್ಪನ್ನೆ ಒಪ್ಪವೆಂಬಂತೆ ಸಿದ್ಧಮಾಡಿ ತೋರಿಸುವುದು. ಆದಕಾರಣ ತನ್ನ ಕೃತಿಯಲ್ಲಿ ದೋಷವೇ ಕಾಣದಿರುವುದುಂಟು. ಆದರೆ ತನ್ನನ್ನು ಇನ್ನು ಬೇರೆ ಕಳವರ ದೃಷ್ಟಿಯಿಂದಲೂ ನೋಡಿಕೊಂಡು ಅವರು ಆರೋಪಿಸಬಹುದಾದ ಸಂಗತಿಗಳಿಗೆ ತನ್ನಲ್ಲಿ ಏನಾದರೂ ಎಡೆಯಿದೆಯೇ ಎಂಬುದನು ನೋಡಿಕೊಳ್ಳಬೇಕು. ತನ್ನ ತಪ್ಪುಗಳನ್ನು ಒಪ್ಪವೆಂದು ಸಾಧಿಸಿ ಮಾಡಿಕೊಂಬ ಆತ್ಮವಂಚನೆಯಿಂದ ಮಾನವನು ಹೇಳಲಾರದಷ್ಟು ಹಾನಿಮಾಡಿಕೊಳ್ಳುತ್ತಿರುತ್ತಾನೆ.

ಕಾಮರೂಪಿಯಾದ ಹಗೆಯು ನಮ್ಮ ಹಿತಚಿಂತಕನೆಂಬ ಹಾಗಿರುವ ನಾನಾಬಗೆಯ ಸೋಗುಗಳಿಂದ ನಮ್ಮನ್ನು ವಂಚಿಸುತ್ತಿರುವುದುಂಟು. ಆದುದರಿಂದ ಈ ವಿಷಯದಲ್ಲಿ ಮೈತುಂಬ ಕಣ್ಣುಳ್ಳವರಾಗಿ ಕಾಮರೂಪಿಯಾದ ಹಗೆಯನ್ನು ಹೊಡೆದು, ಹಿಡಿತದಲ್ಲಿ ಇಟ್ಟುಕೊಳ್ಳಬೇಕು.

ಇಂದ್ರಿಯಗಳಿಗೆ 'ಇಂದ್ರ' ವೆಂಬ ಸಂಜ್ಞೆಯಿದೆ. ಇಂದ್ರನಿಗೆ ವೃತ್ರಾದಿ ಶತ್ರುಗಳುಂಟು ವೇದದೊಳಗಿನ ಇಂದ್ರ-ವೃತ್ರರ ಕಾಳಗ, ಪುರಾಣದೊಳಗಿನ ದೇವಾಸುರ ಯುದ್ಧಗಳು ಇವೆಲ್ಲ ಬಹ್ವಂಶದಿಂದ ಆಧ್ಯಾತ್ಮಕ್ಷೇತ್ರದೊಳಗಿನ ರೂಪಕಗಳೇ ಸರಿ.

'ಯೋ ಬುದ್ಧೇಃ ಪರತಸ್ತು ಸಃ' ಎಂಬಲ್ಲಿ 'ಸಃ' ಎಂದರೆ ಆತ್ಮನು, ಎಂದೇ ಅರ್ಥವು ತಕ್ಕುದಾಗಿದೆ ಉಪನಿಷತ್ತಿನಲ್ಲಿಯೂ ಇದೇ ಬಗೆಯ ಒಂದು ಶ್ಲೋಕವುಂಟು. ಆದರೆ ಕೆಲರು 'ಸಃ' ಎಂದರೆ 'ಕಾಮ' ಎಂದು ಹೇಳುವರು.

ಇಂದ್ರಿಯೇಭ್ಯಃ ಪರಾಹ್ಯರ್ಥಾ
ಅರ್ಥೇಭ್ಯಶ್ಚ ಪರಂ ಮನಃ ।
ಮನಸಸ್ತು ಪರಾ ಬುದ್ಧಿಃ ಬುದ್ಧೇರಾತ್ಮಾ
ಮಹಾನ್ಪರಃ ॥
ಮಹತಃ ಪರಮವ್ಯಕ್ತಂ ಅವ್ಯಕ್ತಾತ್ಪುರುಷಃ ಪರಃ ।
ಪುರುಷಾನ್ನ ಪರಂ ಕಿಂಚಿತ್ ಸಾಕಾಷ್ಠಾ
ಸಾಪರಾಗತಿಃ ॥
ಕಠ ೧.೩. ೧೦-೧೧

“ಇಂದ್ರಿಯಗಳಿಗಿಂತ ವಿಷಯವು ಹೆಚ್ಚಿನದು. ವಿಷಯಗಳಿಂದ ಮನಸು ಹೆಚ್ಚಿನದು. ಮನಸಿಗಿಂತ ಬುದ್ಧಿಯು ಮಿಗಿಲು ಬುದ್ಧಿಯಿಂದ ಮಹತ್ ತತ್ವವು ಹಿರಿದು; ಮಹತ್ ತತ್ವದಿಂದ ಮೂಲ ಪ್ರಕೃತಿಯು ಹಿರಿದು; ಅವ್ಯಕ್ತ ಮೂಲ ಪ್ರಕೃತಿಯಿಂದ ಪುರುಷನು ಮೇಲು. ಪುರುಷನೇ ಎಲ್ಲವುಗಳ ಕೊನೆ ಹಾಗೂ ಗೊನೆಯಾಗಿರುವುದರಿಂದ ಇವನಿಂದ ಮಿಗಿಲಾದುದು ಯಾವುದೂ ಇಲ್ಲ.''

ಉಪನಿಷತ್ತಿನ ಸಾರವೇ ಗೀತೆ. ಆದುದರಿಂದ ಮೇಲಣ ಉಪನಿಷನ್ಮಂತ್ರದಲ್ಲಿ ಬಂದ ವಿಚಾರವೇ ಗೀತೆಯಲ್ಲೂ ಉಂಟೆಂಬಲ್ಲಿ ಸಂದೇಹವಿಲ್ಲ. ಆದಕಾರಣ 'ಪರತಸ್ತು ಸಃ,' ಎಂಬಲ್ಲಿ 'ಸಃ' ಎಂದರೆ ಕಾಮವೆಂದು ಅರ್ಥವಾಗಲಾರದು; ಆತ್ಮವೆಂದೇ ಅರ್ಥ ಹೇಳುವುದು ಯೋಗ್ಯವಾಗಿದೆ. ಕಠೋಪನಿಷತ್ತಿನ ಬೇರೆ ಎರಡು ಶ್ಲೋಕಗಳಲ್ಲಿ ಹೀಗಿದೆ:

ಇಂದ್ರಿಯೇಭ್ಯಃ ಪರಂ ಮನಃ
ಮನಸಃ ಸತ್ವಮುತ್ತಮಮ್ ।
ಸತ್ವಾದಧಿ ಮಹಾನಾತ್ಮಾ
ಮಹತೋಽವ್ಯಕ್ತಮುತ್ತಮಮ್ ॥
ಅವ್ಯಕ್ತಾತ್ತು ಪರಃ ಪುರುಷಃ
ವ್ಯಾಪಕೋಽಲಿಂಗ ಏವಚ ।
ಯಜ್ಞಾತ್ವಾ ಮುಚ್ಯತೇ ಜಂತುಃ
ಅಮೃತತ್ವಂಚ ಗಚ್ಛತಿ ॥
ಕಠ ೨.೩.(೬) ೭-೮

“ಇಂದ್ರಿಯದಿಂದ ಮನಸು, ಮನಸಿನಿಂದ ಬುದ್ಧಿ, ಬುದ್ಧಿಗಿಂತ ಅವ್ಯಕ್ತ ಮೂಲ ಪ್ರಕೃತಿ, ಮಿಗಿಲಾದುದಾಗಿದೆ. ಯಾವನನ್ನು ಅರಿಯುವುದರಿಂದ ಅಮೃತತ್ವವು ದೊರೆಯುವುದೊ ಆ ಪುರುಷನು ಮೂಲ ಪ್ರಕೃತಿಗಿಂತಲೂ ಶ್ರೇಷ್ಠನೂ ಸರ್ವವ್ಯಾಪಿಯೂ, ನಿರ್ಗುಣನೂ ಆಗಿರುವನು.”

ಕಠೋಪನಿಷತ್ತಿನ ಇವೆರಡೂ ಮಂತ್ರಗಳನ್ನು ಗೀತೆಯ ಶ್ಲೋಕದೊಡನೆ ತೂಗಿ ನೋಡಬಹುದಾಗಿದೆ.

| ಗೀತೆ | ಕಠ | ಕಠ |
|---|---|---|
| .. | ೧.೩.೧೦-೧೧ | ೨.೩. (೬) ೭-೮ |
| ಶರೀರ | ಶರೀರ | ಶರೀರ |
| ಇಂದ್ರಿಯ | ಇಂದ್ರಿಯ | ಇಂದ್ರಿಯ |
| .. | ಅರ್ಥ | .. |
| ಮನ | ಮನ | ಮನ |
| ಬುದ್ಧಿ | ಬುದ್ಧಿ | ಸತ್ವ |
| .. | ಮಹಾನ್ ಆತ್ಮಾ (ಅಹಂಕಾರ) | ಮಹಾನ್ ಆತ್ಮಾ (ಅಹಂಕಾರ) |
| .. | ಅವ್ಯಕ್ತ (ಪ್ರಕೃತಿ) | ಅವ್ಯಕ್ತ (ಪ್ರಕೃತಿ) |
| ಸಃ | ಪುರುಷಃ | ವ್ಯಾಪಕಃ ಪುರುಷಃ |

ಈ ಸಾಮ್ಯದ ಮೇಲಿಂದ ಗೀತೆಯಲ್ಲಿ ಉಪನಿಷತ್ತಿಗಿಂತಲೂ ಬೇರೆ ಹೇಳಿಲ್ಲವೆಂದು ಮನವರಿಕೆಯಾಗದೆ ಇರದು. ಉಪನಿಷತ್ತಿನಲ್ಲಿ ಒಂದೆಡೆ ಏಳು ತತ್ವಗಳ ಉಲ್ಲೇಖವಿದೆ ಇನ್ನೊಂದೆಡೆಗೆ ಆರು ತತ್ವ ಹೇಳಿದೆ. ಗೀತೆಯು ಇದನ್ನೆ ಸಂಕ್ಷೇಪಿಸಿ ಸ್ವಲ್ಪದರಲ್ಲಿ ನಾಲ್ಕು ತತ್ವಗಳನ್ನು ಹೇಳಿ ಅದೇ ಮಾತನ್ನೆ ಪ್ರತಿಸಿದ್ದಾಗಿದೆ.

ಇನ್ನು 'ಸಃ' ಎಂದರೆ ಕಾಮ ಎಂದು ಅರ್ಥವನ್ನು ಗ್ರಹಿಸಿ ಮತ್ತು ಪುರುಷನೆಂದು ಅರ್ಥ ಮಾಡಿ ಆಗುವ ಎರಡೂ ಬಗೆಯ ವಿವರಣೆಯನ್ನು ಇಲ್ಲಿ ಕೊಡಲಾಗುವುದು.

" ಸಃ = ಕಾಮಃ "

'ಸಃ' ಎಂದರೆ ಕಾಮವೆಂದು ಅರ್ಥ ಹೇಳಿದ ಆಚಾರ್ಯರಲ್ಲಿ ಮೊದಲಿಗರೆಂದರೆ ಶ್ರೀ. ಶ್ರೀರಾಮಾನುಜಾಚಾರ್ಯರೇ ಅಹುದು. ಶ್ರೀ. ಭ ಮಾಯಾನಂದ ಚೈತನ್ಯರಿಗೂ ಈ ಅರ್ಥವು ಒಪ್ಪಿಗೆಯಿದೆ. ಮತ್ತು ಇದುವ ಹೇಗೆ ಉಚಿತವೆಂದು ಹೇಳುವುದಕ್ಕೆ ಹೀಗೆ ಕಾರಣಗಳನ್ನು ಹೇಳಿದ್ದಾರೆ. (೧) ಉಪನಿಷತ್ತಿನ ಅವತರಣಿಕೆಯನ್ನು ಕೊಡುವಾಗ ಅದನ್ನು ಭಗವದ್ಗೀತೆಯಂತೆ ಮಾರ್ಪಡಿಸಿಕೊಂಡಿದ್ದಾರೆ. 'ಯೋ ಬುದ್ಧೇಃ ಪರತಸ್ತು ಸಃ' ಎಂದೇ ಉಪನಿಷತ್ತನ್ನೂ ಉಲ್ಲೇಖಿಸಿದ್ದಾರೆ. ಮತ್ತು 'ಸಃ' ಎಂದರೆ ಆತ್ಮವಲ್ಲ; 'ಕಾಮ' ಎಂದು ಅರ್ಥ ಹೇಳಿದ್ದಾರೆ. (೨) ಶ್ರೀ ಕೃಷ್ಣಾರ್ಜುನರ ಈ ಸಂವಾದದಲ್ಲಿ ಕಾಮದ ವಿಚಾರವೇ ನಡೆದಿದೆ. ಆತ್ಮದ ಮಾತೇ ಬರುವುದಿಲ್ಲ. ಆದುದರಿಂದ ಹಿಂದು ಮುಂದಿನ ಸಂದರ್ಭವನ್ನು ನೋಡಿದರೆ ಸಃ ಎಂದರೆ ಕಾಮವೆಂದು ಅರ್ಥಮಾಡುವುದೇ ಸಮಂಜಸವಾಗಿದೆ. ಮತ್ತು ಅದು ಬುದ್ಧಿಗಿಂತಲೂ ಶ್ರೇಷ್ಠವೆಂದೂ ಗ್ರಹಿಸುವುದು ತಕ್ಕುದಾಗಿದೆ (೩) ಕಾಮವು ಮನಸಿನ ಧರ್ಮ; ಆದುದರಿಂದ ಅದು ಬುದ್ಧಿಯ ಆಚೆಯದೆಂದು ಹೇಳುವುದು ತಪ್ಪು, ಎಂದು ಯಾರಾದರೂ ಸಂದೇಹಪಟ್ಟುಕೊಳ್ಳಬಹುದು. ಆದರೆ ಈ ಸಂದೇಹದಲ್ಲಿ ಹುರುಳಿಲ್ಲ. ಏಕೆಂದರೆ:

**ಸೋಽಕಾಮಯತ ಬಹುಸ್ಯಾಂ ಪ್ರಜಾಯೇಯೇತಿ |**
—ತೈ. ಉ. ೨-೬-೧

**ಸೋಽಕಾಮಯತ ದ್ವಿತೀಯೋ ಮ ಆತ್ಮಾ ಜಾಯತೇತಿ |**
—ಬೃ. ಉ. ೧-೨-೪

**ಪುರುಷೋ ಹ ವೈ ನಾರಾಯಣೋಽಕಾಮಯತ ||**
ನಾರಾ. ಉ. ೧

"ಆ ಆತ್ಮನು, ಪುರುಷನು ಅಥವಾ ನಾರಾಯಣನು ತಾನು ಹಲವು ಆಗಬೇಕೆಂದು ಬಯಸಿದನು." ಈ ಬಯಕೆ ಎಂದರೆ ಕಾಮವು ಬುದ್ಧಿಗಿಂತ ಮೊದಲಿನದು, ಆದಕಾರಣ ಬುದ್ಧಿಗಿಂತ ಮೇಲಣದು.

ಕಾಮವು ಮನೋಧರ್ಮವಾಗಿರದೆ ಚಿತ್ತದ ಗುಣವು. ಚಿತ್ತವು ಬುದ್ಧಿಗಿಂತಲೂ ಸೂಕ್ಷ್ಮವಾದುದು. ಮನಸು ಕೇವಲ ಸಂಕಲ್ಪ ವಿಕಲ್ಪಾತ್ಮಕವಾದುದು. ಚಿತ್ತವು ಸಂಕಲ್ಪ ಮಾಡುವುದು, ಬೇಡುವುದು ಈ ಕಾಮನೆಯ ಪ್ರೇರಣೆಯಿಂದ ಬುದ್ಧಿಯೂ ಅಡ್ಡದಾರಿ ಹಿಡಿಯುವುದು. ವಾಸನಾಯುಕ್ತವಾದ ಅಹಂಕಾರ ರೂಪಿಯಾದ ಸೂಕ್ಷ್ಮ ಇಚ್ಛೆಯೇ ಕಾಮವೆನಿಸುವುದು. ಆದಕಾರಣ ಅದು ಬುದ್ಧಿಗಿಂತಲೂ ಮಿಗಿಲಾದುದು. ಆದುದರಿಂದ ಕಾಮವು ಬುದ್ಧಿ, ಮನಸು, ಇಂದ್ರಿಯಗಳ ಮೇಲೆ ತನ್ನ ಪ್ರಭಾವವನ್ನು ಬೀರುವುದು. 'ಏಕೋಽಹಂ ಬಹುಸ್ಯಾಂ,' ಎಂಬುದಿದು ಪರಮಾತ್ಮನ ಮೊದಲ ಮೂಲಭೂತ ಕಾಮವು. ಇದುವೆ ಎಲ್ಲೆಲ್ಲೂ ತುಂಬಿಕೊಂಡಿದೆ. ಆದಕಾರಣ 'ಸಃ' ಎಂದರೆ ಇಲ್ಲಿ ಕಾಮವೆಂಬ ಅರ್ಥವೇ ತಕ್ಕುದಾಗಿದೆ.

ತಿಲಕ ಮಹಾವಿದ್ಯಾಲಯದ ಶ್ರೀ. ಆಚಾರ್ಯ ವಿ. ಪ್ರ. ಲಿಮಯೆ ಅವರೂ ಇದೇ ಅರ್ಥವನ್ನು ಮಾನ್ಯ ಮಾಡಿದ್ದಾರೆ. ಉಪನಿಷತ್ತಿನೊಳಗಿನ 'ಮಹಾನ್ ಆತ್ಮಾ' ಎಂಬಲ್ಲಿ 'ಆತ್ಮಾ' ಎಂದರೆ 'ಅಹಂಕಾರ' ವೆಂಬ ಭಾವವೇ ಇದೆ. ಏಕೆಂದರೆ ಬುದ್ಧಿಯ ಆಚೆಗೆ ಅಹಂಕಾರವೇ ಉಂಟು. ಅಹಂಕಾರದ ಪರ್ಯಾಯ ನಾಮವೇ ಕಾಮವೆಂಬುದು ಅಹಂಕಾರದ ಆಚೆಗೆ ಅವ್ಯಕ್ತ (ಪ್ರಕೃತಿ) ಇದೆ. ಅದರ ಆಚೆಗೆ 'ಪರ(ಮ) ಪುರುಷ' ನುಂಟು. ಅನುಕ್ರಮವಾಗಿ ಇವು ಒಂದರಿಂದ ಒಂದು ಮಿಗಿಲಾದುವೆಂದು ಗೀತೆಯಲ್ಲಿ ಹೇಳಿದೆ.

**ಇಂದ್ರಿಯಾಣಿ ಮನೋಬುದ್ಧಿಃ ಅಸ್ಯಾಧಿಷ್ಠಾನಮುಚ್ಯತೇ||**
ಗೀ. ೩-೪೦

ಇಂದ್ರಿಯಗಳು, ಮನಸು, ಬುದ್ಧಿ ಇವೆಲ್ಲವುಗಳು ಕಾಮದ (ಅಸ್ಯ-ಕಾಮಸ್ಯ) ಅಧಿಷ್ಠಾನಗಳಾಗಿವೆ. ಆದುದರಿಂದ ಈ ಕಾಮವು ಬುದ್ಧಿಗಿಂತ ಶ್ರೇಷ್ಠವಾದುದಾಗಿದೆ. ಪರಮಾತ್ಮನ ಅಹಂಕಾರವು ಅಥವಾ ನಾನುತನವು-ಯಾವುದರಿಂದ ಮೂಲ ವಾಸನೆಗಳು ತಲೆದೋರಿ ಅಹಂಕಾರ, ಬುದ್ಧಿ, ಮನಸುಗಳೆಲ್ಲವೂ ಹುಟ್ಟಿದುವೊ— ಆ ಬುದ್ಧಿ ಪ್ರೇರಕವಾದ ಕಾಮವೇ ಇಲ್ಲಿ 'ಸಃ' ಎಂಬುದರಿಂದ ನಿರ್ದಿಷ್ಟವಾಗಿದೆ.

ಇದನ್ನು ಒಪ್ಪಿದಲ್ಲಿ ೪೨, ೪೩ ನೆಯ ಶ್ಲೋಕದ ಅರ್ಥವು ಹೀಗಾಗುವುದು. "ಇಂದ್ರಿಯಗಳು ದೇಹದಿಂದ ಮಿಗಿಲು; ಇಂದ್ರಿಯಗಳಿಂದ ಮನಸು ಮಿಗಿಲು; ಮನಸಿನಿಂದ ಬುದ್ಧಿ ಮಿಗಿಲು; ಬುದ್ಧಿಯಿಂದ ಕಾಮವು ಮಿಗಿಲು; ಎಂಬ ಈ ಮಾತನ್ನು ಅರಿತು ನಿನ್ನ ಆತ್ಮದಿಂದ ಆತ್ಮನ ಸಂಯಮನಮಾಡಿ ಗೆಲ್ಲಲು ಕಷ್ಟಕರವಾದ ಕಾಮರೂಪಿಯಾದ ಈ ಹಗೆಯನ್ನು ನಾಶಮಾಡು." ಇದಕ್ಕೆ ಪೋಷಕವಾಗಿ ಭಾರತದಲ್ಲಿ ಬಂದ ಒಂದು ಶ್ಲೋಕವು ಹೀಗಿದೆ:

**ಆತ್ಮನಾ ಸಪ್ತಮಂ ಕಾಮಂ ಹತ್ವಾ**
**ಶತ್ರುಮಿವೋತ್ತಮಮ್ |**

ಪ್ರಾಪ್ಯಾವಧ್ಯಂ ಬ್ರಹ್ಮಪುರಂ ರಾಜೇವ
ಸ್ಯಾಮಹಂಸುಖೀ ||
ಶಾಂ. ೧೭೭

"ದೇಹದಿಂದ ಎಣಿಕೆ ಮಾಡುವಲ್ಲಿ ಏಳನೆಯವನಾದ ಆ ಪ್ರಬಲ ಶತ್ರುವನ್ನು ಕೊಂದು ನಾಶರಹಿತವಾದ ಬ್ರಹ್ಮ ಪುರಿಯನ್ನು ಹೊಂದಿ ರಾಜನಂತೆ ಸುಖಿಯಾಗಿ ಇರುವೆನು.'' ಕಾಮನು ಸ್ಥೂಲದೇಹದಿಂದ ಏಳನೆಯವನೆಂದು ಇಲ್ಲಿ ಹೇಳಿದೆ. ದೇಹ, ಇಂದ್ರಿಯಗಳು, ವಿಷಯ, ಮನಸು, ಬುದ್ಧಿ, ಅಹಂಕಾರ, ಕಾಮ ಎಂಬುದೇ ಆ ಅನುಕ್ರಮವು. ಇನ್ನು ಸಃ ಎಂದರೆ ಆತ್ಮನು ಎಂಬ ಪಕ್ಷದ ವಿಚಾರ:

"ಸಃ = ಆತ್ಮಾ"

ಈ ಅರ್ಥವನ್ನು ಪ್ರತಿಪಾದಿಸುವವರಲ್ಲಿ ಶ್ರೀಮತ್ ಶಂಕರಾಚಾರ್ಯರೇ ಪ್ರಮುಖರು. ಮುಂದಿನ ಅವರ ಅನುಯಾಯಿಗಳಲ್ಲಿ ಶ್ರೀಧರ ಸ್ವಾಮಿ, ಮಧುಸೂದನ ಸರಸ್ವತಿ ಮೊದಲಾದವರೂ ಆಧುನಿಕರಲ್ಲಿ ಶ್ರೀ. ಲೋಕಮಾನ್ಯ ಟಿಳಕರೂ ಮಹಾತ್ಮಾ ಗಾಂಧಿಜೀಯವರೂ ಈ ಅಭಿಪ್ರಾಯದವರೇ ಆಗಿದ್ದಾರೆ. ಶ್ರೀ ಜ್ಞಾನೇಶ್ವರರು ಈ ಮಾತಿನ ಮೇಲೆ ಯಾವ ಅಭಿಪ್ರಾಯದವರಾಗಿದ್ದರೆಂಬುದನ್ನು ತಿಳಿದುಕೊಳ್ಳಲು ಎಡೆಯಿಲ್ಲದಾಗಿದೆ. ಏಕೆಂದರೆ ಇದರ ವಿವರಣದ ಅವಶ್ಯಕತೆಯೇ ಅವರಿಗೆ ತೋರದೆ ಮುಂದೆ ಸಾಗಿದ್ದಾರೆ. ಶ್ರೀ. ಮಾಯಾನಂದ ಚೈತನ್ಯರು ಹಿಂದೀ ಭಾಷಾಂತರದಲ್ಲಿ 'ಸಃ' ಎಂಬುದಕ್ಕೆ ಆತ್ಮ ವೆಂಬರ್ಥವನ್ನು ಹೇಳಿದ್ದಾರೆ. ಶ್ರೀ. ತುಕಾರಾಮ, ವಾಮನ ಪಂಡಿತ, ಮೋರೋಪಂತರು, ಮುಕ್ತೇಶ್ವರ, ಉದ್ಧವ ಚಿದ್ಘನ ಮೊದಲಾದ ಮಹಾರಾಷ್ಟ್ರದ ಸಂತರು ಈ ಪಂಥದವರೆ ಇದ್ದಾರೆ. ಅಹಂಕಾರ ಮತ್ತು ಮೂಲ ಪ್ರಕೃತಿಯ ಆಚೆಗೆ ಇರುವ ಆ ಪುರುಷೋತ್ತಮನ ಶಕ್ತಿಯು ಎಲ್ಲಕ್ಕೂ ಮಿಗಿಲೆಂದು ಈ ಪಂಥದವರ ಅಭಿಮತವಾಗಿದೆ. ಈ ಆತ್ಮಶಕ್ತಿಯ ಬಲದಿಂದ ಎಲ್ಲ ಇಂದ್ರಿಯಗಳನ್ನು ಅಂಕೆಯಲ್ಲಿರಿಸಿಕೊಳ್ಳಬೇಕು; ದುರ್ಜಯವಾದ ಕಾಮರೂಪಿಯಾದ ಶತ್ರುವನ್ನು ಕೊಲ್ಲಬೇಕು ಎಂದು ಇವರು ಹೇಳುತ್ತಾರೆ.

ಇಲ್ಲಿ ಓದುಗರು, ತಮಗೆ ಯಾವ ಪಂಥವು ಹೆಚ್ಚು ಸಮರ್ಪಕವೆನಿಸುವುದೊ ಅದನ್ನು ಸ್ವೀಕರಿಸಬೇಕು. ಏಕೆಂದರೆ ಮಹಾ ಮಹಾ ಆಚಾರ್ಯರೂ, ವಿದ್ವಾಂಸರೂ ಭಿನ್ನಾಭಿಪ್ರಾಯವುಳ್ಳವರಾಗಿರುವಲ್ಲಿ ನಮ್ಮ ಮತಕ್ಕೇನು ಮಹತ್ವ? ಪ್ರತಿಯೊಬ್ಬರೂ ತಮ್ಮ ಅಂತಃಕರಣಕ್ಕೆ ಸಮಾಧಾನಕರವಾದ ಅರ್ಥವನ್ನು ಸ್ವೀಕರಿಸುವುದು ಲೇಸು

ಇಂತು ಶ್ರೀಮದ್ಭಗವದ್ಗೀತಾರೂಪಿಯಾದ ಉಪನಿಷತ್ತಿನಲ್ಲಿ ಹೇಳಿದ ಬ್ರಹ್ಮವಿದ್ಯೆಯಿಂದ ನಿರ್ಧರಿಸಲ್ಪಟ್ಟ ಯೋಗಶಾಸ್ತ್ರ ವಿಷಯಕವಾದ ಶ್ರೀಕೃಷ್ಣಾರ್ಜುನ ಸಂವಾದದೊಳಗಿನ 'ಕರ್ಮಯೋಗ'ವೆಂಬ ಮೂರನೆಯ ಅಧ್ಯಾಯವು ಮುಗಿದುದು.



## ಶ್ರೀಮದ್ಭಗವದ್ಗೀತೆಯ ಮೂರನೆಯ ಅಧ್ಯಾಯದ ಸ್ವಲ್ಪ ವಿವರಣೆ

# ಕರ್ಮಯೋಗ ವಿಚಾರವು



ಕರ್ಮವನ್ನು ಏಕೆ ಮಾಡಬೇಕು? ಯಾವುದನ್ನು ಮಾಡಬೇಕು? ಹೇಗೆ ನಿರ್ವಹಿಸಬೇಕು? ಎಂಬೀ ಸಂಗತಿಗಳನ್ನು ಈ ಅಧ್ಯಾಯದಲ್ಲಿ ವಿವರಿಸುವುದರಿಂದ ಇದಕ್ಕೆ 'ಕರ್ಮಯೋಗ' ವೆಂಬ ಹೆಸರು ಸಾರ್ಥವಾಗಿದೆ.

ಅರ್ಜುನನಿಗೆ ಮೋಹವುಂಟಾಗಿ ಕಾಳಗ ಮಾಡಿದರೆ ಬಂಧು ಬಳಗದವರ ಕೊಲೆಮಾಡಿದಂತಾಗುವುದೆಂಬ ಗ್ರಹಿಕೆಯಾಗುವುದು. ಆತನ ಈ ತಪ್ಪು ತಿಳುವಳಿಕೆಯನ್ನು ಹೊಡೆದು ಹಾಕಲು ಶ್ರೀಕೃಷ್ಣನು ಎರಡನೆಯ ಅಧ್ಯಾಯದ ಆರಂಭದಲ್ಲಿ, ಸಾಂಖ್ಯತತ್ವಕ್ಕನುಸರಿಸಿ 'ಆತ್ಮವು ಅಮರ' ವೆಂಬ ಮಾತನ್ನು ಮನಗಾಣಿಸಿ ಕೊಟ್ಟನು. ಆತ್ಮವು ಅಮರವಾದುದರಿಂದ ನಾನು ಕೊಲ್ಲುತ್ತೇನೆ, ಅಥವಾ ಕೊಲ್ಲಲ್ಪಡುತ್ತೇನೆಂದು ಬಗೆಯುವುದು ಕೇವಲ ಭ್ರಮೆಯೆಂಬುದನ್ನು ತಿಳಿಸಿ ಹೇಳಿದನು. ಮಾನವನ ಸ್ವಭಾವ ಕೆಲಸ ಮಾಡುವುದು. ಅದನ್ನು ಆತನು ಮಾಡುತ್ತಿದ್ದರಾಯಿತು. ನಿರ್ಮಮ, ನಿರಹಂಕಾರ, ನಿಸ್ಪೃಹ, ನಿಷ್ಕಾಮ ಸ್ಥಿತಿಯನ್ನೈದಿದಲ್ಲಿ ಬ್ರಾಹ್ಮೀ ಸ್ಥಿತಿಯು ಪ್ರಾಪ್ತವಾಗುವುದು. ಇದು ಎಲ್ಲಕ್ಕಿಂತ ಶ್ರೇಷ್ಠ ಪದವಿಯಾಗಿದೆ. ಕರ್ಮವು ಗೌಣ. ಈ ಬ್ರಾಹ್ಮೀ ಸ್ಥಿತಿಯೇ ಮಾನವನ ಗುರಿ; ಎಂದು ಶ್ರೀಕೃಷ್ಣನು ಎರಡನೆಯ ಅಧ್ಯಾಯದಲ್ಲಿ ಹೇಳಿದ ಮಾತಿಗೆ ಅರ್ಜುನನು ಸಂದೇಹಗೊಂಡು ಕೇಳುವನು ಕರ್ಮಮಾರ್ಗವು ಗೌಣವಿದ್ದು, ಜ್ಞಾನಮಾರ್ಗವೇ ಶ್ರೇಷ್ಠವಾಗಿದ್ದರೆ, ದೋಷಯುಕ್ತವಾದ ಗೌಣ ಕರ್ಮಗಳನ್ನು ಮಾಡಲು ನನಗೆ ಏಕೆ ಹೇಳುವೆ? ಜ್ಞಾನಮಾರ್ಗವನ್ನವಲಂಬಿಸಿ ನಾನು ಬ್ರಾಹ್ಮೀಸ್ಥಿತಿಯನ್ನು ಏಕೆ ಸಂಪಾದಿಸಬಾರದು?

ಎಂದು ಪ್ರಶ್ನೆ ಕೇಳಿ ಅರ್ಜುನನು ಶ್ರೀಕೃಷ್ಣನಿಂದ ಅದರ ಉತ್ತರವನ್ನು ಹಾರಯಿಸುತ್ತಾನೆ.

ತದೇಕಂ ವದ ನಿಶ್ಚಿತ್ಯ ಯೇನ
ಶ್ರೇಯೋಹಮಾಪ್ನುಯಾಮ್ ॥ ೨ ॥

"ಯಾವುದನ್ನು ಅನುಸರಿಸುವುದರಿಂದ ನನಗೆ ಲೇಸಾದೀತು ಅಂತಹ ಒಂದೇ ಮಾತನ್ನು ನನಗೆ ಹೇಳು" ಎರಡೆರಡು ದಾರಿಗಳನ್ನು ಹೇಳಿ ಗೊಂದಲದಲ್ಲಿ ಕೆಡಹಬೇಡವೆಂದು ಅರ್ಜುನನು ಬೇಡಿಕೊಳ್ಳುವನು!

### ಎರಡು ಬಗೆಯ ಜನಗಳು

ಈ ಲೋಕದಲ್ಲಿ ಜನಸ್ವಭಾವವು ದ್ವಿವಿಧವಾಗಿದೆ. ಕೆಲರಿಗೆ ಜ್ಞಾನಮಾರ್ಗದಲ್ಲಿ ಬಲವು ಕೆಲರಿಗೆ ಕರ್ಮದಲ್ಲಿ ಪ್ರೀತಿ ಇವರು ತಮ್ಮ ತಮ್ಮ ದಾರಿಯಿಂದ ಹೋದರೇ ಲೇಸು; ಎಂದು ಶ್ರೀಕೃಷ್ಣನು ಅರ್ಜುನನ ಪ್ರಶ್ನೆಗೆ ಉತ್ತರವೀಯಲಾರಂಭಿಸುವನು.

ಸಾತ್ವಿಕ, ರಾಜಸ, ತಾಮಸರೆಂದು ಮೂರು ಪ್ರಕಾರದವರಲ್ಲಿ ತಾಮಸಿಗರು ಆಲಸಿಗರು. ಅವರಿಗೆ ಏನೂ ಬೇಡ. ಮೈಗಳ್ಳರು; ಜೀವಗಳ್ಳರು ಇವರು; ರಾಜಸಿಗರು ಕರ್ಮನಿಷ್ಠರೂ, ವೈಭವ ಸುಖಗಳನ್ನು ಹಾರಯಿಸುವವರೂ ಆಗಿರುತ್ತಾರೆ. ಸಾತ್ವಿಕರಿಗೆ ಜ್ಞಾನ ಜಿಜ್ಞಾಸೆಯೆ ಮುಖ್ಯ.

### ಜ್ಞಾನಿಯೆಂದರೆ ಕೆಲಸಗೇಡಿಯಲ್ಲ

ಕೆಲಸದಲ್ಲಿ ತೊಡಗಿದವರು ಕರ್ಮನಿಷ್ಠರು ಆದುದರಿಂದ ಜ್ಞಾನನಿಷ್ಠರೆಂದರೆ ಕೆಲಸವಿಲ್ಲದ ಇರುವವರು, ಎಂದು ಹಲವರಿಗೆ ಭ್ರಮೆ ಇದೆ! ಜ್ಞಾನಿಯು, ಮೊದ್ದನು ಮೈಗಳನು ಇವರುಗಳು ತೋರಿಕೆಯಲ್ಲಿ ಹಲವು ಬಾರಿ ಒಂದೇ ಒಗೆಯಾಗಿ ಕಾಣುತ್ತಾರೆ. ಕೆಲಸ ಮಾಡದವರು ಜ್ಞಾನಿಗಳಾಗುವುದಾದರೆ ಮೈಗಳ್ಳರೆಲ್ಲರೂ ತತ್ವಜ್ಞರೇ ಆಗಬೇಕಾದೀತು

ಹೊರಗೆ ತೋರಿಸಿಕೊಳ್ಳುವುದಕ್ಕಾಗಿ ಕರ್ಮೇಂದ್ರಿಯಗಳನ್ನು ಬಿಗಿಹಿಡಿದಿಟ್ಟು ಸಾಧು ಸತ್ಪುರುಷನೆಂಬಂತೆ ನಟಿಸುತ್ತ ಮನಸಿನಲ್ಲಿ ಹಲವು ವಿಷಯ ವಾಸನೆಗಳಿಗೆ ಎಡೆಗೊಡುವ ಜನರಿಗೆ 'ಮಿಥ್ಯಾಚಾರಿಗಳು' ಎಂದು ಹೆಸರು (೬ ಶ್ಲೋ).

ಜನರಿಗೆ ಮೋಸಗೊಳಿಸುವುದಕ್ಕಾಗಿ ಅಥವಾ ಜನರಿಂದ ಸನ್ಮಾನಹೊಂದಲು ಹೊರಗೆ ಸಂಯಮಿಯಂತೆ ನಟಿಸುವವರ ನೆಲೆಯು ಜನಗಳಿಗೆ ಒಮ್ಮೆಲೆ ಗೊತ್ತಾಗುವುದಿಲ್ಲ. ಅದರಿಂದ ಈ ಬಗೆಯ ಡೊಂಬಿಗರ ಮಾತು, ವೇಷಗಳಿಂದ ಜನರು ಮೋಸಹೋಗುವುದುಂಟು.

## ಕರ್ಮತ್ಯಾಗವು ಅಸಂಭವ

ಕೆಲಸ ಮಾಡದ ಜೀವಿಯೇ ಇಲ್ಲ (ಶ್ಲೋ. ೫). ಕೆಲಸ ಬಿಡಬೇಕೆಂಬುದೂ ಒಂದು ಕೆಲಸವೇ ಆಗಿದೆ. ದೇಹ ವ್ಯಾಪಾರಗಳು ನಡೆಯಲು ಕೆಲಸಗಳು ಬೇಕೇ ಬೇಕು. ಆದಕಾರಣ ಕರ್ಮಸಂನ್ಯಾಸವೆಂದರೆ ನಿಷ್ಕ್ರಿಯತ್ವವಲ್ಲ. ಏನೂ ಕೆಲಸವೇ ಇಲ್ಲದೆ ಒಂದು ಅರಗಳಿಗೆಯೂ ಇರುವುದು ಯಾರಿಂದ ಸಾಧ್ಯವಿಲ್ಲ. ಒದುಕುವುದು—ಉಸಿರಾಡಿಸುವುದು ಇದೂ ಒಂದು ಕರ್ಮವೇ. ಆದಕಾರಣ ಮನಸಿನಿಂದ ಇಂದ್ರಿಯಗಳನ್ನು ಸ್ವಾಧೀನದಲ್ಲಿ ಇಟ್ಟುಕೊಂಡು ಕೆಲಸಮಾಡುವವನು ಶ್ರೇಷ್ಠನೆನಿಸುವನು (ಶ್ಲೋ. ೭). ಇದರಿಂದ ಆತನ ಯೋಗ್ಯತೆಯು ಹೆಚ್ಚುವುದು.

### ಯಜ್ಞಕ್ಕಾಗಿ ಕರ್ಮ

'ಯಜ್ಞಕ್ಕಾಗಿ ಮಾಡಿದ ಕೆಲಸಕ್ಕೆ ದೋಷವಿಲ್ಲ' (ಶ್ಲೋ. ೯). ಆದಕಾರಣ ಪ್ರತಿಯೊಬ್ಬರೂ ಯಜ್ಞಕರ್ಮವನ್ನು ನೆರವೇರಿಸುತ್ತಿರಬೇಕು. ಏಕೆಂದರೆ ಜಗತ್ತಿನ ಅಸ್ತಿತ್ವಕ್ಕೆ ಯಜ್ಞವೇ ಕಾರಣವು. ಜಗತ್‌ಯಜ್ಞದ ಸ್ವರೂಪವನ್ನು ಹಿಂದೆ ೧೪ನೆಯ ಶ್ಲೋಕದಲ್ಲಿ ಹೇಳಿದ್ದಾಗಿದೆ.

ತಮ್ಮ ಹೊಟ್ಟೆಯ ಸಲುವಾಗಿಯೇ ಕೂಳು ಮಾಡುವವರು ನರಕವನ್ನು ತಿಂದಂತೆ; ಯಜ್ಞಮಾಡಿ ಉಳಿದುದನ್ನು ತಕ್ಕೊಳ್ಳುವವರು ಅಮೃತವನ್ನುಂಡಂತೆ. ಅವರಿಗೆ ಯಾವ ಪಾಪದ ಲೇಪವೂ ಇಲ್ಲ. (೧೩ ಶ್ಲೋ.) ಇದರ ಅರ್ಥವೆಂದರೆ ಸ್ವಾರ್ಥಿಯೆ ಪಾಪಿ. ಪರಹಿತಕ್ಕಾಗಿ, ಲೋಕಕಲ್ಯಾಣಕ್ಕಾಗಿ ಕೊಟ್ಟು, ನೆರವಾಗಿ ಮಿಕ್ಕುದನ್ನು ಉಪಭೋಗಿಸುವುದೇ ಪುಣ್ಯ.

೧) ಸ್ವಂತದ ಸಲುವಾಗಿ (ಸ್ವ+ಅರ್ಥ) ಸ್ವಾರ್ಥ;

೨) ಪರಹಿತಕ್ಕಾಗಿ (ಪರ+ಅರ್ಥ) ಪರಾರ್ಥ;

೩) ಸ್ವಾರ್ಥ ಮತ್ತು ಪರಾರ್ಥಗಳು ಅಭಿನ್ನವಾಗಿ ನಡೆದುಕೊಂಬುದೇ (ಪರಮ+ಅರ್ಥ) ಪರಮಾರ್ಥ ಇದುವೆ 'ಯಜ್ಞ' ವೆಂದೆನಿಸುವುದು

'ಪರಸ್ಪರಂ ಭಾವಯಂತಃ' ತನ್ನ ಕಲ್ಯಾಣವಾಗಿ ಪರರ ಹಿತವು ಆಗುತ್ತಿರುವ ಕೆಲಸಗಳೆಲ್ಲ ಯಜ್ಞಸ್ವರೂಪಿಗಳಾಗಿವೆ. ಇದೇ ಪರಮಾರ್ಥವು. ಇದೇ ಪರಮ ಪುರುಷಾರ್ಥವು. ಇಷ್ಟಸಿದ್ಧಿಯು.

### ಕೊನೆಯ ಗುರಿ

ಕೆಲಸದ ಫಲವಾಗಿ ಆತ್ಮಶಾಂತಿಯು ಲಭಿಸಬೇಕು. ಇದಕ್ಕೆ ಹೊರತಾದ ಕೆಲಸ ಒಳ್ಳೆಲಸವಲ್ಲ. ಹೊಲ್ಲ ಕೆಲಸ. 'ಆತ್ಮರತಿ, ಆತ್ಮತೃಪ್ತಿ, ಆತ್ಮಸಂತೋಷಗಳು ದೊರೆತ ಬಳಿಕ ಮಾನವನಿಗೆ ಮತ್ತೆ ಗಳಿಸಬೇಕಾದುದು, ಮಾಡಬೇಕಾದುದು ಏನೂ ಉಳಿಯುವುದಿಲ್ಲ ಇಂತಹನೇ ಕೃತಕೃತ್ಯನು. ಧನ್ಯನೂ ಸಿದ್ಧನೂ ಎನಿಸುವನು. ಇದುವೆ ಕೊನೆಯ ಗುರಿ. ಈ ಗುರಿಯನ್ನು ಮುಟ್ಟುವ ಬಗೆಯನ್ನು ಹೇಳುವುದಕ್ಕೆ ಎಲ್ಲ ಶಾಸ್ತ್ರಗಳು ತಲೆದೋರಿವೆ.

ಅರ್ಜುನನಿಗೆ ಈ ಗುರಿಯನ್ನು ತಲುಪುವ ಉಪಾಯವೆಂದರೆ 'ಆಸಕ್ತಿರಹಿತನಾಗಿ ಎಡೆಬಿಡದೆ ಕೆಲಸದಲ್ಲಿ ತೊಡಗಿರು' ಎಂದು ಶ್ರೀಕೃಷ್ಣನು ಅಪ್ಪಣೆ ವಿಧಿಸಿದ್ದಾನೆ. 'ತದರ್ಥಂ ಕರ್ಮ........ಮುಕ್ತಸಂಗಃ ಸಮಾಚರ' (ಶ್ಲೋ. ೯) ಎಂದು ಗೀತೆಯ ಆದೇಶವಾಗಿದೆ;

### ಲೋಕಸಂಗ್ರಹವೇ ಪರಮ ಅರ್ಥ

ಗೀತೆಯಲ್ಲಿ 'ಲೋಕಸಂಗ್ರಹ' ಎಂಬ ಪದವನ್ನು ಬಳಸಿದ್ದು ಅತ್ಯಂತ ಮಹತ್ವದ್ದಾಗಿದೆ. ಕೇವಲ ಆತ್ಮಾರ್ಥಿಗಳಾಗಿ ಪರಮಾರ್ಥದ ಬೆಂಬತ್ತಿದವರು ಅಡ್ಡದಾರಿಯಲ್ಲಿರುವರೆಂದು ಹೇಳದೆ ಗತಿಯಿಲ್ಲ. 'ಲೋಕಸಂಗ್ರಹ' ದಲ್ಲಿ ಲೋಕಸೇವೆಯು ಅಡಕವಾಗಿದೆ. 'ಸರ್ವಗತ' ಆತ್ಮಸ್ವರೂಪವನ್ನು ನೆನೆಯುವವರಿಗೆ ಎಲ್ಲ ಲೋಕದಿಂದ 'ತಾನು' ಎಂಬ ಭಿನ್ನವಾದ ಅಸ್ತಿತ್ವವೇ ಇಲ್ಲ. ಲೋಕಸಂಗ್ರಹದಲ್ಲಿ ಸಮ್ಯಕ್ ಆತ್ಮನ, ಮಹಾತ್ಮನ, ಪರಮ ಆತ್ಮನ ಸೇವೆಯು ಲಭಿಸುವುದು. ಇದರಲ್ಲಿ 'ಸ್ವ' ಮತ್ತು 'ಪರ' ಎರಡೂ ಒಳಗೊಳ್ಳುವುವು ಈ ಲೋಕಸಂಗ್ರಹಕ್ಕಾಗಿ ಮಾಡುವ ಕೆಲಸವೆ ನಿಜವಾದ ಯಜ್ಞವೆನಿಸುವುದು

ಲೋಕಸಂಗ್ರಹವನ್ನು ಮಾಡುವುದಕ್ಕೆ ಬಹಳ ಹೆಚ್ಚಿನ ಯೋಗ್ಯತೆ ಬೇಕಾಗುತ್ತದೆ. ಶುದ್ಧ, ಬುದ್ಧ ಅನಾಸಕ್ತರಿಂದಲ್ಲದೆ ಬೇರೆಯವರಿಂದ ಇದು ಅಸಾಧ್ಯ. ಉಳಿದವರು ಪರಮಾತ್ಮನಿಗೆ ಅರ್ಪಣ ಭಾವದಿಂದ ನಿಮಿತ್ತ ಮಾತ್ರರಾಗಿ ತಮ್ಮ ಕರ್ತವ್ಯಗಳನ್ನು ಜರುಗಿಸುತ್ತಿರಬೇಕು. ಈ ಬಗೆಯಾಗಿ ತನ್ನ ಕರ್ತವ್ಯವೆಂದು ನೆರೆನಂಬಿ ಒಳ್ಳೆಯ ಕೆಲಸದಲ್ಲಿ ತೊಡಗಿದವರಲ್ಲಿ ಬುದ್ಧಿಭೇದವನ್ನು ಉಂಟುಮಾಡುವುದು ಅಪಾಯಕಾರಕವೆಂದು (೨೬ ಶ್ಲೋ.) ಹೇಳಿದೆ. ಹಾಗೆ ಮಾಡಿದಲ್ಲಿ ಆತನಿಂದ ಮೊದಲು ಕೈಕೊಂಡ ಕೆಲಸವು ಹಾಳಾಗುವುದಲ್ಲದೆ, ಹೊಸದನ್ನು ನಿರ್ವಹಿಸುವದಕ್ಕೂ ಆತನು ತಕ್ಕವನಾಗಿರುವುದಿಲ್ಲ.

## ಕರ್ತೃತ್ವ

ಮನುಷ್ಯನು 'ತಾನು ಮಾಡುತ್ತೇನೆ' ಎಂಬ ಹೆಮ್ಮೆ ಬಡುವುದು ತಿಳಿಗೇಡಿತನವಾಗಿದೆ. ಏಕೆಂದರೆ ವಸ್ತುಗತವಾಗಿರುವ ಗುಣಗಳು ಏನೊಂದನ್ನು ಮಾಡಿಸುತ್ತವೆ. ಆದಕಾರಣ ಆ ಗುಣಗಳಿಗೇ ಅದರ ಶ್ರೇಯಸ್ಸಿದೆ. 'ಗುಣಾಃ ಗುಣೇಷು ವರ್ತಂತೇ' (ಶ್ಲೋ. ೨೮). ಆ ಗುಣಗಳು ಇಲ್ಲದಿದ್ದಲ್ಲಿ ಆ ಕೆಲಸವೇ ಆಗುತ್ತಿದ್ದಿಲ್ಲ. ಆದುದರಿಂದ ಮನುಷ್ಯನು ಹೆಮ್ಮೆಯಿಂದು ಕೊಬ್ಬಿಕೊನೆಯುವುದು ತೀರ ಮೂರ್ಖತನ.

## ಪರಮಾತ್ಮನಿಗೆ ಅರ್ಪಣ

ಮನುಷ್ಯನಿಗೆ ಪವಿತ್ರನಾಗುವುದಕ್ಕೆ ಇದಕ್ಕಿಂತ ಉತ್ತಮವಾದ ಬೇರೆ ಮಾರ್ಗವಿಲ್ಲ. ತನ್ನ ಅಂತಃಸಾಕ್ಷಿಯಾಗಿ ಪರಮಾತ್ಮನಿಗೆ ಅರ್ಪಿತವೆಂದು ಕೆಲಸಗಳನ್ನು ಕೈಕೊಳ್ಳುವವನು ಹೀನದಾರಿಗೆ ಎಂದೂ ಮನಸು ಹಾಕನು. ಕಿರುತಿಳಿವಿನಿಂದ ಕೆಲಬಾರಿ ತಪ್ಪು ತಡೆಗಳು ಆದರೂ ಪರಮಾತ್ಮನನ್ನು ಸ್ಮರಿಸಿ ಆತನು ಮತ್ತೆ ತಿದ್ದಿಕೊಂಡು ಮುಂದಡಿಯಿಡುವನು. ಈ ತೆರನಾಗಿ ಸಾಧಕನು ದಿನದಿನಕ್ಕೂ ಪ್ರಗತಿಯನ್ನು ಹೊಂದಿ ಕೊನೆಗೆ ಪರಮ ಸಿದ್ಧಿಯನ್ನು ಪಡೆಯುವುದು ನಿಶ್ಚಿತ.

ಲೋಕಕ್ಕೆ ಸಂತೋಷವನ್ನುಂಟುಮಾಡುವ ಕೃತಿಯೇ ನಿಜವಾದ ಈಶಪೂಜೆಯಾಗಿದೆ. ದೀನರನ್ನೂ ದುಃಖಿತರನ್ನೂ ಸದಯಾಂತಃಕರಣದಿಂದ ಕಂಡು ಅವರ ಕಷ್ಟಗಳನ್ನು ಕಡಿಮೆ ಮಾಡಲು ಹೆಣಗುವಲ್ಲಿ ಪರಮಾತ್ಮನ ಸೇವೆಯು ಲಭಿಸುವುದು. ಲೋಕೋದ್ಧಾರಕ್ಕಾಗಿ—ಜಗತ್ತಿನ ಸಂಕಷ್ಟನಿವಾರಣೆಗಾಗಿ ಪರಮಾತ್ಮನೇ ಹುಟ್ಟಿ ಬರುವನೆಂದ ಬಳಿಕ, ಲೋಕದ ದುಃಖಗಳನ್ನು ದೂರ ಮಾಡುವುದು ಪರಮಾತ್ಮನ ಮಾರ್ಗದ ಅನುಕರಣ ಮಾಡಿದಂತೆಯೇ ಅಲ್ಲವೆ?

## ಪ್ರಕೃತಿಸ್ವಭಾವ

ಭಿನ್ನ ಪ್ರಕೃತಿಯು ವಾಸ್ತವ ಸತ್ಯವಾಗಿದೆ. ಆದರೆ ಇದನ್ನು ಕಡೆಗಣಿಸಿ ಎಲ್ಲರಿಗೂ ಒಂದೇ ಬಗೆಯಾದ ಕರ್ಮವ್ಯವಹಾರಕ್ಕೆ ಒತ್ತಾಯ ಪಡಿಸುವುದು ಲೋಕಕ್ಕೆ ಅಹಿತಕರವಾಗಿದೆ.

ಮೂಲ ಪ್ರಕೃತಿಸ್ವಭಾವಕ್ಕೆ ಅನುಗುಣವಾದ ಉದಾತ್ತ ಕೆಲಸಗಳನ್ನು ಕೈಕೊಳ್ಳುವಲ್ಲಿಯೆ ಆ ವ್ಯಕ್ತಿಯ ಕಲ್ಯಾಣವಿದೆ, ಲೋಕದ ಹಿತವಿದೆ. ಇದಕ್ಕೆ ತಪ್ಪಿ ತನ್ನ ಪ್ರಕೃತಿಸ್ವಭಾವವನ್ನು ದುರ್ಲಕ್ಷಿಸಿ, ಇನ್ನೊಬ್ಬರ ಕರ್ಮವು ಲೇಸೆಂಬ ಭ್ರಮೆಯಿಂದ ಅದಕ್ಕೆ ಕೈಯಿಕ್ಕಿದರೆ 'ಅತೋ ಭ್ರಷ್ಟಃ ತತೋಭ್ರಷ್ಟಃ' ಎಂಬಂತೆ ಎರಡೂ ಕಡೆಗೂ ಅವನು ನಿರುಪಯುಕ್ತನಾಗುವನು. ಆದಕಾರಣ ಪ್ರತಿಯೊಬ್ಬರೂ ತಮ್ಮ ಪ್ರಕೃತಿಸ್ವಭಾವಕ್ಕೆ ಅನುಸರಿಸಿ ತಮ್ಮ ಪಾಲಿಗೆ ಬಂದ ಕೆಲಸವನ್ನೇ ಕರ್ತವ್ಯ ಬುದ್ಧಿಯಿಂದ ಲೋಕ ಕಲ್ಯಾಣಕಾರಕ ರೀತಿಯಲ್ಲಿ ಜರುಗಿಸುವುದೇ ಧರ್ಮವಾಗಿದೆ. ಈ ಬಗೆಯಾಗಿ ತನ್ನ ಪಾಲಿಗೆ ಬಂದುದು ಸ್ವಲ್ಪ ಕೊರತೆಯುಳ್ಳುದೆಂದು ಎನಿಸಿದರೂ ಅದನ್ನು ಬಿಡತಕ್ಕದ್ದಲ್ಲವೆಂದು ಶ್ರೀಕೃಷ್ಣನು ಗೀತೆಯಲ್ಲಿ ಹೇಳಿದ್ದಾನೆ. (ಶ್ಲೋ. ೩೩-೩೫)

## ಬಿಟ್ಟರೂ ಬೆಂಬಿಡದ ಕಾಮ

ದುರ್ಜಯನಾದ (ದುರಾಸದ) ಕಾಮವನ್ನು ಹೇಗೆ ಗೆಲ್ಲಬೇಕೆಂಬುದನ್ನೂ (ಶ್ಲೋ. ೩೬-೪೩) ಗೀತೆಯಲ್ಲಿ ಕೊನೆಗೆ ಹೇಳಿದೆ. ಕಾಮವು ಭೋಗೇಚ್ಛೆಗಳನ್ನು ಪ್ರಬಲಗೊಳಿಸಿ ಮನುಷ್ಯನನ್ನು ಅಡ್ಡದಾರಿಗೆ ಒಯ್ಯುವುದು. ಆದುದರಿಂದ ಇದನ್ನು ಗೆಲ್ಲಲು ಸಂಯಮವೇ ಶ್ರೇಷ್ಠ ಉಪಾಯವು. ಆತ್ಮನಿಗ್ರಹದಿಂದ ಅದ್ಭುತ ಸಾಮರ್ಥ್ಯವು ಉಂಟಾಗುವುದು. ಕಾಮವನ್ನು ಗೆದ್ದು ಆತ್ಮಶಕ್ತಿಯನ್ನು ಬೆಳಿಸಿಕೊಳ್ಳುವುದು ಸಾಧಕನ ಕರ್ತವ್ಯವಾಗಿದೆ.

## ಈ ಅಧ್ಯಾಯದ ಸಾರ

೧) ಭೋಗೇಚ್ಛೆಗಳನ್ನು ಧರ್ಮವಿಚಾರದಿಂದ ಹಿಡಿತದಲ್ಲಿಟ್ಟುಕೊಳ್ಳಬೇಕು. ಈ ಉಪಾಯದಿಂದ ಮುಂದಡಿಯಿಟ್ಟಂತೆ ಆತ್ಮಸಾಮರ್ಥ್ಯವು ಹೆಚ್ಚುವುದು.

೨) ಗುಣಗಳೇ ಕರ್ಮಕ್ಕೆ ಕಾರಣ. ಆದಕಾರಣ 'ನಾನು ಮಾಡುವವನು' ಎಂಬ ಹೆಮ್ಮೆ ತಿಳಿಗೇಡಿತನದ್ದು. ಅಲಿಪ್ತನಾಗಿ, ಅನಾಸಕ್ತಿಯಿಂದ ಕೆಲಸ ಮಾಡುವ ಶಕ್ತಿ ಬರಲು ಈ ನೆನಹು ಸಾಧಕವಾಗಿದೆ.

೩) ಪ್ರಕೃತಿಸ್ವಬಾವಕ್ಕೆ ಅನುಗುಣವಾಗಿ ತನ್ನ ಪಾಲಿಗೆ ಬಂದ ಯಾವ ಕೆಲಸವೂ ಹೀನವೆಂದು ಬಗೆಯಲಾಗದು. ಅದನ್ನು ಪರಮೇಶ್ವರಾರ್ಪಣ ಭಾವದಿಂದ ಲೋಕಹಿತಕ್ಕೆ ಕಾರಣವಾಗುವ ರೀತಿಯಲ್ಲಿ ಆತನ ಮಾಡಿದಲ್ಲಿ ಕಲ್ಯಾಣವೇ ಇದೆ.

೪) ತನ್ನ ಸ್ವಭಾವಕ್ಕೆ ವಿರೋಧಿಯಾದ ಯಾವ ಕೆಲಸವನ್ನೂ ಹೊರಗಿನ ಡಂಭಾಚಾರಕ್ಕಾಗಿ ಮಾಡಲಾಗದು. ಇದು ಅಧರ್ಮ. ಆತ್ಮಹಾನಿಗೆ ಕಾರಣ.

೫) ಸ್ವಧರ್ಮವನ್ನು ಆಚರಿಸುವಾಗ ಸಾವು ಬಂದರೂ ಸರಿ. ಅದು ಶ್ರೇಯಸ್ಕರ, ಪುಣ್ಯಪ್ರದ. ಇದಕ್ಕೆ ವಿಪರೀತ

ವಾಗಿ ಡಂಭಾಚಾರಕ್ಕಾಗಿ ಜನರನ್ನು ಸಂತುಷ್ಟಗೊಳಿಸಲು, ತನ್ನ ಅಂತಃಸಾಕ್ಷಿಗೆ ವಿರೋಧಿಯಾಗಿ ಮಾಡುವ ಕೆಲಸವು ಹಾನಿಕರ. ಅನಿಷ್ಟ.

೬) ಏನೂ ಕರ್ಮವಿಲ್ಲದೆ ಅರಗಳಿಗೆಯೂ ಯಾರೂ ಇರಲಾರರು. ಆದಕಾರಣ ಕರ್ಮತ್ಯಾಗವೆಂಬುದು ಭ್ರಾಂತಿ.

೭) ಲೋಕಸಂಗ್ರಹಗಳಾಗಿ ಕೆಲಸ ಮಾಡುವುದು ಯಜ್ಞವೆನಿಸುವುದು.

೮) ಪರಮೇಶ್ವರಾರ್ಪಣಭಾವದಿಂದ ಕೆಲಸಗಳನ್ನು ನೆರವೇರಿಸುತ್ತಿರಬೇಕು.

೯) ಈ ಬಗೆಯಾಗಿ ಕೆಲಸ ಮಾಡುತ್ತಿರುವರಿಗೆ ಆತ್ಮಸಿದ್ಧಿಯು ಲಭಿಸುವುದು. ಅವರು ಆತ್ಮತೃಪ್ತರೂ ಆತ್ಮತುಷ್ಟರು ಆಗುವರು.

೧೦) ಇಂತಹರಿಗೆ ಸ್ವಂತದ ಕೆಲಸವೆಂಬುದೇ ಉಳಿಯುವುದಿಲ್ಲ. ಲೋಕಸಂಗ್ರಹಕ್ಕಾಗಿಯೆ ಇವರ ಜೀವನವು.

## ಜ್ಞಾನಯೋಗ ಮತ್ತು ಕರ್ಮಯೋಗ

ಜ್ಞಾನಯೋಗ ಮತ್ತು ಕರ್ಮಯೋಗ ಅಥವಾ ಜ್ಞಾನನಿಷ್ಠೆ ಮತ್ತು ಕರ್ಮನಿಷ್ಠೆ ಇಲ್ಲವೆ ಸಾಂಖ್ಯಮಾರ್ಗ ಮತ್ತು ಯೋಗ ಮಾರ್ಗಗಳನ್ನು ಹೋಲಿಸಿ ನೋಡುವ. ಇದರಿಂದ ಇವುಗಳಲ್ಲಿ ಇರುವ ಹೆಚ್ಚುಕಡಿಮೆ ಗೊತ್ತಾಗುವುದು.

## ಯೋಗಗಳ ಹೆಸರು

| | |
|---|---|
| ಜ್ಞಾನಯೋಗ | ಕರ್ಮಯೋಗ ೩-೩ |
| ಜ್ಞಾನನಿಷ್ಠೆ | ಕರ್ಮನಿಷ್ಠೆ |
| ಸಾಂಖ್ಯಮಾರ್ಗ | ಯೋಗಮಾರ್ಗ ೩-೩ |
| ಸಾಂಖ್ಯಯೋಗ, ಸಾಂಖ್ಯ | ಯೋಗಬುದ್ಧಿ ೨-೩೯ |
| ಸಾಂಖ್ಯಬುದ್ಧಿ ೨-೩೯ | (ಸಮತ್ವ) ಬುದ್ಧಿಯೋಗ ೨-೪೦ |

## ಕರ್ಮಯೋಗವೆಂದರೇನು ?

ಸಮತ್ವಂ ಯೋಗ ಉಚ್ಯತೆ | ೨-೪೮
ಯೋಗಃ ಕರ್ಮಸು ಕೌಶಲಂ | ೨-೫೦
ಸಮಾಧೌ ಅಚಲಾ ಬುದ್ಧಿಃ ಯೋಗಃ ! ೨-೫೩
ನೇಹಾಭಿಕ್ರಮನಾಶೋಸ್ತಿ ಪ್ರತ್ಯವಾಯೋ
ನವಿದ್ಯತೇ |
ಸ್ವಲ್ಪ ಮಪ್ಯಸ್ಯಯೋಗಃ ಮಹತೋ ಭಯಾತ್
ತ್ರಾಯತೇ || ೨-೪೦
ಅತ್ರ ಏಕಾ ವ್ಯವಸಾಯಾತ್ಮಿಕಾ ಬುದ್ಧಿಃ | ೨-೪೦
(ಸಮತ್ವ-) ಬುದ್ಧೌ ಶರಣಮನಿಚ್ಛ | ೨-೪೯
(ಸಮತ್ವ-) ಬುದ್ಧಿಯೋಗಃ ಕರ್ಮಣಃ ವರಃ |
(ಬುದ್ಧಿಯೋಗಾತ್ ಕರ್ಮ ಅವರಂ) ೨-೪೯

ಇಂದ್ರಿಯಾಣಿ ಮನಸಾ ನಿಯಮ್ಯ
ಆಸಕ್ತಃ ಕರ್ಮೇಂದ್ರಿಯೈಃ ಕರ್ಮ
ಯೋಗಂ ಆರಭತೇ ಸ ವಿಶಿಷ್ಯತೇ | ೩-೭

ಇಂದ್ರಿಯಸ್ಯೇಂದ್ರಿಯಸ್ಯಾರ್ಥೇ ರಾಗದ್ವೇಷೌ ವ್ಯವಸ್ಥಿತೌ
ತಯೋರ್ನ ವಶಮಾಗಚ್ಛೇತ್ |

ತೌ ಅಸ್ಯ ಪರಿಪಂಥಿನೌ | ೩-೩೪
ಇಂದ್ರಿಯಾಣಿ ನಿಯಮ್ಯ ಜ್ಞಾನ
ವಿಜ್ಞಾನ ನಾಶನಂ ಪಾಪ್ಮಾನಂ
ಕಾಮಂ ಪ್ರಜಹಿ | ೩-೪೧
ಕಾಮ ಕ್ರೋಧಶ್ಚ ಮಹಾ ಪಾಪ್ಮಾ ಮಹಾಶನಃ
ಏನಂ ವೈರಿಣಂ ವಿದ್ಧಿ | ೩-೩೭
ಆತ್ಮಾನಂ ಬುದ್ಧೇಃ ಪರಂ
ಬುದ್ಧ್ವಾ ಆತ್ಮನಾತ್ಮಾನಂ
ಸಂಸ್ತಭ್ಯ ದುರಾಸದಂ ಕಾಮ—
ರೂಪಂ ಶತ್ರುಂ ಜಹಿ | ೩-೪೩
ಇಂದ್ರಿಯಾಣಿ ಸಂಯಮ್ಯ, ಅಸಕ್ತಃ

ಕರ್ಮ ಆಚರನ್ ಪರಂ
ಆಪ್ನೋತಿ | ೩-೧೯
ಮೋಹಕಲಿಲಂ ಬುದ್ಧಿಃ ವ್ಯತಿತರಿಷ್ಯತಿ | ೨-೫೨

ಕಾಮಃ ಜ್ಞಾನಿನಃ ನಿತ್ಯವೈರೀ; ಅತಃ ತಂ
ಜಹಿ | ೩-೩೯

ಕರ್ಮಜಂ ಫಲಂ ತ್ಯಕ್ತ್ವಾ ಜನ್ಮಬಂಧವಿ
ನಿರ್ಮುಕ್ತಾಃ ಅನಾಮಯಂ ಪದಂ ಗಚ್ಛಂತಿ |
೨-೫೧

ತ್ರೈಗುಣ್ಯ ವಿಷಯಾಃ | ೨-೪೫
ಇಂದ್ರಿಯಾಣಿ ಸಂಯಮ್ಯ ಯಃ
ವಿಷಯಾನ್ ಸ್ಮರನ್ ಆಸ್ತೇ
ಸಃ ಮಿಥ್ಯಾಚಾರಃ | ೩-೬
ಇಂದ್ರಿಯಾಣಿ ಮನಃ ಹರಂತಿ | ೨-೬೦

ಇಂದ್ರಿಯಾಣಾಂ ಚರತಾಂ ಪ್ರಜ್ಞಾಂ
ಹರತಿ | ೨-೬೭

ಕಾಮಕಾಮೀ ಶಾಂತೀ ನಾಪ್ನೋತಿ | ೨-೭೦

ಫಲಹೇತವಃ ಕೃಪಣಾಃ | ೨-೪೯

ವಿಷಯಾನ್ ಧ್ಯಾಯತಃ ತೇಷು ಸಂಗಃ
ಉಪಜಾಯತೇ; ಸಂಗಾತ್ಕಾಮಃ; ಕಾಮಾತ್
ಕ್ರೋಧಃ ಕ್ರೋಧಾತ್.. ಬುದ್ಧಿ ನಾಶಃ
ಬುದ್ಧಿ ನಾಶಾತ್ ಪ್ರಣಶ್ಯತಿ | ೨ ೬೨-೬೩
ಕಾಮೇನ ಜ್ಞಾನಂ ಆವ್ರಿಯತೇ | ೩-೩೮
ಕಾಮಃ ದುಷ್ಪೂರಃ ಅನಲಃ | ೩-೩೯
ಕಾಮಸ್ಯ ಅಧಿಷ್ಠಾನಂ ಇಂದ್ರಿಯಾಣಿ ಮನಃ
ಬುದ್ಧಿಃ | ೩-೪೦

ಕೊನೆಯ ಗುರಿ

ಕಾಮಃ ಜ್ಞಾನಂ ಆವೃತ್ಯ
ದೇಹಿನಂ ವಿಮೋಹಯತಿ | ೩-೪೦

ಇಂದ್ರಿಯಾಣಿ ಇಂದ್ರಿಯಾರ್ಥೇಭ್ಯಃ ಸಂಹರತಿ
೨-೫೮

ಇಂದ್ರಿಯಾಣಿ ಸಂಯಮ್ಯ ಮತ್ಪರಃ ( ಈಶಪರಃ)
ಯುಕ್ತಃ ಆಸೀತ್ | ೨-೬೧

ಇಂದ್ರಿಯಾಣಿ ಯಸ್ಯ ವಶೇ ತಸ್ಯ ಪ್ರಜ್ಞಾ
ಪ್ರತಿಷ್ಠಿತಾ | ೨-೬೧

ಯಸ್ಯ ಇಂದ್ರಿಯಾಣಿ ನಿಗೃಹೀತಾನಿ ತಸ್ಯ
ಪ್ರಜ್ಞಾ ಪ್ರತಿಷ್ಠಿತಾ | ೨-೬೮
ನಿರಾಹಾರಸ್ಯ ವಿಷಯಾ ವಿನಿವರ್ತತೇ | ೨-೫೯

ರಾಗದ್ವೇಷವಿಯುಕ್ತೈಃ ಆತ್ಮವಶ್ಯೈಃ
ಇಂದ್ರಿಯೈಃ ವಿಷಯಾನ್ ಚರನ್

ಪ್ರಸಾದಂ ಅಧಿಗಚ್ಛತಿ | ೨-೬೪
ಸಂಯಮೀ ಜಾಗರ್ತಿ | ೨-೬೯

( ವಿಷಯಾನ್ ) ಪಶ್ಯತೋಮುನೇಃ
ನಿಶಾ | ೨-೬೯

ಆಪೂರ್ಯಮಾಣಂ ಕಾಮಾಃ ಪ್ರವಿಶಂತಿ;
ಸಃ ಶಾಂತಿಂ ಆಪ್ನೋತಿ | ೨-೭೦



(ಯೋಗ) ಬುದ್ಧ್ಯಾ ಕರ್ಮಬಂಧಂ
ಪ್ರಹಾಸ್ಯಸಿ | ೨-೩೯
ಆತ್ಮರತಿಃ ಆತ್ಮತೃಪ್ತಃ ಆತ್ಮಸಂತುಷ್ಟಃ
ತಸ್ಯ ಕಾರ್ಯಂ ನ ವಿದ್ಯತೇ | ೩-೧೭

ಕರ್ಮಣೈವ ಹಿ ಸಂಸಿದ್ಧಿಂ ಆಸ್ಥಿತಾ ಜನ
ಕಾದಯಃ | ೩-೨೦
ಶ್ರದ್ಧಾವಂತೋಽನಸೂಯಂತೋನ
ಮುಚ್ಯಂತೇ ತೇಽಪಿ ಕರ್ಮಭಿಃ | ೩-೩೧
ನೈವತಸ್ಯ ಕೃತೇನಾರ್ಥೋ ನಾಕೃತೇ ನೇಹ
ಕಶ್ಚನ | ನ ಚಾಸ್ಯ ಸರ್ವ ಭೂತೇಷು ಕಶ್ಚಿ-
ದರ್ಥ ವ್ಯಪಾಶ್ರಯಃ | ೩-೧೮

ಕರ್ಮಯೋಗ

ಕರ್ಮಣಿ ತೇ ಅಧಿಕಾರಃ | ೨-೪೭
ಅಕರ್ಮಣೇ ಸಂಗಃ ಮಾ ಅಸ್ತು | ೨-೪೭
ಕರ್ಮಫಲೇ ಹೇತುಃ ಮಾಭೂಃ | ೨-೪೭
ಫಲೇಷು ತೇ ಅಧಿಕಾರಃ ಮಾ | ೨-೪೭
ಯೋಗಸ್ಥಃ ಕರ್ಮಾಣಿ ಕುರು | ೨-೪೮
ಕಶ್ಚಿದ ಕರ್ಮಕೃತ್ ನ ತಿಷ್ಠತಿ | ೩-೫
ಪ್ರಕೃತಿಜೈರ್ಗುಣೈಃ ಸರ್ವಃ ಕರ್ಮ
ಕಾರ್ಯತೇ | ೩-೫
ಅಕರ್ಮಣಃ ಕರ್ಮ ಜ್ಯಾಯಃ | ೩-೮
ಕರ್ಮಣಾಮನಾರಂಭಾತ್ ನೈಷ್ಕರ್ಮ್ಯಂ
ನ | ೩-೪

ಅನಾಸಕ್ತಿಯೋಗ

ಅಸಕ್ತಃ ಕಾರ್ಯಂ ಕರ್ಮ ಸಮಾಚರ | ೩-೧೯

ಪರಮಾತ್ಮನಿಗೆ ಅರ್ಪಣ

ಮಯಿ (ಈಶ್ವರೇ) ಸರ್ವಾಣಿ ಕರ್ಮಾಣಿ

ಅಕರ್ಮಣಃ ಶರೀರಯಾತ್ರಾಪಿನ
ಪ್ರಸಿದ್ಧ್ಯೇತ್ | ೩-೮

ಸರ್ವಜ್ಞಾನ ವಿಮೂಢಾಃ
ಅಚೇತಸಃ | ೩-೩೨

ಅಕರ್ಮಣಿ ಸಂಗಃ | ೨-೪೭
ಕರ್ಮಫಲ ಹೇತುಃ | ೨-೪೭
ಫಲೇಷು ಅಧಿಕಾರಃ | ೨-೪೭
ಅಯುಕ್ತಸ್ಯ ಬುದ್ಧಿಃ, ಭಾವನಾ
ಶಾಂತಿಃ ಸುಖಂ ಚ ನ | ೨-೬೬
ಅಕರ್ಮ ಕೃತ್ | ೩-೫

ಅಸಕ್ತಾತ್ಮಾ ಕರ್ಮಕರೋತಿ |
ಯೇ ಆತ್ಮಕಾರಣಾತ್ ಪಚಂತ ತೇ ಪಾಪಾಃ |
೩-೧೩

ಸರ್ವಾನ್ ಕಾಮಾನ್ ವಿಹಾಯ ನಿಸ್ಪೃಹಃ

ನಿರ್ಮಮಃ ನಿರಹಂಕಾರಃ ಚರತಿ; ಸಃ
ಶಾಂತಿಂ ಅಧಿಗಚ್ಛತಿ | ೨-೭೧
ಬ್ರಾಹ್ಮೀಸ್ಥಿತಿಂ ಪ್ರಾಪ್ಯ ನ ಮುಹ್ಯತಿ | ೨-೭೨

ಪ್ರಸಾದೇ ಸರ್ವದುಃಖಾನಾಂ ಹಾನಿರಸ್ಯೋಪ
ಜಾಯತೇ | ಪ್ರಸನ್ನ ಚೇತಸೋ ಬುದ್ಧಿಃ ಪರ್ಯವ
ತಿಷ್ಠತೇ | ೨-೬೫
ಅಂತ ಕಾಲೇಽಪಿ ಬ್ರಾಹ್ಮ್ಯಾಂ ಅವಸ್ಥಾಯಾಂ
ಸ್ಥಿತ್ವಾ ಬ್ರಹ್ಮನಿರ್ವಾಣಮೃಚ್ಛತಿ | ೨-೭೨

| | | |
|---|---|---|
| ಸಂನ್ಯಸ್ಯ ಆಧ್ಯಾತ್ಮ ಚೇತಸಾ ನಿರಾಶೀರ್ನಿ-<br>ರ್ಮಮೋ ಭೂತ್ವಾ ಯುದ್ಧ್ಯಸ್ವ! ೩-೩೦<br>ಕರ್ಮಾಣಿ ಕುರು \| ೩-೩೦ | ಅಘಾಯು ರಿಂದ್ರಿಯಾರಾಮೋ ಮೋಘಂ<br>ಜೀವತಿ \| ೩-೧೬ | |
| **ಲೋಕ ಸಂಗ್ರಹ** | | |
| ಲೋಕ ಸಂಗ್ರಹಂ ಕರ್ತುಮರ್ಹಸಿ \| ೩-೨೦<br>ಉತ್ಸೀದೇಯುರಿಮೇ ಲೋಕಾ ನ ಕುರ್ಯಾಂ<br>ಕರ್ಮ ಚೇದಹಂ \| | ಅಪ್ರದಾಯ ಭುಂಕ್ತೇ ಸಃ ಸ್ತೇನಃ \| ೩-೧೨ | |
| ಸಂಕರಸ್ಯ ಚ ಕರ್ತಾ ಸ್ಯಾಮುಪಹನ್ಯಾ-<br>ಮಿಮಾಃ ಪ್ರಜಾಃ ‖ ೩-೨೪<br>ಯದ್ಯದಾಚರತಿ ಶ್ರೇಷ್ಠ ಶತ್ತದೇವೇ ತರೋ<br>ಜನಃ \|<br>ಸ ಯತ್ಪ್ರಮಾಣಂ ಕುರುತೇ ಲೋಕಃ ತತ್<br>ಅನುವರ್ತತೇ \| ೩-೨೧ | | |
| **ಯಜ್ಞ** | | |
| ಪ್ರಜಾಃ ಸಹಯಜ್ಞಾ ಸೃಷ್ಟ್ವಾ \| ೩-೧೦<br>ಯಜ್ಞೇನ ಪ್ರಸವಿಷ್ಯಧ್ವಮ್ ೩-೧೦<br>ಯಜ್ಞಃ ಇಷ್ಟ ಕಾಮಧುಕ್ \| ೩-೧೦<br>ಯಜ್ಞಃ ಕರ್ಮ ಸಮುದ್ಭವಃ \| ೩-೧೪<br>ಕರ್ಮ ಬ್ರಹ್ಮೋದ್ಭವಮ್ \| ೩-೧೫<br>ಯಜ್ಞೇನ ದೇವಾನ್ ಭಾವಯತ; ದೇವಾಃ ವಃ<br>ಯಜ್ಞೇನ ಭಾವಯಂತು \|<br>ಪರಸ್ಪರಂಭಾವಯಂತಃ ಶ್ರೇಯಃ ಅವಾಪ್ಸ್ಯಥ \|<br>೩-೧೧ | ಯಜ್ಞಾರ್ಥಾತ್ ಕರ್ಮಣೋಽನ್ಯತ್ರ<br>ಲೋಕೋಽಯಂ ಕರ್ಮಬಂಧನಃ \| ೩-೯ | |



| | | |
|---|---|---|
| **ಬುದ್ಧಿ ಭೇದ ಬೇಡ** | | |
| ಅಜ್ಞಾನಾಂ ಕರ್ಮ ಸಂಗಿನಾಂ ಬುದ್ಧಿ<br>ಭೇದಂ ನ ಜನಯೇತ್ \|<br>ವಿದ್ವಾನ್ ಯುಕ್ತಃ ಸಮಾಚರನ್ ಸರ್ವ<br>ಕರ್ಮಾಣಿ ಜೋಷಯೇತ್ \| ೩೩-೬ | | |
| **ಕರ್ತೃ** | | |
| ಪ್ರಕೃತೇಃ ಗುಣೈಃ ಸರ್ವಶಃ<br>ಕರ್ಮಾಣಿ ಕ್ರಿಯಮಾಣಾನಿ \| ೨-೨೭<br>ಗುಣಾ ಗುಣೇಷು ವರ್ತಂತೇ ಇತಿ ಮತ್ವಾ<br>ತತ್ವವಿತ್ ನ ಸಜ್ಜತೇ \| ೩-೮ | ಅಹಂಕಾರ ವಿಮೂಢಾತ್ಮಾ ಕರ್ತಾ ಹಮಿತಿ<br>ಮನ್ಯತೇ \| ೩-೨೭ | ಪ್ರಕೃತಿಯು ಕೆಲಸ ಮಾಡಿಸುವುದು.<br>ಪುರುಷನು ಸ್ವತಂತ್ರನು;ಅಕರ್ತೃವು. |

ಮೇಲಣ ಕೋಷ್ಟಕಗಳಲ್ಲಿ ಸಾಂಖ್ಯಮತ, ಯೋಗ ಮತ ಮತ್ತು ಜನಸಾಮಾನ್ಯರ ತಿಳಿಗೇಡಿತನದ ಮತಗಳನ್ನು ಕೊಟ್ಟಿದೆ. ಗೀತೆಯ ಮೂರು ಅಧ್ಯಾಯಗಳಲ್ಲಿ ಬಂದ ವಿಚಾರಗಳಿವು.

ಮೇಲಣ ಪಟ್ಟಿಯಲ್ಲಿ ಕೊಟ್ಟ ಸಂಗತಿಗಳ ಮೇಲಿಂದ ಸಾಂಖ್ಯ ಮತ್ತು ಯೋಗ ಮತಗಳಲ್ಲಿ ಇರುವ ಹೊಂದಿಕೆಯು ಚೆನ್ನಾಗಿಯೆ ಗೊತ್ತಾಗುವುದು. ಶರೀರತತ್ವ, ಆತ್ಮತತ್ವ, ದ್ವಂದ್ವಾತೀತ ಸ್ಥಿತಿ, ಇಂದ್ರಿಯದಮನ, ಮನೋನಿಗ್ರಹ, ವಿಚಾರದಲ್ಲಿ ಎರಡೂ ಪಂಥಗಳಲ್ಲಿ ಐಕಮತ್ಯವಿದೆ. ಕರ್ಮಯೋಗ, ಕರ್ಮತತ್ವ, ಅನಾಸಕ್ತಿ, ಈಶ್ವರಾರ್ಪಣ, ಕರ್ಮ, ಲೋಕಸಂಗ್ರಹ, ಯಜ್ಞತತ್ವ, ಕರ್ತೃತ್ವ ವಿಚಾರಗಳಲ್ಲಿ ಭಿನ್ನಾಭಿಪ್ರಾಯವಿಲ್ಲ. ಪ್ರಕೃತಿಗುಣಗಳೇ ಕರ್ಮಕ್ಕೆ ಕಾರಣವೆಂದು ಯೋಗವು ಹೇಳಿದರೆ, ಪುರುಷನು ಅಕರ್ತೃವು, ಪ್ರಕೃತಿಯೇ ಎಲ್ಲವನ್ನೂ ಮಾಡುವವಳು, ಎಂದು ಸಾಂಖ್ಯಮತವು ಇದೆ. ಆದುದರಿಂದ ಅನಾಸಕ್ತಿಯಿಂದ ಮುಕ್ತಿ, ಸಹಜಾನಂದದ ಸ್ಥಿತಿಯು ಪ್ರಾಪ್ತವಾಗುವುದೆಂಬ ಕೊನೆಯ ಸಿದ್ಧಾಂತವು ಹೊರಡುವುದು.

## ಜ್ಞಾನಯೋಗ

### ' ಸಾಂಖ್ಯತತ್ವ '

ಮಾನವನಲ್ಲಿರುವ ಆತ್ಮವು ಜನ್ಮರಹಿತವಾದುದು ; ಅವಿಕಾರಿ, ಅಮರ, ಅವ್ಯಯ, ಅವಿನಾಶಿಯು ಆಗಿದೆ; ನಿತ್ಯ, ಸನಾತನ, ಪುರಾಣ, ಅಪ್ರಮೇಯ, ಅತರ್ಕ್ಯವು ಅಹುದು. ಅದು ಸರ್ವಗತ, ಸರ್ವವ್ಯಾಪಿಯಾಗಿದೆ. ಇದು ಅಚ್ಛೇದ್ಯ, ಅದಾಹ್ಯ, ಅಕ್ಲೇದ್ಯ, ಅಶೋಷ್ಯ ಮತ್ತು ಅವಧ್ಯವಾಗಿದೆ.

ಈ ಆತ್ಮನು ಧಾರಣಮಾಡುವ ದೇಹವು ನಾಶವಂತ; ಹುಟ್ಟು ಸಾವುಗಳುಳ್ಳದು.

ಆಕಾಶವು ಎಲ್ಲೆಡೆಗೆ ವ್ಯಾಪಿಸಿದೆ. ಮನೆಮನೆಗಳಲ್ಲಿ ತುಂಬಿಕೊಂಡಿದೆ. ಪಾತ್ರೆ-ಪಡಗಗಳಲ್ಲೆಲ್ಲ ಹರಡಿದೆ. ಕೆಲವು ಮನೆಗಳು ಸುಟ್ಟರೆ, ಹಲವು ಪಾತ್ರೆಗಳು ಹಾಳಾದರೆ ಅದರಲ್ಲಿ ಅಡಕವಾದ ಆಕಾಶವು ಹೇಗೆ ನಾಶಹೊಂದಲಾರದೊ, ಹಾಗೆ ದೇಹವು ನಷ್ಟವಾದರೂ ಅದರೊಳಗಣ ಆತ್ಮತತ್ವವು ಅಮರವಾಗಿದೆ. ದೇಹದ ಹುಟ್ಟು ಸಾವಿನ, ಅಥವಾ ಬಾಲವೃದ್ಧತ್ವದ ಯಾವ ಪರಿಣಾಮವೂ ಆತ್ಮನ ಮೇಲೆ ಆಗುವುದಿಲ್ಲ.

ಆತ್ಮವು ಸುಖದುಃಖಗಳಿಂದ ದೂರವಾಗಿದೆ. ಹರ್ಷಶೋಕಗಳ ಪರಿಣಾಮಕ್ಕೆ ಇದು ಒಳಗಾಗಿಲ್ಲ.

ಮನಸಿನಲ್ಲಿ ತಲೆದೋರುವ ಕಾಮಗಳನ್ನು ತೊರೆದು ಇಂದ್ರಿಯಗಳನ್ನು ವಿಷಯಗಳಿಂದ ಅಲಿಪ್ತವಾಗಿರಿಸಿ, ನಿಸ್ಪೃಹನಾಗಿ, ನಿರಹಂಕಾರಿಯಾಗಿ, ನಿರ್ವಿಕಾರಿಯಾಗಿ, ತನ್ನಲ್ಲಿ ತಾನೇ ತೃಪ್ತನಾಗಿದ್ದು ಆತ್ಮಾನುಸಂಧಾನದಲ್ಲಿಯೇ ಲೀನವಾಗುವವನು ಪ್ರಸಾದ ಸೌಖ್ಯವನ್ನು ಪಡೆಯುತ್ತಾನೆ.

ಇಂತಹನೇ ಲೋಕದಲ್ಲಿ ಮುಕ್ತನಾಗುವನು
ಪ್ರಕೃತಿಯು ಕೆಲಸ ಮಾಡುತ್ತಿದ್ದರೂ ಆತ್ಮನ ಅಕರ್ತೃತ್ವದ ಅನುಭವವನ್ನೂ ಹೊಂದುತ್ತ ಅನುಸಂಧಾನದಲ್ಲಿ ನಡೆದವನು ಬ್ರಹ್ಮರೂಪನಾಗುವನು.

ಇಂತಿದು ಸಾಂಖ್ಯತತ್ವವಿದೆ. ಸಾಧನೆಯಿಂದ ಸಾಧಕನು ಬ್ರಾಹ್ಮೀ ಸ್ಥಿತಿಯನ್ನು ಪಡೆಯಬಲ್ಲನು. ಇದರಲ್ಲಿ ಕರ್ಮಗಳನ್ನು ತೊರೆದು ಆತ್ಮಾನುಸಂಧಾನದಲ್ಲಿರುವುದಕ್ಕೆ ಪ್ರಾಶಸ್ತ್ಯವಿದೆ.

## ಕರ್ಮಯೋಗ

### ಯೋಗತತ್ವ

ಆತ್ಮನು ಅಮರನೆಂಬುದೂ, ಶರೀರವು ವಿನಾಶಿಯೆಂಬುದೂ ಸಾಂಖ್ಯದಂತೆ ಇವರಿಗೂ ಮಾನ್ಯ. ಇಂದ್ರಿಯದಮನ, ಮನಃಸಂಯಮಗಳ ವಿಚಾರದಲ್ಲಿಯೂ ಇವರಲ್ಲಿ ಭಿನ್ನಾಭಿಪ್ರಾಯವಿಲ್ಲ.

ಆದರೆ ಮನನ, ನಿದಿಧ್ಯಾಸಾದಿಗಳಲ್ಲಿ ಯಾರಿಗೆ ಸ್ವಾಭಾವಿಕವಾಗಿ ಪ್ರವೃತ್ತಿಯಿಲ್ಲವೋ ಅವರಿಗೆ ವಿವಿಧ ಕರ್ಮಗಳನ್ನು ಈ ಮತದಲ್ಲಿ ಹೇಳಿದೆ. ಚಿತ್ತಶುದ್ಧಿಗಾಗಿ ಕೆಲಸ ಮಾಡುವುದು ಅವಶ್ಯಕವು, ಎಂದು ಇವರ ಅಭಿಪ್ರಾಯ.

ಇಂದ್ರಿಯ ದಮನ ಮಾಡಿ, ರಾಗದ್ವೇಷಗಳನ್ನು ಅಂಕೆಯಲ್ಲಿಟ್ಟುಕೊಂಡು ಕಾಮನನ್ನು ಗೆಲ್ಲಬೇಕು. ಶರೀರ, ಇಂದ್ರಿಯಗಳು, ಮನಸು ಮತ್ತು ಬುದ್ಧಿಗಳಾಚೆಗೆ ಆತ್ಮ

ತತ್ವವು ಉಂಟು. ಇದು ಅತ್ಯಂತ ಪ್ರಭಾವಶಾಲಿಯೂ ಶಕ್ತಿಯುತವೂ ಆಗಿದೆ ಇದರ ಅನುಭವ — ಸಾಕ್ಷಾತ್ಕಾರ ಕ್ಕಾಗಿ ನಿತ್ಯ ಅನುಷ್ಠಾನ—-ಸಂಧಾನವು ಬೇಕು

ಫಲಾಶೆಯಿಲ್ಲದೆ ಕೆಲಸ ಮಾಡುವುದು. ಸುಖದುಃಖ ಗಳನ್ನು ಸಮವಾಗಿ ಭಾವಿಸಬೇಕು. ಜಾಣ್ಮೆಯಿಂದ ಕೆಲಸ ಮಾಡಬೇಕು. ಕರ್ಮಫಲವನ್ನು ಪರಮಾತ್ಮನಿಗೆ ಅರ್ಪಿಸಬೇಕು. ಕೆಲಸವಿಲ್ಲದವನಾಗಿರುವುದಕ್ಕಿಂತ ಕೆಲಸ ಮಾಡುತ್ತಿರುವುದು ಹಿರಿಗಿಲಾದುದು. (ಕಾಯಕವೇ ಕೈಲಾಸ). ಕೆಲಸವಿಲ್ಲದೆ ಅರಗಳಿಗೆಯಾದರೂ ನಾವು ಬದುಕಲಾರೆವು. ಇರಲಾರೆವು. ಗಳಿಗೆ ಗಳಿಗೆಯಲ್ಲಿಯೂ ನಮ್ಮಿಂದ ಒಂದಿಲ್ಲೊಂದು ಬಗೆಯ ಕೆಲಸವು ನಡೆದೇ ಇರುತ್ತದೆ. ಪ್ರತಿಯೊಬ್ಬರೂ ತಮ್ಮ ಸ್ವಭಾವಜನ್ಯ ಸ್ವಾಭಾವಿಕ ಕರ್ತವ್ಯದಲ್ಲಿ ತೊಡಗಬೇಕು. ಅದರ ಫಲವನ್ನು ಪರಮಾತ್ಮನಿಗೆ ಎಂದರೆ ಲೋಕ ಕಲ್ಯಾಣಕ್ಕಾಗಿ ಅರ್ಪಿಸಬೇಕು.

ಲೋಕಸಂಗ್ರಹ ಬುದ್ಧಿಯಿಂದ ಕರ್ತವ್ಯಕರ್ಮ ಮಾಡುತ್ತಿರುವುದೇ ಆತ್ಮಸಾಕ್ಷಾತ್ಕಾರದ ಒಂದು ಒಳ್ಳೆಯ ಸಾಧನವಾಗಿದೆ. ಇದುವೆ ಯಜ್ಞವೆನಿಸುವದು. ಯಜ್ಞ ದಿಂದಲೇ ಲೋಕವು ಹುಟ್ಟಿದೆ. ಯಜ್ಞದಿಂದಲೇ ಅದು ನಡೆದಿದೆ. ಆದ ಕಾರಣ ಯಜ್ಞರೂಪಿಯಾದ ಕರ್ಮ ವನ್ನು ನೆರವೇರಿಸುತ್ತಿರಬೇಕು. ಇದರಿಂದ ಚಿತ್ತಶುದ್ಧಿಯಾಗಿ ಸಾಂಖ್ಯರು ಹೇಳುವ ಬ್ರಾಹ್ಮೀಸ್ಥಿತಿಯು ಈ ಮಾರ್ಗದಿಂದಲೂ ದೊರೆಯುವುದು.

ಸಾಂಖ್ಯಮಾರ್ಗವು, ಏಕಾಂತದಲ್ಲಿ ಸರ್ವಗತ ಮಹತ್ ಆತ್ಮದೊಡನೆ ಅನುಸಂಧಾನ ಮಾಡಿ ಬ್ರಾಹ್ಮೀ ಸ್ಥಿತಿ ಪಡೆಯ ಹೇಳಿದರೆ, ಯೋಗಮಾರ್ಗವು ಬಹಿರಂಗದಲ್ಲಿ— ಲೋಕ ವ್ಯವಹಾರದಲ್ಲಿ ಸೇರಿ, ಅಲ್ಲಿ ವಿಶ್ವಕುಟುಂಬ ಭಾವದಿಂದ ಅಡಿಗಡಿಗೂ ಸರ್ವಗತ, ವಿಶ್ವಾತ್ಮನ ನೆನಹಿನಿಂದ ಸ್ವಂತಕ್ಕೆ ಯಾವ ಫಲಾಪೇಕ್ಷೆಯಿಲ್ಲದೆ ಲೋಕ ಕಲ್ಯಾಣದ ಕೆಲಸಗಳನ್ನು ಮಾಡಿ, ಚಿತ್ತಶಾಂತಿಯನ್ನು ಪಡೆದು ಅದೇ ಬ್ರಾಹ್ಮೀ ಸ್ಥಿತಿಯನ್ನು ಹೊಂದಲು ಆದೇಶಿಸುತ್ತದೆ.

ಇಲ್ಲಿಗೆ ಮೂರನೆಯ ಅಧ್ಯಾಯ ವಿಚಾರವು ಮುಗಿದುದು.

---

# ವಿಷಯ ಸೂಚಿ

